ಶ್ರೀಯೈನಮಃ.

ಶ್ರೀಪಾರ್ಥಸಾರಥಯೇ ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.

ಭಾರತಯುದ್ಧಾರಂಭದಲ್ಲಿ ಅರ್ಜುನನಂ ವ್ಯಾಜೀಕರಿಸಿ
ಸರ್ವಲೋಕ ಹಿತಾರ್ಥವಾಗಿ
ಶ್ರೀಕೃಷ್ಣ ಪರಮಾತ್ಮನಿಂದುಪದಿಷ್ಟವಾದ
ಶ್ರೀಭಗವದ್ಗೀತಾ ಪ್ರಬಂಧಕ್ಕೆ ದ್ವೈತಾದ್ವೈತ
ವಿಶಿಷ್ಟಾದ್ವೈತ ಭಾಷ್ಯಾರ್ಥಗಳಂಸಂಗ್ರಹಿಸಿರುವ

# ಶ್ರೀಮದ್ಗೀತಾರ್ಥಸಾರದ

## ದ್ವಿತೀಯ ಷಟ್ಕವು.



ಶ್ರೀಮನ್ಮಹೀಶೂರ ಮಹಾ ಸಂಸ್ಥಾನದ ಶ್ರೀಮನ್ಮಹಾರಾಣೀ
ರೀಜಂಟ್ [illegible] ಬಿರುದಂ ವಹಿಸಿದ
ಶ್ರೀವಾ[illegible]ನ್ನಿಧಾನದ ಪರಿಪೂರ್ಣ ಸಹಾಯದಿಂದ
[illegible]ಂಗಳೂರು ತುಲಸೀ ತೋಟದಲ್ಲಿರುವ
ತೂಪ್ಪುಲ್॥ ವೆಂಕಟಾಚಾರ್ಯರಿಂದ
ಬರೆಯಲ್ಪಟ್ಟು.

ಬ್ರ॥ ಶ್ರೀ॥ ವಾಜಪೇಯಂ॥ ಕೃಷ್ಣಯ್ಯನವರ
ಬೆಂಗಳೂರು ಬುಕ್‌ಡಿಪೋ ಮುದ್ರಾಕ್ಷರಶಾಲೆಯಲ್ಲಿ
ಮುದ್ರಿಸಲ್ಪಟ್ಟಿತು, ಬೆಂಗಳೂರು.
1900.



ಅರ್ಜುನ.



ಶ್ರೀಕೃಷ್ಣ.

ವಿ ಶೇ ಷ ಸೂ ಚ ನಾ.

ಈ ಪುಸ್ತಕವನ್ನು ಅಪೇಕ್ಷಿಸುವಂತವರು ಈ ಪೇ
ಹಸ್ತಾಕ್ಷರವು ಅಥವಾ ನನ್ನ ಮೊಹರು ಇಲ್ಲದೆ ಇ
ಕವಂ ಪಡದರೆ ಅದು ಕಳವು ಛಾರ್ಜಿಗೆ ಸಂಬಂ

... ...

ತೂಪ್ಪುಲ್ ವೆಂಕಟಾಚಾರ್ಲ್ಯ.

| ವಿಷಯಸಂಖ್ಯೆ. | ವಿಷಯಗಳು. | ಪುಟಸಂಖ್ಯೆ. |
|---|---|---|
| ೪೯ | ಅರ್ಚಿರಾದಿಧೂಮಾದಿಮಾರ್ಗಗಳ ಪರಿಜ್ಞಾನದಿಂದುಂಟಾಗುವಫಲವು ... ... | ೧೩೫ |
| ೫೦ | ೮ ನೇಅಧ್ಯಾಯದಅದ್ವೈತಸಿದ್ಧಾಂತಾನುಸಾರವಾದಸಂಗ್ರಹಶ್ಲೋಕವು ... | ೧೩೮ |
| ೫೧ | ಶ್ರೀಯಾಮುನಾಚಾರ್ಯರ ಅಧ್ಯಾಯಸಂಗ್ರಹಶ್ಲೋಕವು. | ೧೩೯ |
| ೫೨ | ಈ ಅಧ್ಯಾಯದ ಶ್ರೀಮದ್ಗೀತಾರ್ಥ ಸಂಗ್ರಹಗಾಥೆಯು | ,, |
| ೫೩ | ನವಮಾಧ್ಯಾಯ ಪ್ರಾರಂಭವು. | ೧೪೦ |
| ೫೪ | ಮೋಕ್ಷಸಾಧನವಾದ ಉಪಾಸನದಲ್ಲಿ ವಿಶ್ವಾಸವಿಲ್ಲದವರಿಗೆ ಉಂಟಾಗುವ ಅನರ್ಥವು. | ೧೪೭ |
| ೫೫ | ಉಪಾಸ್ಯವಾದ ಭಗವನ್ಮಾಹಾತ್ಮ್ಯವು. | ೧೪೯ |
| ೫೬ | ಸರ್ವಜಗತ್ತಿಗೂ ಭಗವಂತನೆ ಆಧಾರಭೂತನಾಗಿರುವಿಕೆಯು ... | ೧೫೧ |
| ೫೭ | ಪರಮಾತ್ಮನು ಲೀಲಾರ್ಥವಾಗಿ ಪ್ರಕೃತಿಯನ್ನಾಶ್ರ | |
| ೮೫ | ಯಿಸಿ ಜಗತ್ಸೃಷ್ಟಿಯನ್ನು ಮಾಡುವಿಕೆಯು | ೧೫೩ |
| ೮ | ವಿಚಿತ್ರವಾದ ಜಗತ್ಸೃಷ್ಟಿಯನ್ನು ಮಾಡಿದರೂ ಪರ | |
| ೮೬ | ಮಾತ್ಮನಿಗೆ ವೈಷಮ್ಯ ನೈರ್ಘೃಣ್ಯಗಳೆಂಬೀ ದೋಷಗಳಿಲ್ಲವೆಂಬ ವಿಷಯವು ... | ೧೫೪ |
| ೮೭ | ಪರಮಾತ್ಮನ ಉತ್ತಮವಾದ ಸ್ವಭಾವವನ್ನರಿಯದೆಇರುವಂತವರು ಮೂಢರೆಂಬವಿಚಾರವು | ೧೫೭ |
| ೬೦ | ಭಗವತ್ಸ್ವರೂಪ ಪರಿಜ್ಞಾನ ವಿಲ್ಲದವರಿಗುಂಟಾಗುವ ಅನರ್ಥಗಳು ... | ೧೫೯ |
| ೬೧ | ಮಹಾತ್ಮರಾದ ಭಕ್ತರುಗಳು ಅನನ್ಯಚಿತ್ತರಾಗಿ ಭಗವದ್ಭಜನವಂ ಮಾಡುವರೆಂಬ ವಿಚಾರವು | ೧೬೧ |
| ೬೨ | ಭಗವದ್ಭಕ್ತರು ಮಾಡುವ ಭಗವದ್ಭಜನಪ್ರಕಾರ ಪ್ರತಿಪಾದನವು ... | ೧೬೨ |
| ೬೩ | ಸ್ವರ್ಗಾದಿ ಫಲಾಪೇಕ್ಷಿಗಳು ಭಗವಂತನನ್ನಾರಾಧಿಸುವಪ್ರಕಾರವು ... | ೧೭೩ |

ವಿಷಯ ಸೂಚಿಕಾ ಸಂಪೂರ್ಣವು.

## ಶ್ರೀ ಭಗವದ್ಗೀತೆಯೊಳು ದ್ವಿತೀಯ ಷಟ್ಕದಲ್ಲಿರುವ ಶ್ಲೋಕಗಳಿಗೆ ಅಕಾರಾದಿ ವರ್ಣಾನುಕ್ರಮ ಸೂಚೀ॥

### ಅ.

## ಕ



## ಗ



## ಚ



## ಜ



## ತ

## ಪ



## ಬ



## ಭ



## ಮ

## ಯ



ಶ್ರೀಯೈನಮಃ.



ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ



# ಶ್ರೀಮದ್ಗೀತಾರ್ಥಸಾರೇ ಸಪ್ತಮಾಧ್ಯಾಯ ಪ್ರಾರಂಭಃ.



ವಿಂಧ್ಯಾಗಾವಂಧ್ಯಸಂಧ್ಯಾ ನಟನಟನ ಜಟಾಜೂಟ ನಿಷ್ಪಾತಿ ಗಂಗಾತುಂಗ ತ್ವಂಗತ್ತರಂಗ ಪ್ರತಿಭಟ ಫಣಿತಿ ಧ್ವಸ್ತದುಸ್ತರ್ಕಜಾಲಃ। ಸೇವಾಹೇವಾಕಿ ಭಾವಾಪತ ದತಿನಿಪುಣಬ್ರಹ್ಮವಿತ್ಸಿಂಹವಾಣೀಶ್ರೇಣೀ ತೋಷ್ಟ್ಯಾಯ ಮಾನಸ್ಸಜಯತಿ ಜಗತಿ ಶ್ರೀಶಠಾರಿರ್ಯತೀಂದ್ರಃ.

ಶಠಾರಿ ರಾಮಾವರಜ ಯತಿರಾಟ್ಚರಣಾಂಬುಜೇ । ಅಭವಾಯ ರತಿರ್ಮೇಸ್ಯಾದ್ಬ್ರಹ್ಮವಿದ್ಭಿರುಪಾಸಿತೇ ॥ ಜ್ಞಾನಾನುಷ್ಠಾನ ವೈರಾಗ್ಯ ಶಾಂತ್ಯಾದಿಗುಣ ಸಿನ್ಧವೇ । ಶ್ರೀಮದ್ವೀರರಘೂತ್ತಂಸ ಶಠಾರಿಗುರವೇನಮಃ ॥

ಶ್ಲೋ॥ ಶ್ರೀಭಗವಾನುವಾಚ॥ ಮಯ್ಯಾಸಕ್ತಮನಾಃಪಾರ್ಥ ಯೋಗಂಯುಂಜನ್ಮದಾಶ್ರಯಃ।ಅಸಂಶಯಂಸಮಗ್ರಂ ಮಾಂಯಥಾಜ್ಞಾಸ್ಯಸಿತಚ್ಛೃಣು ॥ ॥೧॥

ಪ॥ ಮಯಿ - ಆಸಕ್ತಮನಾಃ - ಪಾರ್ಥ - ಯೋಗಂ- ಯುಂಜನ್- ಮದಾಶ್ರಯಃ। ಅಸಂಶಯಂ- ಸಮಗ್ರಂ- ಮಾಂ- ಯಥಾ-ಜ್ಞಾಸ್ಯಸಿ- ತತ್- ಶೃಣು॥

ಅ॥ ಶ್ರೀ ಭಗವಾನುವಾಚ- ಶ್ರೀವಿಶಿಷ್ಟನಾದ ಭಗವದ್ವಾಸುದೇವನು ಹೇಳಿದನು. ಹೇ ಪಾರ್ಥ-ಎಲೈ ಕುಂತೀಪುತ್ರನಾದ ಅರ್ಜುನನೇ, ಮಯಿ- ನನ್ನಲ್ಲಿ, ಆಸಕ್ತಮನಾಃ- ಆಸಕ್ತವಾದ ಮನಸ್ಸುಳ್ಳವನಾಗಿಯೂ, ಯೋಗಂ- ಯೋಗವನ್ನು, ಯುಂಜನ್- ಮಾಡುವಂತವನಾಗಿಯೂ, ಮದಾಶ್ರಯಃ- ನನ್ನನ್ನೇ ಆಶ್ರಯವಾಗ ವುಳ್ಳವನಾಗಿಯೂ, (ಇರುವಂತವನಾಗಿ) ಮಾಂ- ನನ್ನನ್ನು,ಅಸಂಶಯಂ-ಸಂಶಯವಿಲ್ಲದೆ, ಸಮಗ್ರಂ- ಸಂಪೂರ್ಣವಾಗಿ, ಯಥಾಜ್ಞಾಸ್ಯಸಿ--ಹೇಗಾದರೇ ತಿಳಿಯುವಿಯೋ, ತತ್ ಶೃಣು-ಅದಂ ಕೇಳು. ॥೧

(ಶಂ॥ ಭಾ॥ ) ಕರ್ಮ ಸನ್ನ್ಯಾಸವೆಂಬ ಸಾಧನವನ್ನು ಮುಖ್ಯವಾಗಿ ಬೋಧಿಸುವ ( ಅಥವಾ ) ತ್ವಂಪದಾರ್ಥವನ್ನು ಮುಖ್ಯವಾಗಿ ಬೋಧಿಸುವ ಅಧ್ಯಾಯ ಷಟ್ಕಕ್ಕೆ ಇದುವರೆಗೂ ವ್ಯಾಖ್ಯಾನಮಾಡಿ ಈಗ ಉಪಾಸ್ಯವಾದ ಬ್ರಹ್ಮವನ್ನು ಬೋಧಿಸುವ (ಅಥವಾ) ತತ್ಪದಾರ್ಥವಂ ತಿಳಿಸುವ ಮಧ್ಯಮ ಷಟ್ಕಕ್ಕೆ ವ್ಯಾಖ್ಯಾನ ಮಾಡಲುಪಕ್ರಮಿಸುತ್ತಾರೆ. ಆರನೇ ಅಧ್ಯಾಯದ ಕಡೆಯಲ್ಲಿ " ಯೋಗಿನಾಮಪಿಸರ್ವೇಷಾಂಮದ್ಗತೇನಾಂತರಾತ್ಮನಾ । ಶ್ರದ್ಧಾವಾನ್ಭಜತೇಯೋಮಾಂಸಮೇಯುಕ್ತತಮೋಮತಃ,, ( ೬॥ ೪೭ ) ಎಂಬುವುದಾಗಿ ಹೇಳಿ ನಿನ್ನಲ್ಲಿ (ಸ್ವಸ್ವರೂಪದಲ್ಲಿ) ಮನಸ್ಸು ನಿಶ್ಚಲವಾಗಿರುವಿಕೆಯು ಹೇಗೆಂಬದಾಗಿ ಅರ್ಜುನನು ಪ್ರಶ್ನವಂ ಮಾಡುವುದಕ್ಕೆ ಮೊದಲೆ, ಅರ್ಜುನನ ಸಕಲಸಂಶಯಗಳನ್ನು ಪರಿಹಾರಮಾಡಲುದ್ದೇಶಿಸಿಯೆ, ಈ ಭಗವದ್ಗೀತಾರೂಪವಾದ ಉಪದೇಶವನ್ನು ಮಾಡಲುದ್ದೇಶಿಸಿದವನಾದುದರಿಂದ ಶ್ರೀಭಗವದ್ವಾಸುದೇವನು ತನ್ನಲ್ಲಿ ಸ್ಥಿರಮನಸ್ಕರಾದವರರೀತಿಯುಈಪ್ರಕಾರವಾಗಿರುವುದೆಂದು ಉಪದೇಶಿಸುತ್ತಾನೆಂದರಿಯಬೇಕು.

ಎಲೈ ಅರ್ಜುನನೇ, ಮುಂದೆ ಹೇಳಲ್ಪಡುವ ಗುಣಗಳಿಂದೊಪ್ಪಿದ ಪರಮೇಶ್ವರನಾಗಿರುವ ನನ್ನನ್ನು (ಸ್ವಸ್ವರೂಪವನ್ನು) ಲಕ್ಷ್ಯವಾಗಿಟ್ಟುಕೊಂಡವನಾಗಿ ಮನಸ್ಸನ್ನು ನಿಶ್ಚಲವನ್ನಾಗಿ ಮಾಡಿ ಅಂತಹ ಸಮಾಧಿಯಲ್ಲಿ ನನ್ನನ್ನು ಗತಿಯೆಂಬದಾಗಿ, (ಎಂದರೆ ಇತರಫಲಗಳನ್ನಪೇಕ್ಷಿಸುವಂತವನು ಅದಕ್ಕೆ ಸಾಧನಗಳಾದ ಅಗ್ನಿಹೋತ್ರಾದಿ ಕರ್ಮಗಳು, ತಪಸ್ಸು, ದಾನವು, ಎಂಬಿವುಗಳಲ್ಲಿ ಯಾವದಾದರೊಂದನ್ನು ಗತಿಯಾಗಿ ನಿಶ್ಚಯಿಸಿಕೊಳ್ಳುವನು. ಯೋಗಿಯಾದವನೊ ಇತರಗಳಾದ ಸಾಧನಾಂತರಗಳನ್ನು ಬಿಟ್ಟು ಸ್ವಸ್ವರೂಪಾನುಭವವೇ ಉತ್ತಮವೆಂಬದಾಗಿ ನಿಶ್ಚಯಿಸಿಕೊಳ್ಳುತ್ತಾನಾದುದರಿಂದ ನೀನು ಆಯೋಗಿಯಂತೆ ನನ್ನನ್ನೇ ಗತಿಯೆಂಬದಾಗಿ) ನಿಶ್ಚಯಿಸಿಕೊಂಡು ಸಂಶಯವಿಪರ್ಯಯಗಳಿಲ್ಲದ ಜ್ಞಾನೋತ್ಪತ್ತಿಯಾಗುವಂತೆ ವಿಭೂತಿಬಲ ಶಕ್ತ್ಯೈಶ್ವರ್ಯಾದಿ ಗುಣಗಳಿಂದೊಪ್ಪಿದ ನನ್ನನ್ನು (ಅ॥ ಗಿ॥ ವಿಭೂತಿ- ನಾನಾವಿಧಗಳಾದ ಐಶ್ವರ್ಯೋಪಾಯಗಳಿಂದ ಕೂಡಿರುವಿಕೆಯು, ಶಕ್ತಿಯೆಂದರೇ –ಮನೋಗತವಾದ ಪ್ರಜ್ಞೆಯು, ಐಶ್ವರ್ಯವೆಂದರೆ [illegible]

ವಿಷಯವಾದ ಈಶಾನ ಸಾಮರ್ಥ್ಯವು. ಜಗನ್ನಿಯನ್ತೃತ್ವವೆಂದರಿಯ ಬೇಕು. ಇದೇ ಮೊದಲಾದ ಎಂಬೀ ಆದಿಶಬ್ದದಿಂದ ಜ್ಞಾನೇಚ್ಛಾದಿಗಳು ಗ್ರಹಿಸಲ್ಪಡುವುವು.) ಎಂದರೇ ನೀನು ನಿರ್ಗುಣೋಪಾಸನಕ್ಕೆ ಯೋಗ್ಯವಾದ ಜ್ಞಾನವಿಶೇಷ ರಹಿತನಾಗಿರುವುದರಿಂದ ಮೊದಲು ಸಗುಣೋಪಾಸನದಲ್ಲಿ ಸಿದ್ಧಿಯಂ ಹೊಂದಿದಮೇಲೆ ನಿರ್ಗುಣಾತ್ಮಾನುಭವವು ತಾನಾಗಿಯೇ ಪ್ರಾಪ್ತವಾಗುವುದರಿಂದ ಕ್ರಮವಾಗಿ ಸ್ವಸ್ವರೂಪವನ್ನು ಹೇಗಾದರೆ ಭಗವತ್ತತ್ವವು ಈ ಪ್ರಕಾರವಾಗಿಯೇ ಇರುವುದೆಂದು ಸಂಶಯವಿಲ್ಲದೇ ನಿಶ್ಚಯದಿಂದ ತಿಳಿದುಕೊಳ್ಳುವಿಯೊ ಅಂತಹ ಉಪಾಯವನ್ನು ಹೇಳುವೆನು ಕೇಳು. ||೧||

(ಶ್ರೀ)ವಿಜ್ಞೇಯಮಾತ್ಮನಸ್ತತ್ವಂ ಸಯೋಗಂಸಮುದಾಹೃತಂ। ಭಜನೀಯಮಥೇದಾನೀಮೈಶ್ವರಂರೂಪಮುಚ್ಯತೇ॥ ಇದುವರೆಗೂ ತಿಳಿಯತಕ್ಕ ಅತ್ಮತತ್ವವು ಯೋಗಸ್ವರೂಪದೊಡನೆ ವಿವರಿಸಲ್ಪಟ್ಟಿತು. ಇನ್ನು ಮುಂದೆ ಭಜಿಸಲು ಯೋಗ್ಯವಾದ ಈಶ್ವರಸ್ವರೂಪವು ಹೇಳಲ್ಪಡುವುದು. ... ... ||೧||

(ಶಂ॥ ಆ॥ ) ಇದುವರೆಗೂ ಹೇಳಲ್ಪಟ್ಟ ಆರನೇ ಅಧ್ಯಾಯದಿಂದ ಆರುರುಕ್ಷುವಿಗೆ ಕರ್ಮವು ಸಾಧನ ವೆಂಬದಾಗಿಯೂ, ಆರೂಢನಾದ ಆರುರುಕ್ಷುವಿಗೇನೇ ಸರ್ವಕರ್ಮ ಸನ್ನ್ಯಾಸವು ಸಾಧನ ವೆಂಬದಾಗಿಯೂ ಕರ್ಮವು ಚಿತ್ತಶುದ್ಧಿಗೆ ಸಾಧನವೆಂಬದಾಗಿಯೂ ಸರ್ವಕರ್ಮಸನ್ನ್ಯಾಸವುಜ್ಞಾನಯೋಗ ಸಿದ್ಧಿಗೆ ಸಾಧನವೆಂಬದಾಗಿಯೂ,ಯೋಗವನ್ನು ಸಾಂಗವಾಗಿಯೂ ಸಲಕ್ಷಣವಾಗಿಯೂ ಹೇಳಿ ಯೋಗಭ್ರಷ್ಟನಿಗೆ ನಾಶ ವುಂಟಾಗಲಾರದೆಂಬದಾಗಿಯೂ,ಪ್ರತಿಪಾದಿಸಿ ಬ್ರಹ್ಮವನ್ನು ತಿಳಿದವನು ಸರ್ವಕಾಲದಲ್ಲಿಯೂ ಬ್ರಹ್ಮನಿಷ್ಠೆಯ ನ್ನವಲಂಬಿಸಿ ಕೊಂಡಿರಬೇಕೆಂತಲೂ ಹೇಳಿದೆನು. ಈಗ ಬ್ರಹ್ಮವನ್ನು ತಿಳಿದವನು ಯಾವ ಬ್ರಹ್ಮನಿಷ್ಠನಾಗಿರುವನೊ ಅಂತಹ ಬ್ರಹ್ಮವು ಹೇಗಿರುವುದು?ಆಬ್ರಹ್ಮದಲ್ಲಿ ಯಾವಪ್ರಕಾರವಾಗಿರಬೇಕು? ಎಂಬ ಅರ್ಜುನನಪ್ರಶ್ನೆವನ್ನು ತಾನಾಗಿಯೇ ತಿಳಿದು ಅದಂ ತಿಳಿಸುವುದಕ್ಕೋಸ್ಕರವಾಗಿ, "ತಂವಿದ್ಯಾದ್ದುಃಖಸಂಯೋಗ ವಿಯೋಗಂಯೋಗಸಂಜ್ಞಿತಮ್,, (೬।೨೩॥) ಇತ್ಯಾದಿ ಶ್ಲೋಕಗಳಿಂದ ಹೇಳಲ್ಪಡುವ ಯೋಗವನ್ನು ಆಚರಿಸುತ್ತ,

ನನ್ನನ್ನೇ ಆಶ್ರಯಿಸಿದವನಾಗಿಯೂ ನನ್ನಲ್ಲಿಯೇ ಆಸಕ್ತವಾದ ಮನ ಸ್ಸುಳ್ಳವನಾಗಿಯೂ ನನ್ನಿಂದ ಮುಂದೆಹೇಳಲ್ಪಡುವ ಅರ್ಥವಂ ಕೇಳೆಂದು ಶ್ರೀಕೃಷ್ಣ ಪರಮಾತ್ಮನು ಅರ್ಜುನನಿಗೆ ಈಶ್ಲೋಕದಿಂ ದುಪದೇಶಿ ಸುತ್ತಾನೆ. ... ... ॥೧॥

(ರಾ॥ ಭಾ॥) ಈರೀತಿಯಾಗಿ ಪ್ರಧಾನಫಲನಾಗಿಯೂ ಪರಬ್ರಹ್ಮ ನಾಗಿಯೂ ನಿತ್ಯನಾಗಿಯೂ ದೋಷರಹಿತನಾಗಿಯೂ ಸರ್ವಲೋಕಗ ಳಿಗೂ ಮುಖ್ಯಕಾರಣನಾಗಿಯೂ, ಸರ್ವಜ್ಞನಾಗಿಯೂ ಸರ್ವಾಧಾರ ಭೂತನಾಗಿಯೂಸತ್ಯಸಂಕಲ್ಪನಾಗಿಯೂ ಮಹತ್ತಾದ ಐಶ್ವರ್ಯವುಳ್ಳವ ನಾಗಿಯೂ ಇರುವ ಶ್ರೀಮನ್ನಾರಾಯಣನನ್ನು ಸೇರಲು ಉಪಾಯವು ಆ ಪರಮಾತ್ಮನ ಉಪಾಸನವೇ ಎಂಬದಾಗಿ ಹೇಳುವಂತವನಾಗಿಅದಕ್ಕೆ ಆತ್ಮಜ್ಞಾನದೊಡನೆ ಕರ್ಮವಂಮಾಡಿ ಹೊಂದಬೇಕಾಗಿರುವ ಜೀವಾತ್ಮ ದರ್ಶನವು ಅಂಗವಾಗಿರುವುದರಿಂದ ಅದನ್ನುಪದೇಶಿಸಿದನು. ಈಗ ಮಧ್ಯಮ ಷಟ್ಕವಾದ ಈ ಆರು ಅಧ್ಯಾಯಗಳಿಂದ ಪರಬ್ರಹ್ಮನಾದ ಪರಮಪುರುಷನಸ್ವರೂಪವೂ, ಮತ್ತು ಆವನನ್ನುಪಾಸನಮಾಡುವುದೆಂ ಬಭಕ್ತಿಯೂ, ಹೇಳಲ್ಪಡುವುದು. ಈ ಅರ್ಥವನ್ನು ( ಭಕ್ತಿಯು ಕರ್ಮಾನುಷ್ಠಾನ ಸಾಧ್ಯವಾದ ಆತ್ಮದರ್ಶನ ಹೇತುಕವಾಗಿರುವುದೆಂ ಬುವುದನ್ನು) ಮುಂದೆ "ಯತಃಪ್ರವೃತ್ತಿರ್ಭೂತಾನಾಂ ಯೇನಸರ್ವ ಮಿದಂತತಂ । ಸ್ವಕರ್ಮಣಾತಮಭ್ಯರ್ಚ್ಯ ಸಿದ್ಧಿಂವಿಂದತಿಮಾನವಃ॥ (೧೮॥ ೪೬॥) ಎಂಬೀಶ್ಲೋಕದಮೊದಲು"ವಿಮುಚ್ಯನಿರ್ಮಮಶ್ಶಾಂತೋ ಬ್ರಹ್ಮಭೂಯಾಯಕಲ್ಪತೆ। ಬ್ರಹ್ಮಭೂತಃಪ್ರಸನ್ನಾತ್ಮಾ ನಶೋ ಚತಿನಕಾಂಕ್ಷತಿ। ಸಮಸ್ಸರ್ವೇಷುಭೂತೇಷುಮದ್ಭಕ್ತಿಂಲಭತೇಪರಾಂ॥ (೧೮॥೫೪॥) ಎಂಬೀಶ್ಲೋಕಗಳಿಂದ ಸಂಕ್ಷೇಪವಾಗಿ ಹೇಳುವನು.

ಪರಮಾತ್ಮನನ್ನು ಉಪಾಸನಮಾಡುವಾಗ ಆವು ಪಾಸನವೆಂಬ ಜ್ಞಾನವು ಭಕ್ತಿ ರೂಪಾಪನ್ನವಾದರೇನೆ ಪರಮಪುರುಷ ಪ್ರಾಪ್ತಿ ಸಾಧನವಾಗುವುದೆಂಬೀ ಅರ್ಥವೂ ವೇದಾಂತವಾಕ್ಯ ಸಿದ್ಧವಾಗಿರು ವುದು. ಅದು ಎಲ್ಲೆಂದರೆ? "ಅವನನ್ನು ಈರೀತಿಯಾಗಿ ತಿಳಿದರೆ ಮೃತ್ಯುವನ್ನು ಅತಿಕ್ರಮಿಸುವನು,, (೧) "ಅವನನ್ನು ಈಪ್ರಕಾರ ತಿಳಿದವನು ಇಲ್ಲಿ ನಾಶವಿಲ್ಲದವನಾಗುತ್ತಾನೆ,, (೨) ಎಂಬೀ ಪ್ರಕಾರ

ವಾಗಿ ವೇದಾಂತಗಳಲ್ಲಿ ಹೇಳಲ್ಪಡುವ ವೇದನವು ( ತಿಳಿಯುವಿಕೆಯು) "ಪರಮಾತ್ಮನನ್ನು ಕಾಣಬೇಕಾದರೆ ಧ್ಯಾನಮಾಡಬೇಕು" (೩) "ಆತ್ಮವನ್ನು ಪ್ರತ್ಯಕ್ಷವಾಗಿ ಕಂಡು ಉಪಾಸನಮಾಡಬೇಕು."(೪)"ಸತ್ವವು ಶುದ್ಧವಾದರೆ ಅವಿಚ್ಛಿನ್ನವಾದ ಸ್ಮೃತಿಯುಂಟಾಗುವುದು,, (೫) "ಸ್ಮೃತಿ ಯುಂಟಾದರೆ ಸಮಸ್ತವಾದ ಗ್ರಂಥಿಗಳೂ (ಗಂಟುಗಳೂ) ಗಳಿತವಾಗುವುವು" (೬) "ಆಪರಮಾತ್ಮನನ್ನು ಕಂಡರೆ ಹೃದಯಗ್ರಂಥಿಯು ಭೇದಿಸಲ್ಪಡುವುದು, ಸಮಸ್ತವಾದ ಸಂಶಯಗಳೂ ಭೇದಿಸಲ್ಪಡುವುವು, ಸಮಸ್ತ ಕರ್ಮಗಳೂ ಕ್ಷಯಿಸಿಹೋಗುವುವು" (೭) ಎಂಬಿದೇ ಮೊದಲಾದ ವೇದಾಂತವಾಕ್ಯಗಳೊಡನೆ ಏಕಾರ್ಥವುಳ್ಳದ್ದಾಗಿರುವುದರಿಂದ (ಭಕ್ತಿಯು) ಅವಿಚ್ಛಿನ್ನ ಸ್ಮೃತಿಸಂತಾನರೂಪವಾಗಿಯೂ ದರ್ಶನ ಸಮಾನಾಕಾರ ವಾಗಿರಬೇಕೆಂಬದಾಗಿಯೂ, ಅದುಧ್ಯಾನೋಪಾಸನಾದಿ ಶಬ್ದಗಳಿಂದ ಹೇಳಲ್ಪಡುವುದೆಂಬದಾಗಿಯೂ, ತಿಳಿಯುಬರುತ್ತದೆ. ಪುನಶ್ಚ "ಈ ಪರಮಾತ್ಮನು ಮನನದಿಂದ ಲಾದರೂ ಧ್ಯಾನದಿಂದಲಾದರೂ ಅನೇಕ ಕಾಲಗಳಲ್ಲಿ ಕೇಳುವುದರಿಂದಲಾದರೂ ಲಭಿಸತಕ್ಕವನಲ್ಲವು. ಈ ಪರಮಾತ್ಮನು ಯಾವನನ್ನಾದರೇ ವರಿಸುತ್ತಾನೋ ಅವನಿಂದ ಮಾತ್ರವೇ ಹೊಂದಲ್ಪಟ್ಟ ತನ್ನಸ್ವರೂಪವನ್ನು ಅವನಿಗೆ ಪ್ರಕಾಶಪಡಿಸುತ್ತಾನೆ,, (೮) ಎಂಬದಾಗಿ ವಿಶೇಷಿಸಿ ಹೇಳುವುದರಿಂದ ಉಪಾಸನಶಬ್ದಕ್ಕೆಅರ್ಥವು, 'ವರಿಸುವದಕ್ಕೆಕಾರಣವು ಅವನು ಮಾಡುವ ನಿರನ್ತರ ಚಿಂತೆಯೆಂಬದಾಗಿಯೂ ಚಿಂತಿಸಲ್ಪಡುವಪರಮಾತ್ಮನು ಅತ್ಯರ್ಥಪ್ರಿಯರೂಪವಾಗಿರುವುದರಿಂದ ಆಚಿಂತೆಯೂ ಅತ್ಯರ್ಥಪ್ರಿಯರೂಪವಾಗಿರುವುದು. ಈಸ್ಮೃತಿ ಸಂತಾನವೆ ಉಪಾಸನಶಬ್ದವಾಚ್ಯವಾಗಿರುವುದೆಂಬದಾಗಿಯೂ ನಿಶ್ಚಯಿಸಲ್ಪಡುವುದು. ಅದುತಾನೆ ಭಕ್ತಿಯೆಂಬದಾಗಿ ಹೇಳಲ್ಪಡುವುದು. "ಸ್ನೇಹ ಪೂರ್ವಮನುಧ್ಯಾನಂ ಭಕ್ತಿರಿತ್ಯಭಿಧೀಯತೆ,, ಸ್ನೇಹದೊಡನೆ ನಿರನ್ತರವಾಗಿ ಚಿಂತಿಸುವುದು ತಾನೇ ಭಕ್ತಿಯೆನ್ನಲ್ಪಡುವುದು)ಇತ್ಯಾದಿ ಪ್ರಮಾಣಗಳಲ್ಲಿಯೂ ಈ ಅರ್ಥವು ಸಿದ್ಧವಾಗಿರುವುದು. ಈ ಪ್ರಕಾರವಾಗಿ ಸಮನ್ವಯವಂ ಮಾಡಿದರೇನೆ " ಅವನನ್ನೀರೀತಿಯಾಗಿ ತಿಳಿಯುವಂತವನು ಇಲ್ಲಿ ನಾಶವಿಲ್ಲದವನಾಗುತ್ತಾನೆ,(೯) ಗತಿಗೆ ಅದಕ್ಕಿಂತಲೂ ಬೇರೆ ಮಾರ್ಗವಿಲ್ಲವು. (೧೦)

ನಾನು ವೇದಗಳಿಂದಲಾದರೂ ತಪಸ್ಸುಗಳಿಂದಲಾದರೂ ದಾನಗಳಿಂದಲಾದರೂ ಯಾಗದಿಂದಲಾದರೂ ಎಲೈ ಅರ್ಜುನನೇ ! ನೀನು ಈಗ ನನ್ನನ್ನು ನೋಡಿದಂತೆ ನೋಡಲಾಗುವುದಿಲ್ಲವು.(೧೧)ಮತ್ತು "ನನ್ನನ್ನೇ ವಿಷಯೀಕರಿಸಿರುವ ಭಕ್ತಿಯೊಂದರಿಂದಲೆ ನನ್ನನ್ನು ಯಥಾವತ್ತಾಗಿ ಅರಿಯುವುದೂ ನೋಡುವುದೂ ಹೊಂದುವುದೂ ಆಗುವುದು. ನಾನಿಂತವನು" ಎಂಬೀಪ್ರಮಾಣಗಳಿಗೆ ಏಕಾರ್ಥತ್ವವು ಸಿದ್ಧಿಸುವುದು. (ಇದರಿಂದ ಭಕ್ತಿಯೆನ್ನಲ್ಪಡುವ ಪರಬ್ರಹ್ಮೋಪಾಸನವು; ಭಕ್ತಿ,ವೇದನ, ನಿದಿಧ್ಯಾಸನ,ಉಪಾಸನ, ಸ್ನೇಹಾದಿ ಶಬ್ದಗಳಿಂದ ಹೇಳಲ್ಪಡುವುದೆಂತಲೂ, ಅದು ತೈಲ ಧಾರೆಯಂತೆ ವಿಚ್ಛೇದ ರಹಿತವಾಗಿ ಪ್ರತ್ಯಕ್ಷ ತುಲ್ಯಸ್ಮರಣ ಧಾರೆಯಲ್ಲದೇ ಬೇರೇ ಅಲ್ಲವೆಂತಲೂ, ತಿಳಿಯಬೇಕು.) ಈಸಪ್ತಮಾಧ್ಯಾಯದಲ್ಲಿ, ಭಗವತ್ಸ್ವರೂಪವೂ, ಪ್ರಕೃತಿಸಂಗದಿಂದ ಅದು ಗೋಚರವಾಗದ ಪ್ರಕಾರವೂ, ಪ್ರಕೃತಿ ಸಂಬಂಧವು ನಿವೃತ್ತವಾಗಬೇಕಾದರೆ ಅದಕ್ಕೆ ಭಗವಚ್ಚರಣಾರವಿಂದ ಶರಣಾಗತಿಯೇ ಸಾಧನವೆಂತಲೂ, ಉಪಾಸಕರ ಭೇದವೂ, ಜ್ಞಾನಿಯಾದವನ ಶ್ರೈಷ್ಠ್ಯವೂ, ಹೇಳಲ್ಪಡುವುದು.

ಎಲೈ ಕುಂತೀಕುಮಾರನಾದ ಅರ್ಜುನನೇ ! ನನ್ನನ್ನು ಅತಿ ಪ್ರಿಯವಸ್ತುವನ್ನಾಗಿ ಸ್ವೀಕರಿಸಿಕೊಂಡಿರುವುದರಿಂದ ನನ್ನಸ್ವರೂಪದೊಡನೆಯೂ ಕಲ್ಯಾಣ ಗುಣಗಳೊಡನೆಯೂ, ಲೀಲೆಗಳೊಡನೆಯೂ, ವಿಭೂತಿಗಳೊಡನೆಯೂ ಪೃಥಗ್ಭಾವ ಉಂಟಾದರೆ ಆ ಕ್ಷಣದಲ್ಲಿಯೇ ಸ್ವರೂಪವು ವಿಶೀರ್ಣವಾಗುವ ಸ್ವಭಾವವುಳ್ಳವನಾದುದರಿಂದ ನನ್ನಲ್ಲಿಯೆ ಸವಿಶಾಚೀನವಾಗಿ ಆಸಕ್ತವಾದ ಮನಸ್ಸುಳ್ಳವನಾಗಿಯೂ, ಆ ಪ್ರಕಾರವೆ ಸ್ವಸ್ವರೂಪವೂ ನನ್ನನ್ನು ಬಿಟ್ಟರೆ ವಿಶೀರ್ಣವಾಗುವುದರಿಂದಅದಂತಡೆಯುಲಾರದೆ ನನ್ನನ್ನೆ ಆಧಾರವಾಗಿ ವುಳ್ಳವನಾಗಿಯೂ,ನಮ್ಮ ಭಕ್ತಿಯೋಗವನ್ನು ಅನುಷ್ಠಿಸಲು ಪ್ರವರ್ತಿಸುವ ನೀನು ಆ ಭಕ್ತಿಯೋಗಕ್ಕೆ ವಿಷಯಭೂತರಾದ ನಮ್ಮನ್ನು ಯಾವ ಅಂಶಗಳಲ್ಲಿಯೂ ಸಂಶಯವಿಲ್ಲದೆ ಸಂಪೂರ್ಣವಾಗಿಯಾವ ಜ್ಞಾನದಿಂದ ತಿಳಿದುಕೊಳ್ಳುವಿಯೊ ಅಂತಹ ಜ್ಞಾನವನ್ನುಪದೇಶಿಸುವೆನು. ಅವಧಾನದೊಡನೆ ಕೇಳು. ||೧||

(ಗೀ॥ ವಿ॥) "ಬುದ್ಧಿರ್ಯೋಗೇತ್ವಿಮಾಂಶೃಣು" (೨॥ ೩೯) ಎಂಬುವ ಶ್ಲೋಕದಿಂದ ಭಗವದ್ಜ್ಞಾನೋಪಾಯವನ್ನು ಪ್ರತಿಜ್ಞೆಮಾಡಿ ಕಾಮಾದಿ ವರ್ಜನಯುಕ್ತವಾದ ನಿವೃತ್ತ ಕರ್ಮಾನುಷ್ಠಾನರೂಪವಾಗಿರುವ ಕರ್ಮಯೋಗವು ಜ್ಞಾನಕ್ಕೆ ಬಹಿರಂಗೋಪಾಯವಾಗಿರುವುದೆಂದು ಇದನ್ನು ಐದನೆ ಅಧ್ಯಾಯದ ಪೂರ್ತಿಪರ್ಯಂತವಾಗಿ ಹೇಳಿ ಜ್ಞಾನಕ್ಕೆಅಂತರಂಗ ಸಾಧನವಾದ ಧ್ಯಾನರೂಪವಾಗಿರುವಯೋಗವನ್ನು ಆರನೇ ಅಧ್ಯಾಯದಲ್ಲಿಯೂ ನಿರೂಪಿಸಿ ಈಗ ಪೂರ್ವೋಕ್ತವಾದ ಧ್ಯಾನವು ಭಕ್ತಿಪೂರ್ವಕವಾಗಿ ಅನುಷ್ಠಿಸಿದರೇನೆ ಜ್ಞಾನಸಾಧನವಾಗುವುದಲ್ಲದೆ ಶಿಶುಪಾಲಾದಿಗಳಂತೆ ದ್ವೇಷಪೂರ್ವಕವಾಗಿ ಧ್ಯಾನವನ್ನು ಮಾಡಿದರೆ ಜ್ಞಾನಸಾಧನವಾಗುವುದಿಲ್ಲವು. ಆದುದರಿಂದಭಕ್ತಿಪೂರ್ವಕವಾಗಿ ಧ್ಯಾನಮಾಡಬೇಕಾಗಿರುವುದು. ಭಗವನ್ಮಾಹಾತ್ಮ್ಯಪರಿಜ್ಞಾನವಿಲ್ಲದೆ ಭಕ್ತಿಯುಂಟಾಗುವುದಿಲ್ಲವು. ಅದಕ್ಕಾಗಿ ಈ ಮಧ್ಯಮಷಟ್ಕವು ಪ್ರವೃತ್ತವಾಯಿತು. ಆದರೆ "ನತ್ವೇವಾಹಂ" (೨॥೧೨) ಇತ್ಯಾದಿ ಶ್ಲೋಕಗಳಿಂದ ಭಗವನ್ಮಾಹಾತ್ಮ್ಯವು ಪ್ರಪಂಚಿತವಾಗಿರುವುದರಿಂದ ಈ ಮಧ್ಯಮ ಷಟ್ಕದಲ್ಲಿ ವಕ್ತವ್ಯಾಂಶ ವಿಶೇಷವಿಲ್ಲವೆಂದರೆ ಅದಕ್ಕುತ್ತರವು. ಪ್ರಥಮ ಷಟ್ಕದಲ್ಲಿ ಸಾಧನಾಂಶಕ್ಕೇನೆ ಪ್ರಾಚುರ್ಯೋಕ್ತಿ ಇರುವುದರಿಂದ ಕೆಲವು ಸಂದರ್ಭಗಳಲ್ಲಿ ಅಪ್ರಧಾನವಾಗಿ ಭಗವನ್ಮಾಹಾತ್ಮ್ಯ ವಿಷಯವಾದ ವಾಕ್ಯಗಳು ಹೇಳಲ್ಪಟ್ಟಿರುವುವು. ಈ ಉತ್ತರ ಷಟ್ಕದಲ್ಲಿ ಕೆಲವು ಸಂದರ್ಭಗಳಲ್ಲಿ ಸಾಧನಾಂಶಗಳನ್ನು ಹೇಳಿದರೂ ಶ್ರೀಭಗವನ್ಮಾಹಾತ್ಮ್ಯೋಕ್ತಿಯೇ ಪ್ರಚುರವಾಗಿರುವುದೆಂಬದಾಗಿ ತಿಳಿಯಬೇಕು. ಇದರಿಂದ ಪೂರ್ವೋತ್ತರ ಷಟ್ಕಗಳಿಗೆ ಸಂಗತಿ ಸಾಂಕರ್ಯವಿಲ್ಲವೆಂದರಿಯಬೇಕು. ಯಾವಕಾರಣದಿಂದ ಮೊದಲಿನಲ್ಲಿ ಸಾಧನಾಂಶವು ನಿರೂಪಿತವಾಯಿತೋ ಆವಿಷಯವಾದ ಜ್ಞಾನಸಿದ್ಧಿಗೋಸ್ಕರವೇ ತಿಳಿಯತಕ್ಕ ಭಗವನ್ಮಾಹಾತ್ಮ್ಯ ಪ್ರಸಕ್ತಿಯುಂಟಾಗಿರುವುದರಿಂದ ಕಾರ್ಯ ಕಾರಣಭಾವ ರೂಪದಿಂದ ಪ್ರಥಮದ್ವಿತೀಯ ಷಟ್ಕಗಳಿಗೆ ಪೌರ್ವಾಪರ್ಯವನ್ನು (ಮುಂದೇ ಹಿಂದೇ ಎಂಬ ಕ್ರಮವನ್ನೂ) ತಿಳಿಯಬೇಕು. ... ...

(ಮ॥ ಗೀ॥ ವಿ॥) ಮಯ್ಯಾಸಕ್ತಮನಾಃ-ನನ್ನಲ್ಲಿ ಪ್ರೀತಿಯುಕ್ತವಾದ ಮನಸ್ಸುಳ್ಳವನಾಗಿಯೂ, ಮದಾಶ್ರಯಃ-ಪರಮಾತ್ಮನೇ ನನ್ನಿಂದ ಸಕಲವನ್ನೂ ಮಾಡಿಸುತ್ತಾನೆ, ನನಿಗೆ ಅವನೇ ಶರಣ ಹೊಂದುವುದಕ್ಕೆ ಅರ್ಹನು, ಸಕಲಕ್ಕೂ ಕರ್ತಾ ಆಗಿರುವವನು ಆ ಪರಮಾತ್ಮನೇ" ಎಂಬುವ ನಿಶ್ಚಯ ಜ್ಞಾನವುಳ್ಳವನಾಗಿಯೂ, ಯೋಗಂಯುಂಜನ್- ಕರ್ಮಧ್ಯಾನ ಯೋಗಗಳನ್ನು ಮಾಡುವಂತವನಾಗಿಯೂ (ಉಳಿದದ್ದನ್ನು ಮೊದಲಿನಂತೇ ತಿಳಿಯಬೇಕು.) ... ॥೧॥

ಶ್ಲೋ॥ ಜ್ಞಾನಂತೇಽಹಂ ಸವಿಜ್ಞಾನಮಿದಂ ವಕ್ಷ್ಯಾ
ಮ್ಯಶೇಷತಃ। ಯಜ್ಜ್ಞಾತ್ವಾನೇಹಭೂಯೋನ್ಯಜ್ಜ್ಞಾ
ತವ್ಯ ಮವಶಿಷ್ಯತೇ ॥ ॥ ೨ ॥

ಪ॥ ಜ್ಞಾನಂ-ತೇ-ಅಹಂ- ಸವಿಜ್ಞಾನಂ-ಇದಂ- ವಕ್ಷ್ಯಾಮಿ- ಅಶೇಷತಃ, ಯತ್- ಜ್ಞಾತ್ವಾ- ನ- ಇಹ- ಭೂಯಃ- ಅನ್ಯತ್-ಜ್ಞಾತವ್ಯಂ-ಅವಶಿಷ್ಯತೆ ॥

ಅ॥ ಯತ್ - ಯಾವದನ್ನು, ಜ್ಞಾತ್ವಾ- ತಿಳದು, ಇಹ-(ಶಂ॥ ಶ್ರೀ॥) ಈಮೋಕ್ಷ ಮಾರ್ಗದಲ್ಲಿ, (ರಾ) ನನ್ನ ವಿಷಯದಲ್ಲಿ, ಭೂಯಃ- ತಿರಿಗಿಯೂ,ಅನ್ಯತ್-ಬೇರೊಂದಾದ, ಜ್ಞಾತವ್ಯಂ - ತಿಳದುಕೊಳ್ಳಬೇಕಾದ ಅಂಶವು, ನಾವಶಿಷ್ಯತೇ - ಸ್ವಲ್ಪವೂ ಇರುವುದಿಲ್ಲವೋ, ಸವಿಜ್ಞಾನಮಿದಂಜ್ಞಾನಂ - (ಶಂ॥ ಶ್ರೀ॥) ಅನುಭವ ಜ್ಞಾನದೊಡನೆ ಕೂಡಿರುವ ಈ ಜ್ಞಾನವನ್ನು, (ರಾ) ಪರಮಾತ್ಮ ವ್ಯತಿರಿಕ್ತವಾದ ಚಿದಚಿದ್ವಸ್ತುಗಳಗಿಂತಲೂ ವಿಲಕ್ಷಣನಾದ ಪರಮಾತ್ಮನ ಗುಣವಿಭೂತ್ಯಾದಿಗಳನ್ನರಿಯುವುದೆಂಬ ವಿಜ್ಞಾನ ಸಹಿತವಾದ ಈ ಭಗವತ್ಸ್ವರೂಪ ಜ್ಞಾನವನ್ನು, (ಮ॥ ಗೀ॥ ವಿ॥) ಪರಮಾತ್ಮನ ವಿಶೇಷ ಮಾಹಾತ್ಮ್ಯಜ್ಞಾನವೊಡನೆ ಕೂಡಿರುವ ಈ ನನ್ನ ವಿಷಯವಾದ ಜ್ಞಾನವನ್ನು, ಅಶೇಷತಃ- ಸಂಪೂರ್ಣವಾಗಿ, ಅಹಂ-ನಾನು, ತೇ- ನಿನಗೆ, ವಕ್ಷ್ಯಾಮಿ-ಹೇಳುವೆನು. ॥೨॥

(ಮ॥ ಸೂ॥) ಪರೋಕ್ಷ ಜ್ಞಾನವು ಅಸಂಭಾವನಾದಿ ಪ್ರತಿಬಂಧಗಳುಳ್ಳದ್ದಾದುದರಿಂದ ಫಲವನ್ನುಂಟುಮಾಡಲಾರದೆಂತಲೂ, ಅಸಂಭಾವನಾದಿಗಳು ಗಳಿತವಾದಮೇಲೆ ವಿಚಾರ ಪರಿಪಾಕಾನ್ತದಲ್ಲಿಪ್ರತಿಬಂಧವಿಲ್ಲದೇ ಇರುವುದರಿಂದ ಫಲಪ್ರದಾನ ಸಮರ್ಥವಾಗುವ ಶ್ರುತಿ ಪ್ರಮಾಣದಿಂದ ಹುಟ್ಟದ ಜ್ಞಾನವು ಅಪರೋಕ್ಷ ಜ್ಞಾನವೆಂತಲೂ, ವಿಚಾರ ಪರಿಪಾಕದಿಂದ ಹುಟ್ಟರುವುದರಿಂದ ಇಂತಹ ಅಪರೋಕ್ಷಜ್ಞಾನವೆ ವಿಜ್ಞಾನವೆಂತಲೂ ಹೇಳಲ್ಪಡುವುದು. ಕಿಂಚಎಲೈಅರ್ಜುನನೆ ಸರ್ವಾಧಿಷ್ಠಾನಸ

ನ್ಮಾತ್ರ ಜ್ಞಾನದಿಂದ ಕಲ್ಪಿತಗಳಾದ ಸರ್ವಪದಾರ್ಥಗಳೂ ಇಲ್ಲದೇ ಹೋಗುವುದರಿಂದ ಸನ್ಮಾತ್ರ ಜ್ಞಾನದಿಂದಲೇ ನೀನು ಕೃತಾರ್ಥನಾಗಬೇಕು. ... ... ... ... ||೧||

(ರಾ|| ಭಾ||) ಮೊದಲನೇ ಶ್ಲೋಕದಲ್ಲಿ "ಯಥಾಜ್ಞಾಸ್ಯಸಿತಚ್ಛೃಣು" (೭|| ೧||) ಎಂಬೇರೀತಿಯಾಗಿ ಹೇಳಿದ ಅರ್ಥವನ್ನೆ ಪುನಶ್ಚ ಸಾವಧಾನತ್ವಾತಿಶಯವನ್ನುಂಟುಮಾಡುವುದಕ್ಕಾಗಿ ಸರ್ವಜ್ಞನಾದ ನಾನು ಹೇಳುತ್ತೇನೆಂದು ಶ್ರೀಕೃಷ್ಣನು ("ಅಸಂಶಯಂಸಮಗ್ರಂ" (೭|| ೧||) ಎಂಬದಾಗಿ ಹೇಳಿರುವ ಅರ್ಥವನ್ನೆ) ಈ ಶ್ಲೋಕದಲ್ಲಿಯೂ ಸ್ವಲ್ಪಮಟ್ಟಿಗೆ ವಿವರಿಸುತ್ತಾನೆಂದರಿಯಬೇಕು. ಸರ್ವಜ್ಞನಾದ ನಾನು ನಿನಗೆ ನನ್ನ ವಿಷಯವಾಗಿರುವ ಈ ಜ್ಞಾನವನ್ನು ವಿಜ್ಞಾನದೊಡನೆ ಸಂಕೀರ್ಣವಾಗಿ ಹೇಳುವೆನು. ವಿಜ್ಞಾನವೆಂದರೇ ವಿವಿಕ್ತಾಕಾರ ವಿಷಯವಾದ ಜ್ಞಾನವು. ಅದುಹೇಗೆಂದರೇ ನಾನು ನನಿಗಿಂತಲೂಭಿನ್ನವಾಗಿರುವ ಸಮಸ್ತ ಚಿದಚಿದ್ವಸ್ತು ಸಮೂಹಗಳಿಗಿಂತಲೂ, ಸಮಸ್ತ ಹೇಯ ಪ್ರತಿಭಟನಾಗಿರುವುದರಿಂದಲೂ, ಅವಧಿ ಶೂನ್ಯವಾಗಿಯೂ ಅತಿಶಯಿತವಾಗಿಯೂ ಅಸಂಖ್ಯೇಯವಾಗಿಯೂ ಇರುವ ಕಲ್ಯಾಣ ಗುಣಗಣಾನಂತ ಮಹಾ ವಿಭೂತಿ ಯುಕ್ತನಾಗಿರುವುದರಿಂದಲೂ, ವಿವಿಕ್ತನಾಗಿರುವೆನೊ ಅಂತಹ ವಿವಿಕ್ತವಿಷಯವಾದ ಜ್ಞಾನದೊಡನೆ ನನ್ನಸ್ವರೂಪ ವಿಷಯವಾದ ಜ್ಞಾನವನ್ನು ಹೇಳುವೆನು. ಈ ವಿಷಯದಲ್ಲಿ ವಿಶೇಷವಾಗಿ ಹೇಳತಕ್ಕದ್ದೇನಿರುವುದು. ನಾನೀಗ ಹೇಳುವ ಯಾವ ಜ್ಞಾನವನ್ನರಿತರೆ ಪುನಶ್ಚ ನನ್ನಲ್ಲಿ ತಿಳಿಯತಕ್ಕ ಅಂತಹ ಜ್ಞಾನವೇ ಇರುವುದಿಲ್ಲವು. ... ... ||೨||

ಶ್ಲೋ|| ಮನುಷ್ಯಾಣಾಂ ಸಹಸ್ರೇಷು ಕಶ್ಚಿದ್ಯತತಿ
ಸಿದ್ಧಯೇ | ಯತತಾಮಪಿ ಸಿದ್ಧಾನಾಂಕಶ್ಚಿನ್ಮಾಂವೇ
ತ್ತಿತತ್ತ್ವತಃ || ... ... |೩||

ಪ| ಮನುಷ್ಯಾಣಾಂ- ಸಹಸ್ರೇಷು- ಕಶ್ಚಿತ್-ಯತತಿ-ಸಿದ್ಧಯೇ|ಯತತಾಂ- ಅಪಿ- ಸಿದ್ಧಾನಾಂ- ಕಶ್ಚಿತ್- ಮಾಂ- ವೇತ್ತಿ-ತತ್ತ್ವತಃ||

ಅ|| ಮನುಷ್ಯಾಣಾಂಸಹಸ್ರೇಷು - ಸಾವಿರಾರು ಮನುಷ್ಯರಲ್ಲಿ, (ರಾ) ಶಾಸ್ತ್ರಾಧಿಕಾರಯೋಗ್ಯರಾದ ಸಾವಿರಾರು ಮನುಷ್ಯರುಗಳಲ್ಲಿ, ಕಶ್ಚಿತ್- ಒಬ್ಬನು, ಸಿದ್ಧಯೇ- [illegible]

ನಸಿದ್ಧಿಗೋಸ್ಕರವಾಗಿ, ಯತತಿ- ಪ್ರಯತ್ನಿಸುತ್ತಾನೆ. ಯತತಾಮಪಿ- ಪ್ರಯತ್ನಶೀಲ ರಾದ, ಸಿದ್ಧಾನಾಂ-ಜ್ಞಾನಿಗಳ, (ಸಹಸ್ರೇಷು-ಸಾವಿರಾರು ಜನಗಳಲ್ಲಿ,) ಕಶ್ಚಿತ್-ಒಬ್ಬ ನು, ಮಾಂ-ನನ್ನನ್ನು, ತತ್ವತಃ- ಯಥಾವತ್ತಾಗಿ, ವೇತ್ತಿ- ತಿಳಿಯುತ್ತಾನೆ. ॥೩॥

(ಶಂ॥ ಭಾ॥) ಪೂರ್ವಶ್ಲೋಕದಲ್ಲಿ ಯಾವ ಜ್ಞಾನವನ್ನು ತಿಳಿದರೆ ಈ ಮೋಕ್ಷಸಾಧನವಾದ ಶ್ರೇಯೋಮಾರ್ಗದಲ್ಲಿ ಪುನಃ ತಿಳಿಯತಕ್ಕ ಪುರುಷಾರ್ಥಸಾಧನವಾದ ಜ್ಞಾನವಿಲ್ಲವೆಂತಲೂ ಯಾವನಾದರೆ ಪರಮಾ ತ್ಮನಾದ ನನ್ನ ತತ್ತ್ವವನ್ನರಿಯುವನೋ ಅಂತವನು ಸರ್ವಜ್ಞನಾಗು ವನೆಂತಲೂ, ಆದುದರಿಂದಲೇ ಶ್ರೇಷ್ಠವಾದ ಫಲವುಳ್ಳದ್ದಾದುದರಿಂದ ಭಗವದ್ಜ್ಞಾನವು ದುರ್ಲಭವೆಂತಲೂ, ಶ್ರೀಕೃಷ್ಣನು ಅರ್ಜು ನನಿಗುಪದೇಶಿಸಿದನು. ಈ ಶ್ಲೋಕದಲ್ಲಿಯೂ ಭಗವದ್ವಿಷಯವಾದ ಜ್ಞಾ ನಕ್ಕೆ ದುರ್ಲಭತ್ವವನ್ನೇ ವಿವರಿಸುತ್ತಾನೆಂದರಿಯಬೇಕು. ಮನುಷ್ಯ ರಲ್ಲನೇಕ ಸಾವಿರ ಜನಗಳಲ್ಲಿ ಒಬ್ಬನೆ ಯೋಗಾಭ್ಯಾಸ ದ್ವಾರಾಜ್ಞಾನ ಸಿದ್ಧಿಯನ್ನು ಹೊಂದುವುದಕ್ಕಾಗಿ ಪ್ರಯತ್ನಿಸುವನಲ್ಲದೆ ಇದು ದುರ್ಲ ಭವಾದ್ದರಿಂದ ಸರ್ವರೂ ಪ್ರಯತ್ನವಂ ಮಾಡಲಾರರು. ಆ ರೀತಿಯಾಗಿ ಮೋಕ್ಷಮಾರ್ಗದಲ್ಲಿ ಪ್ರಯತ್ನವಂ ಮಾಡುವಂತಹ ಅನೇಕರ ಮಧ್ಯ ದಲ್ಲಿ ಅನೇಕ ಜನ್ಮಾರ್ಜಿತ ಸಂಸ್ಕಾರ ವಿಶೇಷದಿಂದ ಒಬ್ಬನೂ ನನ್ನ ನ್ನು ಯಥಾವತ್ತಾಗಿ ತಿಳಿಯಲಾರನು. ಅಂತಹ ದುರ್ಲಭವಾದ ಅಂಶವ ನ್ನು ನಿನಗೆ ವಿವರಿಸುವೆನು. ... ... ॥೩॥

(ಶಂ॥ ಆ॥) ಎಲೈ ಶ್ರೀಕೃಷ್ಣನೇ! ಬ್ರಹ್ಮವೇ ನಾನಾದ ಮೇಲೆ 'ನಾನು ಬ್ರಹ್ಮವು' ಎಂಬ ಜ್ಞಾನವು ಸರ್ವರಿಗೂ ಉಂಟಾಗ ದೇ ಹೋಗಲು ಕಾರಣವೇನು? ಎಂದರೆ ಅದಂ ವಿವರಿಸುವೆನು. ವಿಚಾ ರಿಸಿ ನೋಡಿದರೆ "ಯಾವಬ್ರಹ್ಮವು; ನೋಡುವಂತವನಿಗೆ ಯಾವದರಿಂ ದಲೂ ವ್ಯವಧಾನರಹಿತವಾಗಿ ಪ್ರತ್ಯಕ್ಷವೊ" ಎಂಬ ಶ್ರುತಿ ಪ್ರಮಾ ಣಾನುಸಾರವಾಗಿ ಬ್ರಹ್ಮವು ಸಾಕ್ಷಾತ್ ಪ್ರತ್ಯಕ್ಷವಾಗಿಯೇ ಇದ್ದ ರೂ ಅನೇಕ ಜನ್ಮಾರ್ಜಿತವಾದ ಪುಣ್ಯ ಪರಿಪಾಕದಿಂದುಂಟಾದ ವಿವೇ ಕವೈರಾಗ್ಯ ಶಮದಮಾದ್ಯುತ್ತಮ ಸಾಧನಗಳುಳ್ಳವರಾಗಿ ಭಗವದನು ಗ್ರಹಕ್ಕೆ ಪಾತ್ರಭೂತರಾದವರಿಗೇನೆ ಶ್ರವಣಮನನಾದಿಗಳಿಂದ ಅಂತಹ ಜ್ಞಾನವು ಸಿದ್ಧಿಸುವುದಲ್ಲದೆ ಮಲಿನ ಚಿತ್ತರಾಗಿಯೂ ಭಗವದನುಗ್ರ

ಪಕ್ಕೆ ಪಾತ್ರಭೂತರಾಗದವರಾಗಿಯೂ ಕಾಮಾನಲ ಸಂತಪ್ತರಾಗಿಯೂ, ಇರುವ ಮನುಷ್ಯರಿಗೆ ಕಣ್ಣಿಲ್ಲದ ಅಂಧನಿಗೆ ಪ್ರಕಾಶವುಗೋಚರವಾಗದಂತೆ ಗೋಚರವಾಗಲಾರದೆಂದೀ ಶ್ಲೋಕದಿಂದ ಅರ್ಜುನನಿಗೆ ಬೋಧಿಸುವನು. ಮನುಷ್ಯರಿಗೆ ಎಂಬದಾಗಿ ಹೇಳಿರುವುದರಿಂದ ಮಾನವರಿಗಿಂತಲೂ ಅನ್ಯರಾದ ಜೀವರಿಗೆ ಬಂಧಮೋಕ್ಷಜ್ಞಾನವು ಇಲ್ಲವೆಂತಲೂ, ಮನುಷ್ಯರಲ್ಲಿಯೂ ಬಂಧ ಮೋಕ್ಷಜ್ಞಾನ ಶಾಸ್ತ್ರಶಾಸ್ತ್ರಾರ್ಥಕರ್ಮಗಳಲ್ಲಧಿಕಾರವುಳ್ಳ ಬ್ರಾಹ್ಮಣರು ಮಾತ್ರವೇ ಮೋಕ್ಷಾರ್ಥವಾಗಿ ಪ್ರಯತ್ನ ಮಾಡತಕ್ಕವರೆಂತಲೂ, “ ಸಹಸ್ರೇಷು ” ಎಂಬದಾಗಿ ಹೇಳುವುದರಿಂದ ಅಂತಹ ಬ್ರಾಹ್ಮಣರಲ್ಲಿಯೂ ಕೂಡ ಪಾಪ ಪ್ರಚುರವಾದ ದೇಹವುಳ್ಳವರಿಗೆ ಮೋಕ್ಷ ಉಂಟಾಗಲಾರದೆಂತಲೂ, ಇಲ್ಲಿನ ಸಹಸ್ರಶಬ್ದಘಟಿತವಾದ ಬಹುವಚನವು ಅನೇಕ ಲಕ್ಷಕೋಟಿ ಸಂಖ್ಯಾಪರವಾಗಿರುವುದೆಂತಲೂ, ತಿಳಿಯತಕ್ಕದ್ದು. ಆದರೆ ರಾಮಕೃಷ್ಣಾದಿಗಳನ್ನು ವಿಷ್ಣುವೆಂಬದಾಗಿ ದೇವಮನುಷ್ಯಾದಿಗಳೆಲ್ಲರೂ ತಿಳದುಕೊಂಡಿರುವಲ್ಲಿ ಯಾವನೊ ಒಬ್ಬನೆ ತಿಳಿಯುತ್ತಾನೆಂಬದಾಗಿ ಹೇಳಬಹುದೋ?ಎಂದರೇ ಅದಕ್ಕಾಗಿ“ತತ್ತ್ವತಃ”ಎಂಬ ಪದವು ಪ್ರಯುಕ್ತವಾಗಿರುವುದು. ಇದರಿಂದ ರಾಮಕೃಷ್ಣಾದಿ ನಾಮಗಳನ್ನು ಧರಿಸಿರುವ ನನ್ನನ್ನು ಜಗತ್ತಿಗಿಂತಲೂ ಭಿನ್ನನೆಂತಲೂ ಪರಿಚ್ಛಿನ್ನನೆಂತಲೂ ತಿಳಿದುಕೊಳ್ಳುತ್ತಾರಲ್ಲದೆ ಜಗತ್ತಿಗಿಂತಲೂ ಅಭಿನ್ನನೆಂಬದಾಗಿಯೂ ಎಂದರೆ ಜಗದಾಕಾರನೆಂತಲೂ ಅಪರಿಚ್ಛಿನ್ನನೆಂತಲೂ ತಿಳಿಯಲಾರರೆಂದು ಬೋಧಿತವಾಯಿತು. ... ... ||೩||

(ಶ್ರೀ) ನನ್ನ ಭಕ್ತಿಯಿಲ್ಲದೆ ನನ್ನ ಜ್ಞಾನವು ದುರ್ಲಭವಾಗಿರುವುದೆನ್ನುತ್ತಾನೆ.ಮನುಷ್ಯ ವ್ಯತಿರಿಕ್ತರಾದ ಪ್ರಾಣಿಗಳಿಗೆ ಶ್ರೇಯೋಮಾರ್ಗದಲ್ಲಿ ಪ್ರವೃತ್ತಿಯೇ ಉಂಟಾಗುವುದಿಲ್ಲವು. ಮನುಷ್ಯರಲ್ಲಿಯೂ ಅನೇಕ ಸಹಸ್ರಜನರ ಮಧ್ಯದಲ್ಲಿ ಬಹು ಪುಣ್ಯವಶದಿಂದಯಾವನೊಒಬ್ಬನೇ ಆತ್ಮಜ್ಞಾನಕ್ಕೋಸ್ಕರ ಪ್ರಯತ್ನಿಸುವನು. ಆ ರೀತಿಯಾಗಿ ಪ್ರಯತ್ನವಂ ಮಾಡುವಂತವರಾದ ಅನೇಕ ಸಹಸ್ರಜನರ ಮಧ್ಯದಲ್ಲಿ ಪ್ರಕೃಷ್ಟ ಪುಣ್ಯಾತಿಶಯದಿಂದ ಯಾವನೋ ಒಬ್ಬನೇ ನನ್ನ ಅನುಗ್ರಹದಿಂದ ಯಥಾವತ್ತಾಗಿ ನನ್ನನ್ನರಿಯುವನು. ಈ ರೀತಿಯಾಗಿ ನನ್ನ ವಿಷ

ಯವಾದ ಜ್ಞಾನವುಅತಿದುರ್ಲಭವಾಗಿದ್ದರೂ ನಿನಗೆವಿವರಿಸುವೆನು ॥೨॥

(ರಾ॥ ಭಾ॥) ಶಾಸ್ತ್ರಾಧಿಕಾರ ಯೋಗ್ಯರಾದವರು ಮನುಷ್ಯರೆನ್ನಲ್ಪಡುವರು. ಅಂತವರಾದ ಅನೇಕ ಸಹಸ್ರ ಜನರಲ್ಲಿ ಯಾವನೋ ಒಬ್ಬನೇ ನಮ್ಮನ್ನು ತಿಳಿದು ನಮ್ಮಲ್ಲಿ ಸಿದ್ಧಿಯನ್ನಪೇಕ್ಷಿಸಿ ಯತ್ನಿಸುತ್ತಾನೆ. ಸಿದ್ಧಿಪರ್ಯಂತವಾಗಿ ಪ್ರಯತ್ನ ಪಡುವಂಥಾ ಅನೇಕ ಸಹಸ್ರ ಜನರಲ್ಲಿ ಯಾವನೋಒಬ್ಬನೆ ನಮ್ಮನ್ನು ಯಥಾವತ್ತಾಗಿಅರಿಯುತ್ತಾನೆ. ಅಂತವರು ಯಾರೂ ಇಲ್ಲವೆಂದಭಿಪ್ರಾಯವು. ಇದಂಕುರಿತು ಮುಂದೆಯೂ " ಸಮಹಾತ್ಮಾಸುದುರ್ಲಭಃ " (೭॥ ೧೯॥) " ಮಾಂತುವೇದನಕಶ್ಚನ " (೭॥ ೨೬॥) ಎಂಬದಾಗಿ ಇಂತವರು ಅತ್ಯಂತ ದುರ್ಲಭರೆಂದು ವಿವರಿಸುವನು. ॥೩॥

(ತಾ॥ ಚಂ॥) ' ಕಶ್ಚಿನ್ಮಾಂವೇತ್ತಿ ' ಎಂಬುವಸ್ಥಾನದಲ್ಲಿ ಯಾವನೋ ಒಬ್ಬನೇ ತಿಳಿಯುವನಲ್ಲದೇ ಇಬ್ಬರು ತಿಳಿಯಲಾರರೆಂಬ ಅರ್ಥವು ವ್ಯಾಸ ಭೀಷ್ಮಾದಿಗಳಾದ ಅನೇಕ ಮಹನೀಯರಿರುವುದರಿಂದ ಯುಕ್ತವಲ್ಲವು. ಯಾವನೊಒಬ್ಬನೇ ತಿಳಿಯುತ್ತಾನೆಂಬದಾಗಿ ಹೇಳುವ ಅರ್ಥವುನಿರರ್ಥಕವಾಗಿಯೂ " ಸಮಹಾತ್ಮಾಸುರ್ಲಭಃ " (೭॥೧೯॥) ಎಂಬ ದೌರ್ಲಭ್ಯವಚನಕ್ಕೆ ವಿರುದ್ಧವಾಗಿಯೂ ಇರುವುದು. ಆದುದರಿಂದ ಅರ್ಥಸ್ವಭಾವದಿಂದಲೂ ಮುಂದೆಹೇಳುವವಾಕ್ಯಗಳಿಂದಲೂ ಇಂತವರು ಅತ್ಯಂತ ದುರ್ಲಭರೆಂಬುವ ಸಂದರ್ಭವೇ ತೋರಿಸಲ್ಪಡುವುದು. ... ... ॥೩॥

ಶ್ಲೋ ॥ ಭೂಮಿರಾಪೋಽನಲೋವಾಯುಃ ಖಂಮನೋ
ಬುದ್ಧಿರೇವಚ | ಅಹಂಕಾರ ಇತೀಯಂಮೇ ಭಿನ್ನಾಪ್ರ
ಕೃತಿರಷ್ಟಧಾ ॥ ... ... ॥೪॥

ಪ॥ ಭೂಮಿಃ- ಆಪಃ- ಅನಲಃ-ವಾಯುಃ- ಖಂ- ಮನಃ- ಬುದ್ಧಿಃ- ಏವ-ಚ । ಅಹಂಕಾರಃ- ಇತಿ-ಇಯಂ-ಮೇ-ಭಿನ್ನಾ- ಪ್ರಕೃತಿಃ- ಅಷ್ಟಧಾ ॥

ಅ॥ ಮೇ - ನನ್ನ, ಇಯಂಪ್ರಕೃತಿರೇವಚ- ಈ ಪ್ರಕೃತಿಯೂ, ಭೂಮಿಃ - ಭೂಮಿಯು, ಆಪಃ- ನೀರು, ಅನಲಃ- ಅಗ್ನಿಯು, ವಾಯುಃ- ಘಾಳಿಯು, ಖಂ- ಆಕಾವ್ರ, ಮನಃ- ಮನಸ್ಸು, (ಶಂ॥ ಶ್ರೀ॥) ಮನಸ್ತತ್ವಕ್ಕೆ ಕಾರಣವಾದ ಅಹಂಕಾರತತ್ವವು-(ಶ್ರೀ)ಅಥವಾ-ಪ್ರಧಾನವು. (ರಾ) ಮನಸ್ಸು ಮೊದಲಾದ ಇಂದ್ರಿಯಗಳು, ಬುದ್ಧಿಃ-ಬು

ದ್ಧಿಯು,(ಶಂ) ಅಹಂಕಾರತತ್ವಕ್ಕೆ ಕಾರಣವಾದ ಮಹತ್ತತ್ವವು. (ಶ್ರೀ|| ರಾ||) ಮಹತ್ತತ್ವವು, ಅಹಂಕಾರಃ – ಅಹಂಕಾರವು, (ಶಂ) ಅಹಂಕಾರತತ್ವಕ್ಕೆ ಕಾರಣವಾದ ಮಹತ್ತತ್ವವು. (ಶ್ರೀ|| ರಾ) ಮಹತ್ತತ್ವವು. ಅಹಂಕಾರಃ-ಅಹಂಕಾರವು, (ಶಂ) ಅವಿದ್ಯೆಯೊಡನೆ ಕೂಡಿರುವ ಅವ್ಯಕ್ತವು. (ಶ್ರೀ) ಅವಿದ್ಯೆಯು, ಅಥವಾ ಅಹಂಕಾರವು ಇಂದ್ರಿಯಗಳೂ. (ಮ|| ಗೀ|| ವಿ||) ಅಹಂಕಾರತತ್ತ್ವವೂ ಮಹತ್ತತ್ವವೂ, ಅಹಂಕಾರ ತತ್ತ್ವದಲ್ಲಿ ಮಹತ್ತತ್ವವು ಅಡಗಿರುವುದರಿಂದ ಮಹತ್ತತ್ತ್ವವು ಪ್ರತ್ಯೇಕವಾಗಿ ಹೇಳಲ್ಪಡಲಿಲ್ಲವು.ಇತ್ಯಷ್ಟಧಾಭಿನ್ನಾ- ಈರೀತಿಯಿಂದ ಎಂಟು ಪ್ರಕಾರವಾಗಿ ಭಿನ್ನವಾಗಿರುವುದು. ||೪||

(ಶಂ|| ಭಾ||) ತಾನು ಮುಂದೇ ತಿಳಿಸುವ ಸಂದರ್ಭಗಳಲ್ಲಿ ಅರ್ಜುನನಿಗೆ ಅಭಿಮುಖ್ಯವನ್ನುಂಟು ಮಾಡುವುದಕ್ಕಾಗಿ ಈ ರೀತಿಯಾಗಿ ಹಿಂದೇಹೇಳಿ, ಅಂತಹತತ್ತ್ವ ಪ್ರಸಂಗವನ್ನಾರಂಭಿಸುತ್ತಾನೆಂದರಿಯಬೇಕು. ಭೂಮಿರಾಪಃ ಇತ್ಯಾದಿ ಶಬ್ದಗಳಿಂದ, ಭೂಮಿ, ನೀರು, ಅಗ್ನಿಯು, ಘಾಳಿ, ಆಕಾಶವೇಂಬೀ ಪಂಚಭೂತಗಳ ಸ್ಥೂಲವಲ್ಲದ ಸೂಕ್ಷ್ಮಗಳಾದ ತನ್ಮಾತ್ರಗಳು ಮಾತ್ರವೇ ಹೇಳಲ್ಪಡುವುದು. ಆ ಘೊನಲೋೀ ವಾಯುಃ ಖಂ ಮನಃ ಎಂಬುವ ಸ್ಥಾನದಲ್ಲಿರುವ ಮನಶ್ಶಬ್ದದಿಂದ ಮನಸ್ಸಿಗೆ ಕಾರಣವಾದ ಅಂಹಂಕಾರವು ಗೃಹೀತವಾಗಿರುವುದು. ಬುದ್ಧಿಶಬ್ದದಿಂದ ಅಹಂಕಾರ ತತ್ತ್ವಕ್ಕೆ ಕಾರಣವಾದ ಮಹತ್ತತ್ತ್ವವು ಹೇಳಲ್ಪಡುವುದು. ಅಹಂಕಾರ ಶಬ್ದದಿಂದ ಅವಿದ್ಯೆಯೊಡನೆ ಕೂಡಿರುವ ಅವ್ಯಕ್ತವು ಹೇಳಲ್ಪಡುವುದು. ಅದು ಹೇಗೇಂದರೇ ? ವಿಷಯುಕ್ತವಾದ ಅನ್ನವನ್ನು ವಿಷವೆಂಬುವುದಾಗಿ ಹೇಳುವಂತೆ, ಅಹಂಕಾರವಾಸನೆಯುಳ್ಳ ಅವಿದ್ಯಾರೂಪವಾದ ಅವ್ಯಕ್ತವು ಅಹಂಕಾರ ಪದದಿಂದ ಹೇಳಲ್ಪಡುವುದು. ಏತಕ್ಕೆಂದರೇ ? ಅಹಂಕಾರ ವೇದನವೇ ಸರ್ವ ಪ್ರವೃತ್ತಿಗಳಿಗು ಮೂಲವಾಗಿರುವುದೆಂದು ಲೋೀಕದಲ್ಲಿ ಕಂಡಿರುವೆವು. ಎಂಬೀರೀತಿಯಾಗಿ ಪೃಥಿವ್ಯಪ್ತೇಜೋವಾಯ್ವಾಕಾಶಾದಿ ತನ್ಮಾತ್ರಗಳು ಅಹಂಕಾರ ಮಹತ್ತತ್ವಭೇದದಿಂದ ಈಶ್ವರ ಸಂಬಂಧವಾದನ್ನಮಾಯಾಶಕ್ತಿಯು ಎಂಟುವಿಧವಾಗಿರುವುದು. ... ||೪||

(ಶ್ರೀ||) ಇದುವರೆಗೂಹೇಳಿರುವ ಶ್ಲೋಕಗಳಿಂದ ಶ್ರೋತಾಆಗಿರುವ ಅರ್ಜುನನಿಗೆ ಶ್ರವಣದಲ್ಲುತ್ಸಾಹವನ್ನುಂಟುಮಾಡಿ, ಈಶ್ಲೋಕದಿಂದ ಪರಮಾತ್ಮನುಪ್ರಕೃತಿಮೂಲಕವಾಗಿ ಸೃಷ್ಟ್ಯಾದಿಗಳಿಗೆಕರ್ತಾ ಎಂದು

ಹೇಳಿರುವ ಸಂದರ್ಭವನ್ನು ನಿರೂಪಿಸಲಿಚ್ಛೈಸಿ ಪರಾಪರ ಭೇದಗಳಿಂದ ದ್ವಿವಿಧವಾದ ಪ್ರಕೃತಿತತ್ವವನ್ನೀ ಶ್ಲೋಕದ ಮೊದಲುಮರಡು ಶ್ಲೋಕಗಳಿಂದ ಬೋಧಿಸುತ್ತಾನೆ. ಈ ಶ್ಲೋಕದಲ್ಲಿರುವ ಭೂಮ್ಯಾದಿ ಶಬ್ದಗಳಿಂದ ಹೇಳಲ್ಪಟ್ಟ ಸೂಕ್ಷ್ಮಭೂತ ಪಂಚಕಗಳೂ, ಮನಶ್ಶಬ್ದದಿಂದ ಹೇಳಲ್ಪಡುವ ಅಹಂಕಾರ ತತ್ತ್ವವೂ, ಬುದ್ಧಿ ಶಬ್ದದಿಂದ ಹೇಳಲ್ಪಡುವ ಮಹತ್ತತ್ವವೂ ಅಹಂಕಾರ ಶಬ್ದದಿಂದ ಹೇಳಲ್ಪಡುವ ಅವ್ಯಕ್ತ ತತ್ತ್ವವೂ, (೮) ಪರಮೇಶ್ವರನಾದ ನನ್ನ ಅಪರವಾದ ಪ್ರಕೃತಿ ಎಂಬದಾಗಿ ತಿಳಿಯತಕ್ಕದ್ದು. (ಅಥವಾ) ಭೂಮ್ಯಾದಿ ಶಬ್ದಗಳಿಂದ ಪಂಚ ಮಹಾ ಭೂತಗಳು ಸೂಕ್ಷ್ಮಭೂತಗಳೊಡನೇ ಸೇರಿಸಿ ಹೇಳಲ್ಪಟ್ಟವೆಂತಲೂ, ಅಹಂಕಾರ ಶಬ್ದದಿಂದ ಅಹಂಕಾರವೂ ತತ್ಕಾರ್ಯಗಳಾದ ಇಂದ್ರಿಯಗಳೂ ಹೇಳಲ್ಪಟ್ಟವೆಂತಲೂ, ಬುದ್ಧಿ ಶಬ್ದದಿಂದ ಮಹತ್ತತ್ತ್ವವೂ, ಮನಶ್ಶಬ್ದದಿಂದ ಮನಸ್ಸು ಮಾತ್ರದಿಂದ ತಿಳಿಯುತಕ್ಕದ್ದಾಗಿಯೂ ಅವ್ಯಕ್ತರೂಪವಾಗಿಯೂ ಇರುವ ಪ್ರಧಾನವೂ ಹೇಳಲ್ಪಟ್ಟಿರುವುವೆಂತಲೂ, ಈ ಪ್ರಕಾರವಾಗಿ ನನ್ನ ಮಾಯೆಯು ಎಂಟು ಬಗೆಯಾಗಿರುವುದೆಂದು ಬೋಧಿಸಿದನು. ಮತ್ತು ಮಾಯಾ ಎಂಬ ಪ್ರಕೃತಿತತ್ತ್ವವು ಇಪ್ಪತ್ತು ನಾಲ್ಕು ಭೇದಗಳುಳ್ಳದ್ದಾದರೂ ಅವುಗಳಿಗೆ ಈಗ ಪ್ರತಿಪಾದಿಸಿರುವ ಎಂಟು ತತ್ತ್ವಗಳಲ್ಲಿಯೇ ಅನ್ತರ್ಭಾವ ವಿವಕ್ಷೆಯಿಂದ "ಅಷ್ಟಧಾ" ಎಂದು ಬೋಧಿಸಿದನು. ಈ ವಿಷಯವನ್ನು ಎಂದರೆ ಪ್ರಕೃತಿಯು ಇಪ್ಪತ್ತು ನಾಲ್ಕು ಬಗೆಯಾಗಿರುವುದೆನ್ನುವುದನ್ನು ಮುಂದೇ ಹದಿಮೂರನೆ ಅಧ್ಯಾಯದ ಐದನೇ ಶ್ಲೋಕದಲ್ಲಿಯೂ "ಮಹಾ ಭೂತಾನ್ಯಹಂಕಾರೋ ಬುದ್ಧಿರವ್ಯಕ್ತಮೇವಚ। ಇಂದ್ರಿಯಾಣಿ ದಶೈಕಂಚ ಪಂಚಚೇಂದ್ರಿಯಗೋಚರಾಃ" ಎಂಬದಾಗಿ ಉಪದೇಶ ಮಾಡುತ್ತಾನೆ. ... ... ॥೪॥

(ರಾ॥ ಭಾ॥) ವಿಚಿತ್ರವಾಗಿಯೂ ಅನಂತವಾಗಿಯೂ ಇರುವ ಭೋಗ್ಯಪದಾರ್ಥಗಳೇನು ಭೋಗೋಪಕರಣಗಳೇನು, ಈ ರೂಪದಿಂದಿರುವ ಈ ಪ್ರಪಂಚಕ್ಕೆ ಕಾರಣವಾದ ಪ್ರಕೃತಿಯು ಗಂಧರಸ ರೂಪಸ್ಪರ್ಶ ಶಬ್ದಗಳೆಂಬೀ ಗುಣಗಳುಳ್ಳ ಪೃಥಿವೀ, ಅಪ್-ತೇಜಸ್ಸು, ವಾಯು, ಆಕಾಶರೂಪದಿಂದಲೂ ಮನಸ್ಸು ಮೊದಲಾದ ಇಂದ್ರಿಯ ರೂಪದಿಂದಲೂ

ಮುಹಂ ದಹಂಕಾರ ರೂಪದಿಂದಲೂ ಅಷ್ಟವಿಧವಾಗಿ(ನನಗೆ ಶೇಷಭೂತ ವಾಗಿಯೂ ನಿಯಾಮ್ಯವಾಗಿಯೂ ಇರುವ ಪ್ರಕೃತಿಯು) ಭಿನ್ನವಾಗಿರುವುದು॥ ... ... ... ॥೪॥

(ಗೀ॥ ವಿ॥) ಈಪ್ರಕಾರವಾಗಿ ಉಪೋದ್ಘಾತ ಪ್ರದರ್ಶನವಂಮಾಡಿ ಈಗ ಮೊದಲು ಪ್ರತಿಜ್ಞೆಮಾಡಲ್ಪಟ್ಟ ಜ್ಞಾನಪದದಿಂದ ಹೇಳಲ್ಪಡುವತಿಳಿಯತಕ್ಕ ಪರಮಾತ್ಮನಮಹಿಮೆಯನ್ನು ನಾಲ್ಕು ಶ್ಲೋಕಗಳಿಂದ ಹೇಳುತ್ತಾನೆ. ಭೂಮಿಃ- ಭೂಮಿಯು, ಅಪಃ- ಜಲವು, ಅನಲಃ- ಅಗ್ನಿಯು, ವಾಯುಃ-ವಾಯುವು- ಖಂ- ಆಕಾಶವು, ಮನಃ- ಮನಸ್ಸು, ಬುದ್ಧಿಃ- ಬುದ್ಧಿಯೂ, ಅಹಂಕಾರಃ- ಅಹಂಕಾರತತ್ವವು, ಇದುಮಹತ್ತತ್ವಕ್ಕೂ ಉಪಲಕ್ಷಣವಾಗಿರುವುದು. ಇತಿ- ಈಪ್ರಕಾರದಿಂದ, ಮೇ-ನನ್ನ ಅಧೀನವಾದ,ಇಯಂ ಪ್ರಕೃತಿಃ-ಈಪ್ರಕೃತಿಯು, ಅಷ್ಟಧಾ-ಕಾರ್ಯರೂಪದಿಂದ ಯೆಂಟುಬಗೆಯಾಗಿ, ಭಿನ್ನಾ- ಭಿನ್ನ ವಾಗಿರುವುದು(ಇಲ್ಲಿ" ಉದ್ದಿಷ್ಟಾಪೇಕ್ಷಯಾ ಅಷ್ಟಧೇತ್ಯುಕ್ತಿಃ-ಉಪಲಕ್ಷಿತಾಪೇಕ್ಷಯಾನವಧೇತ್ಯುಕ್ತಿಃ,, ಎಂಬವ್ಯಾಖ್ಯಾನಪಂಕ್ತಿಯನ್ನ ನುಸಂಧಾನಮಾಡಬೇಕು) ನನ್ನಿಂದಪ್ರೇರಿತವಾದಪ್ರಕೃತಿಯು ಪೃಥಿವ್ಯಾದಿ ಕಾರ್ಯರೂಪದಿಂದಭಿನ್ನವಾಗಿರುವುದೆಂದರ್ಥವು. ... ॥೪॥

ಶ್ಲೋ॥ ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂವಿದ್ಧಿಮೇ ಪರಾಂ । ಜೀವಭೂತಾಂಮಹಾಬಾಹೋ ಯಯೇದಂ ಧಾರ್ಯತೇಜಗತ್॥ ... ... ॥೫॥

ಪ॥ ಅಪರಾ-ಇಯಂ-ಇತಃ-ತು-ಅನ್ಯಾಂ-ಪ್ರಕೃತಿಂ-ವಿದ್ಧಿ-ಮೇ-ಪರಾಂ! ಜೀವಭೂತಾಂ-ಮಹಾಬಾಹೋ-ಯಯಾ-ಇದಂ-ಧಾರ್ಯತೇ-ಜಗತ್॥

ಅ॥ ಹೇಮಹಾಬಾಹೋ-ಎಲೈ ಭುಜಬಲಮುಳ್ಳ ಅರ್ಜುನನೇ, ಇಯಂ-ಈ ಪೂರ್ವಶ್ಲೋಕೋಕ್ತವಾದ ಪ್ರಕೃತಿಯು, ಅಪರಾ- ನೀಚವಾದದ್ದು, ಇತಸ್ತು-ಇದಕ್ಕಿಂತಲೂ, ಅನ್ಯಾಂ-ಬೇರೆಯಾಗಿರುವುದಾಗಿಯೂ, ಯಯಾ-ಯಾವ ಪ್ರಕೃತಿಯಿಂದ,(ಗೀ॥ವಿ)ಯಾವ ಲಕ್ಷ್ಮೀದೇವಿಯಿಂದ, ಇದಂ ಜಗದ್ಧಾರ್ಯತೇ- ಈಪ್ರಪಂಚವು ಧರಿಸಲ್ಪಡುವುದೋ (ತಾಂ-ಆಂತಹ) ಜೀವಭೂತಾಂ - ಜೀವಸ್ವರೂಪವಾಗಿಯೂ, ಇರುವ, ಮೇ-ನನ್ನ ಅಧೀನವಾದ, ಪರಾಂ-ಶ್ರೇಷ್ಠವಾದ, ಪ್ರಕೃತಿಂ-ಚೇತನ ರೂಪವಾದ ಪ್ರಕೃತಿಯನ್ನು, ವಿದ್ಧಿ-ತಿಳಿದುಕೊಳ್ಳುವಂತವನಾಗು. ... ... ... ॥೫॥

(ಶಂ॥ ಭಾ॥) ಸಕಲವಾದ ಪ್ರಪಂಚದಲ್ಲಿಯೂ ಪ್ರವೇಶಿಸಿ ಪ್ರಪಂಚ ನಾಟಕವನ್ನು ಪ್ರವರ್ತಿಸುವಂತಾ ದ್ದಾಗಿರುವ ಚೇತನಸಂಜ್ಞಿಕವಾದ ವಿಶುದ್ಧಪ್ರಕೃತಿಯು ಪೂರ್ವಶ್ಲೋಕದಲ್ಲಿ ಹೇಳಲ್ಪಟ್ಟ ನಿಕೃಷ್ಟವಾಗಿಯೂ ಅಶುದ್ಧವಾಗಿಯೂ ಅನರ್ಥಕಾರಿಯಾಗಿಯೂ ಇರುವ ಸಂಸಾರಬಂಧನಾ ತ್ಮಿಕವಾದ ಜಡಪ್ರಕೃತಿಗಿಂತಲುಶ್ರೇಷ್ಠವಾಗಿರುವುದೆಂದರಿಯಬೇಕು. ... ... ...॥೫॥

( ವು॥ ಸೂ॥) ಈ ಶ್ಲೋಕದ "ಯಯೇದಂಧಾರ್ಯತೇಜಗತ್,, ಎಂಬ ನಾಲ್ಕನೆ ಪಾದದಿಂದ" ಪರಮಾತ್ಮನು, ಛಾಯಾಮಾತ್ರವಾದ ಜೀವರೂಪದೊಡನೆ ಪ್ರವೆಶಿಸಿ ನಾಮರೂಪ ಗಳನ್ನುಂಟುಮಾಡಿದನು,, ಎಂಬ ಶ್ರುತ್ಯರ್ಥವುಹೆಳಲ್ಪಟ್ಟಿತು. ... ॥೫॥

(ಶಂ॥ಆ॥) ಇದುವರೆಗೂ ಹೇಳಲ್ಪಟ್ಟಶ್ಲೋಕಗಳಿಂದಸೃಷ್ಟ್ಯಾದಿಗಳಿಗೆ ಕಾರಣವಾದ ಪ್ರಕೃತಿಯು ಯೆಂಟು ಪ್ರಕಾರಗಳೆಂದುಹೇಳಿದನು. ಈಗ ಈಪ್ರಕೃತಿಯು ಬೆರೊಂದು ಪ್ರಕೃತಿಗಿಂತಲೂ ಭಿನ್ನವಾಗಿರುವುದೆಂಬದಾಗಿಯೂ, ಇದಕ್ಕೆ ಅಪರಾ ಎಂಬ ನಾಮವೆಂತಲೂ,ತಿಳಿಸುತ ಪರಾ ಎಂಬಪ್ರಕೃತಿಸ್ವರೂಪವನ್ನು ತಿಳಿಸುತ್ತಾನೆ. ಮತ್ತು,ದೇಹೇಂದ್ರಿಯಾದಿರೂಪವಾದ ಸರ್ವ ಪ್ರಪಂಚವನ್ನು ಜೀವಭೂತವಾದಪರಾಪ್ರಕೃತಿಯು ಧರಿಸಿಕೊಂಡಿರುವುದು. ನಾನು ನನ್ನದು ಎಂಬಅಭಿಮಾನದಿಂದ ತೋಷಣ ಪೋಷಣ ರಕ್ಷಣಕ್ರಿಯಾದಿಗಳು ಸಂಪಾದಿಸಲ್ಪಡುವುವೆಂತಲೂ, ಆಪ್ರಕಾರವೆ ಬಾಹ್ಯದಲ್ಲಿಯೂ ಈಪರಾರೂಪವಾದಪ್ರಕೃತಿತತ್ವವು ಘಟಪಟಾದಿಸತ್ತಾಸ್ಫೂರ್ತಿಯನ್ನುಂಟುಮಾಡುವುದರಿಂದಲೂ, ನಾಮರೂಪಾದಿ ಭೇದಕಲ್ಪನದಿಂದಲೂ ಲೊಕನಿರ್ವಾಹಂಮಾಡುವುದೆಂತಲೂ ತಿಳಿಯಬೇಕು. ... ... ॥೫॥

(ರಾ॥ಭಾ॥) ಪೂರ್ವಶ್ಲೋಕದಲ್ಲಿ ವಿವರಿಸಿರುವಈನನ್ನ ಪ್ರಕೃತಿಯು ನಿಕೃಷ್ಟವಾದದ್ದು, ಇತಃ- ಅಚೇತನವಾಗಿಯೂ ಚೆತನರಿಗೆಭೊಗ್ಯಭೂತವಾಗಿಯೂ ಇರುವಪ್ರಕೃತಿಗಿಂತಲೂ, ಅನ್ಯಾಂ- ವಿಜಾತೀಯಾಕಾರವಾಗಿಯೂ, ಜೀವಭೂತಾಂ- ಚೇತನರೂಪವಾಗಿಯೂ, ಪರಾಂ- ಭೊಕ್ತಾ, ಎಂಬ ಆಕಾರದಿಂದ ಪ್ರಧಾನಭೂತವಾಗಿಯೂ ಇರುವ,ಮೆ-ನನ್ನ ಅಧೀನವಾದ,ಪ್ರಕೃತಿಯನ್ನು, ವಿದ್ಧಿ- ತಿಳಿದುಕೊ

ಳ್ಳವಂತವನೆನಾಗು, ಯಯಾ- ಯಾವಚೇತನಪ್ರಕೃತಿಯಿಂದ, ಇದಂ- ಈಸಮಸ್ತ ಜಡಪ್ರಪಂಚವು,ಧಾರ್ಯತೇ-ಧರಿಸಲ್ಪಡುವುದೊ,ಅಂತಹಚೇತನ ಭೂತವಾದ ಪ್ರಕೃತಿಯನ್ನು ತಿಳಿದುಕೊಳ್ಳೆಂದು ತಾತ್ಪರ್ಯವು. ॥೫॥

(ತಾ॥ಚಂ॥) ಈ೪-೫-ನೇ ಶ್ಲೋಕಗಳಿಂದ ಪರಮಾತ್ಮನಿಗೆ ಚೇತನಾ ಚೇತನವೈಲಕ್ಷಣ್ಯವೂಚೇತನಾಚೇತನ ಪ್ರಪಂಚಗಳಿಗೆ ಪರಮಾತ್ಮನೆ ಆಧಾರ ಭೂತನಾಗಿಯೂ, ಶೇಷಿಯಾಗಿಯೂನಿಯಾಮಕನಾಗಿಯೂಇರುವ ಪ್ರಕಾರವೂ ಉಪದಿಷ್ಟವಾಯಿತೆಂದರಿಯಬೇಕು. ॥೫॥

(ಗೀ॥ ವಿ॥)ಜಡಪ್ರಕೃತಿ ಮಾತ್ರವೇ ತನ್ನ ಕಾರ್ಯವಾದ ಪೃಥಿವ್ಯಾದಿಗಳೊಡನೆ ನನ್ನ ವಶವಾದದ್ದಲ್ಲವು. ಮತ್ತು ಯಾರೆಂದರೆ? ಬ್ರಹ್ಮಾದಿ ಜಗತ್ತಿಗೆ ತಾಯಿಯಾದ ಚೇತ್ಪ್ರಕೃತಿಯಾಗಿರುವ ಶ್ರೀಲಕ್ಷ್ಮೀದೇವಿಯೂನನ್ನವಶವಾಗಿರುವಳೆಂದರ್ಜುನನಿಗೆ ಬೋಧಿಸುತ್ತಾನೆ. (ಅಥವಾ) ಪರಮಾತ್ಮನಿಗೆ ಪರತ್ವವನ್ನು ಹೇಳುವುದಕ್ಕಾಗಿ ಅದಕ್ಕುಪಯೋಗಿಸುವಂತೆ ಪರಾಪರ ವಸ್ತುಗಳನ್ನು ಹೇಳುತ್ತಾನೆ. ಚೇತನ ಪ್ರಕೃತಿಯಾದ ಶ್ರೀಲಕ್ಷ್ಮೀದೇವಿಯಿಂದ ಜಡಪ್ರಕೃತಿಯಾದ ಈ ಪ್ರಪಂಚವು ಧರಿಸಲ್ಪಟ್ಟಿರುವುದು ಪ್ರಾಣಗಳನ್ನು ಧರಿಸುವುದರಿಂದಲೂ ಯಾವಾಗಲೂ ಎಲ್ಲಿಯೂ ವ್ಯಾಪಿಸಿರುವುದರಿಂದಲೂ ಈ ಲಕ್ಷ್ಮೀದೇವಿಯು ಜೀವ ಭೂತಳೆಂದು ಹೇಳಲ್ಪಟ್ಟಿರುವಳು. ಇವಳನ್ನು ಜಡಪ್ರಕೃತಿಗಿಂತಲೂ ಇದರಿಂದ ಉಪಲಕ್ಷಿತವಾದ ಜೀವವರ್ಗಕ್ಕಿಂತಲೂ ಶ್ರೇಷ್ಠಳೆಂದರಿಯಬೇಕು. ... ... ॥೫॥

ಶ್ಲೋ॥ ಏತದ್ಯೋನೀನಿಭೂತಾನಿ ಸರ್ವಾಣೀತ್ಯುಪಧಾ
ರಯ । ಅಹಂಕೃತ್ಸ್ನಸ್ಯ ಜಗತಃ ಪ್ರಭವಃಪ್ರಲಯ
ಸ್ತಥಾ ॥ ... ... ... ॥೬॥

ಪ॥ ಏತದ್ಯೋನೀನಿ- ಭೂತಾನಿ- ಸರ್ವಾಣಿ- ಇತಿ-ಉಪಧಾರಯ। ಅಹಂ- ಕೃತ್ಸ್ನಸ್ಯ- ಜಗತಃ- ಪ್ರಭವಃ- ಪ್ರಲಯಃ- ತಥಾ ॥

ಅ॥ ಸರ್ವಾಣಿ - ಸಮಸ್ತಗಳಾದ, ಭೂತಾನಿ, ಭೂತಗಳನ್ನು, ಏತದ್ಯೋನೀನೀತಿ- ಈ ದ್ವಿವಿಧ ಪ್ರಕೃತಿಯಿಂದುಂಟಾದವುಗಳೆಂ, ಉಪಧಾರಯ - ತಿಳಿದುಕೊಳ್ಳು, ಕೃ

ತ್ಸ್ನಸ್ಯಜಗತಃ - ಸಮಸ್ತವಾದ ಪ್ರಪಂಚಕ್ಕೂ, ಅಹಂ-ನಾನು, ಪ್ರಭವಃ- ಉತ್ಪತ್ತಿ ಕಾರಣನು, ತಥಾ-ಆ ಪ್ರಕಾರವೇ, ಪ್ರಳಯಃ- ಪ್ರಳಯಕಾರಣನು. ||೬||

(ರಾ|| ಭಾ||) ಚೇತನವಾಗಿಯೂ ಅಚೇತನವಾಗಿಯೂ ನಮಗೆ ಶೇಷಭೂತವಾಗಿಯೂಇರುವ ಈದ್ವಿವಿಧ ಪ್ರಕೃತಿಯಿಂದಲೇ ಬ್ರಹ್ಮಾದಿಸ್ತಂಬ ಪರ್ಯಂತಗಳಾಗಿಯೂ ದೇವತಿರ್ಯಙ್ಮನುಷ್ಯಸ್ಥಾವರಾದಿ ಭೇದಭಿನ್ನಗಳಾಗಿಯೂ ಚೇತನಾ ಚೇತನ ವಿಮಿಶ್ರಗಳಾಗಿಯೂ ಇರುವ ಈ ಭೂತಗಳೆಲ್ಲವೂ ಉಂಟಾಗಿರುವುವು. ನಮ್ಮ ಪ್ರಕೃತಿಯಿಂದುಂಟಾಗಿರುವುವಾದುದರಿಂದ ಇವೆಲ್ಲವೂ ನಮ್ಮವುಗಳೆ. ಈ ಪ್ರಕಾರವಾಗಿ ಸಕಲ ಪ್ರಪಂಚಗಳಿಗೂ ಪ್ರಕೃತಿಯು ಕಾರಣವಾಗಿರುವಂತೆ ಅಂತಹ ಪ್ರಕೃತಿಗೆ ನಾನು ಕಾರಣನಾಗಿಯೂ ಶೇಷಿಯಾಗಿಯೂ ಇರುವುದರಿಂದ ಈ ಲೋಕಗಳಿಗೆ ನಾನೇ ಕಾರಣನಾಗಿಯೂ ನಾಶಕನಾಗಿಯೂ ಶೇಷಿಯಾಗಿಯೂ ಇರುವೆನೆಂಬದಾಗಿ ತಿಳಿದುಕೊಳ್ಳು. ಚೇತನಾಚೇತನಗಳ ಸಮಷ್ಟಿಭೂತರಾದ ಪ್ರಕೃತಿ ಪುರುಷರಿಗೆ ಪರಮ ಪುರುಷನೇ ಕಾರಣನಾಗಿರುವುನೆಂಬವುದು ಶ್ರುತಿಸ್ಮೃತಿ ಸಿದ್ಧವಾಗಿರುವುದು. (ಶ್ರುತಿಯನ್ನು ಭಾಷ್ಯದಲ್ಲಿ ನೋಡಬಹುದು)ಸ್ಮೃತಿಯು "ಪ್ರಕೃತಿರ್ಯಾಮಯಾ ಖ್ಯಾತಾವ್ಯಕ್ತಾ ವ್ಯಕ್ತಸ್ವರೂಪಿಣೀ। ಪುರುಷಶ್ಚಾಪ್ಯುಭಾವೇತೌಲೀಯೇತೇಪರಮಾತ್ಮನಿ || ಪರಮಾತ್ಮಾಚ ಸರ್ವೇಷಾಮಾಧಾರಃಪರಮೇಶ್ವರಃ। ವಿಷ್ಣುನಾಮಾಸವೇದೇಷುವೇದಾಂತೇಷುಚಗೀಯತೇ " ಇತ್ಯಾದಿಗಳೇ. ... ... ||೬||

ಶ್ಲೋ||ಮತ್ತಃಪರತರಂನಾನ್ಯತ್ಕಿಂಚಿದಸ್ತಿಧನಂಜಯ||೭||

ಪ|| ಮತ್ತಃ- ಪರತರಂ- ನ- ಅನ್ಯತ್- ಕಿಂಚಿತ್- ಅಸ್ತಿ-ಧನಂಜಯ- ||

ಅ|| ಹೇಧನಂಜಯ- ಎಲೈ ಅರ್ಜುನನೇ, ಮತ್ತಃ- ನನಿಗಿಂತಲೂ, ಪರತರಂ-ಶ್ರೇಷ್ಠವಾದದ್ದು, ಅನ್ಯತ್ಕಿಂಚಿತ್- ಬೇರೊಂದು ವಸ್ತುವು, ನ- ಇಲ್ಲವು.

(ರಾ||ಭಾ||)ನಾವು ಸರ್ವಕಾರಣವಾದ ದ್ವಿವಿಧ ಪ್ರಕೃತಿಗೂ ಕಾರಣವಾಗಿರುವುದರಿಂದಲೂ, ಸಕಲವಾದ ಅಚೇತನಗಳಿಗೂ ಶೇಷಿಯಾದ ಚೇತನ ವರ್ಗಕ್ಕೂ ಶೇಷಿಯಾಗಿರುವುದರಿಂದಲೂ, ಹೇಗಾದರೆ ಪರಾತ್ಪರವಸ್ತುವಾಗಿರುವೆವೋ ಆ ಪ್ರಕಾರವೇ ಜ್ಞಾನಶಕ್ತಿ ಬಲಾದಿಗಳಿಂದಲೂ ನಾವೇ ಪರಾತ್ಪರರಾಗಿರುವೆವು. ಜ್ಞಾನದಿಂದಲಾದರೂ ಬಲದಿಂ

ವಲ್ಲಾದರೂ ನಮ್ಮಗಳಿಗಿಂತಲೂ ಉತ್ಕೃಷ್ಟವಾದ ಬೇರೊಂದು ತತ್ತ್ವ ವಿರಲಾರದು. ... ... ||೬೮||

ಶ್ಲೋ|| ಮಯಿಸರ್ವಮಿದಂಪ್ರೋತಂ ಸೂತ್ರೇಮಣಿ ಗಣಾಇವ|| ... ... ||೭||

ಪ|| ಮಯಿ- ಸರ್ವಂ- ಇದಂ- ಪ್ರೋತಂ- ಸೂತ್ರೇ- ಮಣಿಗಣಾಃ- ಇವ ||೭||

ಅ|| ಇದಂಸರ್ವಂ- ಈ ಸರ್ವಪ್ರಪಂಚವೂ, ಮಯಿ- ನನ್ನಲ್ಲಿ, ಸೂತ್ರೇ- ಧಾರದಲ್ಲಿ, ಮಣಿಗಣಾ ಇವ- ಮಣಿಗಳ ಸಮೂಹದಂತೆ, ಪ್ರೋತಂ- ಆಶ್ರಯಿಸಿಕೊಂಡಿರುವುದು. ... .... ... ... ||೭||

(ರಾ|| ಭಾ||) ಚೇತನಾಚೇತನ ರೂಪವಾದ ಈ ವಸ್ತುಗಳೆಲ್ಲವೂ ಕಾರ್ಯಕಾರಣಾವಸ್ಥೆಗಳಲ್ಲಿ ಯಾವಾಗಲೂ ನನಗೆ ಶರೀರವಾಗಿ ಬಂದು ಧಾರದಲ್ಲಿ ಕೇರಿಸಲ್ಪಟ್ಟ ರತ್ನ ಸಮೂಹದಂತೆ ಅಂತರಾತ್ಮಆಗಿರುವ ನನ್ನಲ್ಲಿ ಆಶ್ರಯಿಸಿಕೊಂಡಿರುವುದು. ಆದುದರಿಂದ ಸಮಸ್ತವು ಪರಮಪುರುಷನಿಗೆ ಶರೀರವಾಗಿ ಆತ್ಮಭೂತನಾದ ಪರಮಪುರುಷನಿಗೆ ಪ್ರಕಾರವಾಗಿರುವುದರಿಂದ (ಈಸಮಸ್ತವನ್ನು ಪ್ರಕಾರವಾಗಿ ಯುಳ್ಳವನು ಪರಮಪುರುಷನೇ ಆಗಿರುವುದರಿಂದ)ಆಯಾವಸ್ತುವಾಚಕಗಳಾದ ಸಮಸ್ತಶಬ್ದಗಳೂ ಪರಮ ಪುರುಷನಿಗೆ ಪ್ರತಿಪಾದಕಗಳಾಗಿರುವಿಕೆಯನ್ನು; ಆಯಾಶಬ್ದಗಳನ್ನೂ ಸ್ವವಾಚಕವಾದ ಅಹಂ ಶಬ್ದವನ್ನೂ ಸಮಾನಾಧಿಕರಣಗಳಾಗಿ 'ಮನುಷ್ಯಃ, ಅಹಂ, ಎಂಬಂತೆ ನಿರ್ದೇಶಿಸಿ ತೋರಿಸುತ್ತಾರೆ. ಅಲ್ಲಿ ಮನುಷ್ಯ ಶಬ್ದವು ಪಿಂಡವಿಶೇಷವನ್ನು ಮುಂದೆ ಮಾಡಿಕೊಂಡು ಇದನ್ನು ಶರೀರವಾಗಿಯುಳ್ಳ ಆತ್ಮವನ್ನು ತೋರಿಸುತ್ತದೆ. ಅಹಂ ಶಬ್ದವು ನಾನೆಂಬುವುದಕ್ಕೆ ಪರ್ಯಾಯವಾಗಿ ಆ ಆತ್ಮವನ್ನೇ ತೋರಿಸುತ್ತದೆ. ಅನೇಕ ಶಬ್ದಗಳು ಭಿನ್ನಭಿನ್ನ ಪ್ರಕಾರಗಳನ್ನು ಮುಂದೆ ಮಾಡಿಕೊಂಡು ಒಂದು ವಿಶೇಷ್ಯವಂ ಪ್ರತಿಪಾದಿಸುವಿಕೆಯನ್ನು ಸಾಮಾನಾಧಿಕರಣ್ಯವೆನ್ನುವರು. ಈ ಪ್ರಕಾರವೇ ಮುಂದೆಯೂ ಅಲ್ಲಲ್ಲಿ ವ್ಯಕ್ತಪಡಿಸುವನು. ಚೇತನಾ ಚೇತನಾತ್ಮಕವಾದ ಪ್ರಪಂಚಕ್ಕೂ ಪರಮಾತ್ಮನಿಗೂ ಇರುವ ಶರೀರಾತ್ಮ ಭಾವ ಸಂಬಂಧವು ಅಂತರ್ಯಾಮಿ ಬ್ರಾಹ್ಮಣದಲ್ಲಿ ಸ್ಪಷ್ಟವಾಗಿ ತಿಳಿಯಬಹುದು. ... ||೭||

ಶ್ಲೋ|| ರಸೋಽಹಮಪ್ಸುಕೌಂತೇಯಃಪ್ರಭಾಸ್ಮಿಶಶಿಸೂರ್ಯ

ಯೋಃ|ಪ್ರಣವಸ್ಸರ್ವವೇದೇಷುಶಬ್ದಃಖೇಪೌರುಷಂನೃಷು॥
ಪುಣ್ಯೋಗಂಧಃಪೃಥಿವ್ಯಾಂಚ ತೇಜಶ್ಚಾಸ್ಮಿವಿಭಾವಸೌ ।
ಜೀವನಂಸರ್ವಭೂತೇಷು ತಪಶ್ಚಾಸ್ಮಿತಪಸ್ವಿಷು ॥೯॥
ಬೀಜಂಮಾಂಸರ್ವಭೂತಾನಾಂ ವಿದ್ಧಿಪಾರ್ಥಸನಾತನಂ।
ಬುದ್ಧಿರ್ಬುದ್ಧಿಮತಾಮಸ್ಮಿ ತೇಜಸ್ತೇಜಸ್ವಿನಾಮಹಂ ॥
ಬಲಂಬಲವತಾಂಚಾಹಂ ಕಾಮರಾಗವಿವರ್ಜಿತಂ । ಧರ್ಮಾ
ವಿರುದ್ಧೋಭೂತೇಷು ಕಾಮೋಽಸ್ಮಿಭರತರ್ಷಭ ॥೧೧॥

ಪ॥ ರಸಃ- ಅಹಂ- ಅಪ್ಸು- ಕೌಂತೇಯ- ಪ್ರಭಾ- ಅಸ್ಮಿ- ಶಶಿಸೂರ್ಯಯೋಃ। ಪ್ರಣವಃ- ಸರ್ವವೇದೇಷು- ಶಬ್ದಃ- ಖೇ- ಪೌರುಷಂ- ನೃಷು ||ಪುಣ್ಯಃ- ಗಂಧಃ- ಪೃಥಿವ್ಯಾಂ- ಚ- ತೇಜಃ- ಚ- ಅಸ್ಮಿ- ವಿಭಾವಸೌ। ಜೀವನಂ- ಸರ್ವಭೂತೇಷು- ತಪಃ-ಚ- ಅಸ್ಮಿ- ತಪಸ್ವಿಷು॥ ಬೀಜಂ- ಮಾಂ- ಸರ್ವಭೂತಾನಾಂ- ವಿದ್ಧಿ- ಪಾರ್ಥ- ಸನಾತನಂ। ಬುದ್ಧಿಃ- ಬುದ್ಧಿಮತಾಂ- ಅಸ್ಮಿ- ತೇಜಃ- ತೇಜಸ್ವಿನಾಂ- ಅಹಂ॥ ಬಲಂ- ಬಲವತಾಂ ಚ- ಅಹಂ- ಕಾಮರಾಗವಿವರ್ಜಿತಂ । ಧರ್ಮಾವಿರುದ್ಧಃ- ಭೂತೇಷು- ಕಾಮಃ- ಅಸ್ಮಿ-ಭರತರ್ಷಭ ॥

ಅ॥ ರಾ॥ ಭಾ॥ ಹೇಕೌಂತೇಯ- ಎಲೈ ಅರ್ಜುನನೆ, ಅಪ್ಸುರಸಃ ಅಹಮಸ್ಮಿ- ಜಲದಲ್ಲಿರುವ ಮಧುರರಸವುನಾನೆ, (ಶಬ್ದಸ್ಪರ್ಶರೂಪ ರಸಗಂಧಗಳು ಗುಣಗಳಾದುದರಿಂದ ದ್ರವತ್ವ ಘಟಿತಮಾದ ಶರೀರಲಕ್ಷಣವು ಅವುಗಳಿಗೆ ಅಸಂಭಾವಿತವಾದುದರಿಂದ ಮಧುರರಸ ವಿಶಿಷ್ಟವಾದ ಜಲವು ನನಿಗೆ ಶರೀರವೆಂದರ್ಥವು) ಶಶಿಸೂರ್ಯಯೋಃಪ್ರಭಾಅಹಮಸ್ಮಿ-ಚಂದ್ರಸೂರ್ಯರಲ್ಲಿರುವ ಪ್ರಕಾಶವೂ ನಾನೆ, ನನ್ನ ಶರೀರವೆ. (ಇಲ್ಲಿ ಪ್ರಭೆಯನ್ನು ಶ್ರೀಭಾಷ್ಯಕಾರರು ದ್ರವ್ಯವಾಗಿ ಅನುಗ್ರಹಿಸಿರುವುದರಿಂದ ಇದಕ್ಕೆ ಸಾಕ್ಷಾತ್ತಾಗಿಯೇ ಶರೀರತ್ವವು ಆಗಬಹುದು.) ಸರ್ವವೇದೇಷುಪ್ರಣವೋ ಅಹಮಸ್ಮಿ- ಸಮಸ್ತವೇದಗಳ ಆದ್ಯಂತಗಳಲ್ಲನು ಸಂಧಿಸಲ್ಪಡತಕ್ಕದ್ದಾಗಿಯೂ, ಸರ್ವವೇದಸಾರವಾಗಿಯೂಇರುವ ಪ್ರಣವಾಕ್ಷರವು ನಾನೇ, (ಈ ಪ್ರಣವಾಕ್ಷರವು ಶಬ್ದರೂಪ ಮಾದುದರಿಂದ "ಯಾವ ಪರಮಾತ್ಮನಿಗೆ ವೇದಗಳು ಶರೀರವೋ" ಎಂಬ ಶ್ರುತಿವಾಕ್ಯದಲ್ಲಿ ವೇದಾಧಿಷ್ಠಾನ ದೇವತೆಗಳೇ ಶರೀರಗಳೆಂದು ನಿರ್ವಹಿಸಿರುವಂತೆ ಇಲ್ಲಿಯೂ ಪ್ರಣವಾಧಿಷ್ಠಾನ ದೇವತೆಯು ನನ್ನ ಶರೀರವೆಂದರ್ಥವು.) ಖೇಶಬ್ದಃ ಅಹಮಸ್ಮಿ-ಆಕಾಶದಲ್ಲಿರುವ ಧ್ವನ್ಯಾದಿರೂಪವಾದ ಶಬ್ದವು ನಾನೇ, (ಶಬ್ದವನ್ನು ಗುಣವಾಗಿಯುಳ್ಳ ಆಕಾಶವು ನನಿಗೆ ಶರೀರವೆಂದರ್ಥವು.) ನೃಷು ಪೌರುಷಮಹಮಸ್ಮಿ- ಪುರುಷರಲ್ಲಿರುವ ಪುಂಸ್ತ್ವರೂಪವಾದ ಶುಕ್ಲವು ನಾನೆ, (ನನ್ನ ಶರೀರವೇ,)ಪೃಥಿವ್ಯಾಂಪುಣ್ಯೋಗಂಧಶ್ಚಾಹಮಸ್ಮಿ-ಪೃಥಿವಿಯಲ್ಲಿರುವ ಶೋಭನವಾದ ಪರಿಮಳವೂ ನಾನೆ, (ಶೋಭನವಾದ ಪರಿಮಳವನ್ನು ಗುಣವಾಗಿಯುಳ್ಳ ಪೃಥಿವಿಯು

ನನಿಗೆ ಶರೀರವೆಂದರ್ಥವು.) ವಿಭಾವಸೌತೇಜಶ್ಚಾಹಮಸ್ಮಿ- ಅಗ್ನಿಯಲ್ಲಿರುವ ಪ್ರಭಾರೂಪವಾದ ತೇಜಸ್ಸೂ ನಾನೆ, (ನನಿಗೆ ಶರೀರವೆಂದರ್ಥವು.) ಸರ್ವಭೂತೇಷುಜೀವನ ಮಹಮಸ್ಮಿ- ಸರ್ವಭೂತಗಳಿಗೂ ಪ್ರಾಣಧಾರಕವಾಗಿಯೂ ಆಯಾ ಜಂತುಗಳಿಗೆ ಅನುರೂಪವಾಗಿಯೂ ಇರುವ ಜೀವನವೂ ನಾನೆ, (ನನಿಗೆ ಶರೀರವೇ.) ತಪಸ್ವಿಷು ತಪಶ್ಚಾಹಮಸ್ಮಿ- ತಪಸ್ಸುಮಾಡುವವರಲ್ಲಿರುವ ತಪಸ್ಸೂ ನಾನೆ, ನ್ಯಾಯಾರ್ಜಿತ ದ್ರವ್ಯವನ್ನು ಸತ್ಪಾತ್ರದಲ್ಲಿ ವಿನಿಯೋಗಿಸುವುದಾದರೂ, ಉಪವಾಸಾದಿಗಳೆಂಬ ಅನಶನ ವ್ರತವಾದರೂ, ಬ್ರಹ್ಮೋಪಾಸನವಾದರೂ ಈಮೂರು ಒಂದಾಗಿ ಸೇರಿಯಾದರೂ ತಪಸ್ಸೆನ್ನಲ್ಪಡುವುದು. ಅದರ ಅಧಿಷ್ಠಾನ ದೇವತೆಯು ನನ್ನ ಶರೀರವೆಂದರ್ಥವು. (ಅಥವಾ) ತಪಸ್ಸು ನನಿಗೆ ಶೇಷಭೂತವೆಂದರ್ಥವು.) ಪಾರ್ಥಸನಾತನಂಸರ್ವಭೂತಾನಾಂ ಬೀಜಂಮಾಂವಿದ್ಧಿ- ಎಲೈ ಅರ್ಜುನನೇ ಅನಾದಿಯಾಗಿ ಇರುತಲಿರುವ ಸರ್ವಭೂತಕಾರಣವು ನಾನೆಂದುತಿಳಿದುಕೊಳ್ಳು, ಬುದ್ಧಿಮತಾಂಬುದ್ಧಿರಸ್ಮಿ- ಲೋಕದಲ್ಲಿ ಬೋಧಶಾಲಿಗಳ ಬೋಧವು ನನ್ನಿಂದುಂಟುಮಾಡಲ್ಪಟ್ಟದ್ದಾದುದರಿಂದ ಅದೂ ನಾನೆ, ತೇಜಸ್ವಿನಾಂತೇಜಃ ಅಹಮಸ್ಮಿ-ಅನ್ಯರನ್ನು ತಿರಸ್ಕರಿಸುವ ಸಾಮರ್ಥ್ಯವುಳ್ಳವರ ಅಂತಹ ಸಾಮರ್ಥ್ಯವು ನನ್ನಿಂ ದುಂಟಾಗಿರುವುದರಿಂದ ಅದೂ ನಾನೇ, ಕಾಮರಾಗವಿವರ್ಜಿತಂ ಬಲವತಾಂಬಲಂಚಾಹಂ - ಕಾಮ ಮೂಲವಾದ ಮನೋವಿಕಾರವಿಲ್ಲದಿರುವ ಬಲಮುಳ್ಳಜನರ ಶುಕ್ಲಧಾತು ಧಾರಣ ಸಾಮರ್ಥ್ಯವೂ ನನ್ನಿಂದುಂಟಾಗಿರುವುದರಿಂದ ಅದೂ ನಿನಿಗೆ ಶೇಷಭೂತವಾಗಿರುವುದು. ಭರತರ್ಷಭ- ಎಲೈ ಭರತವಂಶ್ಯನಾದ ರಾಜಶ್ರೇಷ್ಠನೆ, ಭೂತೇಷುಧರ್ಮಾವಿರುದ್ಧಃ ಕಾಮೋ ಹಮಸ್ಮಿ- ಸರ್ವಪ್ರಾಣಿಗಳಲ್ಲಿರುವುದಾಗಿಯೂ, ಶಾಸ್ತ್ರವಿಹಿತ ಸ್ವಭಾರ್ಯಾ ಋತುಗಮನ ವಿಷಯವಾದುದರಿಂದ ಧರ್ಮವಿರೋಧವಿಲ್ಲದೆ ಇರುವುದಾಗಿಯೂ ಇರುವ ಭೋಗೇಚ್ಛೆಯು ನನ್ನಿಂದುಂಟಾಗಿರುವುದರಿಂದ ಅದೂ ನನಿಗೆ ಶೇಷಭೂತವೆಂದರ್ಥವು. ||೮||೯||೧೦||೧೧||

(ಶಂ|| ಭಾ||) ಉದಕಾದಿಗಳು ರಸಾದಿಗಳಲ್ಲಿ ಪ್ರೋತವಾಗಿರುವುದೆಂದು ಲೋಕಪ್ರತೀತಿಯುಂಟಾಗಿರುವಂತೆ ಯಾವಯಾವಧರ್ಮಗಳುಳ್ಳ ನಿನ್ನಲ್ಲಿ ಈಪ್ರಪಂಚವೆಲ್ಲವೂ ಪ್ರೋತವಾಗಿರುವುದೆಂಬ ಅರ್ಜುನಪ್ರಶ್ನ ಸಮಾಧಾನಾರ್ಥವಾಗಿ " ರಸೋಽಹಮಪ್ಸು " ಇತ್ಯಾದಿ ಶ್ಲೋಕಗಳನ್ನು ಹೇಳುತ್ತಾನೆ. ಎಲೈ ಕುಂತೀಕುಮಾರನಾದ ಅರ್ಜುನನೇ! ಉದಕ (ಜಲ) ದಲ್ಲಿ ಸಾರವಾದರಸವು (ಮಧುರ ರಸವಾದ ರುಚಿಯು) ನಾನೇ ಆಗಿರುವುದರಿಂದ ಅಂತಹ ರಸರೂಪನಾದನನ್ನಲ್ಲಿ ಉದಕಗಳು ಪ್ರೋತಗಳಾಗಿರುವುವು. ಚಂದ್ರಸೂರ್ಯರಲ್ಲಿರುವ ಕಾಂತಿ ಎಂಬ ಪದಾರ್ಥವು ನಾನೇ ಆಗಿರುವುದರಿಂದ ಕಾಂತಿರೂಪನಾದ ನನ್ನಲ್ಲಿ ಚಂದ್ರಸೂರ್ಯರು ಪ್ರೋತರಾಗಿರುವರು. ವೇದಗಳಲ್ಲಿ ಓಂಕಾರವು ನಾನು. ಓಂಕಾರ

ರೂಪನಾದ ನನ್ನಲ್ಲಿ ವೇದಗಳು ಪ್ರೋತಗಳಾಗಿರುವುವು. ಆಕಾಶದಲ್ಲಿ ಸಾರಭೂತವಾದ ಶಬ್ದವು ನಾನೇ ಆಗಿರುವೆನಾದುದರಿಂದ ಶಬ್ದರೂಪನಾದ ನನ್ನಲ್ಲಿ ಆಕಾಶವು ಪ್ರೋತವಾಗಿರುವುದು. ಮಾನವರಲ್ಲಿ ಪುರುಷಭಾವವು ನಾನು, ಆದುದರಿಂದ ಪುಂಸ್ತ್ವಸ್ವರೂಪನಾದ ನನ್ನಲ್ಲಿ ಮಾನವರೆಲ್ಲರು ಪ್ರೋತರಾಗಿರುವರು. ಕಾರಣಗಳಲ್ಲಿ ಕಾರ್ಯಗಳ (ಮೃದಾದಿಗಳಲ್ಲಿ ಘಟಾದಿಗಳ) ಇರುವಿಕೆಯು ಲೋಕಪ್ರಸಿದ್ಧವಾಗಿರುದರಿಂದ ಜಲಾದಿಗಳಿಗೆ ಕಾರಣಗಳಾದ ರಸಾದಿಗಳನ್ನೇ ಸ್ವರೂಪವಾಗಿ ಪುಳ್ಳವನಾಗಿರುವ ಪರಮಾತ್ಮನಾದ ನನ್ನಲ್ಲಿ ಜಲಾದಿಗಳು ಪ್ರೋತಗಳಾಗಿರುವುವೆಂಬದಾಗಿ ಸರ್ವತ್ರ ತಿಳಿದುಕೊಳ್ಳಬೇಕು. ॥೮॥

ಪೃಥಿವ್ಯಗ್ನಿಗಳಿಗೆ ಕಾರಣವಾಗಿಯೂ ತನ್ಮಾತ್ರಗಳಾಗಿಯೂ ಇರುವ ಗಂಧ ತೇಜಸ್ಸುಗಳು ನಾನೇ ಆಗಿರುವುದರಿಂದ "ಕಾರಣಗಳಲ್ಲಿಕಾರ್ಯಗಳು ಪ್ರೋತಗಳಾಗಿರುವುವೆಂಬ" ನ್ಯಾಯಾನುಸಾರವಾಗಿ ಪೃಥಿವ್ಯಗ್ನಿಗಳು ಪರಮೇಶ್ವರನಾದ ನನ್ನಲ್ಲಿ ಪ್ರೋತಗಳಾಗಿರುವುವು. ಕಿಂಚ ಈ ಶ್ಲೋಕದಲ್ಲಿ ಹೇಳಲ್ಪಟ್ಟಿರುವ ಪುಣ್ಯಶಬ್ದವನ್ನು ಪೂರ್ವಶ್ಲೋಕದಲ್ಲಿಯೂ ಹೇಳಿರುವಂತೇತಿಳಿಯಬೇಕು. ಭೂತಗಳಿಗೆ ಕಾರಣಗಳಾಗಿಯೂ ಭೂತಗಳಿಗಿಂತಲೂ ಮುಂದೇ ಹುಟ್ಟಿರುವಂತವುಗಳಾಗಿಯೂಇರುವ ಶಬ್ದ ಸ್ಪರ್ಶರೂಪರಸ ಗಂಧಗಳೆಂಬ ತನ್ಮಾತ್ರೆಗಳು ಸಿದ್ಧಾದಿಗಳಿಂದಲೇ ಅನುಭವಿಸತಕ್ಕವುಗಳಾದುದರಿಂದ ಪಾವನಗಳಾಗಿರುವುವೆಂದು ಹೇಳಲ್ಪಟ್ಟಿರುವುವು. ಆದರೆ ಶಬ್ದಸ್ಪರ್ಶರೂಪರಸ ಗಂಧಗಳು ಸ್ವಭಾವದಿಂದಲೇ ಪಾವನಗಳಾಗಿದ್ದರೆ ಪಾವನಗಳಲ್ಲದೇ ಇರುವಂತೇ ಕಾಣಲು ಕಾರಣವೇನು? ಎಂದರೇ ಗಂಧಾದಿಗಳು ಪಾವನಗಳೇ ಆಗಿದ್ದರೂ ತಮ್ಮಗಳಿಂದ ಹುಟ್ಟುವ (ಸ್ವಕಾರ್ಯವಾದ) ಭೂತಗಳೊಡನೆ ಪರಿಣಾಮವನ್ನು ಹೊಂದಿರುವುದಾಗಿ ಜೀವಾತ್ಮರ ಪಾಪಾದಿವಶದಿಂದ ಪಾವನಗಳಲ್ಲದೇ ಇರುವಂತೆಕಾಣಲ್ಪಡುವುವೆಂದರಿಯಬೇಕು.

ಮತ್ತು ವಿಶೇಷಣವಿಲ್ಲದೇ ಹೋದರೆ ವಿಶಿಷ್ಟವಾದ ಪದಾರ್ಥವೂ ಇಲ್ಲದೇ ಹೋಗುವುದಾದುದರಿಂದ ತಪೋವಂತರಿಗೂಕೂಡತಪಸ್ಸಿಲ್ಲದೇ ಹೋದರೆ ಅಂತಹಇರುವಿಕೆಯು ದುರ್ಲಭವಾಗಿರುವುದೆಂಬ ಅಭಿಪ್ರಾಯದಿಂದ ತಪಸ್ಸು ತಪೋವಂತರಿಗೆ ಪೃಥಿವ್ಯಾದಿಗಳಿಗೆ ಗಂಧಾದಿಗಳಂತೆ ಕಾ

ರಣವಾಗದೇ ಇದ್ದರೂ ತಪೋವಂತರು ತಪೋರೂಪದಿಂದ ಪರಮೇಶ್ವ ರನಾದ ನನ್ನಲ್ಲಿ ಪ್ರೋತರಾಗಿರುವ ರೆಂದರಿಯಬೇಕು. ಚಿತ್ತೈಕಾಗ್ರ್ಯವ ನ್ನಾದರೂ ಅನಶನಾದಿ ವ್ರತಗಳನ್ನಾದರೂ ತಪಸ್ಸೆನ್ನುವರು. ॥೯॥

ಸಕಲಭೂತಗಳೂ ತಮ್ಮತಮ್ಮ ಕಾರಣಗಳಲ್ಲಿ ಪ್ರೋತಗಳಾಗಿರುವ ಸ ರ್ವಪ್ರಪಂಚವೂ ನಿನ್ನಲ್ಲಿಹೇಗೆಪ್ರೋತಗಳಾಗಿರುವುವು? ಎಂಬಅರ್ಜುನ ಸಂ ದೇಹಪರಿಹಾರ್ಥವಾಗಿ ಸಮಸ್ತಕ್ಕೂ ಶಾಶ್ವತವಾದಕಾರಣ ವಸ್ತುವುನಾ ನೆಎಂಬದಾಗಿ ಬೋಧಿಸುತ್ತಾನೆ. ಆದರೆ ಸರ್ವಪದಾರ್ಥವೂ ಕಾರಣಸಾಪೆ ಕ್ಷವಾಗಿರುವುದರಿಂದ ಅದರಂತೆ ಪರಮಾತ್ಮನಾದ ನಿನಿಗೂ ಕಾರಣ ಸಾ ಕ್ಷತ್ವವು ವುಂಟೋ? ಎಂದರೇಅದಕ್ಕಾಗಿ ಸನಾತನಂ ಎಂಬಪದವುಪ್ರ ಯೋಗಿಸಲ್ಪಟ್ಟಿತು. ಇದರಿಂದ ತನಗೆ ಬೆರೊಂದು ಕಾರಣವಸ್ತುವಿಲ್ಲ ವೆಂಬುವುದು ಸೂಚಿತವಾಯಿತು. ಕಿಂಚೆ ಪರಮಾತ್ಮನಿಗೆ ಪರಮಕಾರ ಣತ್ವವನ್ನಂಗೀ ಕರಿಸದೆ ಹೋದರೆ ಅನವಸ್ಥಾದೋಷವು ಪ್ರಾಪ್ತವಾ ಗುವದು.

ಕಿಂಚೆ; ನಾನು ಆತ್ಮಾ ನಾತ್ಮ ವಿವೇಕವುಳ್ಳವರ ಅಂತಃ ಕರ ಣದಲ್ಲಿ ಆತ್ಮಾನಾತ್ಮ ವಿವೇಕ ಸಾಮರ್ಥ್ಯರೂಪನಾಗಿರುವೆನು. (ಬುದ್ಧಿ ಎಂದರೆ ಚೈತನ್ಯಕ್ಕೆಬೋಧಕವಾದ ತತ್ತ್ವನಿಶ್ಚಯಸಾಮರ್ಥ್ಯವು.) ಮತ್ತು ತೇಜೊವಂತರ ತೇಜೊ ರೂಪನಾಗಿಯೂ ನಾನು ಇರುವೆನಾ ದರಿಂದ ಬುದ್ಧಿಯುಳ್ಳವರೂ ತೇಜಸ್ಸುಳ್ಳವರೂನನ್ನಲ್ಲಿ ಪ್ರೋತರಾಗಿರುವ ರು.ತೆಜಸ್ಸೆಂದರೇ ಅನ್ಯರನ್ನು ತಿರಸ್ಕರಿಸುವುದರಲ್ಲಿಯೂ ತಾನು ಅನ್ಯ ರಿಂದ ತಿರಸ್ಕರಿಸಲ್ಪಡದೆ ಇರುವುದರಲ್ಲಿಯೂ ತಕ್ಕ ಸಾಮರ್ಥ್ಯವು. ಇಲ್ಲಿ ಯು ಪೂರ್ವದಲ್ಲಿ ಹೇಳಿರುವಂತೆ ವಿಶೇಷಣವಿಲ್ಲದೆ ವಿಶಿಷ್ಟ ಪದಾರ್ಥವಿರ ಲಾರದೆಂಬ ಸಂದರ್ಭವನ್ನನು ಸಂಧಿಸಬೇಕು. ॥೧೦॥

ಬಲವಂತರ ಆಕಾನುರಾಗ ರಹಿತವಾದ ಬಲವು ನಾನೇ ಆಗಿರುವು ದರಿಂದಬಲವಂತರುನನ್ನಲ್ಲಿಪ್ರೋತರಾಗಿರುವರು.ಇಲ್ಲಿನ ಬಲವುಕಾಮಕ್ರೋ ಧಾದಿಗಳಿಂದುಂಟಾದ ಬಲವಲ್ಲವೆಂದು ತೋರಿಸುವುದಕ್ಕಾಗಿ ಕಾಮ ರಾಗ ವಿವರ್ಜಿತಂ,, ಎಂಬ ಪದವು ಪ್ರಯುಕ್ತವಾಯಿತು. ಇಲ್ಲಿಕಾ ಮವೆಂದರೇ ಪ್ರಾಪ್ತವಾಗಿರುವ ವಿಷಯಗಳು ಪ್ರಾಪ್ತವಾಗುವುದಕ್ಕೆ ತಕ್ಕ ಕಾರಣಗಳಿಲ್ಲದೇ ಹೋದರೂ ಲಭ್ಯವಾಗುವವರೆಗೂ ಇರುವ ಆಶೆ

ಯೆಂತಲೂ ರಾಗವೆಂದರೆ ಪ್ರಾಪ್ತಗಳಾದವಿಷಯಗಳು ನಾಶಹೊಂದುವು ದಕ್ಕೆ ತಕ್ಕ ಕಾರಣಗಳಿದ್ದರೂನಶಿಸಿಹೋಗುವುದಿಲ್ಲವೆಂಬ ರಂಜಕನಾತ್ಮ ಕವಾದ ಅಭಿಲಾಷೆಯೆಂತಲೂ ತಿಳಿಯಬೇಕು. ಪ್ರಾಣಿಗಳಲ್ಲಿ ಧರ್ಮ ಶಾಸ್ತ್ರವಿರುದ್ಧವಲ್ಲದ ಕಾಮವುನಾನಾಗಿರುವೆನು.ಆದುದರಿಂದ ಧರ್ಮಶಾಸ್ತ್ರ ವಿರುದ್ಧವಲ್ಲದ ಕಾಮವನ್ನಾಶ್ರಯಿಸಿದ ಭೂತಗಳು ನನ್ನಲ್ಲಿ ಪ್ರೀತಗ ಳಾಗಿರುವುವು. ಧರ್ಮಶಾಸ್ತ್ರವಿರುದ್ಧ ವಲ್ಲದಕಾಮವೆಂದರೆ ದೇಹಧಾರಣಾ ದಿಗಳನ್ನೆ ಪ್ರಯೋಜನವಾಗಿ ವುಳ್ಳ ಅನ್ನಪಾನಾದಿ ವಿಷಯವಾದ ಅಭಿ ಲಾಷೆಯು, (ಅಥವಾ) ಅಗ್ನಿಸಾಕ್ಷಿಯಾಗಿ ವಿವಾಹಿತಳಾದ ಭಾರ್ಯೆಯಲ್ಲಿ ಪುತ್ರೋತ್ಪಾದನ ಮಾತ್ರಕ್ಕೆ ತಕ್ಕ ಅಭಿಲಾಷೆಯು. (ಯದ್ವಾ) ಶಾಸ್ತ್ರೋಕ್ತ ದಾರಾಪುತ್ರಾದಿ ವಿಷಯವಾದ ಅಭಿಲಾಷೆಯು- ಮತ್ತು ಸಾತ್ವಿಕಬಲವುಳ್ಳವರಾಗಿಯೂ ಸಂಸಾರ ಪರಾಙ್ಮುಖರಾಗಿಯೂ ಇರು ವವರ ಕಾಮರಾಗ ವಿಹೀನವಾದ ಬಲವು ನಾನು ಆದುದರಿಂದ ಕಾಮ ರಾಗಗಳಿಲ್ಲದ ಬಲವನ್ನೇ ಸ್ವರೂಪವಾಗಿ ವುಳ್ಳ ನನ್ನಲ್ಲಿ ಅಂತಹ ಬಲ ವಂತರು ಪ್ರೀತರಾಗಿರುವರು. ಶಾಸ್ತ್ರವಿರುದ್ಧವಲ್ಲದ ಕಾಮವುನಾನೆ ಆದುದರಿಂದ ಶಾಸ್ತ್ರವಿರುದ್ಧ ವಲ್ಲದ ಕಾಮವನ್ನೇ ಸ್ವರೂಪವಾಗಿವುಳ್ಳ ನನ್ನಲ್ಲಿ ಅಂತಹ ಧರ್ಮವನ್ನವಲಂಬಿಸಿದವರು ಪ್ರೀತರಾಗಿರುವರೆಂದು ತಾತ್ಪರ್ಯವು. ... ... ॥೧೧॥

(ಮ॥ ಸೂ॥) ಈ ಶ್ಲೋಕಗಳಲ್ಲಿರುವ ವಿಷಯವು ಧ್ಯಾನಾರ್ಥ ವಾಗಿ ಹೇಳಲ್ಪಟ್ಟಿರುವುದರಿಂದ ಇದನ್ನೇ ಪರಮಾರ್ಥವೆಂದು ತಿಳಿದು ಅಧಿಕವಾಗಿ ವಿಶ್ವಾಸಮಾಡಕೂಡದೆಂದರಿಯಬೇಕು. ॥೮॥

(ಶಂ॥ ಅ॥ ) ಉದಕಾದಿಗಳಿಗೆ ರಸಾದಿಗಳು ಕಾರಣಗಳಾದಂತೆ ತಪೋವಂತರಿಗೆ ತಪಸ್ಸು ಕಾರಣವಲ್ಲವು. ಮತ್ತೇನೆಂದರೆ, ತಪಸ್ಸು ತಪೋವಂತರ ಧರ್ಮವಾಗಿರುವುದು. ತಪೋವಂತರಿಗೆ ತಪಸ್ಸು ಕಾರಣ ವಲ್ಲದೆ ಇರುವುದರಿಂದ ಉದಕಾದಿಗಳಿಗೆ ರಸಾದಿಗಳು ಕಾರಣಗಳಾದಂತೆ ತಪೋವಂತರಿಗೆ ತಪಸ್ಸು ಕಾರಣವೆಂಬದಾಗಿ ತಿಳಿದು ಉದಕಾದಿಗಳಿಗೆ ಕಾರಣವಾದ ರಸಾದಿರೂಪನಾದ ನಿನ್ನಲ್ಲಿ ಉದಕಾದಿಗಳು ಪ್ರೀತಗ ಳಾಗಿರುವುವೆಂದು ಹೇಳಿದಂತೆ ತಪೋವಂತರೂ ಪ್ರೀತರಾಗಿರುವರೆಂದು ಹೇಳುವುದು ಉಚಿತವಲ್ಲವೆಂದು ಹೇಳಕೂಡದು. ಏತಕ್ಕೆಂದರೆ! ತಪಸ್ಸು

ತಪೋವಂತರ ಧರ್ಮವಾಗಿದ್ದರೂ ಸ್ವರ್ಗಾದಿ ಫಲಗಳನ್ನು ಕೊಡುವುದರಿಂದ ತಪಸ್ಸುಕೂಡ ಕಾರಣವಾಗಿಯೇ ಇರುವುದೆಂದುಹೇಳಬಹುದು. ಆದುದರಿಂದ ತಪೋರೂಪನಾದ ನನ್ನಲ್ಲಿ ತಪೋವಂತರು ಪ್ರೋತರಾಗಿರುವರೆಂದು ಹೇಳಲು ಆಕ್ಷೇಪ ವಿರಲಾರದು. ಆದರೆ ಕಾರ್ಯವು ಕಾರಣದಲ್ಲಿ ಪ್ರೋತವಾಗಿರುವುದೆನ್ನುವುದು ಲೋಕವೇದ ಪ್ರಸಿದ್ಧವಾಗಿರುವುದಲ್ಲದೆ ಧರ್ಮಿಯಾದ ಪದಾರ್ಥವು ಧರ್ಮದಲ್ಲಿ ಪ್ರೋತವಾಗಿರುವುದೆನ್ನುವುದು ಲೋಕವೇದ ಪ್ರಸಿದ್ಧವಾಗಿರುವುದಿಲ್ಲವಾದುದರಿಂದ ತಪಸ್ಸೆಂಬ ಧರ್ಮದಲ್ಲಿ ತಪೋವಂತನಾದ ಧರ್ಮಿಯು ಪ್ರೋತನಾಗಿರುವಿಕೆಯು ಸಂಭವಿಸಲಾರದೆಂತಲೂ ತಪಸ್ಸಿನಲ್ಲಿ ತಪೋವಂತನು ಪ್ರೋತನಾಗದೇ ಇರುವಿಕೆಯಿಂದ ತಪೋರೂಪನಾದ ನನ್ನಲ್ಲಿ ತಪೋವಂತರು ಪ್ರೋತರಾಗಿರುವರೆಂಬುವುದು ಯುಕ್ತವಲ್ಲವೆಂತಲೂ, ಹೇಳಕೂಡದು. ಏತಕ್ಕೆಂದರೆ, ಅಗ್ನಿಯಲ್ಲಿ ದಾಹಕತ್ವರೂಪವಾದ ಧರ್ಮವು ವ್ಯಾಪಿಸಿರುವಿಕೆಯು ದಾಹಕ ಧರ್ಮವೂ ಅಗ್ನಿಯೂ ಪೃಥಕ್ಕಾಗಿ ಇಲ್ಲದೇ ಇರುವಿಕೆಯು ಲೋಕದಲ್ಲಿ ಪ್ರಸಿದ್ಧವಾಗಿರುವುದಂ ಕಂಡು ಈ ವಿಷಯದಲ್ಲಿಯೂ ಅದರಂತೆಯೇ ತಿಳಿದುಕೊಳ್ಳಬೇಕು. ... ॥೯॥

(ಶಂ॥ ಆ॥) ಈಶ್ಲೋಕದ ಪೂರ್ವಾರ್ಧದಿಂದ ನಾನೇ ಸರ್ವಕಾರಣನಾದುದರಿಂದ ಸಮಸ್ತವೂ ನನ್ನಲ್ಲಿ ಪ್ರೋತವಾಗಿರುವುದೆಂಬುವುದನ್ನು ಸಿದ್ಧಾಂತಪಡಿಸಿದನೆಂತಲೂ, ಉತ್ತರಾರ್ಧದಿಂದ ಬುದ್ಧ್ಯಾದಿ ಗಳಿಗೆ ಆತ್ಮಪ್ರಕಾಶತ್ವವನ್ನು ಬೋಧಿಸುವುದಕ್ಕಾಗಿ ಬುದ್ಧ್ಯಾದಿಗಳೂ ನಾನೆ ಎಂಬದಾಗಿ ಹೇಳುತ್ತಾನೆಂತಲೂ ತಿಳಿಯಬೇಕು. ॥ ೧೦ ॥

ಶಂ॥ ಆ॥ "ಈ ಪುರುಷನು ಕಾಮಮಯನು,, ಎಂಬುವ ಶ್ರುತಿಪ್ರಮಾಣಾನುಸಾರವಾಗಿ ಪುರುಷ ವ್ಯಾಪಾರವೆಲ್ಲವೂ ಕಾಮಮೂಲವಾಗಿರುವುದರಿಂದ ಕಾಮರಾಗಗಳಿಲ್ಲದೇ ಪುರುಷನಿಗೆ ದೇಹಯಾತ್ರೆಯು,ಸ್ವಧರ್ಮವು, ಎಂಬೀ ಯಾವದೂ ಸಂಭವಿಸುವುದಿಲ್ಲವಾದುದರಿಂದ ಕಾಮರಾಗ ವಿಹೀನವಾದ ಬಲವು ನಿರರ್ಥಕವಲ್ಲವೇ? ಎಂಬ ಶಂಕಾಸಮಾಧಾನಾರ್ಥವಾಗಿ ಈ ಶ್ಲೋಕದ ಉತ್ತರಾರ್ಧವು ಪ್ರವೃತ್ತವಾಯಿತು. ... ... ॥೧೧॥

(ಶ್ರೀ॥ ) ರಸದ ಸೂಕ್ಷ್ಮಭಾಗವು ನನ್ನ ಅಂಶವು. ಆ ಅಂಶವು

ವಿಭೂತಿಎಂತಲೂ ಹೇಳಲ್ಪಡುವುದು. ಆ ನನ್ನ ಅಂಶವಾದ ರಸಕ್ಕೆ ನಾನು ವಾಸಸ್ಥಾನ ನಾದುದರಿಂದ ಜಲದಲ್ಲಿರುವರಸವು ನಾನೆಂದು ಹೇಳಲ್ಪಟ್ಟಿತು. (ಉಳಿದವುಗಳನ್ನು ಕೂಡ ಹೀಗೆಯೇ ತಿಳಿಯಬೇಕು.) ರಾಗಃ-ದೊರಿಕಿರುವುದು ಸಾಲದು, ಇನ್ನೂ ಬೇಕೆಂಬುವಅಪೇಕ್ಷೆಯು, "ಬಲಂ ಬಲವತಾಮಸ್ಮಿ" ಎಂಬದಾಗಿ ಈ ವ್ಯಾಖ್ಯಾತೃಗಳಪಾಠವು. ಧರ್ಮಾವಿರುದ್ಧಃ ಕಾಮಃ - ತನ್ನ ಸ್ತ್ರೀ ವಿಷಯದಲ್ಲುಂಟಾಗುವ ಕಾಮದಲ್ಲಿಯೂಕೂಡ ಧರ್ಮಕ್ಕೆ ಲೋಪವಿಲ್ಲದೆ ಇರಬೇಕೆಂದು ತಾತ್ಪರ್ಯವು. ... ... ... ... ||೧೧||

(ಮ|| ಭಾ||) ಸಕಲವಸ್ತುಗಳೂ, ಈಶ್ವರಾಧೀನಗಳಾಗಿಯೂ, ಈಶ್ವರನನ್ನೇ ಆಧಾರವಾಗಿ ಉಳ್ಳವುಗಳಾಗಿಯೂ ಇರುವು ವಾದುದರಿಂದ, ಯಾವ ವಸ್ತುವು ಯಾವನಿಗೆ ಅಧೀನವಾಗಿರುವುದೊ ಆ ವಸ್ತುವು ಅವನಾಗಿಯೇ ಹೇಳಲ್ಪಡುವುದು. ಆದುದರಿಂದತನ್ನ ಅಧೀನವಾದ ರಸ ಮೊದಲಾದವುಗಳು ತಾನೆ ಎಂಬದಾಗಿ ಪರಮಾತ್ಮ ನರ್ಜುನನಿಗೆ ಬೋಧಿಸುತ್ತಾನೆ. ಜಲಾದಿಗಳಲ್ಲಿ ರಸಾದಿಗಳು ಹೇಗೆ ಶ್ರೇಷ್ಠವೊ ಆ ಪ್ರಕಾರವೇ ನಾನು ಸಮಸ್ತಕ್ಕಿಂತಲೂ ಶ್ರೇಷ್ಠನಾಗಿರುವೆನು. ... ... ||೧೧||

(ಗೀ|| ವಿ||) ಜಲದಲ್ಲಿರುವ ರಸಾದಿಗಳನ್ನು ಅದರಲ್ಲಿರುವ ಪರಮಾತ್ಮನಿಗೆ ಪ್ರತಿಮೆಯಾಗಿ ಭಾವಿಸಿ ಉಪಾಸನ ಮಾಡುವಜ್ಞಾನಿಗಳುಂಟು. ಆದುದರಿಂದ ರಸಾದಿಗಳು ನಾನೇ ಎಂಬದಾಗಿ ಪರಮಾತ್ಮನು ಅಭೇದವಾಗಿ ಹೇಳುತ್ತಾನೆ. "ನಾಮಬ್ರಹ್ಮೇತ್ಯುಪಾಸ್ತೆ" ಇತ್ಯಾದಿ ಶ್ರುತಿ ವಾಕ್ಯಗಳಲ್ಲಿ, ಉಪಾಸನಾಸ್ಥಲಗಳಲ್ಲಿ ಪ್ರತಿಮೆಯಾದ ನಾಮಗಳನ್ನೂ ಉಪಾಸಿಸಲ್ಪಡುವ ಬ್ರಹ್ಮವನ್ನೂ ಅಭೇದವಾಗಿ ಹೇಳಿರುವಂತೆ ಇಲ್ಲಿಯೂ ಅಭೇದವಾಗಿ ಹೇಳಿರುವುದಾಗಿ ತಿಳಿಯಬೇಕು. (ಅಥವಾ) ಜಲಾದಿಗಳ ಅಭಿಮಾನಿದೇವತೆಗಳಲ್ಲಿರುವ ಪರಮಾತ್ಮ ಸ್ವರೂಪವನ್ನು ಉಪಾಸನೆಮಾಡುವುದಕ್ಕಾಗಿ ಅಭೇದತ್ವೇನ ಹೇಳಿರುತ್ತದೆ ಎಂಬದಾಗಿಯಾದರೂ ಗ್ರಹಿಸಬಹುದು. ... ... ||೮||೧೧||

ಶ್ಲೋ॥ ಯೇಚೈವಸಾತ್ತ್ವಿಕಾಭಾವಾರಾಜಸಾಸ್ತಾಮಸಾ
ಶ್ಚಯೇ।ಮತ್ತಏವೇತಿತಾನ್ವಿದ್ಧಿನತ್ವಹಂತೇಷುತೇಮಯಿ॥

ಪ॥ ಯೇ- ಚ- ಏವ- ಸಾತ್ತ್ವಿಕಾಃ- ಭಾವಾಃ- ರಾಜಸಾಃ- ತಾಮಸಾಃ- ಚ-ಯೇ। ಮತ್ತಃ- ಏವ- ಇತಿ- ತಾನ್- ವಿದ್ಧಿ- ನತು- ಅಹಂ- ತೇಷು- ತೇ- ಮಯಿ ॥ ೧೨ ॥

ಅ॥ ಸಾತ್ತ್ವಿಕಾಏವ- ಸತ್ವಗುಣದಿಂದಲೇ ಉಂಟಾದ, (ಶಂ॥ ಶ್ರೀ) ಸತ್ವಗುಣದಿಂದುಂಟಾಗಿರುವ ಶಮದಮಾದಿಗಳಾದ. ಭಾವಾಃ- ವಸ್ತುಗಳು, ಯೇ- ಯಾವವೋ, ರಾಜಸಾಶ್ಚಭಾವಾಃ- ರಜೋಗುಣದಿಂದುಂಟಾದ ವಸ್ತುಗಳು, (ಶಂ॥ ಶ್ರೀ॥) ರಜೋಗುಣದಿಂದುಂಟಾದ ಹರ್ಷದರ್ಪಾದಿಗಳು, ತಾಮಸಾಶ್ಚಭಾವಾಃ- ತಮೋ ಗುಣದಿಂದುಂಟಾದ ವಸ್ತುಗಳು, (ಶಂ॥ ಶ್ರೀ॥) ತಮೋಗುಣದಿಂದುಂಟಾದ ಶೋಕ ಮೋಹಾದಿಗಳು, ಯೇ- ಯಾವವೋ, ತಾನ್- ಅವುಗಳನ್ನು, ಮತ್ತ ಏವೇತಿ- ನನ್ನಿಂದಲೇ ವುಂಟಾದವುಗಳೆಂಬದಾಗಿ, ವಿದ್ಧಿ- ತಿಳಿದುಕೊಳ್ಳು, ತೇಷ್ವಹಂನ- ಅವುಗಳಲ್ಲಿ ನಾನು ಇಲ್ಲವು, (ಶಂ॥ ಶ್ರೀ॥)ಅವುಗಳಿಗೆ ನಾನು ಸ್ವಾಧೀನನಲ್ಲವು. (ರಾ॥ ಮ॥ ಗೀ॥ ವಿ॥) ನನ್ನ ಸ್ಥಿತಿಯು ಅವುಗಳಿಗೆ ಅಧೀನವಾದದ್ದಲ್ಲವು,ತೇತು ಮಯಿಸಂತಿ- ಅವುಗಳೇನೊನನ್ನಲ್ಲಿರುವುವು. (ಶಂ॥ಶ್ರೀ॥ ಮ॥ಗೀ॥ವಿ॥) ಅವುಗಳು ನನಿಗೆ ಅಧೀನಗಳಾಗಿರುವುವು. .... ... ॥೧೨॥

(ಶಂ॥ ಭಾ॥) ಚಿದಾನಂದಗಳಿಗೆ ಅಭಿವ್ಯಂಜಕಗಳಾದ ಭಾವಗಳು ಮಾತ್ರವೇ ಈಶ್ವರನಾದ ನಿನ್ನ ಸ್ವರೂಪಗಳಾಗಿರುವುವೊ ? ಎಂಬ ಪ್ರಶ್ನೆಕ್ಕೆ ಉತ್ತರವಾಗಿ ಸಕಲ ಭಾವಗಳು ನನ್ನ ಸ್ವರೂಪಗಳಾಗಿಯೇ ಇರುವುವೆಂಬದಾಗಿ ಶ್ರೀ ಕೃಷ್ಣನು ಅರ್ಜುನನಿಗೆ ಬೋಧಿಸುತ್ತಾನೆ. ಕಿಂಚ- ಈ ಶ್ಲೋಕದಿಂದ ಪ್ರಾಣಿಗಳು ತ್ರಿವಿಧಗಳಾಗಿರುವರೆಂಬುವುದಕ್ಕೆ ತಕ್ಕ ಕಾರಣವನ್ನೂ ಹೇಳುತ್ತಾನೆ. ತನ್ನಿಂದ ವುಟ್ಟಿದ ಪುತ್ರರಅಧೀನದಲ್ಲಿ ತಂದೆಯು ಇರುವಂತೆ ನಿನ್ನಿಂದ ಪುಟ್ಟಿದ ಸಾತ್ವಿಕರಾಜಸತಾಮಸ ಸ್ವಭಾವಗಳಿಗೆ ನೀನುಕೂಡ ಅಧೀನನಾಗಿಯೆ ಇರಬೇಕಲ್ಲವೆ? ಆರೀತಿಯಾಗಿದ್ದರೆ ವಿಕಾರಾಸ್ಪದತ್ವಾದಿ ಧರ್ಮಗಳು ನಿನಗು ಉಂಟಾಗಬೇಕಲ್ಲವೆ? ಎಂಬ ಅರ್ಜುನನ ಶಂಕೆಯನ್ನು ತಾನಾಗಿಯೇ ಚಿಂತಿಸಿ ತನ್ನಿವಾರಣಾರ್ಥವಾಗಿ ನಾನು ಪರಮಾತ್ಮಸ್ವರೂಪನಾಗಿರುವುದರಿಂದಲೂ, ಸಾತ್ವಿಕಾದಿ ಭಾವಗಳು ನನ್ನಲ್ಲಿ ಕಲ್ಪಿತಗಳಾಗಿರುವುದರಿಂದಲೂ, ಕಲ್ಪಿತಗಳಾದ ಅವುಗಳ ಗುಣದೋಷಗಳು ನನ್ನಲ್ಲಿರಲಾರವೆಂದು ತಿಳಿಸಲು "ನತ್ವಹಂತೇಷು" ಎಂಬದಾಗಿ ಹೇಳಿದನು. ಕಲ್ಪಿತಗಳಾದ ಅಂತಹ ಭಾವಗಳಿಗೆ ನಾನು ವಶಪಟ್ಟವನಲ್ಲವೆಂದು ತಾತ್ಪರ್ಯವು.

ಪರಮಾತ್ಮನು ಸ್ವತಂತ್ರನಾದುದರಿಂದ ಅವನಂತೆಯೇ ಸಾತ್ವಿಕಾದಿ ಭಾವಗಳೂ ಸ್ವತಂತ್ರಗಳಾಗಕೂಡದೋ? ಎಂಬ ಪ್ರಶ್ನೆಸಮಾಧಾನಾರ್ಥವಾಗಿ "ತೇಮಯಿ" ಎಂಬದಾಗಿ ಹೇಳಿದನು. ಸಾತ್ವಿಕಾದಿ ಭಾವಗಳು ಪರಮಾತ್ಮಾಧೀನಗಳಾದುದರಿಂದ ಇವುಗಳಿಗೆ ಸ್ವಾತಂತ್ರ್ಯವಿಲ್ಲವೆಂದರ್ಥವು. ಸಾತ್ವಿಕ ರಾಜಸ ತಾಮಸ ಭಾವಗಳು ಈಶ್ವರ ಕಾರ್ಯಗಳಾಗಿಯೂ, ಈಶ್ವರಾಧೀನಗಳಾಗಿಯೂ, ಇರುವುದರಿಂದ ಸ್ವಾತಂತ್ರ್ಯವುಳ್ಳವುಗಳಲ್ಲವೆಂತಲೂ ಕಲ್ಪಿತಗಳಾದ ಪದಾರ್ಥಗಳು ಅಧಿಷ್ಠಾನಸತ್ತಾ ಪ್ರತೀತಿಗಳಿಂದಲೇ ಸತ್ತಾಪ್ರತೀತಿಗಳುಳ್ಳವುಗಳಾಗಿರುವುದರಿಂದ ಭಗವಂತನಾದ ನನ್ನಲ್ಲಿ ಕಲ್ಪಿತಗಳಾದ ಸಾತ್ವಿಕ ರಾಜಸ ತಾಮಸಭಾವಗಳು ಕೂಡ ನನ್ನಂತೆಯೇ ಸತ್ತಾಪ್ರತೀತಿಗಳುಳ್ಳವುಗಳಾಗಿರುವುವೆಂದು ತಿಳಿಯಬೇಕು. ... ... ||೧೨||

(ಮ||ಸೂ||) "ಅದು ನಾನು ಇದು ನಾನು,, ಎಂಬದಾಗಿ ಪ್ರತ್ಯೇಕಪ್ರತ್ಯೇಕವಾಗಿ ಹೇಳುವುದರಿಂದ ಕಾಲವಿಳಂಬವಾಗುವುದೆಂಬದಾಗಿ ತಿಳಿದು ಸತ್ತ್ವರಜಸ್ತಮೋಗುಣಗಳಿಂದ ಉತ್ಪನ್ನಗಳಾಗುವ ಶಮದಮಹರ್ಷದರ್ಪ ಶೋಕ ಮೋಹಾದಿವಿಕಾರಗಳೇ ಸ್ವರೂಪವಾಗಿವುಳ್ಳ ಚಿತ್ತಪರಿಣಾಮಗಳೆಲ್ಲವೂ, (ಅಥವಾ) ಗುಣತ್ರಯ ಜನ್ಯಗಳಾದ ಜಡವರ್ಗಗಳೆಲ್ಲವೂ ನನ್ನಿಂದಲೇ ಹುಟ್ಟಿರುವುವಾದುದರಿಂದ ನನ್ನಲ್ಲಿಯೇ ಪ್ರೋತಗಳಾಗಿರುವುವೆಂತಲೂ, (ಎಂದರೆ ಅವೆಲ್ಲವೂ ನಾನೆ ಎಂತಲೂ,) ಆದರೆ ಅವೆಲ್ಲವೂ ನನ್ನಿಂದಲೇ ಹುಟ್ಟಿರುವುವಾದರೂ ನಾನು ಸಂಸಾರಿಯಂತೆ ಅವುಗಳಿಗೆ ಸ್ವಾಧೀನಪಟ್ಟವನಲ್ಲವೆಂತಲೂ, ಅವೆಲ್ಲವೂ ರಜ್ಜುವಿನಲ್ಲಿ ಸರ್ಪಾಧಿಷ್ಠಾನದಂತೆ ನನ್ನಲ್ಲಿ ಕಲ್ಪಿತಗಳಾಗಿ ನನ್ನ ಸ್ವಾಧೀನದಲ್ಲಿರುವುವೆಂತಲೂ, ಈ ಶ್ಲೋಕದಿಂದ ಅರ್ಜುನನಿಗೆ ಶ್ರೀಕೃಷ್ಣನುಬೋಧಿಸುತ್ತಾನೆ. ... ... ... ||೧೭||

(ರಾ|| ಭಾ||) ಈಪ್ರಕಾರವಾಗಿ ಕೆಲವು ವಿಷಯಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಹೇಳಿ ಇನ್ನು ಮುಂದೆ ಸಾಮಾನ್ಯವಾಗಿ ಹೇಳುತ್ತಾರೆ. ಸಾತ್ವಿಕಾಯೇಚೈವಭಾವಾಃ - ರಾಜಸಾಯೇಚೈವಭಾವಾಃ- ತಾಮಸಾಯೇಚೈವಭಾವಾಃ-ಸಾತ್ವಿಕಾಹಂಕಾರಸಂಭೂತಗಳಾಗಿಯೂ ರಾಜಸಾಹಂಕಾರಾನುಗೃಹೀತಗಳಾಗಿಯೂ ಯಾವ ಪದಾರ್ಥಗಳಿರು

ವುವೊ, ತಾಮಸಾಹಂಕಾರ ಸಂಭೂತಗಳಾಗಿಯೂ ರಾಜಸಾಹಂಕಾರಾನು ಗೃಹೀತಗಳಾಗಿಯೂ ಯಾವ ಪದಾರ್ಥಗಳಿರುವುವೊ,ದೇಹರೂಪಗಳಾಗಿಯೂ ಇಂದ್ರಿಯ ರೂಪಗಳಾಗಿಯೂ ಭೋಗ್ಯರೂಪಗಳಾಗಿಯೂ ಅವುಗಳಿಗೆ ಕಾರಣರೂಪಗಳಾಗಿಯೂ ಯಾವ ಪದಾರ್ಥಗಳಿರುವುವೊ, ತಾನ್ ಮತ್ತ ಏವೇತಿವಿದ್ಧಿ- ಅವುಗಳೆಲ್ಲವನ್ನು ನನ್ನಿಂದಲೇ ಹುಟ್ಟಿದವುಗಳನ್ನಾಗಿ ತಿಳಿದುಕೊಳ್ಳು, ತೇಷುಯಿಮಾತಿವಿದ್ಧಿ- ಅವುಗಳು ಆಧಾರಭೂತನಾದ ನನ್ನಲ್ಲಿರುವಂತವುಗಳಾಗಿ ತಿಳಿದುಕೊಳ್ಳು, ನತ್ವಹಂತೇಷು- ನಾನು ಯಾವಕಾಲದಲ್ಲಿಯೂ ಅವುಗಳ ನ್ನಾಧಾರವಾಡಿಕೊಂಡಿರುವುದಿಲ್ಲವು. ಲೋಕದಲ್ಲಿ ಶರೀರವು ಆತ್ಮಾಧೀನಸ್ಥಿತಿಯುಳ್ಳದ್ದಾಗಿದ್ದರೂ ಆ ಶರೀರದಿಂದ ಆತ್ಮನಸ್ಥಿತಿಯಲ್ಲಿಯೂ ಉಪಕಾರಭಾವವುಂಟಾಗಿರುವುದು. ನನಿಗೆ ಆರೀತಿಯಾಗಿಶರೀರಗಳಾದ ಚೇತನಾಚೇತನಗಳಿಂದ ಯಾವ ಉಪಕಾರವೂ ಇಲ್ಲವು. ಲೀಲಾಮಾತ್ರವೇ ಪ್ರಯೋಜನವಾಗಿರುವುದು. ... ... ||೧೨||

(ಗೀ|| ವಿ||) ಸರ್ವಪದಾರ್ಥಗಳೂ ತ್ರಿಗುಣಕಾರ್ಯಗಳಾಗಿದ್ದರೂ " ಯೇಚಯೇಚ " ಎಂಬದಾಗಿ ಒಂದೊಂದು ಗುಣ ಕಾರ್ಯತ್ವವಂ ಪೇಳಿರುವುದು ಆಯಾ ಗುಣಪ್ರಾಚುರ್ಯಾಭಿಪ್ರಾಯದಿಂದ ಎಂಬದಾಗಿ ತಿಳಿಯಬೇಕು. ... ... (||೧೨||)

ಶ್ಲೋ|| ತ್ರಿಭಿರ್ಗುಣಮಯೈರ್ಭಾವೈರೇಭಿಸ್ಸರ್ವಮಿದಂಜಗತ್ | ಮೋಹಿತಂ ನಾಭಿಜಾನಾತಿ ಮಾಮೇಭ್ಯಃಪರಮವ್ಯಯಂ|| ||೧೩||

ಪ|| ತ್ರಿಭಿಃ- ಗುಣಮಯೈಃ- ಭಾವೈಃ- ಏಭಿಃ- ಸರ್ವಂ- ಇದಂ-ಜಗತ್ | ಮೋಹಿತಂ-ನ-ಅಭಿಜಾನಾತಿ- ಮಾಂ- ಏಭ್ಯಃ- ಪರಂ- ಅವ್ಯಯಂ||

ಅ|| ತ್ರಿಭಿಃ-ಮೂರುವಿಧಗಳಾದ, (ರಾ) ದೇಹರೂಪಗಳಾಗಿಯು ಇಂದ್ರಿಯರೂಪಗಳಾಗಿಯೂ ಭೋಗ್ಯರೂಪಗಳಾಗಿಯೂ ಇರುವುದರಿಂದ ತ್ರಿವಿಧಗಳಾದ, ಗುಣಮಯೈರೇಭಿರ್ಭಾವೈಃ- ಸತ್ವಾದಿಗುಣ ವಿಕಾರಗಳಾದ ಈ ಪದಾರ್ಥಗಳಿಂದ, ಮೋಹಿತಂ- ಮೋಹವನ್ನು ಹೊಂದಿರುವ, (ವ್ಯಾ|| ಗೀ|| ವಿ||) (ಗುಣಸ್ವರೂಪವಿಂದಿರುವ ಜೀವರು ತಮ್ಮಗಳಂತೆ ಪರಮಾತ್ಮನೂ ಗುಣಸ್ವರೂಪವಿಂದಿರುವನೆಂದು ಮೋಹಿತರಾಗಿರುವರು)ಸರ್ವಮಿದಂಜಗತ್- ಈಸಕಲವಾದ ಚೇತನಾಚೇತನಾತ್ಮಕವಾಗಿರುವ ಪ್ರಪಂಚವು, ಏಭ್ಯಃ- ಇವುಗಳಿಗಿಂ

ತಲೂ, ಪರಂ- ಶ್ರೇಷ್ಠತಮನನ್ನಾಗಿಯೂ, ಅವ್ಯಯಂ- ನಾಶರಹಿತನನ್ನಾಗಿಯೂ, ಮಾಂ- ನನ್ನನ್ನು, (ಮ॥ ಗೀ॥ ಷ॥) ಅಪ್ರಾಕೃತ ಶರೀರವುಳ್ಳ ನನ್ನನ್ನು, ನಾಭಿಜಾನಾತಿ-ತಿಳಿಯಲಾರದು. ... ... ... ॥೧೩॥

(ಶಂ॥ಆ॥) ಇಂದ್ರಿಯಾಭ್ಯಾಮಜಯ್ಯಾಭ್ಯಾಂ ದ್ವಾಭ್ಯಾಮೇವ ಹತಂಜಗತ್ । ಅಹೋಉಪಸ್ಥಜಿಹ್ವಾಭ್ಯಾಂ ಬ್ರಹ್ಮಾದಿಮಶಕಾವಧಿ ॥ (ಇದರ ತಾತ್ಪರ್ಯವು- ಜಯಿಸಲಶಕ್ಯಗಳಾದಉಪಸ್ಥ, ಜಿಹ್ವಾ-ಎಂದರೆ ನಾಲಿಗೆ, ಎಂಬೀ ಎರಡು ಇಂದ್ರಿಯಗಳಿಂದಲೆ ಬ್ರಹ್ಮಾದಿ ಮಶಕ ಪರ್ಯಂತವಾದ ಸರ್ವ ಪ್ರಾಣಿವರ್ಗವೂ, ಹತವಾಗಿ ಹೋಗಿರುವುದು. ಇದೇನು ಆಶ್ಚರ್ಯ.) ಎಂಬ ಪ್ರಮಾಣನು ಸಾರವಾಗಿ ಈಲೋಕವೆಲ್ಲವೂ ರಾಗದ್ವೇಷಾದಿಗಳಿಂದ ಅವಿವೇಕವಂ ಹೊಂದಿರುವುದು- ಅದುದರಿಂದಲೇ ಸಾತ್ವಿಕ ರಾಜಸ ತಾಮಸ ಭಾವಗಳಿಂದ ಎಂದರೇ ಕಾರಣ ಸೂಕ್ಷ್ಮ ಸ್ಥೂಲೋಪಾಧಿಗಳಿಂದ ಉಪಾಧಿತ್ರಯಕ್ಕಿಂತಲೂ ನಾನು ಭಿನ್ನನೆಂದು ತಿಳಿಯಲಾರದೆ ಉಪಾಧಿತ್ರಯವೆ ನಾನೆಂದು ಮೋಹಿತವಾಗಿರುವುದು. ... ... ॥೧೩॥

(ರಾ॥ ಭಾ॥) ಈಪ್ರಕಾರ ಚೇತನಾ ಚೇತನಾತ್ಮಕವಾಗಿ ನನ್ನ ಅಧೀನದಲ್ಲಿರುವ ಈಪ್ರಪಂಚವೆಲ್ಲವೂ ಆಯಾಕಾಲಗಳಲ್ಲಿ ನಮ್ಮಗಳಿಂದ ವುಂಟಾಗಿ ನಮ್ಮಲ್ಲಿ ಲಯವಂಹೊಂದಿ ನಮ್ಮಲ್ಲಿತಾನೆ ಸ್ಥಿತಿಯನ್ನುಹೊಂದಿರುತ ನಮಗೆ ಶರೀರವಾಗಿ ನಮ್ಮ ಸ್ವರೂಪವಾಗಿರುವುದರಿಂದ ಕಾರ್ಯಾವಸ್ಥೆಯಲ್ಲಿಯೂ ಕಾರಣಾವಸ್ಥೆಯಲ್ಲಿಯೂ ಸಮಸ್ತವನ್ನು ನಾವೇ ಶರೀರವಾಗಿ ಧರಿಸಿ ಸರ್ವಪ್ರಕಾರದಿಂದಿರುವೆವು. ಸ್ವಲ್ಪವಾದ ಗುಣಾಂಶದಿಂದಲಾದರೂ ನನಗಿಂತಲೂ ಶ್ರೇಷ್ಠವಾದದ್ದು ಲೋಕದಲ್ಲಿ ಯಾವದೂ ಇರಲಾರದು. ಏಭ್ಯಃ- ಈ ಸತ್ವ ರಜಸ್ತಮೊವಿಕಾರಗಳಾದ ಪದಾರ್ಥಗಳಿಗಿಂತಲೂ, ಪರಂ- ಕಾರಣವಾಗಿಯೂ ಶೇಷಿಯಾಗಿಯೂ ಇರುವ ನನ್ನ ಜ್ಞಾನಾದ್ಯ ಸಾಧಾರಣ ಕಲ್ಯಾಣಗುಣಗಳಿಂದಲೂ ಆಯಾ ಭೋಗ್ಯತಾ ಪ್ರಕಾರಗಳಿಂದಲೂ ಶ್ರೇಷ್ಠತಮನಾಗಿಯೂ, ಅವ್ಯಯಂ - ಯಾವಾಗಲೂ ಏಕರೂಪರಾಗಿಯೂ, ಇರುತಲಿರುವ; ಮಾಂ - ನನ್ನನ್ನು, ಗುಣಮಯೈಃ- ಸತ್ವರಜಸ್ತಮೋಗುಣ ಪ್ರಚುರಗಳಾಗಿರುವ, ತ್ರಿಭಿರೇಭಿರ್ಭಾವೈಃ- ಪೂರ್ವ ಪೂರ್ವಕರ್ಮಾನುಗುಣವಾಗಿ ದೇಹರೂಪಗಳಾಗಿಯು

ಇಂದ್ರಿಯ ರೂಪಗಳಾಗಿಯು ಭೋಗ್ಯ ರೂಪಗಳಾಗಿಯೂ ಇರುವ ಈ ಪದಾರ್ಥಗಳಿಂದ, ಮೋಹಿತಂಸತ್- ಮೋಹಿಸಲ್ಪಟ್ಟದ್ದಾದ,ಸರ್ವಮಿದಂಜಗತ್- ದೇವತಿರ್ಯಙ್ಮನುಷ್ಯಸ್ಥಾವರಾದಿರೂಪವಾಗಿರುವ ಈಸಮಸ್ತಪ್ರಪಂಚವು, ನಾಭಿಜಾನಾತಿ- ತಿಳಿಯುವುದಿಲ್ಲವು. ॥೧೩॥

ಶ್ಲೋ ॥ ದೈವೀಹ್ಯೇಷಾ ಗುಣಮಯೀ ಮಮಮಾಯಾ
ದುರತ್ಯಯಾ ॥೧೩೫॥

ಪ॥ ದೈವೀ- ಹಿ- ಏಷಾ- ಗುಣಮಯೀ- ಮಮ- ಮಾಯಾ- ದುರತ್ಯಯಾ॥.

ಅ॥ ಗುಣಮಯೀ- ಗುಣಸ್ವರೂಪೆಯಾದ, ಏಷಾಮಮಮಾಯಾ- ಈನನ್ನಮಾಯೆಯು, ದೈವೀಹಿ- ದೈವಸಂಬಂಧವುಳ್ಳದ್ದಾಗಿರುವುದಲ್ಲವೆ. (ಆದುದರಿಂದ) ದುರತ್ಯಯಾ- ಯಾರಿಂದಲೂ ದಾಟಲಶಕ್ಯವಾಗಿರುವುದು. ... ॥೧೩॥

(ರಾ ॥ ಭಾ॥ ) ಅನವಧಿಕಾತಿಶಯಾನನ್ದರಾಗಿಯೂ ನಿತ್ಯರಾಗಿಯೂ ಸದಾಏಕರೂಪರಾಗಿಯೂ ಭೋಗ್ಯತಾಪ್ರಕಾರಗಳಿಂದ ಶ್ರೇಷ್ಠತಮರಾಗಿಯೂ ನೀವು ಇರುತಾ (ನಿಮ್ಮನ್ನಪೇಕ್ಷಿಸಿ) ಅತ್ಯಂತ ನಿಹೀನಗಳಾಗಿಯೂ ಗುಣಮಯಗಳಾಗಿಯೂ ಅಸ್ಥಿರಗಳಾಗಿಯೂ ಇರುವ ವಸ್ತುಗಳಲ್ಲಿ ಭೋಗ್ಯ ಬುದ್ಧಿಯು ಭೋಕ್ತರಿಗೆ ಹೇಗೆ ಉಂಟಾಗುವುದೆಂದರೆ ಅದಕ್ಕುತ್ತರವನ್ನನುಗ್ರಹಿಸುತ್ತಾನೆ. ಮಮ- ನಮ್ಮದಾದ,ಏಷಾಗುಣಮಯೀ-ಸತ್ವ ರಜಸ್ತಮೋಗುಣಾಶ್ರಯಳಾಗಿರುವ ವಿಚಿತ್ರಕಾರ್ಯಕರಳಾಗಿರುವುದರಿಂದಮಾಯೆಎಂಬದಾಗಿ ಹೆಸರುಳ್ಳಈಪ್ರಕೃತಿಯು, (ಯಸ್ಮಾತ್- ಯಾವ ಕಾರಣದಿಂದ) ದೈವೀ- ಕ್ರೀಡಾ ಪರವಶರಾದ ನಮ್ಮಗಳಿಂದಲೇ ಕ್ರೀಡಾರ್ಥವಾಗಿ ಸೃಷ್ಟಿಸಲ್ಪಟ್ಟತೊ, ತಸ್ಮಾತ್- ಆದುದರಿಂದಲೇ, ದುರತ್ಯಯಾ- ಎಲ್ಲರಿಂದಲೂ ಅತಿಕ್ರಮಿಸಲ್ಪಡತಕ್ಕದ್ದಲ್ಲವು. ಈ ಪ್ರಕೃತಿಯೆಂಬ ಮಾಯೆಯಿಂದ ಮೋಹಿತರಾಗಿರುವುದರಿಂದ ಪರಮಭೋಗ್ಯರಾಗಿ ನಾವಿದ್ದರೂ ಹೇಯವಾದ ಪ್ರಾಕೃತವಸ್ತುವಿನಲ್ಲಿ ಭೋಕ್ತರು ಭೋಗ್ಯಬುದ್ಧಿಯಂ ಮಾಡುತ್ತಾರೆಂದುಭಾವವು. ಅಸುರಾಸ್ತ್ರವು ರಾಕ್ಷಸಾಸ್ತ್ರವು ಮೊದಲಾದವುಗಳಂತೆವಿಚಿತ್ರ ವ್ಯಾಪಾರಗಳನ್ನು ಮಾಡುವುದರಿಂದ ಈಪ್ರಕೃತಿಸ್ನು ಮಾಯಾ ಎಂಬದಾಗಿ ಹೇಳುವರು. ಅದು ಹೇಗೆಂದರೆ, "ತತೋಭಗವತಾತಸ್ಯರಕ್ಷಾರ್ಥಂಚಕ್ರಮುತ್ತಮಂ । ಆಜಗಾಮಸಮಾಜ್ಞಪ್ತಂಜ್ವಾಲಾಮಾಲಿ

ಸುದರ್ಶನಮ್ ॥ ತೇನಮಾಯಾಸಹಸ್ರಂತ ಚ್ಛಂಬರಸ್ಯಾಶುಗಾಮಿನಾ।
ಬಾಲಸ್ಯರಕ್ಷತಾದೇಹಮೈ ಕೈಕಶ್ಯೇನಸೂದಿತಮ್,,॥ ಇತ್ಯಾದಿ ಪ್ರಕಾ
ರದಿಂದ ಮಾಯಾ ಎಂಬುವುದು ಸುಳ್ಳಾದದ್ದನ್ನು ಹೇಳತಕ್ಕದ್ದಲ್ಲವು.
ಇಂದ್ರಜಾಲ ವಿದ್ಯಾದಿ ಸ್ಥಳಗಳಲ್ಲಿಯೂಕೂಡ ಸುಳ್ಳಾದ ವಿಷಯಗ
ಳನ್ನು ವಳಪಡಿಸಿಕೊಂಡಿರುವ ಪರಮಾರ್ಥ ಜ್ಞಾನೋತ್ಪಾದಕವಾದ
ಕೆಲವು ಮಂತ್ರೌಷಧಾದಿಗಳುಂಟಾಗಿರುವುದರಿಂದ ಅಲ್ಲಿಯೂ ಮಾಯಾ
ವೀಎಂಬದಾಗಿ ಹೇಳುವುದುಂಟು. ಎಲ್ಲಿಯೂ ಒಂದುಮಾತಿಗೆಒಂದೇ
ವಿಧವಾಗಿ ತಾತ್ಪರ್ಯವಂ ಹೇಳುವುದು ಯುಕ್ತವಾಗಿರುವುದರಿಂದ ಇಂ
ದ್ರಜಾಲವಿದ್ಯೆಯಲ್ಲಿಯೂ ಮಂತ್ರೌಷಧಾದಿಗಳನ್ನೇ ಮಾಯೆ ಯೆಂಬ
ದಾಗಿಹೇಳುತ್ತಾರೆ. ಅಲ್ಲಿ ಮಿಥ್ಯಾರೂಪವಾದ ವಿಷಯವನ್ನು ಮಾಯಾ
ಎಂದು ಹೇಳುವುದು ಯಾವಕಾರಣದಿಂದ? ಎಂದರೆ ಮಂಚದಲ್ಲಿರುವ
ವರು ಮಾತನಾಡುವುದಂಕಂಡು ಮಂಚವು ಮಾತನಾಡುತ್ತದೆ ಎಂಬ
ದಾಗಿ ಹೇಳುವಂತೆ ಮಾಯೆಎಂಬದಾಗಿ ಹೇಳಲ್ಪಡುವ ಮನ್ತ್ರೌಷ
ಧಾದಿ ಕಾರ್ಯವಂ ಕಂಡು ಮಾಯಾ ಎಂಬದಾಗಿ ಹೇಳುತ್ತಾರೆ.॥೧೩॥

(ತಾ॥ ಚಂ॥) ಮಾಯಾ- ಬೇರೇವಿಧವಾಗಿರುವ ಒಂದು ವಸ್ತು
ವನ್ನು ಬೇರೊಂದಾಗಿ ಮಾಡುವಶಕ್ತಿಯಂ ಮಾಯೆಯೆನ್ನುವರು. ಇಂ
ದ್ರಜಾಲಂತು- ಒಂದುವಸ್ತುವನ್ನು ಬೇರೊಂದುವಸ್ತುವನ್ನಾಗಿ ತೋರಿ
ಸುವ ಶಕ್ತಿಯಂ ಇಂದ್ರಜಾಲವೆನ್ನುವರು. ... ॥೧೩॥

ಶ್ಲೋ॥ಮಾಮೇವಯೇಪ್ರಪದ್ಯಂತೇ ಮಾಯಾಮೇತಾಂತ
ರಂತಿತೇ ॥ ... ... ॥೧೪॥

ಪ॥ ಮಾಂ- ಏವ- ಯೇ- ಪ್ರಪದ್ಯಂತೇ- ಮಾಯಾಂ- ಏತಾಂ- ತರಂತಿ- ತೇ॥೧೪॥

(ಅ॥ ರಾ॥ ಭಾ॥) ಮಾಮೇವ- ಸತ್ಯಸಂಕಲ್ಪರಾಗಿಯೂ ಪರಮ ಕಾರುಣಿಕರಾ
ಗಿಯೂ ಜಾತಿ ವೃತ್ತಾದಿಗಳನ್ನಾಲೋಚಿಸದೆ ಸಮಸ್ತ ಪ್ರಾಣಿವರ್ಗಕ್ಕೂ ರಕ್ಷಕನಾ
ಗಿಯೂ ಇರುವ ನಮ್ಮನ್ನೆ, ಶರಣಂ ಪ್ರಪದ್ಯಂತೇ- ಯಾರಾದರೆ ಉಪಾಯವೆಂದು
ಅಧ್ಯವಸಾಯ ಮಾಡುತ್ತಾರೊ, ತೇ- ಅವರು, ಏತಾಂಮಾಯಾಂತರನ್ತಿ- ನಮ್ಮದಾದ
ಗುಣಮಯವಾಗಿರುವ ಪ್ರಕೃತಿಯೆಂಬ ಮಾಯೆಯನ್ನು ಅತಿಕ್ರಮಿಸುತ್ತಾರೆ. ಮಾಯೆ
ಯಂಬಿಟ್ಟುಬಿಟ್ಟು ನನ್ನನ್ನೇ ಭಕ್ತಿಯಿಂದ ಉಪಾಸನ ಮಾಡುತ್ತಾರೆಂದು ತಾತ್ಪ
ರ್ಯವು. ... ... ... ॥೧೪॥

ತಾ॥ ಚಂ॥ ಯಾವ ಪರಮ ಪುರುಷನ ಆಜ್ಞೆಯಿಂದ ಬಿಡಿಸಲಶಕ್ಯವಾದ ಬಂಧವು ಪ್ರಾಪ್ತವಾಗಿರುವುದೊ ಆ ಬಂಧ ನಿವೃತ್ತಿಯೂ ಆ ಪರಮಾತ್ಮನಿಂದಲೇ ಆಗಬೇಕೆಂಬ ಸಂದರ್ಭವನ್ನು ತೋರಿಸುವುದಕ್ಕಾಗಿ "ಮಾಮೇವ" ನನ್ನನ್ನೇ) ಎಂಬ ಅವಧಾರಣಾರ್ಥವು ಹೇಳಲ್ಪಟ್ಟಿತು ಸತ್ಯಸಂಕಲ್ಪ ಶಬ್ದದಿಂದ ಹೇಳಲ್ಪಡುವುದೇನಂದರೆ?ಪರಮಾತ್ಮನಿಗೆ ಬಂಧ ವಿಷಯವಾದ ಸಂಕಲ್ಪ ಮಾತ್ರವೇ ಸತ್ಯವಲ್ಲವು? ಮತ್ತೇನಂದರೆ!ಪ್ರಾಣಿಗಳ ಮೋಕ್ಷವಿಷಯವಾದ ಸಂಕಲ್ಪವೂ ಸತ್ಯವಾಗಿರುವುದೆಂದರಿಯಬೇಕು. ಆದುದರಿಂದ ಆ ಪರಮಾತ್ಮನ ಚರಣಾರವಿಂದ ಶರಣಾಗತಿಯನ್ನೇ ಮಾಡಬೇಕೆಂದರ್ಥವು. ರಕ್ಷಣೋಪಯುಕ್ತವಾದ ಶಕ್ತಿಯುಳ್ಳವನಾಗಿದ್ದರೂ ದಯಾಶೂನ್ಯನಾಗಿದ್ದರೆ ಅಂತವವನಲ್ಲಿ ಶರಣಾಗತಿ ಮಾಡುವುದರಿಂದ ಪ್ರಯೋಜನವಿಲ್ಲವೆಂಬ ಶಂಕಾನಿವಾರಣಕ್ಕಾಗಿ ಪರಮ ಕಾರುಣಿಕನೆಂಬ ವಿಶೇಷಣವು ಉಪಾತ್ತವಾಯಿತು. ಕಾರುಣಿಕನಾಗಿದ್ದರೂ ಲೋಕದಲ್ಲಿರುವ ಸಾಮಾನ್ಯಜನರಂತೆ ರಕ್ಷ್ಯನಾದ ಅವನಂ ಪರಿಗ್ರಹಿಸಬಹುದು, ಅವನಲ್ಲಿ ಜಾತಿವೃತ್ತಾದಿಗಳು ಸಮೀಚೀನವಾಗಿರುವುದು,ಅವನು ರಕ್ಷಣಕ್ಕೆ ತಕ್ಕವನಲ್ಲವು,ಅವನಲ್ಲಿ ಜಾತಿ ವೃತ್ತಾದಿಗಳು ಸರಿಯಾಗಿಲ್ಲವು, ಎಂಬ ಪರಿಗ್ರಾಹ್ಯ ಅಪರಿಗ್ರಾಹ್ಯ ವಿಭಾಗದಿಂದ ಪರಮ ಪುರುಷನೂ ಕೂಡಿದವನಾಗಿದ್ದರೆ ಸಹಿಸಲಶಕ್ಯವಾದ ಅಪರಾಧಗಳಂ ಮಾಡಿರುವ ಈಜನರಿಗೆ ಆಪರಮಾತ್ಮನ ಚರಣಾರವಿಂದ ಶರಣಾಗತಿಯಿಂದ ಯಾವ ಫಲವೂ ಉಂಟಾಗಲಾರದು, ಆದುದರಿಂದ ಆಪ್ರಪತ್ತಿಯು ಅಕಾರ್ಯಕರವಾಗುವುದೆಂಬ ಶಂಕಾಸಮಾಧಾನಾರ್ಥವಾಗ "ಅನಾಲೋಚಿತ ವಿಶೇಷಾಶೇಷಲೋಕಶರಣ್ಯ, ಎಂಬ ವಿಶೇಷಣವು ಹೇಳಲ್ಪಟ್ಟಿತು ಸರ್ವಶರಣ್ಯನಾದ ಪರಮಾತ್ಮನು ಜಾತಿ ವೃತ್ತಾದಿಗಳಂ ನೋಡದೇ ರಕ್ಷಿಸಿರುವುದು, ವಾಯಸ-ವಾನರ-ವಿಭೀಷಣಾದಿ ಪ್ರಪದ್ಯಾಪಿ ರಕ್ಷಣಾವಸರದಲ್ಲಿ ಕಾಣಬರುವುದು. ಅಂತಃ ಪ್ರದ್ರೋಹಿಯಾದ ರಾವಣನು ಬಂದರೂ ರಕ್ಷಿಸುವೆನೆಂಬ "ಯದಿವಾ ರಾವಣಸ್ಸ್ವಯಂ" ಇತ್ಯಾದಿ ಪ್ರಮಾಣಗಳಲ್ಲಿ ಹೇಳಿದರ್ಥವು ವ್ಯಕ್ತವಾಗಿರುವುದು. ಈ ಶ್ಲೋಕದಲ್ಲಿ ಹೇಳಲಾದ ಶರಣಾಗತಿಯು ಸ್ವತಂತ್ರ ಶರಣಾಗತಿಯಲ್ಲವು, ಉಪಾಸನಾಂಗ ಭೂತವಾದ ಶರ

ಣಾಗತಿ ಎಂಬದಾಗಿ ತಿಳಿಯಬೇಕು. ಈ ಪ್ರಕರಣವು ಉಪಾಸನ ಪ್ರಕರಣವಾಗಿರುವುದರಿಂದಲೂ ಮುಂದೆ "ಆರ್ತೋಜಿಜ್ಞಾಸುರರ್ಥಾರ್ಥೀ" ಎಂಬದಾಗಿ ಇದೇ ಪ್ರಕರಣದಲ್ಲಿ ಚತುರ್ವಿಧರಾದ ಉಪಾಸನಾಧಿಕಾರಿ, ಗಳನ್ನೇ ತೋರಿಸುವುದರಿಂದಲೂ ಇದು ಅಂಗಪ್ರಪತ್ತಿ ಎಂಬದಾಗಿ ತಿಳಿಯಬೇಕು. ... ... ... ||೧೪||

(ಶಂ|| ಭಾ||) ಇದುವರಿಗೂ ಉಪಪಾದಿಸಲ್ಪಟ್ಟಿರುವುದಾಗಿಯೂ ಅನಾದಿ ಸಿದ್ಧವಾಗಿಯು ಇರುವ ಮಾಯೆಗೆ ವಶಪಡದೇ ಇರುವುದು ಲೋಕರಿಗೆ ಸಂಭವಿಸುವುದಿಲ್ಲವಾದ್ದರಿಂದ ಯಾವಕಾಲದಲ್ಲಿಯೂ ತತ್ವಜ್ಞಾನೋದಯವಾಗುವುದೆಂಬ ಚಿಂತೆಗೂ ಅವಕಾಶವಿರಲಾರದು. ಆದುದರಿಂದ ಸತ್ವರಜಸ್ತಮೋಗುಣಗಳನ್ನೇ ಸ್ವರೂಪವಾಗಿವುಳ್ಳದ್ದಾಗಿಯೂ ವಿಷ್ಣುದೇವನಾದ ನಿನ್ನ ಸಂಬಂಧವಾಗಿಯೂ ಇರುವ ಮಾಯೆಯನ್ನು ಹೇಗೆ ದಾಂಟುವುದು? ಎಂಬಅರ್ಜುನನ ಶಂಕೆಯನ್ನು ತಾನೆ ಚಿಂತಿಸಿ ಭಗವಂತನಾದ ನನ್ನನ್ನೇಪ್ರಧಾನವಾಗಿಶರಣವಂಹೊಂದುವಂತವರಿಗೆ ತತ್ತ್ವಜ್ಞಾನ ವುಂಟಾಗುವುದೆಂತಲೂ, ಅಂತಹ ತತ್ತ್ವಜ್ಞಾನ ಮೂಲಕವಾಗಿ ಮಾಯಾತಿಕ್ರಮವು ಸಂಭವಿಸಬಹುದೆಂತಲೂಈಶ್ಲೋಕದಿಂದ ಸಮಾಧಾನವನ್ನರ್ಜುನನಿಗೆ ಬೋಧಿಸುತ್ತಾನೆ. ಮಾಯಾತರಣೋಪಾಯವು "ಮಾಮೇವ ಯೇಪ್ರಪದ್ಯಂತೆ" ಎಂಬೀ ಉತ್ತರಾರ್ಧದಲ್ಲಿ ವ್ಯಕ್ತವಾಗಿ ಹೇಳಿರುತ್ತಾರೆ. ಮಾಯೆಯೆಂಬುವುದು ವಿಷ್ಣುದೇವರಾದ ನಮ್ಮ ಸಂಬಂಧವಾದುದರಿಂದ ಮಾಯೆಯೆಂಬುವುದಕ್ಕೆ ಸಾಂಖ್ಯಮತದಲ್ಲಿ ಹೇಳಿರುವ ಪ್ರಕೃತಿ ತತ್ತ್ವದಂತೆ ಸ್ವಾತಂತ್ರ್ಯವಿಲ್ಲವು. ಮಾಯೆಗೆ ಸ್ವಾತಂತ್ರ್ಯವುಂಟೆಂದಂಗೀಕರಿಸುವ ಪಕ್ಷದಲ್ಲಿಯಾವದಿಲ್ಲವೊ ಅದು ಮಾಯಾ, ಎಂಬವ್ಯುತ್ಪತ್ತಿ ಲಬ್ಧವಾದ ಅಭಾವ ರೂಪವಾದ ಧರ್ಮವು, ಅಥವಾ ಪರಾಧೀನದಿಂದಿರುವಿಕೆಯು, ಸಂಭವಿಸಲಾರದು; ಮತ್ತು ಮಾಯಾ ಎಂಬುವುದು ಅನುಭವಸಿದ್ಧವಾಗಿ ಕಾಣಲ್ಪಡುತ್ತದಾದುದರಿಂದಲೂ,ಮಾಯೆಯೆಂದರೆ ಇಲ್ಲದೇಇರುವುದಾದರಿಂದ ಇಲ್ಲದ್ದು ಇಲ್ಲವೇ ಇಲ್ಲವು ಎಂಬಂತೆ ಮಾಯೆ ಯೆಂಬುವುದು ಇಲ್ಲವೆಂತಲೂ ಹೇಳಕೂಡದು· ಕಿಂಚ, ಇಲ್ಲಿನ ದೈವೀ, ಮಮಮಾಯಾ, ಎಂಬ ಶಬ್ದಗಳಿಗೆ ಪೌನರುಕ್ತ್ಯವಂ ಶಂಕಿಸದೆ ಮಾಯೆಗೆ ಸ್ವಸಂಬಂಧವನ್ನು

ಸ್ಪಷ್ಟವಾಗಿ ತಿಳಿಸುವುದಕ್ಕಾಗಿ ಹೇಳಿರುವುದರಿಂದ ಈ ಶಬ್ದಗಳಿಗೆ ಪೌನರುಕ್ತ್ಯವನ್ನು ಶಂಕಿಸಬಾರದು. ಇದುವರೆಗೂ ಹೇಳಲ್ಪಟ್ಟ ಪ್ರಕಾರದಿಂದ ಪೂರ್ವೋಕ್ತವಾದ ಮಾಯೆಯು ಅತಿ ಕಷ್ಟದಿಂದ ಅತಿಕ್ರಮಿಸಲ್ಪಡಬೇಕಾಗಿರುವುದರಿಂದ ನನ್ನನ್ನೇ ಸೇವಿಸುವುದೆಂಬ ಅತಿಕಷ್ಟವಾದ ಕಾರ್ಯವನ್ನವಲಂಬಿಸಿ ಕರ್ಮಾನುಷ್ಠಾನಾದಿಗಳಲ್ಲಿ ಜಾಗರೂಕತಾಶೂನ್ಯನಾಗಿ ಸಕಲ ಧರ್ಮಗಳನ್ನು ಬಿಟ್ಟು ಮಾಯೆಯುಳ್ಳ ನನ್ನನ್ನೇ ತನ್ನಗಳ ಆತ್ಮವೆಂಬವುದಾಗಿ ತಿಳಿದು ಸೇವಿಸುವಂತವರು ಸಕಲ ಭೂತಗಳಿಗೂ ಮೊಹೋತ್ಪಾದಕವಾದ ಮಾಯೆಯನ್ನತಿಕ್ರಮಿಸುತ್ತಾರೆ. ನನ್ನನ್ನೇ ಸೇವಿಸುವಂತವರೆಂಬುವುದರಿಂದ ಮಾಯಾತರಣಕ್ಕೆ ಭಗವತ್ಸೇವಾ ಮಾತ್ರವೇ ಸಾಧನವಾಗಿರುವುದಲ್ಲದೆ ಮಾಯಾ ಸ್ವರೂಪ ಪರಿಜ್ಞಾನವು ಅವಶ್ಯಕವಲ್ಲ ವೆಂದರಿಯಬೇಕು. ಈ ಪ್ರಕಾರವಾಗಿ ಮಾಯಾತರಣವಾದರೆ ಸಂಸಾರ ಬಂಧ ವಿಮೋಚನವೂ ಅದರಿಂದ ಪರಮ ಪುರುಷಾರ್ಥ ಲಕ್ಷಣವಾದ ಮೋಕ್ಷವೂ ಪ್ರಾಪ್ತವಾಗುವುದು. ॥೧೪॥

(ಗೀ॥ ವಿ॥) ಮಾಯೆ ಎಂಬುವಳು ವಿಷ್ಣುದೇವರ ಒಂದು ಸ್ತ್ರೀರೂಪವಾದ ದುರ್ಗಾದೇವಿಯು. ಅವಳಿಗೆ ಲೋಕರನ್ನು ಮೋಹಗೊಳಿಸುವ ಶಕ್ತಿಯುಂಟಾಗಿರುವುದು. ಅವಳಿಂದುಂಟಾಗುವ ದುಃಖವನ್ನು ಅತಿಕ್ರಮಿಸುವುದು ಕಷ್ಟವಾಗಿರುವುದೆಂದರಿಯಬೇಕು. ॥೧೪॥

ಶ್ಲೋ॥ ನಮಾಂದುಷ್ಕೃತಿನೋಮೂಢಾಃಪ್ರಪದ್ಯಂತೆ
ನರಾಧಮಾಃ । ಮಾಯಯಾಪಹೃತಜ್ಞಾನಾಆಸುರಂಭಾ
ವಮಾಶ್ರಿತಾಃ॥ ... ॥೧೫॥

ಪ॥ ನ-ಮಾಂ-ದುಷ್ಕೃತಿನಃ- ಮೂಢಾಃ- ಪ್ರಪದ್ಯಂತೆ- ನರಾಧಮಾಃ । ಮಾಯಯಾ- ಅಪಹೃತಜ್ಞಾನಾಃ- ಆಸುರಂ-ಭಾವಂ-ಆಶ್ರಿತಾಃ ।

ಅ॥ (ಶಂ॥ ಶ್ರೀ॥ ಗೀ॥ ವಿ॥) ದುಷ್ಕೃತಿನಃ-ಪಾಪಿಗಳಾಗಿಯೂ, ಮೂಢಾಃ- ಮೂಢರಾಗಿಯೂ, ಮಾಯಯಾ-ಭಗವನ್ಮಾಯೆಯಿಂದ, ಅಪಹೃತಜ್ಞಾನಾಃ- ಅಪಹರಿಸಲ್ಪಟ್ಟ ಆತ್ಮಜ್ಞಾನವುಳ್ಳವರಾದೂ, ಆಸುರಂಭಾವಂ - ಅಸುರಸ್ವಭಾವವನ್ನು, (ಶಂ) ಪರಹಿಂಸೆಯು ಅಸತ್ಯವು ಮೊದಲಾದ ಅಸುರಸ್ವಭಾವವನ್ನು, (ಶ್ರೀ) "ದಂಭೋದರ್ಪೋಭಿಮಾನಶ್ಚ" ಎಂಬುದೆ ಈಗೀತೆಯ ೧೬ನೇ ಅಧ್ಯಾಯದ ನಾಲ್ಕನೇ ಶ್ಲೋಕದಲ್ಲಿ ಹೇ

ಳಿರುವ ಆಸುರ ಸ್ವಭಾವವನ್ನು, (ಗೀ॥ ವಿ॥) ದೇಹೇಂದ್ರಿಯ ಪ್ರಾಣಗಳನ್ನು ರಕ್ಷಿಸಿ ಕೊಳ್ಳುವುದರಲ್ಲಿ ದೃಷ್ಟಿಯುಳ್ಳವರು ಅಸುರರು. ಅವರ ಸ್ವಭಾವವನ್ನು, ಆಶ್ರಿತಾಃ- ಆಶ್ರಯಿಸಿದವರಾದ, ನರಾಧಮಾಃ- ಮನುಷ್ಯರಲ್ಲಿ (ಅಧಮ) ನೀಚರಾಗಿರುವವರು, ಮಾಂ- ನನ್ನನ್ನು, ನಪ್ರಪದ್ಯಂತೆ- ಶರಣಹೊಂದುವುದಿಲ್ಲವು. ಆದುದರಿಂದಲೆ ಅವರಿಗೆ ಮಾಯಾ ತರಣವಿಲ್ಲವೆಂದು ಭಾವವು. ॥೧೫॥

(ಶಂ॥ ಭಾ॥) ನನ್ನನ್ನಾಶ್ರಯಿಸಿ ಶರಣ ಹೊಂದುವಂತವರು ಮಾಯೆಯನ್ನು ದಾಟುವಂತವರಾದರೆ ಸಮಸ್ತರೂ ಭಗವಚ್ಛರಣಾಗತಿ ಮಾಡುವುದು ಯುಕ್ತವಾಗಿರಲಾಗಿ ಸರ್ವರೂ ನಿಮ್ಮನ್ನು ಸೇವಿಸದೆ ಹೋಗುವುದಕ್ಕೆ ಕಾರಣವೇನು ? ಎಂಬ ಶಂಕಾ ಸಮಾಧಾನವನ್ನು “ ಪಾಪಾನುಷ್ಠಾನವಂ ಮಾಡುವಂತವರಿಗೆ ಅವಿವೇಕವು ಅಭಿವೃದ್ಧ ಮಾಗಿರುವುದೆಂತಲೂ, ಅಂತಹ ಅವಿವೇಕದಿಂದ ಅವರು ರಾಕ್ಷಸಕೃತ್ಯ ವಂ ಮಾಡುತ್ತಾರೆಂತಲೂ, ಅಂತಹ ರಾಕ್ಷಸ ಕೃತ್ಯಗಳಂ ಮಾಡುವು ದರಿಂದುಂಟಾದ ಪಾಪ ಪ್ರಾಚುರ್ಯದಿಂದ ಶಾಸ್ತ್ರಾಚಾರ್ಯೋಪದೇಶದಿಂ ದ ಸಂಪಾದಿಸಲ್ಪಟ್ಟ ಜ್ಞಾನವಂ ಮಾಯೆಯು ಅಪಹರಿಸುವುದೆಂತಲೂ ಅಂತಹ ಮಾಯೆಯಿಂದಅಪಹರಿಸಲ್ಪಟ್ಟ ಜ್ಞಾನವುಳ್ಳ ಮಾನವಾಧಮರು ನನ್ನನ್ನು ಸೇವಿಸಲಾರರೆಂತಲೂ ಉಪದೇಶಿಸಿದನು. ॥೧೫॥

(ರಾ॥ ಭಾ॥) ಭಗವದುಪಾಸನವನ್ನುಂಟುಮಾಡತಕ್ಕ ಶರಣಾಗ ತಿಯನ್ನು ಸರ್ವರೂ ಏತಕ್ಕೆ ಮಾಡುವುದಿಲ್ಲವು ? ಎಂದರೆ ಅದಕ್ಕು ತ್ತರವಂ ಹೇಳುತ್ತಾರೆ. ಪಾಪಕರ್ಮಗಳಂ ಮಾಡತಕ್ಕವರು ತನ್ಮಗ ಳಿಂದ ಮಾಡಲ್ಪಡುವ ಪಾಪಗಳ ತಾರತಮ್ಯದಿಂದ ನಾಲ್ಕುಬಗೆಯಾಗಿ ರುತ್ತಾರೆ. ಅವರ್ಯಾರೆಂದರೆ ! ಮೂಢಾಃ-ವಿಪರೀತ ಜ್ಞಾನವುಳ್ಳವರಾಗಿ ನಮ್ಮಗಳ ಸ್ವರೂಪವಂ ತಿಳಿಯದೇ ಇರುವುದರಿಂದ ಪ್ರಕೃತಿಭೋಗ ದಲ್ಲಿಯೇ ಆಸಕ್ತರಾಗಿ ಪೂರ್ವೋಕ್ತ ಪ್ರಕಾರದಂತೆ ಭಗವಚ್ಛೇಷತ್ವೈ ಕರಸವಾದ ಆತ್ಮಸ್ವರೂಪವನ್ನೂ ಭೋಗ್ಯವಸ್ತುಗಳನ್ನೂ ತಮ್ಮಗ ಳಿಗೆ ಶೇಷಭೂತಗಳಾಗಿರುವಂತೆ ತಿಳಿದುಕೊಂಡಿರುವಂತವರು. ನರಾ ಧಮಾಃ-ಸಾಮಾನ್ಯಾಕಾರದಿಂದ ನಮ್ಮಗಳಸ್ವರೂಪವು ಜ್ಞಾತವಾಗಿದ್ದ ರೂ ನಮ್ಮಗಳ ಆಭಿಮುಖ್ಯಕ್ಕೆ ಅನರ್ಹರಾಗಿರುವಂತವರು. ಮಾಯ ಯಾ ಅಪಹೃತಜ್ಞಾನಾಃ-ತಮ್ಮಗಳಿಗುಂಟಾಗಿರುವ ನಮ್ಮಗಳ ಸ್ವರೂಪ ವಿಷಯವಾದ ಜ್ಞಾನವನ್ನೂ ನಮ್ಮಗಳ ಐಶ್ವರ್ಯವಿಷಯವಾದ ಜ್ಞಾನವ

ನ್ನೂ ದುರ್ವಾದಿಗಳ ಕುಯುಕ್ತಿಯಿಂದ ವ್ಯಾಕುಲ ಪಡಿಸಿಕೊಂಡು ಅಪಹರಿಸಲ್ಪಟ್ಟವರು. ಆಸುರಂಭಾವಮಾಶ್ರಿತಾಃ- ನಮ್ಮಗಳ ಸ್ವರೂಪವನ್ನೂ ಐಶ್ವರ್ಯವನ್ನೂ ತಿಳಿದು ತಿಳಿದು ನಮ್ಮಲ್ಲಿ ಅಧಿಕ ದ್ವೇಷವಂ ಮಾಡುವಂತವರು. ಈ ಪ್ರಕಾರವಾಗಿ ಚತುರ್ವಿಧರಾದ, ದುಷ್ಕೃತಿನಃ- ಪಾಪಕರ್ಮಗಳಂ ಮಾಡತಕ್ಕವರು, ಮಾಂ-ನಮ್ಮನ್ನು, ನಪ್ರಪದ್ಯಂತೇ-ಉಪಾಯವೇಂದಾಗಿ ಅಧ್ಯವಸಾಯ ಮಾಡುವುದಿಲ್ಲವು. ಈ ನಾಲ್ಕು ಜನರು ಉತ್ತರೋತ್ತರವಾಗಿ ಪಾಪಿಷ್ಠತಮರೆಂದು ತಿಳಿಯ ಬೇಕು. ... ... ... ||೧೫||

ಶ್ಲೋ ||ಚತುರ್ವಿಧಾಭಜಂತೇಮಾಂ ಜನಾಸ್ಸುಕೃತಿನೋ
ಽರ್ಜುನ|ಆರ್ತೋಜಿಜ್ಞಾಸುರರ್ಥಾರ್ಥೀ ಜ್ಞಾನೀಚಭರ
ತರ್ಷಭ| ... ... |೧೬||

ಪ|| ಚತುರ್ವಿಧಾಃ- ಭಜಂತೇ- ಮಾಂ- ಜನಾಃ- ಸುಕೃತಿನಃ- ಅರ್ಜುನ| ಆರ್ತಃ- ಜಿಜ್ಞಾಸುಃ- ಅರ್ಥಾರ್ಥೀ-ಜ್ಞಾನೀ- ಚ- ಭರತರ್ಷಭ||

ಅ|| (ಶಂ|| ಶ್ರೀ|| ಗೀ|| ವಿ||) ಹೇಭರತರ್ಷಭ ಅರ್ಜುನ - ಎಲೈ ಭರತವಂಶ ಶ್ರೇಷ್ಠನಾದ ಅರ್ಜುನನೇ ! ಆರ್ತಃ- ವ್ಯಾಧಿ ಮೊದಲಾದ ದುಃಖವನ್ನು ಹೊಂದಿರುವವನು, ಜಿಜ್ಞಾಸುಃ- ಸ್ವರೂಪಜ್ಞಾನವಂ ಹೊಂದಲಿಚ್ಛಯುಳ್ಳವನು, ಅರ್ಥಾರ್ಥೀ- ದ್ರವ್ಯಗಳನ್ನಪೇಕ್ಷಿಸುವಂತವನು, ಜ್ಞಾನೀಚ- ಬ್ರಹ್ಮಜ್ಞಾನಿಯೂ, (ಇತಿ- ಈ ಪ್ರಕಾರವಾಗಿ, ಚತುರ್ವಿಧಾಃ - ನಾಲ್ಕುವಿಧರಾದ, ಸುಕೃತಿನಃ- ಪುಣ್ಯಶಾಲಿಗಳಾಗಿರುವ, ಜನಾಃ- ಜನರು, ಮಾಂ- ನಮ್ಮನ್ನು, ಭಜಂತೇ-ಭಜಿಸುತ್ತಾರೆ. ... ... ||೧೬||

(ಶಂ|| ಭಾ|| ಪಾಪಾತ್ಮರು ಮಾಯೆಯಿಂದ ಅಪಹರಿಸಲ್ಪಟ್ಟ ಜ್ಞಾನವುಳ್ಳವರಾಗಿ ಭಗವಂತನಾದ ನಿನ್ನನ್ನು ಸೇವಿಸದೇ ಹೋದರೆ ಲೋಕದಲ್ಲಿ ಯಾವ ಪುಣ್ಯಾತ್ಮರು ನಿನ್ನನ್ನು ಸೇವಿಸುವರೊ ಅದಂ ಬೋಧಿಸೆಂಬ ಅರ್ಜುನಾಕಾಂಕ್ಷೆಯಂ ತಾನೆತಿಳಿದು ಬೋಧಿಸುತ್ತಾನೆ. ಭರತವಂಶದಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೆ ! ಘೋರವ್ಯಾಧ್ಯಾದಿಗಳಿಂದ ಪೀಡಿಸಲ್ಪಟ್ಟವನೂ ಭಗವತ್ತತ್ವವನ್ನು ತಿಳಿಯಲಿಚ್ಛೆಯುಳ್ಳವನೂ ಧನವನ್ನಪೇಕ್ಷಿಸುವಂತವನೂವಿಷ್ಣುತತ್ವವಂ ತಿಳಿದವನೆಂಬೀ ನಾಲ್ಕು ಪುಣ್ಯಾತ್ಮರು ನನ್ನನ್ನು ಸೇವಿಸಿ ಸಿದ್ಧಿಹೊಂದುವರು. ಈ ಚತುರ್ವಿಧರಾದ ಭಕ್ತರಲ್ಲಿ ಕೆಲವರು ಮಾತ್ರವೇ ಸಿದ್ಧಿಯಂ ಹೊಂದುತ್ತಾರೆಯೋ ? ಅಥವಾ ಸರ್ವರೂ ಸಿದ್ಧಿಯಂ ಹೊಂದುತ್ತಾರೆಯೋ?

ಎಂಬ ಶಂಕಾಸಮಾಧಾನಕ್ಕಾಗಿ ಧನಾರ್ಥಿಯಾದವನು ಧನವನ್ನೂ, ಚೋರರೋಗಾದಿ ಪೀಡಿತನಾದವನು ಚೋರರೋಗಾದಿ ಬಾಧಾರಾಹಿತ್ಯವನ್ನೂ,ಹೊಂದಿದಮೇಲೆಜ್ಞಾನವುಳ್ಳವನಾಗಿಅಂತಹ ಜ್ಞಾನದಿಂದ ಮಾಯಾತರಣವಂ ಮಾಡುವನೆಂತಲೂ, ಜಿಜ್ಞಾಸುವೆಂಬ ಆತ್ಮತತ್ತ್ವಸಾಕ್ಷಾತ್ಕಾರವನ್ನಪೇಕ್ಷಿಸುವ ಮುಮುಕ್ಷುವಾದವನು ಆತ್ಮತತ್ತ್ವಸಾಕ್ಷಾತ್ಕಾರಕ್ಕಾಗಿ ಭಗವಂತನಾದ ನನ್ನನ್ನು ಸೇವಿಸುವುದರಿಂದುಂಟಾದ ಜ್ಞಾನದಿಂದಲೇ ಮಾಯಾತರಣವಂ ಮಾಡುವನೆಂತಲೂ ತಿಳಿಯಬೇಕು. ... ... ||೧೬||

(ರಾ|| ಭಾ||) ಪುಣ್ಯಕರ್ಮಿಗಳು ನನ್ನನ್ನು ಶರಣಹೊಂದಿ ನನ್ನನ್ನೇ ಭಜಿಸುತ್ತಾರೆ. ಅಂತವರು ತಮ್ಮಗಳಿಂದ ಮಾಡಲ್ಪಡುವ ಸುಕೃತ ತಾರತಮ್ಯದಿಂದ ನಾಲ್ಕು ಬಗೆಯಾಗಿರುತ್ತಾರೆ. ಅವರ್ಯಾರೆಂದರೆ ! ಭರತರ್ಷಭ ಅರ್ಜುನ-ಭರತವಂಶ್ಯಶ್ರೇಷ್ಠರಾದ ಎಲೈ ಅರ್ಜುನನೆ,ಆರ್ತಃ-ಐಶ್ವರ್ಯವನ್ನು ಹೋಗಲಾಡಿಸಿಕೊಂಡು ಪುನಶ್ಚ ಭ್ರಷ್ಟವಾದ ಐಶ್ವರ್ಯವನ್ನಪೇಕ್ಷಿಸುವಂತವನು, ಜಿಜ್ಞಾಸುಃ-ಪ್ರಕೃತಿವಿಯುಕ್ತವಾದ ಆತ್ಮಸ್ವರೂಪವನ್ನು ಹೊಂದಬೇಕೆಂದಪೇಕ್ಷೆಯುಳ್ಳವನು, (ಕೈವಲ್ಯಾರ್ಥೀ ಎಂದರ್ಥವು-ಬ್ರಹ್ಮಾನುಭವಯೋಗ್ಯವಾದ ಪರಮಪದಸ್ಥಾನವಂ ಬಿಟ್ಟು ಆತ್ಮಸ್ವರೂಪಾನುಭವವನ್ನಪೇಕ್ಷಿಸುವಂತವನೆಂದುಇದರ ತಾತ್ಪರ್ಯವು) ಅರ್ಥಾರ್ಥೀ-ಹೊಸದಾಗಿ ಐಶ್ವರ್ಯವನ್ನಪೇಕ್ಷಿಸುವಂತವನು, ಜ್ಞಾನೀಚ-ಭಗವಚ್ಛೇಷಭೂತವಾಗಿ ತನ್ನ ಆತ್ಮಸ್ವರೂಪವನ್ನೂ ಶೇಷಿಯಾಗಿ ಪರಮಾತ್ಮನನ್ನೂ ತಿಳಿದು ಪ್ರಕೃತಿವಿಯುಕ್ತವಾದ ಕೇವಲಾತ್ಮದಲ್ಲಿ ಪರ್ಯವಸಾನವಂ ಹೊಂದದೆ ಭಗವತ್ಪ್ರಾಪ್ತಿಯನ್ನಪೇಕ್ಷಿಸುವಂತವನು,ಇವರೆಲ್ಲರೂ ತಮ್ಮಗಳಿಂದ ಮಾಡಲ್ಪಟ್ಟ ಸುಕೃತತಾರತಮ್ಯದಿಂದ ಒಬ್ಬರಿಗಿಂತಲೂ ಒಬ್ಬರು ಉತ್ತರೋತ್ತರವಾಗಿ ಅಧಿಕ ತಮರಾಗಿರುವರು. (ಈ ಪ್ರಕಾರರಾದ,) ಚತುರ್ವಿಧಾಃ-ನಾಲ್ಕುವಿಧರಾಗಿರುವ, ಸುಕೃತಿನೋಜನಾಃ-ಸುಕೃತಶಾಲಿಗಳಾದ ಜನರು, ತಮ್ಮತಮ್ಮಗಳಿಂದ ಮಾಡಲ್ಪಡುವ ಪುಣ್ಯವಿಶೇಷಾಧೀನದಿಂದ ಪ್ರತಿಪತ್ತಿವಿಶೇಷವುಳ್ಳವರಾದುದರಿಂದ ಮೇಲುಮೇಲೆ ಶ್ರೇಷ್ಠಾಧಿಕಾರಿಗಳಾಗಿ,ಮಾಂಭಜಂತೇ-ನನ್ನನ್ನುಪಾಸನಮಾಡುತ್ತಾರೆ||೧೬||

ಶ್ಲೋ ॥ ತೇಷಾಂಜ್ಞಾನೀನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೇ। ಪ್ರಿಯೋಹಿಜ್ಞಾನಿನೋತ್ಯರ್ಥಮಹಂಸಚಮಮ ಪ್ರಿಯಃ ॥ ... ... ।೧೭॥

ಪ॥ ತೇಷಾಂ- ಜ್ಞಾನೀ- ನಿತ್ಯಯುಕ್ತಃ- ಏಕಭಕ್ತಿಃ- ವಿಶಿಷ್ಯತೇ | ಪ್ರಿಯಃ-ಹಿ-ಜ್ಞಾನಿನಃ-ಅತ್ಯರ್ಥಂ-ಅಹಂ-ಸಃ- ಚ- ಮಮ- ಪ್ರಿಯಃ ॥

ಅ॥ತೇಷಾಂ-ಅವರುಗಳ, (ಮಧ್ಯದಲ್ಲಿ) ನಿತ್ಯಯುಕ್ತಃ- ಏಕಭಕ್ತಿಃ- ಸ್ಥಿರವಾದ ಯೋಗವನ್ನೂ ನವೆತ್ರಬ್ಬರಲ್ಲಿಯೇ ಭಕ್ತಿಯನ್ನೂ ಹೊಂದಿರುವ, ಜ್ಞಾನೀ-ಜ್ಞಾನಿಯಾದವನು, ವಿಶಿಷ್ಯತೇ-ಶ್ರೇಷ್ಠನಾಗುತ್ತಾನೆ. ಜ್ಞಾನಿನಃ - ಜ್ಞಾನಿಯಾದವನಿಗೆ, ಅಹಂ-ನಾನು, ಅತ್ಯರ್ಥಂ- ಅತ್ಯಂತವಾಗಿ, ಪ್ರಿಯಃ - ಪ್ರಿಯವುಳ್ಳವನು, ಸಚ - ಅವನೂ, ಮಮ-ನನಿಗೆ, ಪ್ರಿಯೋಹಿ-ಪ್ರಿಯನಲ್ಲವೆ. ॥೧೭॥

(ಶಂ॥ ಭಾ॥) ಭಗವಂತನಲ್ಲಿ ಭಕ್ತಿಯುಳ್ಳ ಪುಣ್ಯಾತ್ಮರು ನಾಲ್ಕು ವಿಧರಾಗಿರುವರೆಂಬುವುದಾಗಿ ಹೇಳಿರುತ್ತೀರಲ್ಲವೇ ? ಭಗವದಾಭಿಮುಖ್ಯವುಳ್ಳ ಪುಣ್ಯಾತ್ಮರಾದ ಈ ಚತುರ್ವಿಧ ಭಕ್ತರು ಸಮಾನರಾಗಿರುವರೋ ? ಅಥವಾ ಇಲ್ಲವೋ ? ಎಂಬ ಶಂಕಾಸಮಾಧಾನಾರ್ಥವಾಗಿ ಈ ಶ್ಲೋಕವು ಪ್ರವೃತ್ತವಾಯಿತು. ಜ್ಞಾನಿಯಾದವನು ತತ್ತ್ವವಂ ತಿಳಿದವನಾಗಿರುವುದರಿಂದ ಭಗವದ್ರೂಪವಾದ ಆತ್ಮದಲ್ಲಿಯೇ ಇಡಲ್ಪಟ್ಟ ಮನಸ್ಸುಳ್ಳವನಾಗುತ, ಅಸಾರವಾದ ಸಂಸಾರದಲ್ಲಿ ಭಗವಂತನೇ ಸಾರಭೂತನಾಗಿರುವನೆಂದು ತಿಳಿದು ಅಂತಹ ಭಗವಂತನು ನಾನೇ ಆಗಿರುವೆನೆಂಬ ತಿಳಿಯುವಿಕೆಯಿಂದ ತನಗಿಂತಲೂ ಅಭಿನ್ನನೂ ಅದ್ವಿತೀಯನೂ ಆದ ಭಗವಂತನಲ್ಲಿ ಭಕ್ತಿಯುಳ್ಳವನಾಗುತ್ತಾನೆ. ವಿಚಾರಿಸಿ ನೋಡಿದರೆ ಜ್ಞಾನಿಯಾದವನು ಸಮಾಹಿತ ಚಿತ್ತನಾಗಿಯೂ ಪರಮಾತ್ಮನಲ್ಲಿಯೇ ಭಕ್ತಿಯುಳ್ಳವನಾಗಿಯೂ ಇರುವುದರಿಂದ ಪೂರ್ವೋಕ್ತ ಚತುರ್ವಿಧ ಭಕ್ತರಲ್ಲಿ ಶ್ರೇಷ್ಠನೆಂದರಿಯಬೇಕು. ಮತ್ತು "ಆತ್ಮವು ಪ್ರಿಯವಾಗಿರುವುದು" ಎಂಬ ಲೋಕನ್ಯಾಯಾನುಸಾರವಾಗಿ ಜ್ಞಾನಿಯಾದವನಿಗೆ ಆತ್ಮನು ನಾನೇ ಆಗಿರುವುದರಿಂದ ನಾನು ಜ್ಞಾನಿಗೆ ಅತ್ಯಂತ ಪ್ರಿಯನಾಗಿರುವೆನೆಂದು ಎಂದರೆ ವಾಸುದೇವನಾದ ನಾನು ಜ್ಞಾನಿಗೆ ಆತ್ಮನಾಗಿರುವುದರಿಂದಲೂ, ಪರಮ ಪುರುಷಾರ್ಥ ಸ್ವರೂಪನಾಗಿರುವುದರಿಂದಲೂ,ನಿರುಪಾಧಿಕ ಪ್ರೇಮಾಸ್ಪದನಾದೆನು ಎಂಬುದಾಗಿ

ಶ್ರೀಕೃಷ್ಣನು ಹೇಳಿದನು. ಆದರೆ ಆತ್ಮರೂಪನಾದುದರಿಂದ ವಾಸುದೇವನಾದ ನೀನು ಜ್ಞಾನಿಗೆ ಪ್ರಿಯನಾಗಿದ್ದರೂ ನಿನಗೆ ಜ್ಞಾನಿಯು ಅತ್ಯಂತ ಪ್ರಿಯನಲ್ಲವೋ? ಎಂಬ ಶಂಕಾಸಮಾಧಾನಾರ್ಥವಾಗಿ "ಸ ಚಮಮಪ್ರಿಯಃ" ಎಂದು ಹೇಳಿದನು. ಆ ಜ್ಞಾನಿಯು ವಾಸುದೇವನಾದ ನನಗೆ ಆತ್ಮಭೂತನಾಗಿರುವುದರಿಂದ ನನಿಗೆ ಅತ್ಯಂತ ಪ್ರಿಯನಾಗಿರುವನೆಂದು ತಿಳಿಯಬೇಕು. ॥೧೭॥

(ರಾ॥ ಭಾ॥) ತೇಷಾಂ- ಆರ್ತ, ಅರ್ಥಾರ್ಥೀ, ಕೈವಲ್ಯಾರ್ಥೀ, ಭಗವತ್ಪ್ರಾಪ್ತಿಕಾಮ ರೆಂಬ ಚತುರ್ವಿಧ ಭಕ್ತರ ಮಧ್ಯದಲ್ಲಿ, ಜ್ಞಾನೀ- ಭಗವತ್ಪ್ರಾಪ್ತಿಯನ್ನಪೇಕ್ಷಿಸುವ ಜ್ಞಾನೀ ಎಂಬ ಚರಮಾಧಿಕಾರಿಯಾದವನು, ನಿತ್ಯಯುಕ್ತಃ- ಸಾಧನದಶೆಯಲ್ಲಿ ನನ್ನೊಡನೆ ಸಂಬಂಧವೂ ಫಲದಶೆಯಲ್ಲಿ ಐಶ್ವರ್ಯವೇನು ಸ್ವಸ್ವರೂಪ ಸಂಬಂಧವೇನು ಅವುಗಳೊಳ್ಳೆ ಪ್ರಯೋಜನಾಂತರ ಪರರಂತೆ ಅಲ್ಲದೆ ಅಂತವರಿಗೆ ಸಾಧನವೂ ಪ್ರಾಪ್ಯವೂ ನಾನೇ ಆಗಿರುವುದರಿಂದ ಈ ಎರಡು ದಶೆಯಲ್ಲಿಯೂ ನನ್ನ ಸಂಬಂಧವಂ ಬಿಡದೇ ಇರುವವನಾದುದರಿಂದಲೂ, ಏಕಭಕ್ತಿಃ- ಸಾಧನದಶೆಯಲ್ಲಿ ನನ್ನಲ್ಲಿಯೂ, ಪ್ರಾಪ್ತಿದಶೆಯಲ್ಲಿ ಪೂರ್ವೋಕ್ತವಾದ ಫಲಾಂತರದಲ್ಲಿಯೂ ಭಕ್ತಿಯುಳ್ಳವರಾದ ಪ್ರಯೋಜನಾಂತರ ಪರರಂತೆ ಇಲ್ಲದೆ ಈ ಎರಡು ದಶೆಯಲ್ಲಿಯೂ ಸಾಧನವೂ ಪ್ರಾಪ್ಯವೂ ಆದ ನನ್ನಲ್ಲಿಯೇ ನಿರತಿಶಯಪ್ರೇಮರೂಪೆಯಾದ ಭಕ್ತಿಯುಳ್ಳವನಾದುದರಿಂದಲೂ, ವಿಶಿಷ್ಯತೆ - ಇತರಾಧಿಕಾರಿಗಳಿಗಿಂತಲೂ ನನ್ನ ಮನಸ್ಸಿನವಾದವಿಶೇಷವುಳ್ಳವನಾಗುತ್ತಾನೆ. ಅಹಂ-ನಾನು, ಜ್ಞಾನಿನಃ-ಭಗವತ್ಪ್ರಾಪ್ತಿಕಾಮನಾದ ಚರಮಾಧಿಕಾರಿಯಾದವನಿಗೆ, ಅತ್ಯರ್ಥಂ_ಸರ್ವಜ್ಞನಾಗಿಯೂ ಸರ್ವಶಕ್ತನಾಗಿಯೂ ಇರುವ ನನ್ನಿಂದಲೂ ಇಷ್ಟೆಂದು ಬಾಯಿಯಿಂದ ಹೇಳಲಶಕ್ಯವಾಗಿರುವಂತೆ, ಪ್ರಿಯೋಹಿ-ಇಷ್ಟತಮವಾದ ವಸ್ತುವಲ್ಲವೋ, ಸಚ-ಆಚರಮಾಧಿಕಾರಿಯೂ, ಮಮ- ಸರ್ವಜ್ಞನಾದ ನನಿಗೆ, ಅತ್ಯರ್ಥಂ-ಇಷ್ಟೆಂದು ಬಾಯಿಯಿಂದ ಹೇಳಲಶಕ್ಯವಾಗಿರುವಂತೆ, ಪ್ರಿಯಃ-ಇಷ್ಟತಮನಾದ ವಸ್ತುವಾಗಿರುವನು. ಜ್ಞಾನಿಗಳಲ್ಲಿ ಶ್ರೇಷ್ಠರಾದ ಪ್ರಹ್ಲಾದಂಗೆ ಈ ಕೃಷ್ಣನಲ್ಲಿರುವ ನಿರತಿಶ ಪ್ರೀತಿಯಿಂದಲ್ಲವೆ "ಸತ್ವಾಸಕ್ತಮತಿಃಕೃಷ್ಣೇ ದಶ್ಯಮಾನೋ ಮಹೋ

ರಸ್ಯೈಃ । ನವಿವೇಗಾತ್ರಸೊರಾತ್ರಂ ತತ್ಸ್ಮೃತ್ಯಾಹ್ಲಾದಸಂಸ್ಥಿತಃ ”
ಎಂಬದಾಗಿ ಇವರು ಮಹಾ ಸರ್ಪಗಳಿಂದ ಪೀಡಿತರಾಗಿದ್ದರೂ ಆ ಕೃ
ಷ್ಣನ ಸ್ಮೃತಿಯಿಂದುಂಟಾದ ಆಹ್ಲಾದದಿಂದ ಪರವಶರಾಗಿ ಆ ಪೀಡಾ
ದಿಗಳಂ ಚಿಂತಿಸಲಿಲ್ಲನೆಂದು ಶ್ರೀ ವಿಷ್ಣುಪುರಾಣದಲ್ಲಿ ವ್ಯಕ್ತವಾಗಿ
ರುವುದು. ... ... ॥೧೭॥

ಶ್ಲೋ॥ ಉದಾರಾಸ್ಸರ್ವಏವೈತೇಜ್ಞಾನೀತ್ವಾತ್ಮೈವಮೇ
ಮತಂ । ಆಸ್ಥಿತಸ್ಸಹಿಯುಕ್ತಾತ್ಮಾಮಾಮೇವಾನುತ್ತ
ಮಾಂಗತಿಂ ॥ ... ... ॥೧೮॥

ಪ॥ ಉದಾರಾಃ-ಸರ್ವೇ- ಏವ- ಏತೇ-ಜ್ಞಾನೀ- ತು- ಆತ್ಮಾ-ಏವ- ಮೇ-ಮತಂ ।
ಆಸ್ಥಿತಃ- ಸಃ- ಹಿ- ಯುಕ್ತಾತ್ಮಾ- ಮಾಂ- ಏವ-ಅನುತ್ತಮಾಂ- ಗತಿಂ ॥

ಅ॥ಏತೇಸರ್ವೇಉದಾರಾಏವ- ಈ ಚತುರ್ವಿಧಾಧಿಕಾರಿಗಳೂ ಶ್ಲಾಘ್ಯರಾದವರೇಸರಿ,
(ಆದರೂ) ಜ್ಞಾನೀತು- ಜ್ಞಾನೀ ಎಂದರೋ, ಆತ್ಮೈವ- ನಾನೇ(ಇತಿ-ಎಂಬದಾಗಿ) ಮೇ
ಮತಂ- ನನ್ನ ನಿಶ್ಚಯವು, ಹಿ- ಏತಕ್ಕೆಂದರೆ, ಸಃ- ಅವನು, ಯುಕ್ತಾತ್ಮಾ- ನನ್ನಲ್ಲಿ
ಮನಸ್ಸಂ ಸ್ಥಿರವಾಗಿಟ್ಟವನು, ಮಾಮೇವ ಅನುತ್ತಮಾಂಗತಿಮಾಸ್ಥಿತಃ - ನನ್ನನ್ನೇ
ಸರ್ವೋತ್ತಮವಾದ ಗತಿಯೆಂಬದಾಗಿ ನಂಬಿದವನು. ॥೧೮॥

(ಶಂ॥ ಭಾ॥) ಈ ಚತುರ್ವಿಧ ಭಕ್ತರಲ್ಲಿ “ ಜ್ಞಾನೀನಿತ್ಯಯುಕ್ತ ಏಕ
ಭಕ್ತಿರ್ವಿಶಿಷ್ಯತೇ,, ಎಂಬದಾಗಿ ಜ್ಞಾನಿಯು ಭಗವಂತನಿಗೆ ಪ್ರಿಯ
ನಾಗಿದ್ದರೆ ಇತರರಾದ ಆರ್ತಜಿಜ್ಞಾಸು ಅರ್ಥಾರ್ಥಿಗಳೆಂಬ ತ್ರಿವಿಧಭಕ್ತರು
ಪರಮಪುರುಷನಿಗೆ ಪ್ರಿಯರಲ್ಲವೋ? ಎಂದರೆ ಆರ್ತಾದಿಗಳಾದ ತ್ರಿವಿಧಾ
ಧಿಕಾರಿಗಳೂ ವಾಸುದೇವನಾದ ನನಗೆ ಪ್ರಿಯರೆಂತಲೆ ತಿಳಿಸುತ್ತಾನೆ.
ಆದರೆ ತ್ರಿವಿಧರಾದ ಆರ್ತಾದಿಗಳು ಪರಮಾತ್ಮನಿಗೆ ಪ್ರಿಯರಾಗಿದ್ದರೆ
ಪೂರ್ವಶ್ಲೋಕದಲ್ಲಿ “ ಅತ್ಯರ್ಥಂ,, ಎಂಬ ವಿಶೇಷಣಕ್ಕೆ ವೈಫಲ್ಯವುಂ
ಟಾಗಲಾರದೋ? ಎಂಬ ಸಂದೇಹವಂ ಸ್ವೀಕರಿಸದೆ ಈ ಚತುರ್ವಿಧ ಭ
ಕ್ತರೂ ಭಗವಂತನಿಗೆ ಪ್ರಿಯರಾಗಿದ್ದರೂ ಜ್ಞಾನಿಯಾದವನು ಆ ತ್ರಿವಿಧ
ಭಕ್ತರಿಗಿಂತಲೂ ಅತ್ಯಂತ ಪ್ರಿಯನೆಂದು ಹೇಳುವ ಅರ್ಥದಲ್ಲಿ “ಅ
ತ್ಯರ್ಥಂ, ಎಂಬ ಪದವು ಪ್ರಯೋಗಿಸಲ್ಪಟ್ಟಿರುವುದರಿಂದ ಈ ವಿಶೇಷ
ಣವು ವಿಫಲವಾಗಲಾರದು. ಆದರೆ ಜ್ಞಾನಿಯಾದವನು ಮಾತ್ರವೇ ನ
ನಗೆ ಅತ್ಯಂತ ಪ್ರಿಯನಾಗಲು ಕಾರಣವೇನು? ಎಂದರೆ ಜ್ಞಾನಿಯಾದ
ವನು ಭಗವಂತನಾದ ನನಗೆ ಆತ್ಮನೇ ಆಗಿರುವುದರಿಂದ ಅತ್ಯಂತ ಪ್ರಿ

ಯುನೆಂದರಿಯಬೇಕು. ಮತ್ತು ಭಗವಂತನಾದ ನೀನು ಸಮಸ್ತವನ್ನು ನಿನ್ನ ಸ್ವರೂಪವಾಗಿಯೇ ಪಕ್ಷಪಾತ ರಾಹಿತ್ಯದಿಂದ ನೋಡಬೇಕಾಗಿರುವಲ್ಲಿ ಜ್ಞಾನಿಯಾದವನು ಮಾತ್ರವೇ ಆತ್ಮವೆಂತಲೂ ಅತ್ಯಂತ ಪ್ರಿಯನೆಂತಲೂ ಹೇಳುವುದು ಉಚಿತವೋ ಎಂದರೆ, ಸರ್ವವೂ ನನ್ನ ಸ್ವರೂಪವಾಗಿಯೇ ಇದ್ದರೂ ಜ್ಞಾನಿಯಾದವನು ಮಾತ್ರ ನನ್ನನ್ನೇ ಸರ್ವೋತ್ತಮವಾದ ಪ್ರಾಪ್ಯಸ್ಥಾನವನ್ನಾಗಿ ಹೊಂದಲು ಪ್ರವರ್ತಿಸಿರುವವನಾದುದರಿಂದ ಆತ್ಮಸ್ವರೂಪನಾಗಿಯೂ. ಅತ್ಯಂತ ಪ್ರಿಯನಾಗಿಯೂ ಆಗಿರುತ್ತಾನೆಂಬುವುದರಲ್ಲಿ ಸಂಶಯ ಪಡಬೇಕಾದದ್ದು ಅನಾವಶ್ಯಕವು. ಆದರೆ ಜ್ಞಾನಿಯಾದವನು ಮಾತ್ರವೇ ನಿನ್ನಂ ಸೇರಲು ಇಚ್ಛೆಯುಳ್ಳವನಾಗಿಯೂ ಇತರರು ಆ ರೀತಿಯಾಗಿ ಇಚ್ಛಾರಹಿತರಾಗಿಯೂ ಇರಲೂ ಕಾರಣವೇನು? ಎಂದರೆ ಜ್ಞಾನಿಯಾದವನು, ತಾನು ಭಗವದ್ವಾಸುದೇವನೇ ಆಗಿರುವೆನಲ್ಲದೆ ವಾಸುದೇವನಿಗಿಂತಲೂ ನಾನು ಭಿನ್ನನಲ್ಲವೆಂಬ ನಿಶ್ಚಯ ಉಳ್ಳವನಾದುದರಿಂದ ಸರ್ವೋತ್ತಮ ಪ್ರಾಪ್ಯಸ್ಥಾನವಾದ ನನ್ನಂ ಸೇರಲಪೇಕ್ಷಿಸುತ್ತಾನೆಂತಲೂ ಜ್ಞಾನಿಭಿನ್ನನಾದವನು ಜ್ಞಾನಿಯಂತೆ ಇರದೆ ತನಗೆ ಅಪೇಕ್ಷಿತಾರ್ಥವನ್ನು ಪ್ರಾಪ್ಯಸ್ಥಾನವಾಗಿ ಅಪೇಕ್ಷಿಸುತ್ತಾನಾದುದರಿಂದ ನನ್ನನ್ನು ಸೇರಲುಇಚ್ಛಿಸುವದಿಲ್ಲವೆಂತಲೂ ತಿಳಿಯಬೇಕು||೧೮||

(ಶಂ|| ಅ||) ಆರ್ತಾದಿಗಳಾದ ತ್ರಿವಿಧಭಕ್ತರು ಮೀಮಾಂಸಕಾದಿಗಳಿಗಿಂತಲೂ ಶ್ರೇಷ್ಠರೆಂದರಿಯಬೇಕು. ||೧೮||

(ರಾ|| ಭಾ||) ಇವರೆಲ್ಲರೂ ಮಹಾ ಉದಾರರು, ನಮ್ಮಲ್ಲಿ ಸ್ವಲ್ಪವಾದದ್ದನ್ನಾದರೂ ಗ್ರಹಿಸಿ ನಮಗೆ ದಾತೃತ್ವ ಪ್ರಸಿದ್ಧಿಯುಂಟಾಗುವಂತೆ ಮಾಡಿದ ಮಹಾವದಾನ್ಯರು. ಅಂತವರನ್ನು ನಮಗೆ ಸರ್ವಸ್ವವನ್ನು ಕೊಟ್ಟವರಂತೆ ಗ್ರಹಿಸಿರುವೆವು. ಜ್ಞಾನಿಯೋ? ನಮ್ಮ ಸ್ವರೂಪವನ್ನು ಚಲಿಸಿ ಹೋಗದಂತೆ ಧರಿಸುವ ಆತ್ಮವೆಂಬದಾಗಿಯೇ ನನ್ನ ಸಿದ್ಧಾಂತವು. ಅದಕ್ಕೆ ಕಾರಣವೇನೆಂದರೆ! ಅವನು ನಮ್ಮನ್ನುಬಿಟ್ಟು ಪ್ರತ್ಯೇಕವಾಗಿದ್ದರೆ ಆತ್ಮಧಾರಣವಂ ಮಾಡಲಶಕ್ತನಾಗಿರುವಂತೆ ನಾವೂ ಅವನಂಬಿಟ್ಟು ಪ್ರತ್ಯೇಕಸಿದ್ದರೆ ಆತ್ಮಧಾರಣವಂ ಮಾಡಲಾರೆವು. ಆದುದರಿಂದ ನಮಗೆ ಅವನೂ ಅತ್ಮನೆ. ( ಇಲ್ಲಿ " ನತಸ್ಯಾನ್ಯಃ

ಪ್ರಿಯತರಃಪ್ರತಿಬುದ್ಧೈಸ್ತುಮಹಾತ್ಮಭಿಃ। ವಿದ್ಯತೇ ತ್ರಿಷುಲೋಕೇಷುತ ತೋಽನ್ಯಃ ಪ್ರಕಾಂತಿತತ್ತ್ವಗತಃ ॥ ನಾರದೈತದ್ವಿಷ್ಠಿತೇಸತ್ಯಂವಚನಂನಮು ದಾಹೃತಂ । ನಾಸ್ತಿಭಕ್ತ್ಯಾಃಪ್ರಿಯತರೋ ಲೋಕೇಕಶ್ಚನವಿದ್ಯತೇ" ಇತ್ಯಾದಿ ತಾತ್ಪರ್ಯ ಚಂದ್ರಿಕೋದಾಹೃತ ಪ್ರಮಾಣಗಳನ್ನು ಸಂಧಿ ಸಬೇಕು.) ... .. ॥೧೮॥

(ಗೀ॥ವಿ॥) ಜ್ಞಾನೀತ್ವಾತ್ಮೈವ-ಜ್ಞಾನಿಯಾದವನು ನಾನೇ ಎಂಬ ದಾಗಿ ನನ್ನ ಅಭಿಪ್ರಾಯವೆಂದು ಪರಮಾತ್ಮನು ಹೇಳಿರುವುದರಿಂದ ಈ ಜ್ಞಾನಿ ಪರಮಾತ್ಮರಿಬ್ಬರಿಗೂ ಅಭೇದೋಕ್ತಿಯು ಔಪಚಾರಿಕ ವಾಗಿ ರುವದು. ಲೋಕದಲ್ಲಿಯೂ ತನಗೆ ಅತ್ಯಂತ ಪ್ರಿಯನಾದವನಂ ಕಂಡು ಅವನು ನಾನೇ, ನಮ್ಮಿಬ್ಬರಿಗೂ ಭೇದವಿಲ್ಲವೆಂಬುವುದಾಗಿ ಹೇಳುವು ದಂ ಕಂಡಿರುವೆವು. ಅದರಂತೆ ಇಲ್ಲಿಯೂ ಪರಮಾತ್ಮನು, ಜ್ಞಾನಿಗಳು ಅ ತ್ಯಂತ ಪ್ರಿಯರೆಂಬ ಆಕಾರದಿಂದ ಜ್ಞಾನಿಗಳು ನಾನೇ, ಎಂಬದಾಗಿ ಹೇ ಳಿರುವಂತೆ ತಿಳಿಯಬೇಕು.(ಅಥವಾ) ಆಸ್ಥಿತಃ- ಪ್ರಾಯತ್ನವಂಮಾಡಿ, ಮಾಮೇವ-ನನ್ನನ್ನೇ, ಆತ್ಮ-ಆಪ್ನೋತೀತ್ಯಾತ್ಮ-ಹೊಂದಿರುತ್ತಾನೆ॥೧೮

ಶ್ಲೋ॥ ಬಹೂನಾಂಜನ್ಮನಾಮಂತೇ ಜ್ಞಾನವಾನ್ ಮಾಂ
ಪ್ರಪದ್ಯತೇ । ವಾಸುದೇವಸ್ಸರ್ವಮಿತಿ ಸಮಹಾತ್ಮಾ
ಸುದುರ್ಲಭಃ ॥ ... ... ॥೧೯॥

ಪ॥ ಬಹೂನಾಂ- ಜನ್ಮನಾಂ - ಅಂತೇ - ಜ್ಞಾನವಾನ್- ಮಾಂ - ಪ್ರಪದ್ಯತೇ । ವಾಸುದೇವಃ- ಸರ್ವಂ-ಇತಿ- ಸಃ- ಮಹಾತ್ಮಾ - ಸುದುರ್ಲಭಃ ॥

ಅ। ಯಃ- ಯಾವನಾದರೆ, ಬಹೂನಾಂ- ಅನೇಕಗಳಾದ, ಜನ್ಮನಾಂ- ಜನ್ಮಗಳ, ಅಂತೇ-ಕಡೆಯಲ್ಲಿ, ಸರ್ವಂವಾಸುದೇವಇತಿ- (ಶಂ) ಸಮಸ್ತವೂ ವಾಸುದೇವನೆ ಎಂಬ, ಜ್ಞಾನವಾನ್-ಜ್ಞಾನವುಳ್ಳವನಾಗಿ, (ಗೀ॥ವಿ) ವಾಸುದೇವಸ್ಸರ್ವಮಿತಿಜ್ಞಾನವಾನ್- ಸಮಸ್ತ ಪ್ರೊ ವಾಸುದೇವಾಧೀನ ಸತ್ತಾಸ್ಥಿತಿ ಪ್ರವೃತ್ತಿ ಯುಳ್ಳವುಗಳೆಂಬ ಜ್ಞಾನವುಳ್ಳವನಾಗಿ, (ಅಥವಾ) ವಾಸುದೇವನು ಪೂರ್ಣನೆಂಬ ಜ್ಞಾನವುಳ್ಳವನಾಗಿ, ಮಾಂ-ನನ್ನನ್ನು. ಪ್ರಪ ದ್ಯತೇ- ಪೂಜಿಸುತ್ತಾನೊ, (ಶಂ) ಉಪಾಸನೆ ಮಾಡುತ್ತಾನೊ, (ಗೀ॥ವಿ) ಹೊಂದುತ್ತಾ ನೆ, ಸಮಹಾತ್ಮಾ-ಅಂತಹ ಮಹಾನುಭಾವನು, ಸುದುರ್ಲಭಃ-ಅತ್ಯಂತದುರ್ಲಭನು॥೧೯॥

(ಶಂ॥ಭಾ॥)ಹಿಂದಿನ ಶ್ಲೋಕದಿಂದ ಗತಾರ್ಥವಾಗಿದ್ದರೂ ಇದರಿಂ ದಲೂ ಜ್ಞಾನಿಯನ್ನು ಪ್ರಕಾರಾಂತರದಿಂದ ಸ್ತೋತ್ರಮಾಡುತ್ತಾನೆಂ

ದರಿಯಬೇಕು. ಯಾವನಾದರೆ ಜ್ಞಾನಾರ್ಥವಾದ ಸಂಸ್ಕಾರಕ್ಕೆ ಆಶ್ರಯಭೂತಗಳಾದ ಸಂಸ್ಕಾರಗಳ ಸಂಪಾದನೆಗೆ ಯೋಗ್ಯಗಳಾದ ಅನೇಕ ಜನ್ಮಗಳ ಕಡೆಯಲ್ಲಿ ಎಂದರೆ ಸರ್ವ ಸುಕೃತ ಪರಿಪಾಕ ರೂಪವಾದ ಕಡೇಜನ್ಮದಲ್ಲಿ ಸರ್ವವೂ ವಾಸುದೇವ ಸ್ವರೂಪವೆ, ಎಂದು ತಿಳಿದು ವಾಸುದೇವನಾದ ನನ್ನನ್ನು ಹೊಂದುತ್ತಾನೋ ಎಂದರೆ ಸರ್ವಾತ್ಮಕನಾದ ನನಗೂ ತನಗೂ ಭೇದವಿಲ್ಲವೆಂಬದಾಗಿ ನೆನೆಸುತ್ತಾನೊ ಅಂತಹ ಮಹಾನುಭಾವನಾದ ಜೀವನ್ಮುಕ್ತನು ಅತ್ಯಂತ ದುರ್ಲಭನು; ಆದುದರಿಂದಲೆ ಹಿಂದೆ " ಮನುಷ್ಯಾಣಾಂ ಸಹಸ್ರೇಷು " ಎಂಬದಾಗಿ ಹೇಳಿತು. ... ... ... ||೧೯||

(ಶಂ||ಆ||) ಈರೀತಿಯಾಗಿ ಜ್ಞಾನಿಗೆ ಜ್ಞಾನಾಧಿಕ್ಯ ಪ್ರಯುಕ್ತವಾದ ಸರ್ವೋತ್ತಮತ್ವವಂ ಪ್ರತಿಪಾದಿಸಿ ಈಶ್ಲೋಕದಿಂದ ಬ್ರಹ್ಮನಿಷ್ಠೆಯುನ್ನೇ ಮುಖ್ಯ ಪ್ರಯೋಜನವಾಗಿವುಳ್ಳ ಕೆಲವು ಜನ್ಮಗಳಿಂದ ಪ್ರಾಪ್ತವಾಗಿರುವ ಸುಕೃತಪರಿಪಾಕದಿಂದುಂಟಾದ ವಿಜ್ಞಾನದಿಂದಸಕಲಪ್ರತಿಬಂಧಕಗಳೂ ನಶಿಸಿಹೋಗುವುದರಿಂದ ಸರ್ವಂ ಬ್ರಹ್ಮವೆಂಬದಾಗಿ ನೋಡುತಲಿರುವ ಮಹಾನುಭಾವನಿಗೆ ಫಲವುವಿದೇಹ ಮುಕ್ತಿ ಎಂಬದಾಗಿ ಬೋಧಿಸುತ್ತಾನೆ. "ತತ್ರತಂಬುದ್ಧಿಸಂಯೋಗಂ"(೬||೪೩) ಎಂಬುವ ಶ್ಲೋಕದಿಂದ ಹೇಳಲ್ಪಟ್ಟಿರುವಂತೆ ಆತ್ಮಜ್ಞಾನಸಿದ್ಧಿಯನ್ನೇ ಪ್ರಯೋಜನವಾಗುಳ್ಳ ಅನೇಕ ಜನ್ಮಗಳ ಅಂತ್ಯದಲ್ಲಿ ಸರ್ವವೂ ವಾಸುದೇವ ಸ್ವರೂಪವೇ ಎಂಬ ಜ್ಞಾನವುಳ್ಳವನಾಗಿ ಪರಮಾತ್ಮನಾದ ನನ್ನನ್ನು ಹೊಂದುತ್ತಾನೆಂತಲೂ ಅಂತಹ ನತ್ಯಂತ ದುರ್ಲಭನೆಂತಲೂ ತಿಳಿಯಬೇಕು.

ಆದರೇ " ನಾಮರೂಪ ಕ್ರಿಯಾಜಾತಿ ವಿಶೇಷಗಳಿಂದಲೂ ಪೃಥಿವ್ಯಪ್ತೇಜೋವಾಯ್ವಾಕಾಶಗಳಿಂದಲೂ ಆ ಪೃಥಿವ್ಯಾದಿ ಭೂತಗಳ ಕಾರ್ಯಗಳಿಂದಲೂ ಬ್ರಹ್ಮಕ್ಕಿಂತಲೂ ಭಿನ್ನವಾಗಿರುವ ಈಪ್ರಪಂಚವು ಪ್ರತ್ಯಕ್ಷವಾಗಿ ಕಾಣುವುದಲ್ಲವೆ! ಇಂತಹ ಪ್ರಪಂಚಕ್ಕೂ ಬ್ರಹ್ಮಕ್ಕೂ ಭೇದವಿಲ್ಲವೆಂದು ಹೇಳುವುದು ಉಚಿತವೊ " ಎಂದರೆ ಅದಕ್ಕುತ್ತರವು; ಶ್ರುತಿಯುಕ್ತಿಗಳಿಂದ ವಿಚಾರಿಸಿ ನೋಡಿದರೆ ನಾಮರೂಪಾದಿಗಳಿಗೂ ನಾಮರೂಪಾದಿಗಳುಳ್ಳ ಜಗತ್ತಿಗೂ ಬ್ರಹ್ಮಭಿನ್ನವಾದ ಸ್ಥಿತಿಯಿಲ್ಲವಾ

ದುದರಿಂದ ಜಗದ್ಬ್ರಹ್ಮಗಳಿಗೆ ಭೇದವಿಲ್ಲವೆಂತಲೆ ಹೇಳಬಹುದು. ಮತ್ತು ಮೃತ್ತಿನಲ್ಲಿ ಘಟದಂತೆಯೂ ಮರುಭೂಮಿಯಲ್ಲಿ ನೀರಿನಂತೆಯೂ ಬ್ರಹ್ಮದಲ್ಲಿ ಕಲ್ಪಿತವಾದ ಈ ಪ್ರಪಂಚಕ್ಕೆ ಬ್ರಹ್ಮಸತ್ತಾಭಿನ್ನವಾದ ಸತ್ತೆ ಯುಂಟಾಗಲಾರದು. ಘಟವು ಮೃತ್ತಿಗಿಂತಲೂ ಭಿನ್ನವಾಗಿರುವುದೆಂಬುವುದಂ ಸ್ಥಾಪಿಸಲು ಯಾರಿಂದಲೂ ಆಗಲಾರದು, ಅದುದರಿಂದ ಈ ಪ್ರಕಾರವೆ ಜಗತ್ತಿಗೂ ಬ್ರಹ್ಮಕ್ಕಿಂತಲೂ ಭಿನ್ನವಾದಸತ್ತಾವುಂಟೆಂದು ಹೇಳಲೂ ಆಗುವುದಿಲ್ಲವು. ಕಿಂಚ,ಮೃತ್ತೆ ಕಂಬುಗ್ರೀವಾದ್ಯಾಕಾರವುಳ್ಳದ್ದಾಗಿ ಜಡತ್ವ ಗಂಧವತ್ವಾದಿ ಧರ್ಮಗಳನ್ನು ಬಿಡದೆ ಘಟರೂಪದಿಂದಿರುತ್ತದಾದುದರಿಂದ ಕಂಬುಗ್ರೀವಾದ್ಯಾಕಾರದಿಂದ ಘಟವು ಮೃತ್ತಿಗಿಂತಲೂ ಭಿನ್ನವಾಗಿರುವುದೆನ್ನಲೂ ಆಗಲಾರದು. ಮತ್ತು ಘಟಕ್ಕೆ ಮೃತ್ತಿನಲ್ಲಿಯೇ ಸ್ಥಿತಿಯು ಕಲ್ಪಿತವಾಗಿರುವುದರಿಂದ ಸ್ಥಿತಿಭೇದದಿಂದ ಘಟವು ಮೃದ್ಭಿನ್ನ ವಾಗಿರುವುದೆಂತಲೂ ಹೇಳುವುದು ಅಸಾಧ್ಯವು. ಈ ಪ್ರಕಾರವಾಗಿ ಮೃದ್ಘಟಗಳಿಗೆ ಅಭೇದವಿರುವಂತೆ ಜಗದ್ಬ್ರಹ್ಮಗಳಿಗೂ ಭೇದವಿಲ್ಲವಾದುದರಿಂದ ಪ್ರಪಂಚವು ಬ್ರಹ್ಮಕ್ಕಿಂತಲೂ ಭಿನ್ನವಾಗಿರುವುದೆಂದು ಹೇಳಲಾಗುವುದಿಲ್ಲವು. ಆದುದರಿಂದಲೇ ಪೂರ್ವಜನ್ಮ ಸಂಚಿತ ಸುಕೃತವಿಶೇಷಗಳಿಂದ ಕಡೆಯಜನ್ಮದಲ್ಲಿ ಸರ್ವಂ ವಾಸುದೇವಾತ್ಮಕವೆಂಬ ಜ್ಞಾನವುಂಟಾಗುವುದು. ಅಂತಹ ಜ್ಞಾನಪ್ರಾಪ್ತಿಯಿಂದಲೇ ಮುಕ್ತನಾಗುವನು. ॥೧೯॥

(ರಾ॥ ಭಾ) ಈ ಪ್ರಕಾರವಾಗಿ ಪರಮ ಪುರುಷನಿಗೆ ಈ ಜೀವನು ಯಾವಾಗಲೂ ಶೇಷಭೂತನಾಗಿಯೇ ಇರುವನೆಂಬ ಶೇಷತ್ವೈಕರಸಾತ್ಮಸ್ವರೂಪ ವಿಷಯವಾದ ಯಾಥಾತ್ಮ್ಯಜ್ಞಾನ ಪೂರ್ವಕವಾಗಿ ಮಾಡುವ ಉಪಾಸನಾಂಗಭೂತವಾದ ಈ ಪ್ರಪದನವು ಅಲ್ಪ ಸಂಖ್ಯೆಗಳಿಂದ ಎಣಿಸಲ್ಪಡುವ ಪುಣ್ಯಜನ್ಮಗಳ ಫಲವಲ್ಲವು, ಮತ್ತೇನೆಂದರೆ! ಅನೇಕ ಪುಣ್ಯಜನ್ಮಗಳ ಕಡೆಯಲ್ಲಿ, ಜ್ಞಾನವಾನ್-ನಾನು ವಾಸುದೇವನೊಬ್ಬನಿಗೇ ಶೇಷಭೂತನು, ನನ್ನ ಸ್ವರೂಪಸ್ಥಿತಿ ಪ್ರವೃತ್ತಿಗಳು ಆ ಪರಮಪುರುಷನ ಅಧೀನಗಳಾಗಿರುವುವು, ಅವನು ಅಸಂಖ್ಯೇಯಗಳಾದ ಕಲ್ಯಾಣಗುಣಗಳಿಂದ ಸರ್ವೋತ್ತಮನೆಂಬ ಜ್ಞಾನವುಳ್ಳವನಾಗಿ, ವಾಸುದೇವಸ್ಸರ್ವಮಿತಿ-ಆ ವಾಸುದೇವನೇ ನನಗೆ ಪ್ರಾಪ್ಯನು ಪ್ರಾಪ

ಕನು, ಇನ್ನೂ ನನ್ನ ಮನೋರಥ ವಿಷಯವಾದ ಸಮಸ್ತವಾಗಿರುವ ಇಷ್ಟಫಲವರ್ಗವೂ ಅವನೇ ಎಂಬದಾಗಿ, ಮಾಂ ಪ್ರಪದ್ಯತೇ- ಉಪಾಸನಾಂಗಭೂತವಾದ ಪ್ರಪತ್ತಿಯನ್ನು ಮಾಡುತ್ತಾನೋ, ಸಮಹಾತ್ಮಾಸುದುರ್ಲಭಃ - ಅಂಥಾ ಮಹಾಮನಸ್ವಿಯಾದ ಉತ್ತಮಾಧಿಕಾರಿಯು ಅತ್ಯಂತ ದುರ್ಲಭನಾಗಿರುವನು. ಯದ್ಯಪಿ ಸಾನುಕೂಲ ದುರ್ಲಭನಾದರೂ ಅಂತಹ ಉತ್ತಮಾಧಿಕಾರಿಯಂತೆ ಅತ್ಯಂತ ದುರ್ಲಭನಲ್ಲವೆಂದು ತಾತ್ಪರ್ಯವು. “ಪ್ರಿಯೋಹಿಜ್ಞಾನಿನೋತ್ಯರ್ಥಂ- ಆಸ್ಥಿತಸ್ಸಹಿಯುಕ್ತಾತ್ಮಾ ಮಾಮೇವಾನುತ್ತಮಾಂಗತಿಂ,, ಎಂಬುವುದಾಗಿ ಉಪಕ್ರಮವಂ ಮಾಡಿರುವುದರಿಂದ ವಾಸುದೇವಸ್ಸರ್ವಂ, ಎಂಬುವುದಕ್ಕೆ ಇದೇಅರ್ಥವು. ಜ್ಞಾನವಾನ್ ಎಂಬದಾಗಿ ಇಲ್ಲಿ ಪ್ರಸ್ತುತನಾದ ಉತ್ತಮಾಧಿಕಾರಿಯನ್ನೇಹೇಳಿರುವುದು. ಪೂರ್ವದಲ್ಲಿ ಹೇಳಿರುವ ಜ್ಞಾನಿಯೂ ಇವನೆ “ಭೂಮಿರಾಪಃ ,,ಎಂದುಪಕ್ರಮಿಸಿ“ಅಹಂಕಾರಇತೀಯಂಮೇ ಭಿನ್ನಾಪ್ರಕೃತಿರಷ್ಟಧಾ ॥ ಅಪರೇಯಮಿತಸ್ತ್ವನ್ಯಾಂ ಪ್ರಕೃತಿಂ ವಿದ್ಧಿಮೇಪರಾಂ । ಜೀವಭೂತಾಂ ಮಹಾಬಾಹೋ ಯಯೇದಂಧಾರ್ಯತೇಜಗತ್” ಎಂಬ ಶ್ಲೋಕ ಪರ್ಯಂತವಾಗಿ ಚೇತನವು ಅಚೇತನವು ಎಂಬದ್ವಿವಿಧ ಪ್ರಕೃತಿಗಳೂಪರಮಪುರುಷನಿಗೆಶೇಷಭೂತವಾಗಿರುವುದೆಂದು ಹೇಳಲ್ಪಟ್ಟಿರುತ್ತದೆ.ಯಷ್ಟೆ?ಮತ್ತು “ಅಹಂಕೃತ್ಸ್ನಸ್ಯಜಗತಃ ಪ್ರಭವಃಪ್ರಲಯಸ್ತಥಾ । ಮತ್ತಃಪರತರಂನಾನ್ಯತ್ಕಿಂಚಿದಸ್ತಿಧನಂಜಯ” ಎಂದುಪಕ್ರಮಿಸಿ “ಯೇಚೈವಸಾತ್ವಿಕಾಭಾವಾ ರಾಜಸಾಸ್ತಾಮಸಾಶ್ಚಯೇ। ಮತ್ತಏವೇತಿತಾನ್ವಿದ್ಧಿ ನತ್ವಹಂತೇಷುತೇಮಯಿ” ಎಂಬದಾಗಿ ಕಾರ್ಯಕಾರಣ ರೂಪದಿಂದ ದ್ವಿವಿಧವಾಗಿರುವ ಪ್ರಕೃತಿಗಳ ಸ್ವರೂಪ ಸ್ಥಿತಿ ಪ್ರವೃತ್ತಿಗಳು ಪರಮ ಪುರುಷಾಧೀನಗಳಾಗಿರುವುವೆಂತಲೂ. ಪರಮಪುರುಷನು ಸರ್ವಪ್ರಕಾರದಿಂದಲೂ ಸರ್ವಸ್ಮಾತ್ಪರನೆಂತಲೂ ಹೇಳಲ್ಪಟ್ಟಿತು ಆದುದರಿಂದ ಈ ರೀತಿಯಾಗಿ ಪರಮ ಪುರುಷನಂ ತಿಳಿದವನೆ ಜ್ಞಾನಿ ಎಂಬುವುದಾಗಿ ಹೇಳಿತು. ॥೧೯॥

ಶ್ಲೋ॥ ಕಾಮೈಸ್ತೈಸ್ತೈರ್ಹೃತಜ್ಞಾನಾಃಪ್ರಪದ್ಯಂತೇ
ನ್ಯದೇವತಾಃ । ತಂತಂನಿಯಮಮಾಸ್ಥಾಯ ಪ್ರ
ಕೃತ್ಯಾನಿಯತಾಸ್ಸ್ವಯಾ ॥ ॥೨೦॥

ಮ॥ ಕಾಮೈಃ- ತೈಃ- ತೈಃ- ಹೃತಜ್ಞಾನಾಃ- ಪ್ರಪದ್ಯಂತೇ- ಅನ್ಯದೇವತಾಃ। ತಂ-ತಂ- ನಿಯಮಂ- ಆಸ್ಥಾಯ- ಪ್ರಕೃತ್ಯಾ-ನಿಯತಾಃ- ಸ್ವಯಾ ॥

(ಅ॥ ರಾ॥ ಭಾ॥) ಇಲ್ಲಿ ಮೊದಲು “ಸರ್ವೇಲೌಕಿಕಾಃಪುರುಷಾಃ,, ಎಂಬದಾಗಿ ಸೇರಿಸಿಕೊಳ್ಳಬೇಕು. ಸಮಸ್ತರಾದ ಲೌಕಿಕ ಪುರುಷರೂ, ಸ್ವಯಾ ಪ್ರಕೃತ್ಯಾ-ಸ್ವಕೀಯವಾದ ಸತ್ವಾದಿ ಗುಣಮಯವಾಗಿರುವ ವಾಸನೆಯಿಂದ, ನಿಯತಾಃ- ನಿತ್ಯವೂ ಕಟ್ಟಲ್ಪಟ್ಟವರಾಗಿ, ತೈಸ್ತೈಃ- ತಮ್ಮ ತಮ್ಮ ಗಳ ವಾಸನಾನುರೂಪಗಳಾಗಿಯೂ, ಗುಣಮಯಗಳಾಗಿಯೂ ಇರುವ, ಕಾಮೈಃ- ಇಚ್ಛಾ ವಿಷಯವಾದ ವಸ್ತುಗಳಿಂದ, ಹೃತಜ್ಞಾನಾಃ- ಅಪಹರಿಸಲ್ಪಟ್ಟ ನನ್ನ ಸ್ವರೂಪ ವಿಷಯವಾದ ಜ್ಞಾನವುಳ್ಳವರಾಗಿ, (ಆಯಾಕ್ಷುದ್ರಗಳಾದ ಕಾಮಸಿದ್ಧಿಗಳಿಗಾಗಿ,) ಅನ್ಯದೇವತಾಃ - ನನಗಿಂತಲೂ ಭಿನ್ನರಾಗಿರುವ ಕೇವಲರಾದ ಇಂದ್ರಾದಿ ದೇವತೆಗಳನ್ನು, (ಶಂ) ತನ್ನ ಆತ್ಮಸ್ವರೂಪನಾದ ಬ್ರಹ್ಮವನ್ನು ಬಿಟ್ಟು ಇತರ ದೇವತೆಗಳನ್ನು. (ಶ್ರೀ) ಭೂತಪ್ರೇತ ಪಿಶಾಚಾದಿ ಕ್ಷುದ್ರದೇವತೆಗಳನ್ನು, ತಂತಂ ನಿಯಮಂ ಆಸ್ಥಾಯ-ಆಯಾಯ ದೇವತಾ ಪ್ರೀತಿ ಹೇತುಗಳಾದ ನಿಯಮಗಳನ್ನವಲಂಬಿಸಿಕೊಂಡು, ಪ್ರಪದ್ಯಂತೇ-ಆಯಾ ದೇವತೆಗಳನ್ನಾಶ್ರಯಿಸಿಕೊಂಡು ಪೂಜಿಸುತ್ತಾರೆ. ಅನ್ಯದೇವತಾಃ ಎಂಬುವ ಸ್ಥಾನದಲ್ಲಿ ಕೇವಲ ಇಂದ್ರಾದಿಗಳನ್ನೆಂದರೆ - ಇಂದ್ರಾದಿಗಳನ್ನು ಭಗವಚ್ಛರೀರವೆಂದು ತಿಳಿಯದೆ ಸ್ವಾತಂತ್ರ್ಯ ಭಾವದಿಂದ ಇಂದ್ರಾದಿಗಳಂ ಪೂಜಿಸುತ್ತಾರೆಂದರ್ಥವು. ... ... .... ॥೨೦॥

(ಶಂ॥ ಭಾ॥) ಆದರೆ ಸರ್ವರಿಗೂ ಪ್ರತ್ಯಗಾತ್ಮ ರೂಪನಾದ ಭಗವಂತನಲ್ಲಿ ‘ಸರ್ವವೂ ವಾಸುದೇವ ರೂಪವೇ’ ಎಂಬ ಜ್ಞಾನವುಂಟಾಗದೇ ಹೋಗಲು ಕಾರಣವೇನೆಂದರೆ ಅದು ಹೇಳಲ್ಪಡುವುದು ಪುತ್ರಪಶುಸ್ವರ್ಗಾದಿ ವಿಷಯಗಳಾದ ಆಯಾ ಇಚ್ಛಾವಿಶೇಷಗಳಿಂದ ಅಪಹರಿಸಲ್ಪಟ್ಟ ವಿವೇಕ ವಿಜ್ಞಾನವುಳ್ಳವರಾಗಿ ಆಯಾ ದೇವತಾರಾಧನ ಪ್ರತಿಪಾದಕಗಳಾದ ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವ ಜಪಹೋಮೋಪವಾಸಾದಿ ನಿಯಮಗಳನ್ನವಲಂಬಿಸಿ ಇತರ ದೇವತೆಗಳಲ್ಲಿ ನಿಷ್ಠೆಯುಳ್ಳವರಾಗಿ ಪ್ರತ್ಯಗಾತ್ಮ ಸ್ವರೂಪನಾದ ಭಗವಂತನ ಪ್ರಾಪ್ತಿಗೆ ಕಾರಣಗಳಾದ ನಿಯಮಗಳನ್ನಾಶ್ರಯಿಸದೆ ತಮ್ಮ ತಮ್ಮಗಳ ಜನ್ಮಾಂತರಗಳಲ್ಲಿ ಸಂಪಾದಿಸಲ್ಪಟ್ಟ ಸಂಸ್ಕಾರವಿಶೇಷಗಳಿಂದ ಪ್ರೇರಿತರಾಗಿ ಇತರ ದೇವತಾರಾಧನನಿಯಮಗಳನ್ನೇ ಅವಲಂಬಿಸುತ್ತಾರೆ. ॥೨೦॥

(ಶ್ರೀ) ಯಾವ ಸತ್ಪುರುಷರಾದರೆ ತಮ್ಮತಮ್ಮಗಳಿಗೆ ಅಪೇಕ್ಷಿತವಾಗಿರುವ ಕಾಮ ಪ್ರಾಪ್ತಿಗಾಗಿ ಸರ್ವೇಶ್ವರನಾದ ನನ್ನನ್ನೇ ಸೇವಿ

ಸುತ್ತಾರೋ ಅಂತವರೂ ತಮ್ಮಗಳ ಅಭೀಪ್ಸಿತಗಳನ್ನು ಹೊಂದಿ ಕ್ರಮವಾಗಿ ಮುಕ್ತರಾಗುವ್ರು ರೆಂದಿದುವರೆಗೂಹೇಳಿ ಯಾರಾದರೆ ಅಧಿಕವಾಗಿಸತ್ವರಜಸ್ತಮೊ ಗುಣಗಳುಳ್ಳವರಾಗಿಯೂ ಕಾಮನಾಭಿ ಭೂತರಾಗಿಯೂ ಇರುವ ನೀಚದೇವತೆಗಳನ್ನು ಸೇವಿಸುತ್ತಾರೋ ಅಂತವರು ಸಂಸಾರದೂಪದುಃಖವನ್ನು ಹೊಂದುವ್ರುರೆಂಬದಾಗಿ ಈ ಶ್ಲೋಕದಿಂದ ಹೇಳುತ್ತಾರೆ. ... .. ... ॥೨೦॥

ಶ್ಲೋ॥ ಯೋಯೋಯಾಂಯಾಂತನುಂಭಕ್ತ ಶ್ಶ್ರದ್ಧ
ಯಾರ್ಚಿತುಮಿಚ್ಛತಿ । ತಸ್ಯತಸ್ಯಾ ಚಲಾಂಶ್ರದ್ಧಾಂ
ತಾಮೇವವಿದಧಾಮ್ಯಹಂ ॥ ... ॥೨೧॥

ಪ॥ ಯೊಯಃ - ಯಾಂಯಾಂ — ತನುಂ-ಭಕ್ತಃ - ಶ್ರದ್ಧಯಾ - ಅರ್ಚಿತುಂ-ಇಚ್ಛತಿ। ತಸ್ಯ- ತಸ್ಯ- ಅಚಲಾಂ- ಶ್ರದ್ಧಾಂ- ತಾಂ- ಏವ- ವಿದಧಾಮಿ- ಅಹಂ ॥

ಅ॥ ಯೋಯೋ ಭಕ್ತಃ- ಯಾವಯಾವ ಭಕ್ತನು, ಯಾಂಯಾಂ ತನುಂ- ಯಾವಯಾವ ದೇವತಾ ಶರೀರವನ್ನು, ಶ್ರದ್ಧಯಾ- ವಿಶ್ವಾಸದಿಂದ, ಅರ್ಚಿತುಂ- ಪೂಜಿಸುವ್ರುದಕ್ಕಾಗಿ, ಇಚ್ಛತಿ- ಇಚ್ಛೆಸುವನೊ, ತಸ್ಯತಸ್ಯ- ಆಯಾಭಕ್ತನ, ತಾಂಶ್ರದ್ಧಾಂ- ಆ ವಿಶ್ವಾಸವನ್ನು, ಅಹಂ- ನಾನು, ಅಚಲಾಮೇವ - ಸ್ಥಿರವಾದದನ್ನಾಗಿಯೆ, ವಿದಧಾಮಿ- ಮಾಡುವೆನು. ... ... ॥೨೧॥

(ಶಂ॥ ಭಾ॥) ಇತರ ದೇವತೆಗಳನ್ನು ಸೇವಿಸಿದರೂ ಆಯಾ ದೇವತೆಗಳ ಅನುಗ್ರಹದಿಂದ ಕಾಮುಕರಿಗೂ ಸರ್ವೇಶ್ವರನಾಗಿಯೂ ಸರ್ವಾತ್ಮಕನಾಗಿಯೂ ಇರುವ ವಾಸುದೇವನಲ್ಲಿ ಕ್ರಮಕ್ರಮವಾಗಿ ಭಕ್ತಿಯುಂಟಾಗಲಾರದೊ ? ಎಂಬ ಅರ್ಜುನ ಪ್ರಶ್ನೆಯಂ ತಾನಾಗಿ ಚಿಂತಿಸಿ ಸಮಾಧಾನವಂ ಹೇಳುತ್ತಾರೆ. ಯಾವಯಾವ ದೇವತಾ ವಿಗ್ರಹವನ್ನು ವಿಶ್ವಾಸದಿಂದ ಅಥವಾ ಭಕ್ತಿಯಿಂದ ಪೂಜಿಸಲಿಚ್ಛೈಸುತ್ತಾರೊ ಆಯಾ ಕಾಮಗಳುಳ್ಳವರಿಗೆ ನಾನು ಆಯಾ ಅಪೇಕ್ಷೆಗಳನ್ನು ಸಫಲವನ್ನಾಗಿ ಮಾಡತಕ್ಕ ದೇವತೆಯಲ್ಲಿ ಜನ್ಮಾಂತರ ಸಂಸ್ಕಾರಾಯತ್ತವಾದ ಭಕ್ತಿಯನ್ನೇ ಸ್ಥಿರವಾಗಿರುವಂತೆ ಮಾಡುವೆನು. ದೇವತಾಂತರ ಸೇವಾಪರರಿಗೂ ಫಲಪ್ರಾಪ್ತಿಯೇನೋ ಭಗವದ್ವಾಸುದೇವಾನುಗ್ರಹದಿಂದಲೇ ಎಂಬದಾಗಿ ಇದರಿಂದ ತಿಳಿಸಲ್ಪಟ್ಟಿತು. ॥೨೧॥

(ರಾ॥ ಭಾ॥) ಈಪ್ರಕಾರವಾಗಿ ಆಭಕ್ತರು ಪೂಜಿಸುವ ದೇವ

ತ್ರಾಂತರಗಳನ್ನು ನಮಗೆ ಶರೀರವೆಂಬದಾಗಿ ("ಯಾವನು ಆದಿತ್ಯನಲ್ಲಿ ರುವನೊ, ಯಾವ ಅಂತರಾತ್ಮನನ್ನು ಸೂರ್‍ಯನು ಕೂಡ ತಿಳಿಯಲಾರನೊ, ಯಾವ ಸೂರ್‍ಯನು ಪರಮಾತ್ಮನಿಗೆ ಶರೀರವೊ,,) ಶ್ರುತಿಯು ಪ್ರತಿ ಪಾದಿಸುತ್ತಿದ್ದರೂ ಅದಂ ತಿಳಿಯಲಾರದೆ ಯಾವಯಾವಭಕ್ತನು ನಮ್ಮ ಶರೀರವಾದ ಯಾವಯಾವ ದೇವತೆಗಳನ್ನು ಶ್ರದ್ಧೆಯಿಂ ದರ್ಚಿಸಲು ಪ್ರಯತ್ನಿಸುವನೊ ಅವನು ನಮ್ಮನ್ನು ತಿಳಿಯದಿದ್ದರೂ ಯಥಾವ ತ್ತಾಗಿ ನಮ್ಮ ಶರೀರವನ್ನು ತಾನೆ ಇವನು ಪೂಜಿಸುತ್ತಾನೆಂದು ನಾವು ತಿಳಿದು ಅವನವನಿಗೆ ಆಯಾವಿಧಗಳಾದ ಶ್ರದ್ಧೆಯನ್ನು ದೃಢಪಡಿ ಸುವೆವು. ... ... ॥೨೧॥

ಶ್ಲೋ॥ ಸತಯಾಶ್ರದ್ಧಯಾಯುಕ್ತ ಸ್ತಸ್ಯಾರಾಧನ ಮೀಹತೇ। ಲಭತೇಚತತಃಕಾಮಾ ನ್ಮಯೈವವಿಹಿತಾನ್ ಹಿತಾನ್॥ ... ... ॥೨೨॥

ಪ॥ ಸಃ- ತಯಾ- ಶ್ರದ್ಧಯಾ- ಯುಕ್ತಃ- ತಸ್ಯ- ಆರಾಧನಂ- ಈಹತೇ, ಲಭತೇ- ಚ- ತತಃ- ಕಾಮಾನ್- ಮಯಾ- ಏವ- ವಿಹಿತಾನ್- ಹಿತಾನ್॥

ಅ॥ ಸಃ- ಮೇಲೆ ವಿವರಿಸಲ್ಪಟ್ಟ ಭಕ್ತನು, ತಯಾಶ್ರದ್ಧಯಾ- ಸ್ಥಿರಪಡಿಸಲ್ಪಟ್ಟ- ಅವಿಶ್ವಾಸದೊಡನೆ, ಯುಕ್ತಃ- ಕೂಡಿದವನಾಗಿ, ತಸ್ಯ ಆರಾಧನಂ- ಆ ದೇವತೆಯ ಆರಾಧನ ವನ್ನು, ಈಹತೇ- ಮಾಡಲಿಚ್ಛಿಸುತ್ತಾನೆ ಮಯೈವ- ನನ್ನಿಂದಲೆ, (ಸಃ॥ ವಿ) ತತ್ತ ದ್ದೇವತಾಂತರ್ಯಾಮಿಯಾದ ನನ್ನಿಂದಲೇ. ವಿಹಿತಾನ್- ಪ್ರತಿಪಾದಿಸಲ್ಪಟ, (ರಾ) ಕೊಡ ಲ್ಪಟ್ಟ, ಕಾಮಾನ್- ಅಪೇಕ್ಷ್ಯವಾದ ವಸ್ತುಗಳನ್ನು, ತತಃ- ಆ ದೇವತೆಯಿಂದಲೆ, ಲಭತೇಚ- ಹೊಂದುತ್ತಾನಲ್ಲದೆ. ... ... ॥೨೨॥

(ಶಂ॥ ಭಾ॥) ಆಯಾಭಕ್ತರಿಗೆ ಆರಾಧ್ಯವಾದ ದೇವತೆಯೆ ಅವರವ ರಿಗೆ ಫಲವನ್ನು ಕೊಡುತಲಿರುವಲ್ಲಿ ಈಶ್ವರನಾದ ನನ್ನಿಂದ ಯೇನುಪ್ರ ಯೋಜನವೆಂಬ ಅರ್ಜುನನ ಶಂಕಾ ಸಮಾಧಾನಾರ್ಥವಾಗಿ "ಸರ್ವಜ್ಞ ನಾದ ಪರಮಾತ್ಮನೊಬ್ಬನೆ ಕರ್ಮಫಲಗಳನ್ನು ಸ್ವಾನುಗ್ರಹ ನಿಮಿತ್ತಗ ಳಾದ ಕಾಮುಗಳನ್ನೂ ಕೊಡುತ್ತಾನೆ,, ಎಂಬ ಶ್ರುತ್ಯುಕ್ತಪ್ರಕಾರ ದಿಂದ ಸರ್ವಜ್ಞನೂ ಸರ್ವಕರ್ಮಫಲ ವಿಭಾಗಜ್ಞನಾಗಿರುವವನೂ ಆದನಾನು ಆಯಾ ದೇವತೆಗಳಿಗೆ ಅಧಿಷ್ಠಾನಾಗಿರುವುದರಿಂದ ಈಶ್ವರನಾದ ನಾನೆ ಫಲಪ್ರದನೆಂಬದಾಗಿ ಹೇಳುತ್ತಾನೆ. ಈಶ್ಲೋಕದಲ್ಲಿ 'ಹಿತಾನ್, ಎಂಬುವ ಸಂದರ್ಭದಲ್ಲಿ,ಹಿ_ತಾನ್- ಎಂಬದಾಗಿ ಪದವಿಭಾಗವಂ ಮಾಡ

ಬೇಕು. ಹಿ- ಯಾವಕಾರಣ ದೆಶೆಯಿಂದ ಪರಮಾತ್ಮನಿಂದ ಅಪೇಕ್ಷೆಗಳುಂಟುಮಾಡಲ್ಪಟ್ಟವೋ ಆಕಾರಣದಿಂದ, ತಾರ್- ಆಪ್ರಕಾರವಾಗಿ ಭಗವಂತನಿಂದುಂಟುಮಾಡಲ್ಪಟ್ಟ ಅಪೇಕ್ಷೆಗಳನ್ನು ಹೊಂದುತ್ತಾರೆಂದರ್ಥವು. ಈ ಪ್ರಕಾರವಾಗಿ ಪದವಿಭಾಗವಂಮಾಡದೆ, ಹಿತಾರ್, ಎಂಬುವುದಾಗಿ ಒಂದೇಪದವಾಗಿ ಮಾಡಿ ಹಿತಗಳೆಂದರೆ ಕಾಮಗಳೆಂಬದಾಗಿ ಅರ್ಥ ವರ್ಣನವಂಮಾಡುವುದು ಯುಕ್ತವೋ ? ಎಂಬದಾಗಿ ಸಂದೇಹಿಸವೆ ಹಿತಗಳೆಂದರೆ ಕಾಮಗಳಲ್ಲವಾದರೂ ಅದು ಔಪಚಾರಿಕ ಪ್ರಯೋಗವೆಂದರಿಯಬೇಕು. ಅದಕ್ಕೆ ಕಾರಣವೇನೆಂದರೆ! ಕಾಮಗಳು ಲೋಕದಲ್ಲಿ ಯಾರಿಗೂ ಹಿತಗಳಾಗ ಲಾಭವಾದುದರಿಂದಲೂ ಹಿತಗಳಂತೆಮಾತ್ರವೆತೋರುವುದರಿಂದಲೂ ಗೌಣಪ್ರಯೋಗವೆಂದರಿಯಬೇಕು.॥೨೨॥

(ರಾ॥ ಭಾ॥ ಈಪ್ರಕಾರವಾಗಿ ನಮ್ಮಿಂದ ಪ್ರಸಾದಿಸಲ್ಪಟ್ಟ ನಿರ್ವಿಘ್ನವಾದ ಶ್ರದ್ಧೆಯನ್ನು ಹೊಂದಿಯೇ ಆಇಂದ್ರಾದಿ ದೇವತೆಗಳಆರಾಧನವಂಮಾಡಿ ನಮ್ಮಶರೀರವಾದ ಆದೇವತೆಯಲ್ಲಿ ತಾನಪೇಕ್ಷಿಸಿದಫಲವು ನಮ್ಮಗಳಿಂದ ಪ್ರಸಾದಿಸಲ್ಪಡಲು ಅದಂಹೊಂದಿ ಅನುಭವಿಸುವನು. ಆರಾಧಿಸುವ ಕಾಲದಲ್ಲಿ ಇಂದ್ರಾದಿಗಳು ನಮಗೆ ಶರೀರವೆಂಬುವ ವಿಷಯವನ್ನು ಅವನು ತಿಳಿಯದೇ ಹೋದರೂ ಯಥಾವತ್ತಾಗಿ ಅದು ನಮ್ಮ ಆರಾಧನವೇ ಆಗಿರುವುದರಿಂದ ಅವನ ಕೋರಿಕೆಯನ್ನು ನಾವೆ ನಿರ್ವಹಿಸುವೆವು. ... ॥೨೨॥

ಶ್ಲೋ॥ ಅಂತವತ್ತು ಫಲಂತೇಷಾಂ ತದ್ಭವತ್ಯಲ್ಪಮೇಧಸಾಂ । ದೇವಾನ್ದೇವಯಜೋಯಾಂತಿ ಮದ್ಭಕ್ತಾ ಯಾಂತಿಮಾಮಪಿ॥ ॥೨೩॥

ಪ ॥ ಅಂತವತ್- ತು- ಫಲಂ- ತೇಷಾಂ- ತತ್- ಭವತಿ- ಅಲ್ಪಮೇಧಸಾಂ। ದೇವಾನ್- ದೇವಯಜಃ- ಯಾಂತಿ- ಮದ್ಭಕ್ತಾಃ- ಯಾಂತಿ- ಮಾಂ- ಅಪಿ॥

ಅ॥ ದೇವಯಜಃ- ದೇವತೆಗಳನ್ನು ಪೂಜಿಸುವವರು, ದೇವಾನ್- ದೇವತೆಗಳನ್ನು, ಯಾಂತಿ- ಹೊಂದುತ್ತಾರೆ, ಅಲ್ಪಮೇಧಸಾಂ- ಅಲ್ಪಬುದ್ಧಿಯುಳ್ಳ, (ಗೀ॥ ವಿ॥ ಅಲ್ಪಫಲಗಳಲ್ಲಿ ಬುದ್ಧಿಯುಳ್ಳವರಾದ, (ರಾ॥) ಇಂದ್ರಾದಿದೇವತೆಗಳು ಪರಮಾತ್ಮನಿಗೆ ಶರೀರವೆಂಬ ಜ್ಞಾನವಿಲ್ಲದೆ ಆದೇವತೆಗಳನ್ನು ಪೂಜಿಸುವ ಜ್ಞಾನಶೂನ್ಯರಾದ, ತೇಷಾಂ- ಅವರುಗಳಿಗೆ, ತತ್ಫಲಂ- ಆದೇವತಾಪೂಜೆಯಿಂದುಂಟಾದ ಫಲವು, ಅಂತವತ್ತು- ನಾಶವುಳ್ಳ

ದ್ದಾಗಿಯೆ, (ಶ್ರೀ) ಆಕ್ಷುದ್ರದೇವತೆಗಳಿಗೇನೆ ನಾಶವಿರುವುದರಿಂದ ಆವರುಗಳಿಂದಕೊಡಲ್ಪಟ್ಟ ಫಲಕ್ಕೂ ನಾಶವಿರುವ ಸಂದರ್ಭವಂ ಹೇಳಬೇಕಾದದ್ದೇನೆಂದರ್ಥವು. (ರಾ, ಅಲ್ಪಕಾಲ ವರ್ತಿಯಾಗಿಯೂ ನಾಶಯುಕ್ತನಾಗಿಯೂ ಇರುವಂತಹದ್ದಾಗಿಯೆ, ಭವಂತಿ-ಆಗುತ್ತವೆ, ಮದ್ಭಕ್ತಾಅಪಿ - ನನ್ನಭಕ್ತರೊ ಎಂದರೆ, ಮಾಂ - ನನ್ನನ್ನು, ಯಾಂತಿ-ಹೊಂದುತ್ತಾರೆ. ... ... ||೨೩||

(ಶಂ|| ಭಾ||) ಎಲೈ ಶ್ರೀಕೃಷ್ಣನೆ ನೀನು ಇದುವರೆಗೂ ಹೇಳಿರುವ ವಾಕ್ಯಗಳಿಂದ ಕಾಮುಗಳು ಹಿತಗಳಲ್ಲವೆಂಬದಾಗಿ ಹೇಳಿದಂತೆ ತೋರುವುದು. ಆ ಕಾಮುಗಳು ಹಿತಗಳಲ್ಲದೇ ಹೋಗಲು ಕಾರಣವೇನೆಂದರೆ? ಆ ಕಾಮುಗಳು ಅವಿವೇಕದಿಂದ ಹುಟ್ಟುತ್ತವೆ. ಆದುದರಿಂದ ಹಿತಗಳಾಗಲಾರದೆಂದೀಶ್ಲೋಕದಿಂದಬೋಧಿಸುತ್ತಾನೆ.ಇತರ ದೇವತಾರಾಧಕರು ವಿನಾಶ್ಯವಾದ ಫಲಕ್ಕೆ ತಕ್ಕ ಸಾಧನಗಳನ್ನು ಅವಲಂಬಿಸಿದವರಾಗಿಯೂ (ಅಥವಾ) ನಾಶಯೋಗ್ಯವಾದ ಸಾಧನವನ್ನೆ ಅವಲಂಬಿಸಿದವರಾಗಿಯೂ ವಿವೇಕರಹಿತರಾಗಿಯೂ ಕಾಮುಗಳುಳ್ಳವರಾಗಿಯೂ ಆಗುತ್ತಾರೆ. ಕಾಮುಕ್ಕೆ ಅವಿವೇಕವು ಕಾರಣವಾಗಿರುವುದರಿಂದ ಅವಿವೇಕದಿಂದುಂಟಾದ ಕಾಮುಗಳು ನಶ್ವರವಾದ ಫಲಪ್ರದಾಯಕಗಳಾದುದರಿಂದ ಹಿತಕರಗಳಾಗಲಾರವು. ಆದರೆ ಕಾಮುಫಲಗಳು ನಶ್ವರಗಳಾದರೆ ಸಮಸ್ತರೂ ಇದನ್ನಪೇಕ್ಷಿಸಲು ಕಾರಣವೇನೆಂದರೆ ಇದಕ್ಕೆ ಪ್ರಜ್ಞಾಹೀನತ್ವವೇ ಕಾರಣವೆಂದು ಹೇಳುವೆವು. ಆದುದರಿಂದ ಭಗವದ್ಭಕ್ತಿ ಎಂಬುವುದು ಶಾಶ್ವತವಾದ ಮೋಕ್ಷಫಲಕ್ಕೆ ಸಾಧನವಾಗಿರುವುದರಿಂದಲೂ, ದೇವತಾಂತರ ಭಜನದಲ್ಲಿಯೂ ನಮ್ಮಗಳಸೇವೆಯಲ್ಲಿಯೂ ಭಕ್ತರುಗಳಿಗೆ ಆಯಾಸವೇನೂ ಸಮಾನವಾಗಿರುವುದರಿಂದಲೂ, ಲೋಕರು ಅನಂತಫಲ ಪ್ರದರಾದನಮ್ಮನ್ನು ಸೇವಿಸದೆ ಸ್ವರ್ಗಾದಿಫಲ ಪ್ರದಗಳಾದ ದೇವತಾಂತರಗಳ ಸೇವೆಯಂಮಾಡಿ ಕಷ್ಟಪಡುತ್ತಾರೆಯೆ ! ಅಯ್ಯೋಯೋನುಮಾಡಬಹುದೆಂದು ಶ್ರೀ ಕೃಷ್ಣಪರಮಾತ್ಮನು ತನ್ನ ಅನುಕೋಶವನ್ನು ತೋರಿಸುವನೆಂದರಿಯಬೇಕು. ||೨೩||

(ರಾ|| ಭಾ||) ದೇವಯಜಃ- ಕೇವಲೇಂದ್ರಾದಿಗಳ ನ್ನಾರಾಧಿಸುವವರು, ದೇವಾರ್ನಯಾಂತಿ- ಅಲ್ಪಭೋಗವುಳ್ಳವರಾಗಿಯೂ ಅಲ್ಪಕಾಲ ವರ್ತಿಗಳಾಗಿಯೂ ಇರುವ ಕೇವಲೇಂದ್ರಾದಿ ದೇವತೆಗಳನ್ನೇಯ್ಯೆ ಹೊಂದುತ್ತಾರೆ. (ಆದುದರಿಂದ) ಅಲ್ಪಮೇಧಸಾಂತೇಷಾಂ- ಅಲ್ಪಬು

ದ್ಧಿಯುಳ್ಳವರಾದ ಅಂತಹ ಕೇವಲ ದೇವತಾಂತರಭಕ್ತರಿಗೆ, ತತ್ಫಲಂ-ಅಪೇಕ್ಷಿತವಾದ ಆ ಫಲವು, ಅಂತವತ್ತು ಭವತಿ - ಅಲ್ಪವಾಗಿಯೂ ಅಸ್ಥಿರವಾಗಿಯೂ ಆಗುವುದು. ಮದ್ಭಕ್ತಾ ಅಪಿ- ಹಿಂದೆ ಹೇಳಿರುವಂತೆ ನಮ್ಮನ್ನೇ ಪ್ರಾಪ್ಯವಾಗಿಯೂ ಪ್ರಾಪಕವಾಗಿಯೂ ನಿಶ್ಚಯಿಸಿ ಉಪಾಸನವಮಾಡುವಂತವರು, ಮಾಂಯಾನ್ತಿ-ತತ್ತತ್ಕರ್ಮಗಳನ್ನೇ ನನ್ನ ಆರಾಧನವನ್ನಾಗಿ ತಿಳಿದು ಪರಿಮಿತವಾದ ಫಲಾಸಕ್ತಿಯಂಬಿಟ್ಟು ನಮ್ಮ ಪ್ರೀತಿಯನ್ನೇ ಪ್ರಯೋಜನವಾಗಿ ನಿಶ್ಚಯಿಸಿಕೊಂಡು ಉಪಾಸನ ಮಾಡಿದವರಾದುದರಿಂದ ಅನವಧಿಕಾತಿ ಶಯಾನಂದರೂಪರಾದ ನಮ್ಮನ್ನೇ ಹೊಂದುವರು. ಇಂದ್ರಾದಿಗಳು ಪರಿಚ್ಛಿನ್ನಭೋಗರಾಗಿಯೂ ಪರಿಮಿತ ಕಾಲವರ್ತಿಗಳಾಗಿಯೂ ಇರುವುದರಿಂದ ಅವರುಗಳ ಸಾಯುಜ್ಯವಂ ಹೊಂದಿದವರು ಆದೇವತೆಗಳೊಡನೆ ಕೂಡ ಜಾರಿಬೀಳುತ್ತಾರೆ. ನಮ್ಮ ಭಕ್ತರು ಸೂರ್ಯನಿಗಿಂತಲೂ ಅಗ್ನಿಗಿಂತಲೂ ಅತ್ಯಂತಪ್ರಕಾಶಮುಳ್ಳದ್ದಾಗಿಯೂ ಕಾಲಕೃತವಾದ ಪರಿಣಾಮಕ್ಕೆ ವಿಷಯವಾಗದೆ ಇರುವಂತಾದ್ದಾಗಿಯೂ ಇರುವ ಸ್ಥಾನವಿಶೇಷವನ್ನು ಅರ್ಚಿರಾದಿ ಮಾರ್ಗವಿಶೇಷದಿಂದ ಹೊಂದಿ(ನಮ್ಮಗಳಸಾಯುಜ್ಯವಂಹೊಂದಿ) ಯಾವಾಗಲೂ ಪುನರಾವೃತ್ತಿ ಪ್ರಸಂಗ ಶೂನ್ಯರಾಗಿರುವ ರೆಂದರಿಯಬೇಕು. ‹‹ಮಾಮುಪೇತ್ಯತು ಕೌಂತೇಯಪುನರ್ಜನ್ಮನವಿದ್ಯತೇ›› ಎಂಬದಾಗಿ ಮುಂದೆಯೂ (೮॥ ೧೫॥) ಹೇಳುತ್ತಾರೆ. ॥೨೩॥

(ತಾ॥ ಚಂ॥) ಕೇವಲ ಇಂದ್ರಾದಿಗಳನ್ನ ಆರಾಧಿಸುವಂತವರಿಗೆ ಆಯಾ ಭಕ್ತರುಗಳಿಗೆ ಅಪೇಕ್ಷಿತವಾದ ತತ್ತದ್ದೇವತಾಸಾಯುಜ್ಯಾದಿಕವನ್ನೇ ಪರಮಾತ್ಮನು ಕೊಡುತ್ತಾನೆ ಸಾಯುಜ್ಯವೆಂದರೆ ಸಮಾನಭೋಗನತ್ವವು. ಆದುದರಿಂದ ಇಂದ್ರಾದಿಭೋಗವು ಮಿತಿಯುಳ್ಳದ್ದಾಗಿಯೂ ಅಲ್ಪಕಾಲ ವರ್ತಿಯಾಗಿಯೂ ಆಗಿರುವುದರಿಂದಲೇ ಅವರನ್ನುಪಾಸನೆಮಾಡುವಂತವರ ಭೋಗವೂ ಅದಕ್ಕೆ ಸಮಾನವಾಗಿ ಅಲ್ಪವಾಗಿಯೂ ಅಲ್ಪಕಾಲವರ್ತಿಯಾಗಿಯೂ ಇರುವುದೆಂದು ಭಾವವು ॥೨೩॥

(ಗೀ॥ ವಿ॥) ದೇವಾನ್‍ದೇವಯಜೋಯಾಂತಿ- ವಿಷ್ಣುವಿನ ಸರ್ವೋತ್ಕೃಷ್ಟತ್ವವಂ ತಿಳಿದು ಬ್ರಹ್ಮಾದಿ ದೇವತೆಗಳನ್ನು ಪೂಜಿಸುವಂತವರು ಬ್ರಹ್ಮಾದಿಗಳನ್ನೇ ಹೊಂದುತ್ತಾರೆ, ಅವರು ನನ್ನನ್ನು ಹೊಂದೆ

ಲಾರರು; ಆದುದರಿಂದ ಅವರ ಫಲವು ನಾಶಯುಕ್ತವಾದದ್ದು. ಮದ್ಭ ಕ್ತಾ ಯಾಂತಿಮಾಮಪಿ- ನನ್ನ ಭಕ್ತರೋ ಎಂದರೆ ಆಯಾ ದೇವತೆಗ ಳನ್ನು ಕ್ರಮಕ್ರಮವಾಗಿ ಹೊಂದಿ ಕಡೆಯಲ್ಲಿ ನನ್ನನ್ನು ಹೊಂದು ತ್ತಾರೆಂದು ತಾತ್ಪರ್ಯವು. ಇವರ ಫಲವು ಅನಂತವಾಗಿರುವುದು. ಆದು ದರಿಂದ ನಮ್ಮ ಆರಾಧನವು ಪ್ರಾಧಾನ್ಯದಿಂದ ಮಾಡತಕ್ಕದ್ದಾಗಿರು ವುದು. ಅನ್ಯದೇವತಾರಾಧನವನ್ನು ಪರಿವಾರತ್ವೇನಮಾಡಬೇಕು ॥೨೩॥

ಶ್ಲೋ॥ ಅವ್ಯಕ್ತಂವ್ಯಕ್ತಿಮಾಪನ್ನಂಮನ್ಯಂತೇಮಾಮ
ಬುದ್ಧಯಃ । ಪರಂಭಾವಮಜಾನಂತೋ ಮಮಾವ್ಯಯ
ಮನುತ್ತಮಂ ॥ ॥೨೪॥

ಪ॥ ಅವ್ಯಕ್ತಂ- ವ್ಯಕ್ತಿಂ- ಆಪನ್ನಂ- ಮನ್ಯಂತೇ- ಮಾಂ- ಅಬುದ್ಧಯಃ । ಪರಂ- ಭಾವಂ- ಅಜಾನಂತಃ- ಮಮ- ಅವ್ಯಯಂ- ಅನುತ್ತಮಂ॥

ಅ॥ ಅಬುದ್ಧಯಃ- ಬುದ್ಧಿಹೀನರಾದ ತಾಮಸಜನರು, ಅವ್ಯಯಂ- ನಾಶರಹಿತವಾ ಗಿಯೂ, ಅನುತ್ತಮಂ- ಸರ್ವೋತ್ತಮವಾಗಿಯೂ ಇರುವ, ಮಮ- ನನ್ನ, ಪರಂ ಭಾವಂ - ಪರಮಾತ್ಮಸ್ವಭಾವವನ್ನು, ಅಜಾನಂತಃ - ತಿಳಿಯದವರಾಗಿ, ಅವ್ಯಕ್ತಂ- ಕಾಣಲ್ಪಡದೆಯಿರುವ, ಮಾಂ- ನನ್ನನ್ನು, ವ್ಯಕ್ತಿಮಾಪನ್ನಂ ಮನ್ಯಂತೇ- ಕರ್ಮಾಧೀನ ವಾದ ಜನ್ಮವಿಶೇಷದಿಂದ ಅಭಿವ್ಯಕ್ತಿಯಂ ಹೊಂದಿರುವವನಂತೆ ನೆನೆಸುತ್ತಾರೆ. ॥೨೪॥

(ರಾ ॥ ಭಾ॥) ಇತರರೂ, ಪ್ರಾಣಿಗಳೆಲ್ಲರೂ ಸುಖವಾಗಿ ನಮ್ಮ ನ್ನಾಶ್ರಯಿಸಬೇಕೆಂಬದಾಗಿ ನಾವುಮನುಷ್ಯಾದಿಗಳಲ್ಲಿ ಬಂದವತಾರವಂ ಮಾಡಿದರು ಅದಂ ಸಾರ್ಥಕಪಡಿಸಿಕೊಳ್ಳದೆ ಹೋಗುತ್ತಾರೆ. ನಾವು ಸರ್ವಕರ್ಮ ಸಮಾರಾಧ್ಯರಾಗಿಯೂ ಸರ್ವೇಶ್ವರರಾಗಿಯೂ ವಾಕ್ಕುಮ ನಸ್ಸು ಇವುಗಳಿಗೆ ಗೋಚರವಾಗದ ಸ್ವರೂಪ ಸ್ವಭಾವವುಳ್ಳವರಾಗಿ ಯೂ ಇದ್ದರೂ ಅಪಾರವಾದ ಕಾರುಣ್ಯದಿಂದಲೂ ಭಕ್ತರಲ್ಲಿರುವ ಪ್ರೀತ್ಯ ತಿಶಯದಿಂದಲೂ ಸಕಲರು ನಮ್ಮನ್ನಾಶ್ರಯಿಸಿ ಜೀವಿಸಬೇಕೆಂಬ ಅಭಿ ಪ್ರಾಯದಿಂದ ನಮ್ಮ ಸ್ವಭಾವವಂ ಬಿಡದೇನೆ ವಸುದೇವ ಗೃಹದಲ್ಲಿ ವಾಸುದೇವರಾಗಿ ಅವತರಿಸಿದೆವು. ಈರೀತಿಯಾಗಿ ವಿಕಾರವಿಲ್ಲದ ನಮ್ಮ ಪರತ್ವವಂ ಕಂಡರಿಯದೆ ನಾವು ಇದಕ್ಕೆ ಪೂರ್ವವು ಅಭಿವ್ಯಕ್ತವಾ ಗದೆ ಈಗ ಕರ್ಮವಶದಿಂದ ಹುಟ್ಟಿರುವ ರಾಜಕುಮಾರನಂತೆ ನಮ್ಮನ್ನು ಮೂಢರು ತಿಳಿದಿರುವರು, ಆದುದರಿಂದಲೇ ಇವರು ನಮ್ಮನ್ನಾಶ್ರ ಯಿಸುವುದಿಲ್ಲವು, ಪೂಜಿಸುವುದೂ ಇಲ್ಲವು. ॥೨೪॥

(ಶ್ರೀ) ಅವ್ಯಕ್ತಂ- ಪ್ರಪಂಚಾತೀತನಾಗಿಯೂ, ಮಾಂ- ಜಗದ್ರಕ್ಷಣಾರ್ಥವಾಗಿ ಲೀಲೆಯಿಂದ ಪ್ರಕಾಶಗೊಳಿಸುವ ನಾನಾರೂಪವುಳ್ಳವನಾಗಿಯೂ ಶುದ್ಧಸತ್ವಸ್ವರೂಪನಾಗಿಯೂ ಇರುವ ನನ್ನನ್ನು, ವ್ಯಕ್ತಿಮಾಪನ್ನಂ- ಕರ್ಮಾಯತ್ತವಾಗಿರುವ ಪಾಂಚಭೌತಿಕ ದೇಹವುಳ್ಳವನನ್ನಾಗಿಯೂ ದೇವತೆಗಳಿಗೆ ಸಮಾನನನ್ನಾಗಿಯೂ, ಮನ್ಯಂತೇ-ನೆನೆಸುತ್ತಾರೆ. ... ... ... ||೨೪||

(ಮ|| ಭಾ||) ಸಚ್ಚಿದಾನಂದ ದೇಹಯುಕ್ತನಾದ ನನ್ನನ್ನು ಅವಿವೇಕಿಗಳು ಗುಣತ್ರಯದಿಂದುಂಟಾದ ದೇಹದಿಂದ ಕೂಡಿರುವವನಂತೆ ತಿಳಿಯುತ್ತಾರೆ. ... ... ... ||೨೪||

(ಗೀ|| ವಿ||) ಅವ್ಯಕ್ತಂ- ಯಾರಿಗೂ ತಿಳಿಯದ ಮಹಾಮಹಿಮೆಯೊಡನೆ ಕೂಡಿರುವ, ಮಾಂ- ನನ್ನನ್ನು, ವ್ಯಕ್ತಿಮಾಪನ್ನಂ- ಈಗ ನಾನು ಪ್ರಕಾಶಪಡಿಸುವ ಅಲ್ಪವಾದ ಮಹಿಮಾಮಾತ್ರವುಳ್ಳವನನ್ನಾಗಿ, ಮನ್ಯಂತೇ- ನೆನೆಯುವರು. ... ... ||೨೪||

ಶ್ಲೋ|| ನಾಹಂಪ್ರಕಾಶಸ್ಸರ್ವಸ್ಯಯೋಗಮಾಯಾಸಮಾವೃತಃ | ಮೂಢೋಽಯಂನಾಭಿಜಾನಾತಿ ಲೋಕೋಮಾಮಜಮವ್ಯಯಂ || ||೨೫||

ಪ || ನ- ಅಹಂ- ಪ್ರಕಾಶಃ- ಸರ್ವಸ್ಯ - ಯೋಗಮಾಯಾಸಮಾವೃತಃ | ಮೂಢಃ- ಅಯಂ- ನ- ಅಭಿಜಾನಾತಿ-ಲೋಕಃ- ಮಾಂ- ಅಜಂ- ಅವ್ಯಯಂ ||

ಅ|| ಯೋಗಮಾಯಾ ಸಮಾವೃತ್ತಃ- (ಶ್ರೀ) ಮನುಷ್ಯನಿಂದ ಮಾಡಲ್ಪಡತಕ್ಕದ್ದಲ್ಲದ್ದಾಗಿಯೂ, ಈ ಪ್ರಕಾರವಾಗಿ ನಿರ್ಮಿಸಬಹುದೆಂದು ಮನುಷ್ಯನು ತನ್ನ ಮನಸ್ಸಿನಿಂದ ನೆನೆಯುವುದಕ್ಕೂ ಕೂಡ ಅಸಾಧ್ಯವಾಗಿಯೂ ಇರುವ ವಿಚಿತ್ರ ಸೃಷ್ಟ್ಯಾದಿ ಶಕ್ತಿಯುಕ್ತನಾದ, (ಶು) ಸತ್ವಾದಿಗುಣಗಳು ಒಂದರೊಂದು ಸೇರಿರುವುದೆಂಬ ಮಾಯೆಯಿಂದ ಮುಚ್ಚಲ್ಪಟ್ಟಿರುವ, (ಮ|| ಗೀ|| ವಿ) ಯೋಗಸಾಮರ್ಥ್ಯವೆಂಬ ಒಂದು ಉಪಾಯವು, ಅದರಿಂದಲೂ ಮಾಯೆಯಿಂದಲೂ ಸುತ್ತಲ್ಪಟ್ಟವನಾದ, (ರಾ||) ಜೀವಸಾಧಾರಣನಾದ ಮನುಷ್ಯಾಕೃತಿ ಸಂಬಂಧವೆಂಬ ಮಾಯೆಯಿಂದ ನನ್ನ ಸ್ವರೂಪವನ್ನು ಮರೆಮಾಡಿಕೊಂಡಿರುವ, ಅಹಂ- ನಾನು, ಸರ್ವಸ್ಯ- ಸಮಸ್ತರಿಗೂ, ಪ್ರಕಾಶೋನ- ಪ್ರತ್ಯಕ್ಷನಲ್ಲವು. (ಅತಏವ - ಆದುದರಿಂದಲೆ,) ಮೂಢಃ - ವಿವೇಕಶೂನ್ಯವಾದ, ಅಯಂಲೋಕಃ- ಈಪ್ರಪಂಚವು, ಮಾಂ- ನನ್ನನ್ನು, ಅಜಂ- ಉತ್ಪತ್ತಿ ಶೂನ್ಯನನ್ನಾಗಿಯೂ, ಅವ್ಯಯಂ- ನಾಶರಹಿತನನ್ನಾಗಿಯೂ, ನಾಭಿಜಾನಾತಿ- ತಿಳಿಯುವುದಿಲ್ಲವು. ||೨೫||

(ಶಂ॥ ಭಾ॥) ಅವಿವೇಕರೂಪವಾದ ಅಜ್ಞಾನವು ಭಗವತ್ಪ್ರಾಪ್ತಿಗೆ ವಿರುದ್ಧವೆಂಬುದಾಗಿ ಹಿಂದೆ ಹೇಳಿ ಈಗ ಅಂತಹ ಅಜ್ಞಾನವುಂಟಾಗಲು ಕಾರಣವೇನೆಂದು ಪ್ರಶ್ನೆಮಾಡಿದಂತೆ ತಾನಾಗಿ ಭಾವಿಸಿ ಅದಕ್ಕೆ ಅನಾದ್ಯಜ್ಞಾನವೇ ಕಾರಣವೆಂದು ನಿರೂಪಿಸುತ್ತಾನೆ. "ತ್ರಿಭಿರ್ಗುಣಮಯೈರ್ಭಾವೈಃ" (೭-೧೩॥) ಎಂಬುವ ಶ್ಲೋಕದಿಂದ ನಿರುಪಾಧಿಕೇಶ್ವರ ಸಾಕ್ಷಾತ್ಕಾರಜ್ಞಾನವು ಉದಯಿಸದೇ ಹೋಗುವುದಕ್ಕೆ ರಾಗದ್ವೇಷಾದಿಗಳು ಕಾರಣಗಳೆಂಬುದಾಗಿ ಹೇಳಿತು. ಇದರಿಂದೀಗ ಸೋಪಾಧಿಕೇಶ್ವರ ಸಾಕ್ಷಾತ್ಕಾರಜ್ಞಾನಾನುದಯಕ್ಕೂ ಅನಾದ್ಯಜ್ಞಾನವು ಕಾರಣವೆಂದು ಹೇಳಲ್ಪಡುವುದು. ಇಲ್ಲಿನ 'ಸರ್ವಸ್ಯ' ಎಂಬಪದಕ್ಕೆ ಭಗವದ್ಭಕ್ತಿವಿಹೀನರಾದ ಸಮಸ್ತರಿಗೂ ಎಂದರ್ಥವಂ ಮಾಡಬೇಕು. ಆದುದರಿಂದ ನನ್ನ ಭಕ್ತರಾದ ಕೆಲವರಿಗಲ್ಲದೆ ಸರ್ವರಿಗು ನಾನು ಪ್ರತ್ಯಕ್ಷನಲ್ಲವು. ಈಲೋಕವು ಅನಾದಿಯಾಗಿಯೂ ಅನಿರ್ವಾಚ್ಯವಾಗಿಯೂ ಇರುವ ಅಜ್ಞಾನದಿಂದ ಸಮಾವೃತವಾಗಿರುವುದರಿಂದ ಸಕಲ ಲೋಕಗಳಿಗೂ ಭಗವಂತನಾದ ಶ್ರೀಕೃಷ್ಣನ ವಿಷಯದಲ್ಲಿ ಮೂಢತ್ವವುಂಟಾಗಿರುವುದು. ಆಮೂಢತೆಯಿಂದಲೆ ಸರ್ವರಿಗು ಭಗವತ್ಪ್ರಾಪ್ತಿಯು ಇಲ್ಲದೆಹೋಯಿತು. ಆದುದರಿಂದಲೇ ಭಗವಂತನಾದ ಶ್ರೀಕೃಷ್ಣನನ್ನು ಜನ್ಮರಹಿತನನ್ನಾಗಿಯೂ, ನಾಶರಹಿತನನ್ನಾಗಿಯೂ, ಸರ್ವರೂ ತಿಳಿಯದೆ ಹೋದರು. ಸತ್ವರಜಸ್ತಮೋಗುಣಗಳ ಕೂಡಿರುವಿಕೆಯನ್ನು ಮಾಯೆಯೆಂದರಿಯಬೇಕು. ॥೨೫॥

(ರಾ॥ ಭಾ॥) ಆ ಪ್ರಕಾರವಾದರೆ ನೀವು ಸರ್ವರಲ್ಲಿಯೂ ಆ ರೀತಿಯಾಗಿ ಯಾವ ಕಾರಣದಿಂದ ಪ್ರಕಾಶಿಸುವುದಿಲ್ಲವೆಂದರೆ ಅದಕ್ಕುತ್ತರವಂ ಹೇಳುತ್ತಾರೆ. ನಾನು ಜೀವಸಾಧಾರಣವಾದ ಮನುಷ್ಯಾಕೃತಿಸಂಬಂಧವೆಂಬ ಮಾಯೆಯಿಂದ ನನ್ನ ಸ್ವರೂಪವನ್ನು ಮರೆಮಾಡಿಕೊಂಡಲ್ಲವೆ ಇರುವೆನು. ಆದುದರಿಂದ ಸರ್ವರಿಗೂ ಪ್ರಕಾಶನಲ್ಲವು. ಮನುಷ್ಯತ್ವಾಕಾರದರ್ಶನ ಮಾತ್ರದಿಂದಲೆ ನನ್ನನ್ನು ಸಾಧಾರಣ ಮನುಷ್ಯನನ್ನಾಗಿ ತಿಳಿದಿರುವ ಈ ಜನವು ವಾಯ್ವಿಂದ್ರಾದಿ ಸಕಲದೇವತೆಗಳನ್ನು ಅತಿಕ್ರಮಿಸಿರುವ ಚೇಷ್ಟಿತಗಳುಳ್ಳವನಾಗಿಯೂ ಸೂರ್ಯಾಗ್ನಿ ಪ್ರಭೃತಿಗಳನ್ನತಿಕ್ರಮಿಸಿರುವ ದಿವ್ಯತೇಜಶ್ಶಾಲಿಯಾಗಿಯೂ ಕ್ಷ

ಣ್ಣುಗಳಿಗೆ ಗೋಚರನಾಗಿದ್ದರೂ ಉತ್ಪತ್ತಿ ವಿನಾಶ ರಹಿತನಾಗಿಯೂ ಸಮಸ್ತ ಪ್ರಪಂಚಕ್ಕೂ ಕಾರಣನಾಗಿಯೂ ಇರುವ ಸರ್ವೇಶ್ವರನೇ ಮನುಷ್ಯಾಕೃತಿಯಾಗಿ ಬಂದವತರಿಸಿರುವನೆಂದು ನನ್ನನ್ನು ಅರಿಯಲಾರದು. ... .. ... ... ||೨೫||

ಶ್ಲೋ॥ ವೇದಾಹಂಸಮತೀತಾನಿ ವರ್ತಮಾನಾನಿಚಾ
ರ್ಜುನ| ಭವಿಷ್ಯಾಣಿಚಭೂತಾನಿಮಾಂತುವೇದನಕಶ್ಚನ॥

ಪ॥ ವೇದ-ಅಹಂ-ಸಮತೀತಾನಿ-ವರ್ತಮಾನಾನಿ-ಚ-ಅರ್ಜುನ। ಭವಿಷ್ಯಾಣಿ-ಚ-ಭೂತಾನಿ-ಮಾಂ-ತು-ವೇದ-ನ-ಕಶ್ಚನ ॥

ಅ॥ ಹೇ ಅರ್ಜುನ-ಎಲೈ ಅರ್ಜುನನೆ, ಸಮತೀತಾನಿ-ಹಿಂದೇ ಅತಿಕ್ರಮಿಸಿ ಹೋಗಿರುವುದಾಗಿಯೂ, ವರ್ತಮಾನಾನಿಚ-ಈಗ ಕಾಣಲ್ಪಡುವುದಾಗಿಯೂ, ಭವಿಷ್ಯಾಣಿಚ-ಮುಂದೇ ಉಂಟಾಗುವಂತವುಗಳಾಗಿಯೂ ಇರುವ, ಭೂತಾನಿಚ-ಪ್ರಾಣಿಗಳನ್ನೂ, ಅಹಂ-ವೇದ-ನಾನರಿಯುವೆನು, ಮಾಂತು-ನನ್ನನ್ನೋ, ಕಶ್ಚನನವೇದ-ಯಾವನೂ ತಿಳಿಯಲಾರನು. (ರಾ) ಲೋಕೋಪಕಾರಾರ್ಥವಾಗಿ ಕೃಷ್ಣಾವತಾರವಂ ಮಾಡಿರುವಂತೆ ತಿಳಿಯಲಿಲ್ಲವು. (ಮ) ತನ್ನ ಶಕ್ತಿಯಿಂದ ಅರಿಯಲಾರನು. ... ... ||೨೬||

(ಶಂ॥ ಭಾ॥) ಪೂರ್ವ ಶ್ಲೋಕದಲ್ಲಿ ಹೇಳಲ್ಪಟ್ಟ “ ಯೋಗಮಾಯಾಸಮಾವೃತಃ ,, ಎಂಬ ವಿಶೇಷಣಕ್ಕೆ ಶ್ರೀಕೃಷ್ಣನೊಡನೆ ಸಂಬಂಧವನ್ನುಂಟುಮಾಡಿ ಭಗವಂತನಾದ ನೀನು ಮಾಯೆಯಿಂದಾವೃತನಾಗಿದ್ದರೆ ಲೋಕರಂತೆ ನಿನಿಗೂ ಕೂಡ ಮಾಯೆಯು ಜ್ಞಾನಪ್ರತಿಬಂಧಕವಾಗುವುದಿಲ್ಲವೆ ? ಎಂಬ ಅರ್ಜುನ ಶಂಕಾನಿರಾಸಾರ್ಥವಾಗಿ ಯಾವ ಯೋಗಮಾಯೆಯಿಂದ ಆಕ್ರಾಂತವಾಗಿರುವ ಈ ಲೋಕವು ನನ್ನನ್ನು ತಿಳಿಯದೆ ಹೋಗುವುದೋ ಅಂತಹ ಯೋಗಮಾಯೆಯು, ಐಂದ್ರಜಾಲಕನ ಮಾಯೆಯು ಐಂದ್ರಜಾಲಕನ ಜ್ಞಾನಕ್ಕೆ ಪ್ರತಿಬಂಧಕವಾಗದೇ ಇರುವಂತೆ ನನ್ನ ಜ್ಞಾನಕ್ಕೆ ಪ್ರತಿಬಂಧಕ ವಾಗಲಾರದೆಂದೀ ಶ್ಲೋಕದಿಂದ ಅರ್ಜುನನಿಗುಪದೇಶಿಸುತ್ತಾನೆ. ಎಲೈ ಅರ್ಜುನನೇ ! ಇದುವರೆಗೂ ಅತೀತವಾಗಿಯೂ ಈಗ ಇರುತಲಿರುವುದಾಗಿಯೂ ಮುಂದೆ ಉಂಟಾಗತಕ್ಕದ್ದಾಗಿಯೂ ಇರುವ ಪ್ರಪಂಚಗಳನ್ನು, ಅಥವಾ ಪ್ರಾಣಿಗಳನ್ನು ನಾನು ತಿಳಿಯುವೆನು, ಆ ಪ್ರಾಣಿಗಳಲ್ಲಿ ನನ್ನ ಭಕ್ತರಲ್ಲದೆ ಇತರರು ಯಾರೂ ನನ್ನಂ ತಿಳಿಯಲಾರರು. ... ||೨೬||

(ರಾ॥ ಭಾ॥) ಎಲೈ ಅರ್ಜುನನೇ ! ನಾನು ಅತೀತವಾದ ಯಾವತ್ಕಲ್ಪಗಳಲ್ಲಿಯೂ ಹುಟ್ಟಿ ಪೂರ್ತಿಯನ್ನೈದಿದ ಪ್ರಾಣಿಗಳನ್ನೂ, ಈಗ ಈ ಕಲ್ಪದಲ್ಲುಂಟಾಗಿರುವ ಪ್ರಾಣಿಗಳನ್ನೂ, ಇನ್ನು ಮುಂದೆಬರುವಯಾವತ್ಕಲ್ಪಗಳಲ್ಲಿಯೂ ಉಂಟಾಗುವ ಪ್ರಾಣಿಗಳನ್ನೂ ತಿಳಿಯುವೆನು. ಈ ಪ್ರಕಾರವಾಗಿ ಅವತಾರವಂ ಮಾಡಿರುವ ಪುರುಷೋತ್ತಮನಾದ ನನ್ನನ್ನು ಕಾಲತ್ರಯ ವರ್ತಿಗಳಾದ ಅಸಂಖ್ಯಾತರಾದ ಪ್ರಾಣಿಗಳಲ್ಲಿ ಯಾರೂ ತಿಳಿದು ಆಶ್ರಯಿಸುವಂತವರಿಲ್ಲವು. ಆದುದರಿಂದ ಜ್ಞಾನಿಯಾದವನು ದುರ್ಲಭನೆ. ... ... ... ... ॥೨೬॥

ಶ್ಲೋ॥ ಇಚ್ಛಾದ್ವೇಷಸಮುತ್ಥೇನದ್ವಂದ್ವಮೋಹೇನಭಾರತ।
ಸರ್ವಭೂತಾನಿಸಂಮೋಹಂ ಸರ್ಗೇಯಾಂತಿಪರಂತಪ ॥

ಪ॥ಇಚ್ಛಾದ್ವೇಷ ಸಮುತ್ಥೇನ-ದ್ವಂದ್ವಮೋಹೇನ-ಭಾರತ, ಸರ್ವಭೂತಾನಿ-ಸಮ್ಮೋಹಂ-ಸರ್ಗೆ-ಯಾಂತಿ-ಪರಂತಪ ॥

ಅ॥ ಪರಂತಪ-ಶತ್ರುಸಂತಾಪಕಾರಿಯಾಗಿರುವ,ಭಾರತ-ಭರತವಂಶ್ಯನಾದ ಅರ್ಜುನನೆ, ಇಚ್ಛಾದ್ವೇಷ ಸಮುತ್ಥೇನ-ಇಚ್ಛೆಯಿಂದಲೂ ದ್ವೇಷದಿಂದಲೂ ಉಂಟಾಗಿರುವ, ದ್ವಂದ್ವಮೋಹೇನ-ಶೀತೋಷ್ಣಾದಿ ದ್ವಂದ್ವಗಳೆಂಬ ಮೋಹಕಾರಣಗಳಿಂದ, ಸರ್ವಭೂತಾನಿ-ಸಮಸ್ತ ಪ್ರಾಣಿಗಳು, ಸರ್ಗೆಸಮ್ಮೋಹಂಯಾಂತಿ-ಜನ್ಮಕಾಲದಲ್ಲಿಯೇ ವಿಪರೀತ ಬುದ್ಧಿಯನ್ನು ಹೊಂದುತ್ತಾರೆ. ... ... ... ॥೨೭॥

(ರಾ॥ ಭಾ॥) ಮೂಲಾಜ್ಞಾನಕ್ಕಿಂತಲೂ ವ್ಯತಿರಿಕ್ತವಾದ ಭಗವತ್ತತ್ವವಿಜ್ಞಾನ ಪ್ರತಿಬಂಧಕವನ್ನಿದರಿಂದುಪದೇಶಿಸುತ್ತಾನೆ. ಮತ್ತು ಎಲೈ ಶ್ರೀಕೃಷ್ಣಸ್ವಾಮಿಯೇ ! ಭಗವತ್ತತ್ವವಿಜ್ಞಾನಕ್ಕೆ ಪ್ರತಿಬಂಧಕವಾದ ಯಾವದರಿಂದ ಪ್ರತಿಬದ್ಧರಾಗಿ ಸರ್ವಪ್ರಾಣಿಗಳು ನಿನ್ನನ್ನರಿಯದೇ ಹೋಗುವರೊ ಅದಂಬೋಧಿಸೆಂಬ ಅರ್ಜುನ ಪ್ರಶ್ನೆಕ್ಕೆ ಸಮಾಧಾನವಂ ಹೇಳುತ್ತಾರೆ. ಆದರೆ ಈ ಶ್ಲೋಕದಲ್ಲಿರುವ ದ್ವಂದ್ವಶಬ್ದದಿಂದಲೇ ಇಚ್ಛಾದ್ವೇಷಗಳು ಹೇಳಲ್ಪಟ್ಟಿರುವುದರಿಂದ ಪುನಃ ಇಚ್ಛಾದ್ವೇಷಗಳೆಂಬದಾಗಿ ಹೇಳಲುಕಾರಣವೇನೆಂದು ನೆನೆಯದೆ ಇಲ್ಲಿ ಹೇಳಲ್ಪಟ್ಟಿರುವ ದ್ವಂದ್ವಶಬ್ದಕ್ಕೆ ಅರ್ಥವು ಸುಖದುಃಖಗಳು ಶೀತೋಷ್ಣಗಳು ಮೊದಲಾದವುಗಳಲ್ಲವೆಂತಲೂ ಇಚ್ಛಾದ್ವೇಷಗಳೆ, ಎಂದು ತೋರಿಸುವುದಕ್ಕಾಗಿ ಪ್ರತ್ಯೇಕವಾಗಿ'ಇಚ್ಛಾದ್ವೇಷ ಸಮುತ್ಥೇನ' ಎಂಬದಾಗಿ ಹೇಳಲ್ಪಟ್ಟಿತು. ಕಿಂಚ ಶೀತೋಷ್ಣಗಳಂತೆ ಪರಸ್ಪರ ವಿರುದ್ಧಗಳಾದ

ಸುಖದುಃಖಗಳನ್ನು ಸುಖದುಃಖಗಳಿಗೆ ಕಾರಣಗಳಾದ ಶೀತೋಷ್ಣಾದಿಗಳನ್ನು ವಿಷಯವಾಗಿವುಳ್ಳ ಇಚ್ಛಾದ್ವೇಷಗಳೇತಕ್ಕಕಾಲಗಳಲ್ಲಿ ಸಕಲಭೂತಗಳಿಂದಲೂ ಆಶ್ರಯಿಸಲ್ಪಡುತ್ತಾ ದ್ವಂದ್ವಶಬ್ದದಿಂದ ಹೇಳಲ್ಪಡುವುವೆಂತಲೂ ತಿಳಿಯತಕ್ಕದ್ದು. ಸರ್ವಭೂತ ಶಬ್ದದಿಂದ ಸಂಸಾರದಲ್ಲಿ ಇಚ್ಛಾದ್ವೇಷಗಳಿಂದ ಗೃಹೀತನಾಗದವನು ಯಾವನೂಇಲ್ಲವೆಂಬ ಅರ್ಥವನ್ನು ತಿಳಿಯಬೇಕು. ಲೋಕದಲ್ಲಿ ಯಾವಾಗಲಾದರೆ ಇಚ್ಛಾದ್ವೇಷಗಳು, ಸುಖದುಃಖಗಳೇನು, ಇವುಗಳಿಗೆ ಕಾರಣಗಳಾದ ಶೀತೋಷ್ಣಾದಿಗಳೇನು, ಇವುಗಳಪ್ರಾಪ್ತಿಯಿಂದ ಕೂಡಿರುವುವೋ ಆವಾಗ ಸರ್ವಭೂತಗಳ ಪ್ರಜ್ಞೆಯನ್ನು ತಮ್ಮಗಳಸ್ವಾಧೀನವಮಾಡಿಕೊಳ್ಳುತ್ತಾ ಪರಮಾರ್ಥಾತ್ಮ ತತ್ವವಿಷಯವಾದ ಜ್ಞಾನೋತ್ಪತ್ತಿಗೆ ಪ್ರತಿಬಂಧಕವಾದ ಮೋಹವನ್ನು ಹುಟ್ಟಿಸುತ್ತವೆ. ಕಾಮಕ್ರೋಧವಶೀಕೃತವಾದ ಮನಸ್ಸುಳ್ಳವನಿಗೆ ಬಾಹ್ಯವಿಷಯಗಳಲ್ಲಿಯೂ ಕೂಡಯಥಾಭೂತಾರ್ಥ ವಿಷಯ ಜ್ಞಾನವುಂಟಾಗದೇ ಇರುವಲ್ಲಿ ಆ ಕಾಮಕ್ರೋಧಗಳಿಂದ ವ್ಯಾಪ್ತವಾದ ಬುದ್ಧಿ ಯುಳ್ಳವನೂ ಮೂಢನೂ ಆದವನಿಗೆ ನಾನಾ ವಿಧ ಪ್ರತಿಬಂಧಗಳುಳ್ಳ ಪ್ರತ್ಯಗಾತ್ಮನಲ್ಲಿ ಜ್ಞಾನವುಂಟಾಗುವುದಿಲ್ಲವೆಂಬುವುದನ್ನು ಹೇಳಬೇಕಾದದ್ದೇ ಅನಾವಶ್ಯಕವು. ಆದುದರಿಂದಲೇ ಸಕಲಭೂತಗಳೂ ಕಾಮ ಕ್ರೋಧಗಳದಸೆಯಿಂದ ಹುಟ್ಟಿರುವುವೆಂತಲೂ, ಆಕಾಮಕ್ರೋಧಗಳನ್ನೆ ನಿಮಿತ್ತವಾಗಿಯುಳ್ಳ ಮೋಹದಿಂದ ಉತ್ಪತ್ತಿಕಾಲದಲ್ಲಿ(ಅಥವಾ)ಸ್ಥೂಲದೇಹೋತ್ಪತ್ತಿಕಾಲದಲ್ಲಿ ಮೂಢತ್ವವನ್ನು ಹೊಂದುವುವು, ಎಂದರೆ ಸಕಲಭೂತಗಳೂ ಅವಿವೇಕ ಪರವಶಗಳಾಗಿಯೇ ಹುಟ್ಟುವುವೆಂದು ತಾತ್ಪರ್ಯವು. ಕಿಂಚ-“ಭಾರತ- ಪರಂತಪ„ಎಂಬೀ ಪದಗಳು ಅರ್ಜುನನ ಸತ್ಕುಲಪ್ರಸೂತತ್ವವನ್ನೂ ಸಹಜಶಕ್ತಿಯುಕ್ತತ್ವವನ್ನೂ ತೋರ್ಪಡಿಸುವುದರಿಂದ ಇಂತಹ ವಿಶೇಷಣವುಳ್ಳವರು ಮೋಹರಹಿತರಾಗಿ ಆತ್ಮಜ್ಞಾನ ವುಳ್ಳವರಾಗುವುರೆಂದರಿಯಬೇಕು. ಮತ್ತು ಇಚ್ಛಾದ್ವೇಷಗಳಿಂದ ಹುಟ್ಟಿದ ಮೋಹವು ಪ್ರತ್ಯಕ್ಷವೂ ಅವಾಂತರವೂ ಆದ ಪ್ರತಿಬಂಧಕವೆಂದೂತಿಳಿಯಬೇಕು. ॥೨೭॥

(ರಾ॥ ಭಾ॥ ) ಪೂರ್ವಶ್ಲೋಕದಲ್ಲಿ ಹೇಳಿರುವ ಅರ್ಥವು ಹೇಗೆ ಸಂಘಟಿಸುವುದೆಂಪರೆ ಅದಂ ವಿವರಿಸುತ್ತಾರೆ. ಶತ್ರು ಸಂತಾಪಕ

ನಾದ ಭರತವಂಶ್ಯನಾಗಿರುವ ಎಲೈ ಅರ್ಜುನನೆ! ಇಚ್ಛೆಯಿಂದಲೂ ದ್ವೇಷದಿಂದಲೂ ವುಂಟಾಗಿರುವ ಶೀತೋಷ್ಣಾದಿ ದ್ವಂದ್ವಗಳೆಂಬ ಮೋಹ ಹೇತುಗಳಿಂದ ಸಮಸ್ತ ಪ್ರಾಣಿಗಳೂ ಜನ್ಮಕಾಲದಲ್ಲಿಯೇ ವಿಪರೀತ ಬುದ್ಧಿಯನ್ನು ಹೊಂದಿರುತ್ತಾರೆ. (ಇಲ್ಲಿ ಇದುಭಾವವು.) ಸತ್ವ ರಜಸ್ತಮೋಗುಣಮಯಗಳಾಗಿರುವ ಸುಖದುಃಖಾದಿ ದ್ವಂದ್ವಗಳಲ್ಲಿ ಪೂರ್ವಜನ್ಮಗಳ ಇಚ್ಛಾದ್ವೇಷಗಳು ಯಾವ ವಿಷಯಗಳಲ್ಲುಂಟಾಗಿದ್ದವೋ ಆವಾಸನೆಯಿಂದ ಪುನಃ ಜನ್ಮಕಾಲದಲ್ಲಿಯೇ ಆಸುಖದುಃಖಾದಿರೂಪ ದ್ವಂದ್ವವು ಇಚ್ಛಾದ್ವೇಷ ವಿಷಯವಾಗಿದ್ದುಕೊಂಡು ಮೋಹ ಹೇತುವಾಗುವುದು. ಆಕಾರಣದಿಂದ ಸರ್ವಭೂತಗಳೂ ವಿಪರೀತಜ್ಞಾನವಂ ಹೊಂದಿ ಆಯಾಯ ಪ್ರಾಕೃತವಿಷಯೇಚ್ಛಾ ದ್ವೇಷ ಸ್ವಭಾವಗಳಾಗಿಯೇ ಆಗುವುವು. ಅಲ್ಲದೆ ನನ್ನ ಸಂಶ್ಲೇಷದಲ್ಲಿಯೇ ಸುಖಪಡುವುದು, ನನ್ನ ವಿಯೋಗದಲ್ಲಿಯೇ ದುಃಖಿಸುವುದೂ ಆಗಿರುವ ಸ್ವಭಾವವುಳ್ಳವುಗಳಾಗುವುದಿಲ್ಲವು. ಜ್ಞಾನಿ ಒಬ್ಬನೇ ಆರೀತಿಯಾಗಿ ನನ್ನ ಸಂಶ್ಲೇಷ ವಿಶ್ಲೇಷಗಳಲ್ಲಿ ಸುಖದುಃಖ ಸ್ವಭಾವಗಳುಳ್ಳವನಾಗುವನು. ಈ ಜ್ಞಾನಿಯ ಸ್ವಭಾವದೊಡನೆ ಕೂಡಿರುವಂತವನು ಯಾವನೂ ಆಗುವದಿಲ್ಲವೆಂದು ತಾತ್ಪರ್ಯವು. ‖೨೭‖

(ಗೀ‖ವಿ‖) ಹಿಂದೆ "ದೈವೀಹ್ಯೇಷಾಗುಣಮಯೀ" (೭‖೧೪‖) "ನಾಹಂಪ್ರಕಾಶಸ್ಸರ್ವಸ್ಯ" (೭‖೨೫‖) ಎಂಬೀಶ್ಲೋಕಗಳಿಂದಪ್ರಾಣಿಗಳಜೀವಾಭೇದಾದಿ ವಿಷಯವಾದ ಮಿಥ್ಯಾಜ್ಞಾನವು ಗುಣಮಯವಾದ ಮಾಯಾಧೀನವೆಂಬದಾಗಿಯೂ ಪರಮಾತ್ಮಾಧೀನವೆಂಬದಾಗಿಯೂ ಹೇಳಲ್ಪಟ್ಟಿತು. ಅದು ಯುಕ್ತವಲ್ಲವು. "ಐಕಾತ್ಮ್ಯಂನಾಮಯದಿದಂ ಕೇಚಿದೂಚುರನ್ಯೈಃ ಪುಣಾಃ। ಕಾಮಕ್ರೋಧಾಭಿಭೂತತ್ವಾದಹಂಕಾರವಶಂಗತಾಃ‖ ,, ಇತ್ಯಾದಿ ಪ್ರಮಾಣಗಳಲ್ಲಿಹೇಳಿರುವಂತೆ ಐಕ್ಯಜ್ಞಾನರೂಪವಾದ ಮಿಥ್ಯಾಜ್ಞಾನಕ್ಕೆ ಇಚ್ಛಾದ್ವೇಷಗಳ ಅಭಿವೃದ್ಧಿಯಿಂದುಂಟಾದ ಸುಖದುಃಖಾದಿ ದ್ವಂದ್ವವಿಷಯವಾದ ಅಜ್ಞಾನವು ಆವಾಂತರ ಕಾರಣವೆಂದು ನಿರೂಪಿಸುತ್ತಾರೆ. ಹೇಭಾರತ- ಎಲೈ ಭರತವಂಶ್ಯನಾದ, ಪರಂತಪ-ಶತ್ರುಸಂತಾಪಕನಾದ ಅರ್ಜುನನೇ, ಇಚ್ಛಾದ್ವೇಷಸಮುತ್ಥೇನ-ಇಚ್ಛಾದ್ವೇಷಗಳಿಂದ ಹುಟ್ಟಿರುವ, ದ್ವಂದ್ವಮೋಹೇನ-

ಸುಖದುಃಖಾದಿ ವಿಷಯ ಮೋಹದಿಂದ, (ಅಥವಾ) ಜೀವೇಶ್ವರೈಕ್ಯ ವಿಷಯವಾದ ಮಿಥ್ಯಾಜ್ಞಾನದಿಂದ, ಸರ್ವಭೂತಾನಿ- ಸಮಸ್ತ ಪ್ರಾಣಿಗಳೂ, ಸರ್ಗೆ- ಸೃಷ್ಟಿಕಾಲವ ನ್ನಾರಂಭಮಾಡಿಕೊಂಡೆ, ಸಮ್ಮೋಹಂ-ಮಿಥ್ಯಾಜ್ಞಾನದಾರ್ಢ್ಯವನ್ನು, ಯಾಂತಿ-ಹೊಂದಿರುತ್ತಾರೆ.ಶರೀರ ಸಂಯೋಗದಿಂದ ಇಚ್ಛಾದ್ವೇಷಾದಿಗಳು ಹುಟ್ಟುವು ವಾದುದರಿಂದ ಸೃಷ್ಟ್ಯಾದಿಕಾಲದಲ್ಲಿಯೇ ಇಚ್ಛಾದಿಗಳು ಮಿಥ್ಯಾಜ್ಞಾನಕ್ಕೆ ಕಾರಣಗಳಾಗಿರುವುವು. ಇಲ್ಲಿ ಜೀವೇಶ್ವರ ದ್ವಂದ್ವ ಧರ್ಮಗಳ್ಯಾವವೆಂದರೆ ಸರ್ವಜ್ಞತ್ವಾಲ್ಪಜ್ಞತ್ವ ಸ್ವಾತಂತ್ರ್ಯ ಪಾರತಂತ್ರ್ಯ ಸರ್ವಶಕ್ತ್ಯಲ್ಪಶಕ್ತ್ಯಾದಿ ರೂಪಗಳೆ. ಈವಿಷಯವಾದ ಮಿಥ್ಯಾಜ್ಞಾನದಿಂದಲೇ ಸರ್ವರೂ ದೃಢವಾದ ಅಜ್ಞಾನವನ್ನು ಹೊಂದುತ್ತಾರೆಂದು ತಾತ್ಪರ್ಯವು. ... ... ॥೨೭॥

ಶ್ಲೋ॥ ಯೇಷಾಂತ್ವಂತಗತಂಪಾಪಂಜನಾನಾಂಪುಣ್ಯಕರ್ಮಣಾಂ । ತೇದ್ವಂದ್ವಮೋಹನಿರ್ಮುಕ್ತಾಭಜಂತೇಮಾಂ ದೃಢವ್ರತಾಃ ॥ ... ... ॥೨೮॥

ಪ॥ಯೇಷಾಂ-ತು-ಅಂತಗತಂ-ಪಾಪಂ-ಜನಾನಾಂ-ಪುಣ್ಯಾಕರ್ಮಣಾಂ।ತೇ-ದ್ವಂದ್ವಮೋಹನಿರ್ಮುಕ್ತಾಃ-ಭಜಂತೇ-ಮಾಂ-ದೃಢವ್ರತಾಃ ॥

ಅ॥ ಪುಣ್ಯಕರ್ಮಣಾಂ-ಪುಣ್ಯಶಾಲಿಗಳಾದ, ಯೇಷಾಂಜನಾನಾಂ-ಯಾವ ಜನಗಳ, ಪಾಪಂತು-ಪಾಪವು, ಅಂತಗತಂ-ನಾಶವನ್ನು ಹೊಂದಿರುವುದೊ, ತೇ-ಆ ಜನಗಳು,ದ್ವಂದ್ವಮೋಹನಿರ್ಮುಕ್ತಾಃ-ಗುಣಮಯವಾದ ದ್ವಂದ್ವಮೋಹದಿಂದ ಬಿಡಲ್ಪಟ್ಟು,ದೃಢವ್ರತಾಃ-ದೃಢವಾದ ಸಂಕಲ್ಪವುಳ್ಳವರಾಗಿ, ಮಾಂ-ನನ್ನನ್ನು, ಭಜಂತೆ-ಭಜನ ಮಾಡುತ್ತಾರೆ.

(ಶಂ॥ ಭಾ॥) ಸಕಲ ಭೂತಗಳೂ ಮೋಹ ಪರವಶಗಳಾಗಿಯೇ ಹುಟ್ಟುವುದರಿಂದ ಮೂಢತ್ವವನ್ನು ಹೊಂದಿ ಭಗವತ್ತತ್ವಪರಿಜ್ಞಾನವಿಹೀನಗಳಾಗಿಯೂ ಭಗವದ್ಭಜನದಲ್ಲಿ ಆಸಕ್ತಿ ಇಲ್ಲದವುಗಳಾಗಿಯೂ ಆಗಿರುವುದರಿಂದ (ಶಾಸ್ತ್ರಾರ್ಥಗಳನ್ನನುಷ್ಠಿಸುವ ಅಧಿಕಾರಿ ಇಲ್ಲದೇ ಇರುವುದರಿಂದ) ಶಾಸ್ತ್ರಸಿದ್ಧವಾದ ಭಗವದ್ಭಜನವು ನಿರರ್ಥಕವಾಗುವುದಿಲ್ಲವೆ ? (ಎಂದರೆ ಲೋಕದಲ್ಲಿ ಯಾರುತಾನ ದ್ವಂದ್ವಮೋಹ ನಿರ್ಮುಕ್ತರಾಗಿ ನಿಮ್ಮನ್ನು ಯಥಾವತ್ತಾಗಿ ತಿಳಿದು ಶಾಸ್ತ್ರೋಕ್ತ ಪ್ರಕಾರವಾಗಿ ಆತ್ಮಭಾವದಿಂದ ಸೇವಿಸುವುರು ? ಎಂಬ ಅರ್ಜುನನಪ್ರಶ್ನಕ್ಕೆ ಉತ್ತರ

ವನ್ನು ಹೇಳುತ್ತಾರೆ. ಅನೇಕ ಜನ್ಮಗಳ ದಶೆಯಿಂದ ಸಂಪಾದಿಸಲ್ಪಟ್ಟ ಸುಕೃತಗಳಿಂದ ಪರಿಹರಿಸಲ್ಪಟ್ಟ ಪಾಪಗಳುಳ್ಳವರಾಗಿಯೂ, ದ್ವಂದ್ವ ಪ್ರಯುಕ್ತವಾದ ಮೋಹದಿಂದ ಬಿಡಲ್ಪಟ್ಟವರಾಗಿಯೂ ಬ್ರಹ್ಮಚರ್ಯಾದಿ ನಿಯಮಗಳುಳ್ಳವರಾಗಿಯೂ ಇರುವ ಮಾನವೋತ್ತಮರು ಶಾಸ್ತ್ರಾರ್ಥಾನುಷ್ಠಾನ ಯೋಗ್ಯಾಧಿಕಾರಿಗಳಾಗಿರುವುದರಿಂದ ಶಾಸ್ತ್ರೋಕ್ತವಾದ ಭಗವದ್ಭಜನವು ವ್ಯರ್ಥವಾಗಲಾರದು. ಆದುದರಿಂದ ಚಿತ್ತಶುದ್ಧಿಗೆ ಕಾರಣವಾದ ಸತ್ಕರ್ಮಾನುಷ್ಠಾನವಂ ಮಾಡಿ ಸಕಲ ಪಾಪಗಳಂ ನಾಶಪಡಿಸಿಕೊಂಡ ಮಹಾನುಭಾವರು ರಾಗದ್ವೇಷಗಳಿಂದ ಹುಟ್ಟಿದ ಅವಿವೇಕದಿಂದ ಬಿಡಲ್ಪಟ್ಟವರಾಗಿಯೂ ನಿಶ್ಚಯವಾದ ನಿಯಮವುಳ್ಳವರಾಗಿಯೂ ಅಥವಾ ಪರಮಾತ್ಮತತ್ತ್ವನಿಶ್ಚಯವುಳ್ಳವರಾಗಿಯೂ ನನ್ನನ್ನು ಹೊಂದುತ್ತಾರೆಂದು ತಿಳಿಯಬೇಕು. ‖೨೮‖

(ಮ‖ ಸೂ‖) ಎಲೈ ಶ್ರೀಕೃಷ್ಣನೇ ! ಸಕಲ ಭೂತಗಳಿಗೂ ಸಮ್ಮೋಹವಂ ಹೊಂದುವಿಕೆಯು ವಾಸ್ತವವಾದರೆ “ ಚತುರ್ವಿಧಾಭಜಂತೆಮಾಂ ,, (೭—೧೬) ಎಂಬ ಶ್ಲೋಕೋಕ್ತವಾದ ಅರ್ಥಕ್ಕೆ ಹಾನಿಬರುವುದಿಲ್ಲವೆ ? ಎಂಬ ಶಂಕಾಸಮಾಧಾನಾರ್ಥವಾಗಿ ಈ ನಾಲ್ಕು ಅಧಿಕಾರಿಗಳೂ ಸುಕೃತಾತಿಶಯದಿಂದ ಕ್ಷೀಣಪಾಪರಾಗಿರುವುದರಿಂದ “ಚತುರ್ವಿಧಾ ಭಜಂತೆಮಾಂ,, ಎಂಬುವುದಕ್ಕೆ ಹಾನಿಯುಂಟಾಗಲಾರದೆಂದರಿಯಬೇಕು. “ ಸರ್ವಭೂತಾನಿ ಸಮ್ಮೋಹಂ ,, (೭—೨೭) “ತ್ರಿಭಿರ್ಗುಣಮಯೈರ್ಭಾವೈಃ ,, (೭—೧೩) ಎಂಬೀ ಶ್ಲೋಕಗಳಿಂದ ಪ್ರತಿಪಾದಿಸಲ್ಪಟ್ಟ ವಿಷಯವು ಸಾಮಾನ್ಯವೆಂತಲೂ “ ಚತುರ್ವಿಧಾ ಭಜಂತೇಮಾಂ ,, (೭—೧೬) “ ಯೇಷಾಂತ್ವಂತಗತಂ ಪಾಪಂ,, (೭—೨೮) ಎಂಬೀ ಶ್ಲೋಕಗಳಿಂದ ಹೇಳಲ್ಪಟ್ಟ ವಿಷಯವು ವಿಶೇಷವೆಂತಲೂ ತಿಳಿದು, ಆದುದರಿಂದಲೇ ಸತ್ವಶೋಧಕ ಪುಣ್ಯಸಂಚಯಕ್ಕಾಗಿ ಸರ್ವಕಾಲಗಳಲ್ಲಿಯೂ ಯತ್ನವಂ ಮಾಡಬೇಕೆಂತಲೂ ತಿಳಿಯಬೇಕು. ... ... ... ‖೨೮‖

(ರಾ‖ ಭಾ‖) ಅನೇಕ ಜನ್ಮಗಳಿಂದ ಸಂಪಾದಿಸಲ್ಪಟ್ಟ ಪುಣ್ಯಕರ್ಮಗಳುಳ್ಳ ಯಾವಜನಗಳಿಗೆ ಪಾಪವು ಶ್ರೇಷ್ಠವಾದ ಪುಣ್ಯಸಂಚಯದಿಂದ ಸತ್ವಾದಿ ಗುಣಮಯ ಸುಖದುಃಖಾದಿ ದ್ವಂದ್ವೇಚ್ಛಾದ್ವೇ

ಷಣೆಗೆ ಹೇತುಭೂತನಾಗಿಯೂ ನಮ್ಮಗಳ ಔನ್ಮುಖ್ಯಕ್ಕೆ ವಿರೋಧಿಯಾಗಿಯೂ ಅನಾದಿಕಾಲದಿಂದ ಪ್ರವೃತ್ತವಾಗಿಯೂ ಇರುವ ಪಾಪ ಪ್ರನಾಶವಂ ಹೊಂದಿರುವುದೊ ಅವರು ಹಿಂದೆ ವಿವರಿಸಲ್ಪಟ್ಟ ಸುಕೃತತಾರತಮ್ಯದಿಂದ ನಮ್ಮನ್ನು ಶರಣಹೊಂದಿ ಗುಣಮಯವಾದ ದ್ವಂದ್ವ ಮೋಹದಿಂದ ಬಿಡಲ್ಪಟ್ಟವರಾಗಿ ಜರಾಮರಣ ಮೋಕ್ಷಣ ರೂಪವಾದ ಕೈವಲ್ಯಕ್ಕಾಗಿಯೂ, ಲೋಕೋತ್ತರವಾದ ಬ್ರಹ್ಮಾದಿ ಪದಕ್ಕಿಂತಲೂ ಅತಿಶಯಿತವಾದ ಐಶ್ವರ್ಯಕ್ಕಾಗಿಯೂ, ನಮ್ಮನ್ನು ಹೊಂದುವುದಕ್ಕಾಗಿಯೂ, ದೃಢವಾದ ಸಂಕಲ್ಪ ಮುಳ್ಳವರಾಗಿ ನಮ್ಮನ್ನು ಭಕ್ತಿರೂಪಜ್ಞಾನದಿಂದ ಉಪಾಸನೆ ಮಾಡುತ್ತಾರೆ. .... ॥೭೮॥

(ಗೀ॥ ವಿ॥) ಸಮಸ್ತ ಭೂತಗಳು ಸಮ್ಮೋಹವಂ ಹೊಂದಿದರೆ ಭಕ್ತಿಮಾರ್ಗಕ್ಕೆ ಲೋಪವಿಲ್ಲವೆ? ಎಂಬ ಶಂಕಾಸಮಾಧಾನಾರ್ಥವಾಗಿ ದ್ವಂದ್ವಮೋಹರಹಿತರಾದವರು ಕೆಲವರಿರುವರೆನ್ನುತ್ತಾರೆ. ಪುಣ್ಯಕರ್ಮಿಗಳಾದ ಯಾವಜನಗಳ ಪಾಪವು ನಾಶವಂ ಹೊಂದಿರುವುದೋ ಅಂತವರು ಜೀವೇಶ್ವರೈಕ್ಯ ವಿಷಯವಾದ ಮಿಥ್ಯಾಜ್ಞಾನದಿಂದ ಬಿಡಲ್ಪಟ್ಟು ಪರಮಾತ್ಮಾಶ್ರಯದಿಂದ ಸಂಸಾರವಂ ಜಯಿಸುವೆನೆಂಬ ದೃಢವ್ರತಮುಳ್ಳವರಾಗಿ ನನ್ನನ್ನು ಭಜಿಸುತ್ತಾರೆ. ... ... ॥೭೮॥

ಶ್ಲೋ॥ ಜರಾಮರಣಮೋಕ್ಷಾಯಮಾಮಾಶ್ರಿತ್ಯಯತಂತಿಯೇ । ತೇಬ್ರಹ್ಮತದ್ವಿದುಃಕೃತ್ಸ್ನಮಧ್ಯಾತ್ಮಂಕರ್ಮಚಾಖಿಲಂ ॥ ... ... ॥೨೯॥

ಪ॥ ಜರಾಮರಣಮೋಕ್ಷಾಯ-ಮಾಂ-ಆಶ್ರಿತ್ಯ-ಯತಂತಿ-ಯೇ।ತೇ-ಬ್ರಹ್ಮ-ತತ್-ವಿದುಃ-ಕೃತ್ಸ್ನಂ-ಅಧ್ಯಾತ್ಮಂ-ಕರ್ಮ-ಚ-ಅಖಿಲಂ॥

ಅ॥ (ರಾ॥ ಭಾ॥) ಜರಾಮರಣ ಮೋಕ್ಷಾಯ-ಪ್ರಕೃತಿ ವಿಯುಕ್ತವಾದ ಆತ್ಮಸ್ವರೂಪದರ್ಶನಕ್ಕಾಗಿ, ಮಾಂ-ನನ್ನನ್ನು, ಆಶ್ರಿತ್ಯ-ಆಶ್ರಯಿಸಿ, ಯೇ-ಯಾರಾದರೆ, ಯತಂತಿ-ಪ್ರಯತ್ನವಂ ಮಾಡುವರೊ, ತೇ-ಅವರು, ತದ್ಬ್ರಹ್ಮವಿದುಃ-ಆ ಬ್ರಹ್ಮವನ್ನು ತಿಳಿಯುವರು. ಅಧ್ಯಾತ್ಮಂಚಕೃತ್ಸ್ನಂವಿದುಃ - ಅಧ್ಯಾತ್ಮವನ್ನು ಸಂಪೂರ್ಣವಾಗಿ ತಿಳಿಯುವರು. ಕರ್ಮಚಾಖಿಲಂವಿದುಃ-ಕರ್ಮವನ್ನೂ ಸಂಪೂರ್ಣವಾಗಿ ತಿಳಿಯುವರು. (ಅಧ್ಯಾತ್ಮಬ್ರಹ್ಮಾದಿ ಶಬ್ದಾರ್ಥಗಳನ್ನು ಮುಂದಿನ ಅಧ್ಯಾಯಾರಂಭದಲ್ಲಿ ವಿವರಿಸುತ್ತಾರೆ.॥೨೯॥

(ಶಂ॥ ಭಾ॥) ಅನೇಕ ಜನ್ಮಾರ್ಜಿತ ಪುಣ್ಯವಿಶೇಷದಿಂದ ಪರಿಹರಿಸಲ್ಪಟ್ಟ ಪಾಪವುಳ್ಳವರಾಗಿಯೂ, ದ್ವಂದ್ವಮೋಹ ರಹಿತರಾಗಿಯೂ,

ಬ್ರಹ್ಮಚರ್ಯಾದಿ ನಿಯಮಗಳುಳ್ಳವರಾಗಿಯೂ ಇರುವ ಅಧಿಕಾರಿಗಳು ಭಗವಂತನಾದ ನಿನ್ನನ್ನು ಯಾವ ಫಲಕ್ಕೋಸ್ಕರವಾಗಿ ಸೇವಿಸುತ್ತಾರೆಂದರೆ ಜರಾಮರಣಾದಿಗಳನ್ನೆ ಲಕ್ಷಣವಾಗಿವುಳ್ಳ ಬಂಧವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಪರಮಾತ್ಮನನ್ನು ಸೇವಿಸುತ್ತಾರೆಂದೀ ಶ್ಲೋಕದಿಂದ ಬೋಧಿಸುತ್ತಾನೆ. ಯಾವ ಪುರುಷರಾದರೆ ಪರಮೇಶ್ವರನಾದ ನನ್ನನ್ನಾಶ್ರಯಿಸಿ (ಎಂದರೆ ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವರಾಗಿ) ಜರಾಮರಣಗಳನ್ನು (ಜರಾ-ಮುದಿತನ, ಮರಣ-ಸಾವು ರೋಗವಿಕೆ,) ತಪ್ಪಿಸಿಕೊಳ್ಳುವುದಕ್ಕಾಗಿ ಯತ್ನ ಮಾಡುತ್ತಾರೋ ಅಂತವರು ಪರಬ್ರಹ್ಮವನ್ನು ಸಮಸ್ತವಾದ ಕರ್ಮಸ್ವರೂಪವನ್ನಾಗಿಯೂ ಸಮಸ್ತವಾದ ಅಧ್ಯಾತ್ಮ ಸ್ವರೂಪವನ್ನಾಗಿಯೂ ತಿಳಿಯುತ್ತಾರೆ. (ಅಥವಾ) ಅಂತವರು ಪರಬ್ರಹ್ಮವನ್ನು, ಪರಬ್ರಹ್ಮವನ್ನು ಹೊಂದಲು ಯೋಗ್ಯವಾದ ದೇಹದಿವ್ಯತಿರಿಕ್ತವಾಗಿರುವ ಶುದ್ಧಾತ್ಮವನ್ನು, ಬ್ರಹ್ಮಪ್ರಾಪ್ತಿಸಾಧನವಾಗಿರುವ ಸಾಂಗವಾದ ಸಕಲ ಕರ್ಮ ಸಮುದಾಯವನ್ನು ತಿಳಿಯುವರೆಂದು ಭಾವವು. ... ... ||೨೯||

(ಮ|| ಭಾ|| ಗೀ|| ವಿ||) "ಮಾಂಭಜಂತೆ" ಎಂಬುವುದರಿಂದ ಹೇಳಲ್ಪಟ್ಟ ಅರ್ಥವನ್ನೇ ಅನುವಾದ ಮಾಡಿಕೊಂಡು ತನ್ನ ಭಜನಕ್ಕೆ ಫಲವನ್ನು ಹೇಳುತ್ತಾನೆ. ಯಾರಾದರೆ, ಜರಾಮರಣ ಪರಿಹಾರಾರ್ಥವಾಗಿ ನನ್ನನ್ನಾಶ್ರಯಿಸಿ ಯತ್ನವಂ ಮಾಡುತ್ತಾರೋ ಅಂತವರೇ ಆ ಪರಬ್ರಹ್ಮವನ್ನು ಬಲ್ಲರು. ಮುಂದಿನ ಅಧ್ಯಾಯದಲ್ಲಿ ವಿವರಿಸಲ್ಪಡುವ ಸಮಸ್ತವಾದ ಜೀವಾಂತಃಕರಣಾದಿರೂಪವಾಗಿರುವ ಅಧ್ಯಾತ್ಮವನ್ನು ತಿಳಿಯುವರು. ಮುಂದಿನ ಅಧ್ಯಾಯದಲ್ಲಿ ಹೇಳಲ್ಪಡುವ ಸಮಸ್ತ ಕರ್ಮಗಳನ್ನು ತಿಳಿಯುವರು. ಪರಮಾತ್ಮ ಭಜನದಿಂದಲೆ ಬ್ರಹ್ಮಜ್ಞಾನವುಂಟಾಗುವುದಕ್ಕದೆ ಅದಕ್ಕಾಗಿ ಬೇರೊಂದು ಸಾಧನವಿಲ್ಲವೆಂದರಿಯಬೇಕು ಇಲ್ಲಿ ಜರಾಮರಣಗಳಿಗಾಗಿ ಪರಮಾತ್ಮ ಭಜನವು ಹೇಳಲ್ಪಡಲಿಲ್ಲವು, ಸ್ವರ್ಗಾದಿಗಳಲ್ಲಿ ಅಪೇಕ್ಷೆಯಂ ಬಿಟ್ಟು ಪರಮಾತ್ಮನನ್ನು ಭಜಿಸಬೇಕೆಂಬುದರಲ್ಲಿ ತಾತ್ಪರ್ಯವು ಜರಾಮರಣ ಮೋಕ್ಷಪದದಿಂದ ಲಕ್ಷಣಾವೃತ್ತ್ಯಾ ಸ್ವರ್ಗಾದಿ ಕಾಮನಾ ನಿವೃತ್ತಿಯಂ ಸ್ವೀಕರಿಸಬೇಕು ಅದು ಹೇಗೆಂದರೆ! ಕಲವರು ಮೋಕ್ಷಾಪೇಕ್ಷಾ ಶೂನ್ಯರಾಗಿ ಸ್ವಭಾವದಿಂ

ದಲಿ ಪರಮಾತ್ಮನಂ ಭಜಿಸುತ್ತಾರೆ. ಇದಕ್ಕೆ ‘‘ಸರ್ವೇವೇದಾಸ್ತುದೇವಾರ್ಥಾ ದೇವಾನಾರಾಯಣಾರ್ಥಕಾಃ । ನಾರಾಯಣಸ್ತುಮೋಕ್ಷಾರ್ಥೋಮೋಕ್ಷೋ ನಾನ್ಯಾರ್ಥ ಇಷ್ಯತೇ॥ ಏವಂ ಮಧ್ಯಮಭಕ್ತಾನಾಮೇಕಾಂತಾನಾಂನಕಸ್ಯಚಿತ್ । ಅರ್ಥೋನಾರಾಯಣೋದೇವಸ್ಸರ್ವಮನ್ಯತ್ತದರ್ಥಕಮ್,, ಎಂಬಗೀತಾಕಲ್ಪದ ಸಮ್ಮತಿಯುಂ ತಿಳಿಯಬೇಕು. ಭಕ್ತರು ಉತ್ತಮಮಧ್ಯಮಾಧಮ ಭೇದದಿಂದ ತ್ರಿವಿಧರಾಗಿರುವರು. ಶ್ರೀ ನಾರಾಯಣ ಚರಣಾರವಿಂದ ಭಕ್ತಿಯಂ ಬಿಟ್ಟು ಮೋಕ್ಷಾದಿಗಳಲ್ಲಿಯು ಕೂಡ ಅಪೇಕ್ಷಾರಹಿತನು ಉತ್ತಮಭಕ್ತನು. ಮೋಕ್ಷಾಪೇಕ್ಷೆಯುಳ್ಳವನು ಮಧ್ಯಮ ಭಕ್ತನು. ಸ್ವರ್ಗಾದಿ ಫಲಾಪೇಕ್ಷೆಯುಳ್ಳವನು ಅಧಮ ಭಕ್ತನು ಇಲ್ಲಿ ಜರಾಮರಣ ಮೋಕ್ಷಾರ್ಥಿಯಾದವನು ಮಧ್ಯಮ ಭಕ್ತನೆಂದರಿಯಬೇಕು. ... ... ... ... ॥೨೯॥

ಶ್ಲೋ॥ ಸಾಧಿಭೂತಾಧಿದೈವಂಮಾಂ ಸಾಧಿಯಜ್ಞಂಚ
ಯೇವಿದುಃ । ಪ್ರಯಾಣಕಾಲೇಪಿಚಮಾಂತೇವಿದುರ್ಯು
ಕ್ತಚೇತಸಃ ॥ ... ... ... ॥೩೦॥

ಪ॥ ಸಾಧಿಭೂತಾಧಿದೈವಂ-ಮಾಂ- ಸಾಧಿಯಜ್ಞಂ-ಚ-ಯೇ-ವಿದುಃ।ಪ್ರಯಾಣಕಾಲೇ-ಅಪಿ-ಚ-ಮಾಂ-ತೇ-ವಿದುಃ-ಯುಕ್ತಚೇತಸಃ ॥

(ಅ॥ ರಾ॥ ಭಾ॥ ಯೇ-ಯಾವ ಐಶ್ವರ್ಯಾರ್ಥಿಗಳು, ಸಾಧಿಭೂತಾಧಿದೈವಂ ಮಾಂವಿದುಃ-ಅಧಿಭೂತದೊಡನೆಯೂ, ಅಧಿದೈವದೊಡನೆಯೂ, ಕೂಡಿಕೊಂಡಿರುವ ನನ್ನನ್ನು ತಿಳಿಯುತ್ತಾರೋ, ತೇಚ- ಈ ಅಧಿ ಭೂತಾದಿ ದೈವ ಚಿಂತಕರಾದ ಐಶ್ವರ್ಯಾರ್ಥಿಗಳೂ, ಜರಾಮರಣ ಮೋಕ್ಷಾರ್ಥಿಗಳೂ, ಅರ್ಥಾತ್ ಜ್ಞಾನಿಗಳೂ, ಸಾಧಿಯಜ್ಞಂಚವಿದುಃ-ಅಧಿಯಜ್ಞದೊಡನೆ ಕೂಡಿರುವ ನನ್ನನ್ನರಿಯುವರು. ಯುಕ್ತಚೇತಸಃ-ಸಮಾಧಾನ ಮನಸ್ಕರಾಗಿ, ಪ್ರಯಾಣಕಾಲೇಪಿಚಮಾಂವಿದುಃ-ದೇಹವನ್ನು ಬಿಡುವುದೆಂಬ ಮರಣಕಾಲದಲ್ಲಿಯೂ ತಮ್ಮ ತಮ್ಮಗಳ ಫಲಾನುಗುಣವಾಗಿ ನನ್ನನ್ನು ನೆನೆಸುವರು, ಜ್ಞಾನಿಗಳಿಬ್ಬರು, ಐಶ್ವರ್ಯಾಪೇಕ್ಷಿಯು ಒಬ್ಬನು, ಎಂಬೀ ಮೂರು ಅಧಿಕಾರಿಗಳಿಗೂ ನಿತ್ಯನೈಮಿತ್ತಿಕಕರ್ಮಗಳಾದ ಮಹಾಯಜ್ಞಾದ್ಯನುಷ್ಠಾನವು ಅವರ್ಜನೀಯವಾಗಿರುವುದು. ಮುಂದಿನ ಅಧ್ಯಾಯದಲ್ಲಿ ಮೊದಲಿನಲ್ಲಿಯೇ ಬ್ರಹ್ಮಶಬ್ದಾರ್ಥವೂ ಅಧ್ಯಾತ್ಮ ಶಬ್ದಾರ್ಥವೂ ಕರ್ಮಶಬ್ದಾರ್ಥವೂ ಅಧಿಭೂತಶಬ್ದಾರ್ಥವೂ ಅಧಿದೈವ ಶಬ್ದಾರ್ಥವೂ ಅಧಿಯಜ್ಞ ಶಬ್ದಾರ್ಥವೂ ಪ್ರಯಾಣ ಕಾಲದಲ್ಲಿ ಪರಮಾತ್ಮ ವೇದನ ಪ್ರಕಾರವೂ ಪ್ರಶ್ನಪೂರ್ವಕವಾಗಿ ವಿವರಿಸಲ್ಪಡುವುದು. ... ... ... ॥೩೦॥

(ಶಂ॥ ಭಾ॥) ಭಗವನ್ನಿಷ್ಠೆಯುಳ್ಳವರಿಗೆ ಇದುವರೆಗೂ ಹೇಳಲ್ಪಟ್ಟ ಅಧ್ಯಾತ್ಮ ಕರ್ಮ ಬ್ರಹ್ಮಜ್ಞಾನವಲ್ಲದೆ ಅಧಿಭೂತಾಧಿದೈವಸಹಿತ ಬ್ರಹ್ಮಜ್ಞಾನವೂ ಪ್ರಾಪ್ತವಾಗುವುದೆಂದೀ ಶ್ಲೋಕದಿಂ ದುಪದೇಶಿಸುತ್ತಾನೆ. ಮತ್ತು ಅಧ್ಯಾತ್ಮವು ಕರ್ಮವು ಅಧಿಭೂತವು ಅಧಿದೈವವು ಅಧಿಯಜ್ಞವು ಬ್ರಹ್ಮವು ಎಂಬಿವುಗಳಂ ತಿಳಿದವರೂ ಇದುವರೆಗೂ ಹೇಳಲ್ಪಟ್ಟ ಜ್ಞಾನವುಳ್ಳವರೂ ಸಮಾಹಿತವಾದ ಚಿತ್ತವುಳ್ಳವರೂ ಆದ ಮಹಾತ್ಮರಿಗೆ ಮರಣಾವಸ್ಥೆಯಲ್ಲಿಯೂ ಭಗವತ್ತತ್ತ್ವಜ್ಞಾನವು ಅಪ್ರತಿಹತವಾಗಿರುವುದೆಂಬದಾಗಿ ಈಶ್ಲೋಕದ ಉತ್ತರಾರ್ಧದಲ್ಲಿ ವ್ಯಕ್ತಪಡಿಸಿರುತ್ತಾನೆ. ಮತ್ತು ಈಉತ್ತರಾರ್ಧದಲ್ಲಿ ಅಪಿ- ಚ, ಎಂಬ ನಿಪಾತಗಳಿಂದ ಮರಣಾವಸ್ಥೆಯಲ್ಲಿ ಇಂದ್ರಿಯ ಸಮುದಾಯವು ಅತ್ಯಂತವ್ಯಗ್ರವಾಗಿರುವುದರಿಂದ ಜ್ಞಾನವು ಸಂಭವಿಸದೆ ಹೋದರೂ ನನ್ನಲ್ಲಿಯೇ ಇಡಲ್ಪಟ್ಟ ಚಿತ್ತವುಳ್ಳವರೂ ತತ್ವಜ್ಞಾನವುಳ್ಳವರೂ ಆದ ಮಹಾನುಭಾವರಿಗೆ ಭಗವತ್ತತ್ವಜ್ಞಾನವು ಅಪ್ರಯತ್ನದಿಂದ ಲಭ್ಯವಾಗುವುದೆಂದುಸೂಚಿಸಲ್ಪಡುವುದು.

ಈಪ್ರಕಾರವಾದ ಏಳನೇ ಅಧ್ಯಾಯದಿಂದ ಭಗವಂತನಾದ ಶ್ರೀಕೃಷ್ಣನು ಉತ್ತಮಾಧಿಕಾರಿಯಾದವನಿಗೆ ಜ್ಞೇಯವಾದಬ್ರಹ್ಮವನ್ನು ತಿಳಿಸುತ ಅಂತಹ ತಿಳಿಯುವಿಕೆಗೋಸ್ಕರವೆ ಸರ್ವಾತ್ಮಕತ್ವಾದಿಯನ್ನುಪದೇಶಿಸಿ ಪ್ರಕೃತಿದ್ವಯ ಮೂಲಕವಾಗಿ ಸರ್ವಕಾರಣನೆಂದು ಬ್ರಹ್ಮವನ್ನು ಹೇಳುವುದರಿಂದ ತತ್ಪದವಾಚ್ಯವೂ ತತ್ಪದಲಕ್ಷ್ಯವೂ ಹೇಳಲ್ಪಟ್ಟಿತೆಂದರಿಯಬೇಕು. ... ॥೩೦॥

(ಗೀ॥ ವಿ॥) "ತೇಬ್ರಹ್ಮತದ್ವಿದುಃ" (೭—೨೯) ಎಂಬುವುದರಿಂದ ತನ್ನ ಭಜನಕ್ಕೆ ಬ್ರಹ್ಮಜ್ಞಾನವನ್ನು ಫಲವನ್ನಾಗಿ ಹೇಳಿದನು. ಆದರಿಂದ ಬ್ರಹ್ಮಕ್ಕೂ ಈಗೀತೋಪದೇಷ್ಟಾವಾಗಿರುವ ಶ್ರೀಕೃಷ್ಣನಿಗೂ ಭೇದಶಂಕೆಗೆಅವಕಾಶವುಂಟಾಗಲೂ ಅದಂಪರಿಹರಿಸುತ್ತಾನೆ॥೩೦॥

(ಅದ್ವೈತಸಿದ್ಧಾಂತರೀತ್ಯಾ)

ಅಧ್ಯಾಯಸಂಗ್ರಹ ಶ್ಲೋಕವು,

ಮೂ ॥ ಚಿತ್ಸಂವಿದ್ರೂಪತೋಂತರ್ಬ್ರ ದಯ ಮನುಗ

ತ್ರೋಭಾಸತೇಪ್ರತ್ಯಗಾತ್ಮಾಬಾಹ್ಯಂಭೂಮ್ಯಾದಿಭೂತೇ
ಷ್ವತಿಶಯಿತಗುಣೈಸ್ಸಂಪ್ರವಿಷ್ಟೋವಿಭಾತಿ । ವೇದೇ
ಷ್ವೋಂಕಾರರೂಪಸ್ಸವಿತರಿ ಮಹಸಾವೀರ್ಯವತ್ಸೂರ್ಜಿ
ತೇನಪ್ರಾಪ್ತಸ್ತಂವೇತ್ತಿಯೋಸೌ ಮಮತನು ರಿತಿತ
ತ್ಸಪ್ತಮೇನೋಕ್ತಮಾಸ್ತೆ॥

ಇದರ ತಾತ್ಪರ್ಯವು-ಸತ್‌ಚಿತ್ ಸ್ವರೂಪನಾದ ಪರಮಾತ್ಮನು ಸರ್ವಪ್ರಪಂಚದಲ್ಲಿಯೂ ಅಂತರ್ಯಾಮಿಯಾಗಿರುವನು. ಪೃಥಿವ್ಯಾದಿ ಪಂಚಭೂತಗಳೇ ಮೊದಲಾದ ಪದಾರ್ಥಗಳಲ್ಲಿ ಸಾರಾಂಶಗಳೆಲ್ಲವೂ ಆಬ್ರಹ್ಮಸ್ವರೂಪವಾಗಿಯೇ ಇರುವುದು. ವೇದಸಾರವಾದ ಓಂಕಾರವೂ ಸೂರ್ಯನಲ್ಲಿರುವ ತೇಜಸ್ಸೂ ಬಲಶಾಲಿಗಳ ಬಲವೂ ತತ್ಸ್ವರೂಪಗಳೆ. ಈಪ್ರಕಾರವಾಗಿ ಸಮಸ್ತವೂ ಆಪರಮಾತ್ಮ ಸ್ವರೂಪವಾಗಿರುವುದೆಂದು ತಿಳಿದವನು ಬ್ರಹ್ಮತ್ವವನ್ನು ಹೊಂದುವನೆಂದು ಶ್ರೀಕೃಷ್ಣನು ಅರ್ಜುನನಿಗೆ ಉಪದೇಶಿಸಿದನು. ॥೭॥

## ಶ್ರೀಯಾಮುನಾಚಾರ್ಯರಿಂದ ಸಂಗ್ರಹೀತವಾದ ಅಧ್ಯಾಯಸಂಗ್ರಹ ಶ್ಲೋಕವು.

ಮೂ॥ ಸ್ವಯಾಥಾತ್ಮ್ಯಂ ಪ್ರಕೃತ್ಯಾಸ್ಯತಿರೋಧಿಶ್ಶರ
ಣಾಗತಿಃ। ಭಕ್ತಭೇದಃಪ್ರಬುದ್ಧಸ್ಯ ಶ್ರೈಷ್ಠ್ಯಂಸಪ್ತ
ಮಉಚ್ಯತೇ॥

ಅ॥ ಈ ಸಪ್ತಮಾಧ್ಯಾಯದಲ್ಲಿ ಸರ್ವೋಪಾಸ್ಯನಾದ ಪರಬ್ರಹ್ಮನಾಗಿರುವ ವಾಸುದೇವನು ಚೇತನಾಚೇತನಗಳಿಗೆ ಶೇಷಿಯೆಂಬದಾಗಿಯೂ ಕಾರಣನೆಂಬದಾಗಿಯೂ ಆಧಾರನೆಂಬದಾಗಿಯೂ ಸರ್ವಪದಾರ್ಥಗಳೂ ಶರೀರ ಭೂತವಾಗಿರುವುದರಿಂದ ಸರ್ವಪ್ರಕಾರವಾಗಿಯೂ ಇರುವ ಅವನು ಸರ್ವಶಬ್ದವಾಚ್ಯನೆಂತಲೂ ಸರ್ವರನ್ನಾಳುವವನೆಂತಲೂ, ಸಮಸ್ತಗಳಾದ ಕಲ್ಯಾಣ ಗುಣಗಳಿಂದಲೂ ಅವನೇ ಸರ್ವಸ್ಮಾತ್ಪರತರನೆಂತಲೂ ಸತ್ವರಜಸ್ತಮೊ ಮಯಗಳಾದ ದೇಹವಾಗಿಯೂ ಇಂದ್ರಿಯವಾಗಿಯೂ ಅನುಭವಿಸಲು ಯೋಗ್ಯವಾದ ಭೋಗ್ಯಪದಾರ್ಥವಾ

ಗಿಯೂ ಇರುವ ಶಬ್ದಾದಿ ವಿಷಯಗಳಿಂದ ಅವನು ತಿರೋಹಿತನಾಗಿರು ತ್ತಾನೆಂತಲೂ ಮಹಾ ಶ್ರೇಷ್ಠವಾದ ಸುಕೃತ ವಿಶೇಷದಿಂದುಂಟಾದ ಭಗವಚ್ಛರಣಾರವಿಂದ ಶರಣಾಗತಿಯಿಂದಲೆ ಆತಿರೋಧಾನದ ಪರಿಹಾರ ವೆಂತಲೂ ಸುಕೃತ ತಾರತಮ್ಯಾಧೀನವಾದ ಪ್ರಪತ್ತಿ ವಿಶೇಷದಿಂದುಂ ಟಾದ ಐಶ್ವರ್ಯ ಕೈವಲ್ಯ ಭಗವತ್ಪ್ರಾಪ್ತಿಯೆಂಬ ಅಪೇಕ್ಷಾ ವಿಶೇಷಾ ಧೀನವಾಗಿರುವ ಉಪಾಸಕ ಭೇದಗಳು—ಭಗವತ್ಪ್ರಾಪ್ತಿಯನ್ನಪೇಕ್ಷಿ ಸುವ ಪ್ರಬುದ್ಧಾಧಿಕಾರಿಯಾದ ಜ್ಞಾನಿಯ ಶ್ರೈಷ್ಠ್ಯವೂ ಹೇಳಲ್ಪ ಡುವುದು.

ಶ್ರೀಮನ್ನಿಗಮಾನ್ತ ಮಹಾದೇಶಿಕ ವಿರಚಿತವಾದ
ಶ್ರೀಮದ್ಗೀತಾರ್ಥಸಙ್ಗ್ರಹಕ ಸಪ್ತಮಾಧ್ಯಾಯ
ಗಾಥೆಯು.



ತಾನಿನ್ಱವುಣ್ಮೈಯೈತ್ತನ್ನಿಮಾಯ್ಯೈಮಱೈತ್ತಮೆಯು
ಮ್ತಾನನ್ನಿಮಾಯೈತನೈತ್ತಪಿರ್ಪ್ಪಱಪಿರಕತ್ತಮ್ಮೈಯುಮೆ.
ಮೇನಿನ್ಱ ಪತ್ತರ್ಕಣಾಲ್ವರಿಱ ಞಾನಿರ್ಱಮೇಱಮ್ಮೈ
ಕಳುಮ್, ತೇನಿನ್ಱಶೆಙ್ಕೞಲಾಱತ್ಶೆಳಿವಿತ್ತನಱಪಾಱ್ತ್ತನುಕ್ಕೇ.

“ಸ್ವಯಾಥಾತ್ಮ್ಯಂಪ್ರಕೃತ್ಯಾಸ್ಯ„ ಎಂಬ ಶ್ರೀ ಯಾಮುನಾ ಚಾರ್ಯೋಕ್ತವಾದ ಸಙ್ಗ್ರಹ ಶ್ಲೋಕದಂತೆ ಸಪ್ತಮಾಧ್ಯಾಯಾ ರ್ಥಗಳಂ ದ್ರಾವಿಡ ಸೂಕ್ತಿರಸಿಕ ಚಿತ್ತರಂಜನಾರ್ಥವಾಗಿ ಒಂದು ಗಾಥೆ ಯಿಂದ ಸಂಗ್ರಹಿಸುತ್ತಾರೆ. ತೇಱ-ಮಧುವು, ನಿನ್ಱ-ನಿಲ್ಲುವಸ್ಥಾನ ವಾದ, ಶೆಙ್ಕೞಲಾಱ-ಕೆಂಪಾಗಿರುವ ಶ್ರೀಪಾದಗಳುಳ್ಳ, (ಮಕರಂದ ಭರಿ ತಕೋಕನದ ಸದೃಶ ಚರಣನಾದ ಶ್ರೀಪರಮ ಪುರುಷನೆಂದರ್ಥವು) ಇ ದರಿಂದ ಭಗವಚ್ಛರಣಾರವಿಂದೋಪಾಸನಕ್ಕೆ ಅತ್ಯಂತಪ್ರಿಯರೂಪ ತೆಯು-ಸೂಚಿತವಾಯಿತು, ತಾಱ-ಸ್ವೇತರವಿಲಕ್ಷಣನಾದ ತಾನು, ನಿ ನ್ಱ- ಪ್ರಮಾಣ ಪ್ರತಿಪನ್ನನಾಗಿರುವಿಕೆಯುಂ ಹೊಂದಿರುವ, ಉಣ್ ಮೈಯ್ಯ-ಯಾಥಾತ್ಮ್ಯವನ್ನು, ಅಷ್ಟಕಾರಂಭ ಭಾಷ್ಯಾನು ಭಾಷಿತ ವಾದ ನಿಖಿಲ ಚೇತನಾ ಚೇತನ ವಸ್ತು ಶೇಷಿತ್ವಕಾರಣತ್ವಾಧಾರತ್ವ

ಸರ್ವಶರೀರಿತ್ವ ಸರ್ವಪ್ರಕಾರತ್ವ ಸರ್ವಶಬ್ದ ವಾಚ್ಯತ್ವ ಸರ್ವಕಲ್ಯಾಣ ಗುಣಗಣಪ್ರಯುಕ್ತ ಪರತ್ವಾದಿ ರೂಪವಾದ ಸ್ವಯಾಥಾತ್ಮ್ಯವನ್ನೆಂದರ್ಥವು ತರ್-ತನ್ನ, ತನಗೆ ಶೇಷಭೂತೆಯಾಗಿರುವ ಎಂದರ್ಥವು, ತನಿ-ಅದ್ವಿತೀಯೆ ಯಾಗಿರುವ, (ಇದರಿಂದ "ದೈವೀಹ್ಯೇಷಾ ಗುಣಮಯೀಮಮ ಮಾಯಾದುರತ್ಯಯಾ ,, ಎಂಬುವಸ್ಥಾನದಲ್ಲಿ ಗುಣಮಯ ಎಂಬ ಮಯಟ್ ಪ್ರತ್ಯಯವು ಪ್ರಾಚುರ್ಯಪರವಾಗಿ ಸ್ವಾರ್ಥಿಕವಲ್ಲದೇ ಇರುವುದರಿಂದ " ಸತ್ವ... ಸ್ತ್ರೀಪೋರೂಪದ್ರವ್ಯತ್ರಯಾತ್ಮಿಕಾ ಮೂಲಪ್ರಕೃತಿಃ ,, ಎಂಬ ಸಾಂಖ್ಯದರ್ಶನವನುಚಿತವೆಂದು ಸೂಚಿತವಾಯಿತು. ಮಾಯೈ - ಪ್ರಕೃತಿಯು, ಮರೈತ್ತನವುಮ್-ಆಚ್ಛಾದನೆಯಂ ಮಾಡಿದ ಪ್ರಕಾರವನ್ನೂ, ದೇಹೇಂದ್ರಿಯಾದಿರೂಪದಿಂದ ಪರಿಣತವಾದ ಪ್ರಕೃತಿಯು ಸ್ವರೂಪ ಯಥಾತ್ಮ್ಯತಿರೋಧಾನವಂ ಮಾಡಿದ ಪ್ರಕಾರವನ್ನೂ ಎಂದರ್ಥವು, ಮಾಯೈತನ್ನೈ - ಪೂರ್ವೋಕ್ತವಾದ ಪ್ರಕೃತಿಯನ್ನು, ತವಿರ್ಕ- ತ್ಯಾಗಮಾಡುವುಕ್ಕೆ, ಮಾಯಾಕೃತವಾದ ಭಗವತ್ಸ್ವರೂಪ ಯಥಾತ್ಮ್ಯತಿರೋಧಾನವು ನಿವೃತ್ತವಾಗುವುದಕ್ಕೆಂದು ತಾತ್ಪರ್ಯವು. ತಾನಿನ್ನಿ - ತನ್ನಂಬಿಟ್ಟು, ವಿರಕು-ಉಪಾಯವು, ಅತ್ತಮೈಯುಮ್-ಇಲ್ಲದಿರುವಿಕೆಯನ್ನೂ, " ಮಾಮೇವಯೇ ಪ್ರಪದ್ಯಂತೇ ಮಾಯಾಮೇತಾಂತರಂತಿತೇ" ( ೭॥ ೧೪॥ ) ಎಂಬಂತೆ ಮಾಯಾತರಣಕ್ಕಾಗಿ ಭಗವಚ್ಚರಣಾರವಿಂದ ಶರಣಾಗತಿಯಂಬಿಟ್ಟು ಬೇರೆಯಾಗಿರುವ ಉಪಾಯ ದುರ್ಭಿಕ್ಷತೆಯನ್ನೆಂದರ್ಥವು. ಇಲ್ಲಿ "ವಿರಕತ್ತಮೈಯುಮ್ " ಎಂಬ ಆಕಿಂಚನ್ಯೋಕ್ತಿಯಿಂದಲೆ ಶರಣಾಗತಿಯು ಫಲಿತವಾಯಿತು. ಮೇನಿನ್ನ-ಮೇಲೆ ಇರುತಲಿರುವ, "ಚತುರ್ವಿಧಾಭಜಂತೆಮಾಂ "ಎಂಬಂತೆ ಪರಮಪುರುಷ ತದೀಯ ದಿವ್ಯಾಭಿಮಾನ ವಿಷಯಭೂತರಾಗಿರುವುದರಿಂದ ಇತರಾಧಿ ಕಾರಿಗಳಿಗಿಂತಲೂ ಉನ್ನತಸ್ಥಾನದಲ್ಲಿರುವ ಎಂದರ್ಥವು. ನಾಲ್ವರ್- ಚತುರ್ವಿಧರಾದ, "ಆರ್ತೋಜಿಜ್ಞಾಸುರರ್ಥಾರ್ಥೀ" (೭॥ ೨೬॥) ಎಂಬಂತೆ ಚತುರ್ವಿಧರಾದ ಎಂದರ್ಥವು, ಪತ್ತರಿಲ್- ಭಕ್ತರಲ್ಲಿ, ಞಾನಿರ್ತ- ಜ್ಞಾನಿಯಾದವನ, ಮೇಣ್ಮೈಕಳುಮ್- ಉತ್ಕರ್ಷಗಳನ್ನೂ, ಜ್ಞಾನಿಶಬ್ದ ನಿರ್ದಿಷ್ಟನಾದ ಭಗವತ್ಪ್ರಾಪ್ತಿಯನ್ನಪೇಕ್ಷಿಸುವವನ ನಿತ್ಯತ್ವ ಏಕಭಕ್ತಿತ್ವ ಪರಮ

ಪುರುಷ ಪ್ರಿಯತ್ವಾದಿ ಪ್ರಯುಕ್ತ ಶ್ರೈಷ್ಠ್ಯವನ್ನೆಂದರ್ಥವು. ಪಾರ್ತ್ಥನುಕ್ಕು-ಪಾರ್ಥನಾದ ಅರ್ಜುನನಿಗೆ, ತಿಳಿವಿತ್ತನರ್ಕ- ವಿಶದವಾಗಿಉಪದೇಶಿಸಿದನು. ... ... ... ‖೮‖

ಶ್ರೀಮದ್ಗೀತಾರ್ಥಸಾರದಲ್ಲಿ ಸಪ್ತಮಾಧ್ಯಾಯವು.
ಸಮಾಪ್ತವಾಯಿತು.

ಶ್ರೀವಾಸುದೇವಾರ್ಪಣಮಸ್ತು.

ಶ್ರೀಯೈನಮಃ.
ಶ್ರೀ ಶ್ರೀನಿವಾಸ ಪರಬ್ರಹ್ಮಣೇನಮಃ.
ಶ್ರೀಮದ್ಗೀತಾರ್ಥಸಾರೆ ಅಷ್ಟಮಾಧ್ಯಾಯ ಪ್ರಾರಂಭಃ.

ಶ್ಲೋ‖ ಅರ್ಜುನಉವಾಚ ‖ಕಿಂತದ್ಬ್ರಹ್ಮಕಿಮಧ್ಯಾತ್ಮಂ
ಕಿಂಕರ್ಮಪುರುಷೋತ್ತಮ | ಅಧಿಭೂತಂಚಕಿಂಪ್ರೋಕ್ತ
ಮಧಿದೈವಂಕಿಮುಚ್ಯತೆ ‖ ... ‖೧‖
ಅಧಿಯಜ್ಞಃಕಥಂಕೋತ್ರದೇಹೇಸ್ಮಿನ್ಮಧುಸೂದನ।ಪ್ರ
ಯಾಣಕಾಲೇಚಕಥಂಜ್ಞೇಯೋಸಿನಿಯತಾತ್ಮಭಿಃ‖ ೨ ‖

ಪ‖ ಅರ್ಜುನಃ- ಉವಾಚ‖ ಕಿಂ-ತತ್- ಬ್ರಹ್ಮ- ಕಿಂ- ಅಧ್ಯಾತ್ಮಂ- ಕಿಂ- ಕರ್ಮ- ಪುರುಷೋತ್ತಮ। ಅಧಿಭೂತಂ- ಚ- ಕಿಂ- ಪ್ರೋಕ್ತಂ- ಅಧಿದೈವಂ- ಕಿಂ- ಉಚ್ಯತೇ‖೧‖ಅಧಿಯಜ್ಞಃ- ಕಥಂ- ಕಃ- ಅತ್ರ- ದೇಹೇ- ಅಸ್ಮಿನ್- ಮಧುಸೂದನ। ಪ್ರಯಾಣಕಾಲೇ- ಚ- ಕಥಂ- ಜ್ಞೇಯಃ- ಅಸಿ- ನಿಯತಾತ್ಮಭಿಃ‖೨‖

(ಅ‖ ರಾ‖ ಭಾ‖) ಅರ್ಜುನ ಉವಾಚ- ಅರ್ಜುನನು ಹೇಳಿದನು. ಹೇಪುರುಷೋತ್ತಮ- ಪುರುಷಶ್ರೇಷ್ಠನಾದ ಎಲೈ ಶ್ರೀಕೃಷ್ಣ ಪರಮಾತ್ಮನೆ! ತದ್ಬ್ರಹ್ಮಕಿಂ? ಅಧ್ಯಾತ್ಮಂಕಿಂ? ಕರ್ಮಕಿಂ? ಜರಾಮರಣ ಮೋಕ್ಷಕ್ಕಾಗಿ ತಮ್ಮನ್ನಾಶ್ರಯಿಸಿ ಪ್ರಯತ್ನವನ್ನು ಮಾಡುವಂತವರಿಗೆ ಜ್ಞಾತವ್ಯವೆಂಬವಾಗಿ ಹೇಳಿರುವ ಆಬ್ರಹ್ಮವೆಂಬುವುದು ಯಾವದು? ಅಧ್ಯಾತ್ಮವೆಂಬುವುದು ಯಾವದು? ಕರ್ಮವೆಂಬುವುದು ಯಾವದು?, ಪ್ರೋಕ್ತಮಧಿಭೂತಂಚಕಿಂ? ಪ್ರೋಕ್ತಮಧಿದೈವಂಕಿಮುಚ್ಯತೆ?- ಐಶ್ವರ್ಯಾರ್ಥಿಗಳಿಗೆ ಜ್ಞಾತವ್ಯವಾದ ಅಧಿ

ಭೂತವೆಂಬುವುದುಯಾವದು? ಅವರುಗಳಿಗೇನೆ ಜ್ಞಾತವ್ಯವೆಂಬದಾಗಿ ನಿರೂಪಿಸಲ್ಪಟ್ಟ ಅಧಿದೈವವೆಂಬುವುದು ಯಾವದು?, ಅತ್ರಾಧಿಯಜ್ಞಃಕಥಂ? ತ್ರಿವಿಧಾಧಿಕಾರಿಗಳಿಗೂ ಜ್ಞಾತವ್ಯವೆಂಬದಾಗಿ ನಿಯಮಿಸಲ್ಪಟ್ಟ ಅಧಿಯಜ್ಞ ಶಬ್ದಾರ್ಥವು ಯಾವದು? ಅದು ಹೇಗೆ ಅಧಿಯಜ್ಞವಾಯಿತು? ಮಧುಸೂದನ- ಆಶ್ರಿತರ ವಿರೋಧಿಗಳನ್ನು ನಿರಸನಮಾಡತಕ್ಕ ಎಲೈ ಶ್ರೀಕೃಷ್ಣನೆ, ಅಸ್ಮಿನ್ದೇಹೇ- ಈಸಾಧನಾನುಷ್ಠಾನ ದೇಹದಲ್ಲಿ, ನಿಯತಾತ್ಮಭಿಃ-ಯೋಗಾಭ್ಯಾಸಬಲದಿಂದ ಸ್ವಾಧೀನಮನಸ್ಕರಾದ ಈಮೂರು ಅಧಿಕಾರಿಗಳಿಂದಲೂ, ಪ್ರಯಾಣಕಾಲೇ- ಪ್ರಾಣೋತ್ಕ್ರಮಣಕಾಲದಲ್ಲಿ, ಕಥಂಜ್ಞೇಯೋಸಿ ಹೇಗೆ- ನೀವು ಸ್ಮರಿಸಲ್ಪಡತಕ್ಕವರೋ, ಆ ಅರ್ಥವನ್ನೂ ಅನುಗ್ರಹಿಸಿ ಹೇಳಬೇಕು. ॥೧॥೨॥

(ಶಂ॥ ಭಾ) ಏಳನೆಅಧ್ಯಾಯದ ಕಡೆಯಲ್ಲಿ, "ಏಷಾಂತ್ವಂತಗತಂಪಾಪಂ" (೭-೨೮) ಎಂಬಿದೇ ಮೊದಲಾದಶ್ಲೋಕಗಳಿಂದ ಬ್ರಹ್ಮಚರ್ಯಾದಿ ವ್ರತಗಳುಳ್ಳವರಿಗೆ ಹೇಳಲ್ಪಟ್ಟ ಬ್ರಹ್ಮ- ಅಧ್ಯಾತ್ಮ- ಕರ್ಮ- ಅಧಿಭೂತ- ಅಧಿದೈವ- ಅಧಿಯಜ್ಞಗಳ ಅನುಸಂಧಾನ ವಿಷಯವನ್ನು ಮರಣಕಾಲದಲ್ಲಿ ಭಗವತ್ಸ್ಮರಣ ವುಂಟಾಗುವುದೆಂದು ಹೇಳಿರುವವಿಷಯವನ್ನೂ ತಿಳಿದುಕೊಳ್ಳಬೇಕೆಂದಿಚ್ಛೈಸಿ (ಅಥವಾ) ಬ್ರಹ್ಮಾದಿಪದಗಳ ಅರ್ಥವನ್ನೂ ಮರಣಕಾಲದಲ್ಲಿ ಭಗವತ್ಸ್ಮರಣ ವುಂಟಾಗುವರೀತಿಯನ್ನು ತಿಳಿಯಲಿಚ್ಛೈಸಿದವನಾಗಿ ಅರ್ಜುನನು ಪ್ರಶ್ನೆಮಾಡುತ್ತಾನೆ. "ತೇಬ್ರಹ್ಮತದ್ವಿದುಃಕೃತ್ಸ್ನಂ" (೭-೨೯) ಎಂಬಿದೇಮೊದಲಾದ ಶ್ಲೋಕಗಳಿಂದ ಭಗವಂತನಾದ ಶ್ರೀಕೃಷ್ಣನಿಂದ ಪ್ರಶ್ನಬೀಜಗಳುಪದೇಶಿಸಲ್ಪಟ್ಟಿರುವುದರಿಂದ ಆಪ್ರಶ್ನಗಳಿಗಾಗಿ ಅರ್ಜುನನು ಪ್ರಶ್ನೆಮಾಡುತ್ತಾನೆ. ... ... ॥೧॥೨॥

(ಆ॥ ಗಿ॥) ಬ್ರಹ್ಮಶಬ್ದದಿಂದ ಸೋಪಾಧಿಕ ಬ್ರಹ್ಮನಿರುಪಾಧಿಕ ಬ್ರಹ್ಮಗಳಿಬ್ಬರು ಹೇಳಲ್ಪಡುವುದರಿಂದ ಇಲ್ಲಿನ ಬ್ರಹ್ಮಶಬ್ದಕ್ಕೆಸೋಪಾಧಿಕ ಬ್ರಹ್ಮವು ಅರ್ಥವೆ? ಅಥವಾ ನಿರುಪಾಧಿಕ ಬ್ರಹ್ಮವು ಅರ್ಥವೆ ? ಅಧ್ಯಾತ್ಮ ಶಬ್ದದಿಂದ ಅಧಿಷ್ಠಾನವಾದ ದೇಹದಲ್ಲಿರುವ ಶ್ರೋತ್ರಾದೀಂದ್ರಿಯ ಸಮುದಾಯವು ಹೇಳಲ್ಪಡುವುದೊ? ( ಅಥವಾ ) ಪ್ರತ್ಯಗ್ಭೂತವಾದ ಬ್ರಹ್ಮವು ಹೇಳಲ್ಪಡುವುದೊ? "ಕರ್ಮಚಾಖಿಲಂ (೭-೨೯) ಎಂಬ ಶ್ಲೋಕದಲ್ಲಿ ಹೇಳಿರುವ ಅಖಿಲ ಕರ್ಮಶಬ್ದದಿಂದ ಶ್ರುತಿಯಲ್ಲಿ ಯರಡುವಿಧಗಳಾಗಿ ಹೇಳಲ್ಪಟ್ಟಿರುವಶ್ರೌತಸ್ಮಾರ್ತ ಕರ್ಮಗಳಲ್ಲಿ ಯಾವ ಕರ್ಮವು ಹೇಳಲ್ಪಟ್ಟಿರುವುದು? ಅಧಿಭೂ

ತಶಬ್ದದಿಂದ ಪೃಥಿವ್ಯಾದಿ ಭೂತಗಳಲ್ಲಿ ಯಾವದಾದರೊಂದು ಭೂತವು ಹೇಳಲ್ಪಟ್ಟಿತೋ?ಅಥವಾ ಸಮಸ್ತಭೂತಗಳು ಗ್ರಹಿಸಲ್ಪಡತಕ್ಕದ್ದೋ? ಅಧಿದೈವಶಬ್ದದಿಂದ ದೈವತ ವಿಷಯವಾದ ಅನುಧ್ಯಾನವು ಹೇಳಲ್ಪಟ್ಟಿರುವುದೋ? ಅಥವಾ, ಆದಿತ್ಯಮಂಡಲಾದಿಗಳಲ್ಲಿ ಪ್ರವರ್ತಿಸಿರುವ ಚೈತನ್ಯವು ಹೇಳಲ್ಪಡುವುದೋ? ಅಧಿಯಜ್ಞಶಬ್ದದಿಂದ ಯಜ್ಞಾಧಿಷ್ಠಾತಾ ಆಗಿರುವ ವಿಜ್ಞಾನಾತ್ಮವು ಹೇಳಲ್ಪಟ್ಟಿರುವುದೋ? (ಅಥವಾ ಪರದೇವತೆಯು ಹೇಳಲ್ಪಟ್ಟಿರುವುದೋ? ಎಂದರೆ ಅಧಿಯಜ್ಞಶಬ್ದಕ್ಕೆ ಯಜ್ಞಾಚರಣಾಧಿಕಾರಿಯಾದ ಜೀವನು ಅರ್ಥವೋ?(ಅಥವಾ)ಪರಬ್ರಹ್ಮವರ್ಥವೋ? ಅಂತಹ ಯಜ್ಞಶಬ್ದವಾಚ್ಯನನ್ನು ಅವನೇನಾನು, ನಾನೆ ಅವನು ಎಂಬದಾಗಿ ಧ್ಯಾನಮಾಡಬೇಕೋ? (ಅಥವಾ) ಅವನು ಬೇರೆ, ನಾನುಬೇರೆ, ಎಂಬದಾಗಿ ಧ್ಯಾನಿಸಬೇಕೋ? ಅಂತವನು ಈದೇಹದಲ್ಲಿಯೆ ಇರುತ್ತಾನೆಯೋ? (ಅಥವಾ) ದೇಹಕ್ಕಿಂತಲೂ ಹೊರಗಿರುತ್ತಾನೆಯೋ? ದೇಹದಲ್ಲಿರುತ್ತಾನೆಂದರೆ ಅವನು ಬುದ್ಧ್ಯಾದಿಗಳಲ್ಲಿ ಒಬ್ಬನೇ?(ಅಥವಾ ಅವುಗಳಿಗೆಲ್ಲವೂ ವಿಲಕ್ಷಣನಾಗಿ ಬೇರೆಯಾಗಿರುತ್ತಾನೋ? ಪ್ರಾಣೋತ್ಕ್ರಮಣಕಾಲದಲ್ಲಿಯೂ ನಿಶ್ಚಲಚಿತ್ತವುಳ್ಳವರಿಗೆ ಬ್ರಹ್ಮಾನುಸಂಧಾನವುಂಟಾಗುವುದೆಂಬದಾಗಿ ಹೇಳುತ್ತೀರಲ್ಲವೆ, ಒಂದುವೇಳೆ ಶರೀರ ದಾರ್ಢ್ಯಾದಿಗಳುಳ್ಳಕಾಲದಲ್ಲಿ ಇಂದ್ರಿಯ ಸಮುದಾಯವು ಸ್ವಾಧೀನವಾಗಿದ್ದರೂ ಮರಣಕಾಲದಲ್ಲಿ ಇಂದ್ರಿಯಗಳು ಅತ್ಯಂತ ಕ್ಷೋಭವನ್ನು ಹೊಂದಿರುವುದರಿಂದ ಆಕಾಲದಲ್ಲಿ ಸಮಾಹಿತ ಚಿತ್ತತ್ವವೆ ಸಂಭವಿಸುವುದಿಲ್ಲವಾದುದರಿಂದ ಭಗವಂತನಾದ ನಿನ್ನನ್ನು ಸ್ಮರಣೆಮಾಡುವುದು ಹೇಗೆ? ಎಂಬೀ ಪ್ರಶ್ನೆಗಳನ್ನರ್ಜುನನು ಮಾಡಿದನೆಂದರಿಯಬೇಕು. ಪುರುಷೋತ್ತಮಶಬ್ದದಿಂದ ಕ್ಷರಾಕ್ಷರಗಳಿಗಿಂತಲೂ ಅತೀತನಾಗಿರುವ ಭಗವದ್ವಾಸುದೇವನಾದ ನಿನಿಗೆ ತಿಳಿಯದೇಇರುವುದುಯಾವದೂಯಿಲ್ಲವೆಂದು ತೋರುತ್ತದೆ.॥೧॥೨॥

(ಶ್ಲೋ) ಬ್ರಹ್ಮಕರ್ಮಾಧಿಭೂತಾನಿವಿದುಃಕೃಷ್ಣೈಕಚೇತಸಃ।
ಆತ್ಯೈಕ್ಯಂಬ್ರಹ್ಮಕರ್ಮಾದಿ ಸ್ಪಷ್ಟಮಷ್ಟಮಉಚ್ಯತೇ ॥ ಕೃಷ್ಣೈಕ ಚೇತತ್ಪರವಾದಮನಸ್ಸುಳ್ಳವರು ಬ್ರಹ್ಮಕರ್ಮಾದಿಗಳನ್ನು ತಿಳಿಯುತ್ತಾ

ರೆಂಬದಾಗಿ ಹೇಳಲ್ಪಟ್ಟ ಬ್ರಹ್ಮಕರ್ಮಾದಿಗಳನ್ನು ಸ್ಪಷ್ಟವಾಗಿ ಈಅಷ್ಟ ಮಾಧ್ಯಾಯದಲ್ಲಿಹೇಳುತ್ತಾರೆ. ... ||೧||೨||

(ರಾ|| ಭಾ||) ಏಳನೇಅಧ್ಯಾಯದಲ್ಲಿ ಸರ್ವೋಪಾಸ್ಯನಾದ ಪರ ಬ್ರಹ್ಮವಾಗಿರುವ ವಾಸುದೇವನು ಚೇತನಾಚೇತನಗಳಿಗೆ ಶೇಷಿಯೆಂಬ ದಾಗಿಯೂ ಕಾರಣನೆಂಬದಾಗಿಯೂ ಆಧಾರನೆಂಬದಾಗಿಯೂ ಸರ್ವಪ ದಾರ್ಥಗಳಿಗೂ ಶರೀರಿಯಾಗಿರುವುದರಿಂದ ಸರ್ವಪ್ರಕಾರದಿಂದಲೂ ಸರ್ವ ಶಬ್ದ ವಾಚ್ಯನೆಂಬದಾಗಿಯೂ ಸರ್ವನಿಯಾಮಕನೆಂಬದಾಗಿಯೂ ಸಮ ಸ್ತಗಳಾದ ಕಲ್ಯಾಣಗುಣಗಳಿಂದ ಅವನೇ ಯೆಲ್ಲರಿಗಿಂತಲೂ ಶ್ರೇಷ್ಠ ನೆಂತಲೂ, ಸತ್ವ ರಜಸ್ತಮೋಮಯಗಳಾಗಿಯೂ, ದೇಹರೂಪವಾ ಗಿಯೂ ಇಂದ್ರಿಯರೂಪವಾಗಿಯೂ ಅನುಭವಿಸಲು ಯೋಗ್ಯವಾದ ಭೋಗ್ಯಪದಾರ್ಥವಾಗಿಯೂ ಇರುವ ಅನಾದಿಕಾಲದಿಂದಪ್ರವೃತ್ತವಾ ಗಿರುವ ಪಾಪ ಪ್ರವಾಹದಿಂದುಂಟಾಗಿರುವ ಶಬ್ದಾದಿ ವಿಷಯಗಳಿಂದ ಆಭಗವತ್ಸ್ವರೂಪ ತಿರೋಧಾನ ಪ್ರಕಾರವೂ, ಅತಿ ಶ್ರೇಷ್ಠವಾದ ಸುಕೃತ ವಿಶೇಷದಿಂದುಂಟಾಗುವ ಭಗವಚ್ಛರಣಾರವಿಂದ ಶರಣಾಗತಿ ಯಿಂದ ಆಪರಮಾತ್ಮನ ತಿರೋಧಾನ ನಿವರ್ತನಪ್ರಕಾರವೂ, ಸುಕೃತ ತಾರತಮ್ಯಾನುಗುಣವಾಗಿ ಆವನು ಮಾಡುವ ಶರಣಾಗತಿ ವಿಶೇಷದಿಂದ ಐಶ್ವರ್ಯ- ಕೈವಲ್ಯ-ಭಗವತ್ಪ್ರಾಪ್ತಿ-ಎಂಬಿವುಗಳ ಅಪೇಕ್ಷೆಯಿಂದುಂ ಟಾದ ಉಪಾಸಕರಭೇದವೂ, ಭಗವತ್ಪ್ರಾಪ್ತಿ ಯನ್ನಪೇಕ್ಷಿಸುವಂತೆ ವನು ಯಾವಾಗಲೂ ಅವನನ್ನೇ ನಂಬಿಕೊಂಡು ಅವನಲ್ಲಿ ವಿಶೇಷ ಭಕ್ತಿಯುಳ್ಳವನಾಗಿ ಪರಮಪುರುಷನಿಗೆ ಅತ್ಯಂತ ಪ್ರೀತಿಪಾತ್ರನಾಗಿರು ವುದರಿಂದ ಇವನಿಗೆ ಉಪಾಸಕರೆಲ್ಲರಿಗಿಂತಲೂ ಅತ್ಯಂತ ಶ್ರೈಷ್ಠ್ಯವೂ, ಇಂತವನ ಅತ್ಯಂತ ದೌರ್ಲಭ್ಯವೂ ಪ್ರತಿಪಾದಿಸಲ್ಪಟ್ಟು ಈಮೂರಧಿ ಕಾರಿಗಳಿಗೂ ತಿಳಿಯಬೇಕಾದ ಅರ್ಥಗಳನ್ನು ಪ್ರಸ್ತಾವಿಸಿದನು. ಈ ಅಷ್ಟಮಾಧ್ಯಾಯದಲ್ಲಿ ತಿಳಿಯತಕ್ಕದ್ದಾಗಿಯೂ ಹೊಂದತಕ್ಕದ್ದಾಗಿ ಯೂ ಇರುವಂತೆ ಪ್ರಸ್ತಾವಿಸಲ್ಪಟ್ಟ ಅರ್ಥಗಳನ್ನು ವಿವರಿಸಿಬೋಧಿ ಸುತ್ತಾನೆಂದರಿಯಬೇಕು. ... ೧|| ೨||

(ಗೀ|| ವಿ||) "ತೇಬ್ರಹ್ಮತದ್ವಿದುಃ"(೭-೨೯) "ಪ್ರಯಾಣಕಾ ಲೇಪಿಚಮಾಂತೇವಿದುರ್ಯುಕ್ತಚೇತಸಃ (೭-೩೦)ಎಂಬೀಅರ್ಥಗಳವ್ಯಾ

ಖ್ಯಾನ ವೀಅಧ್ಯಾಯದಲ್ಲಿ ಮುಖ್ಯವಾಗಿಮಾಡಲ್ಪಡುವುದು. ಪ್ರಯಾಣ ಕಾಲ ಪ್ರಸಂಗದಿಂದ ಅಂತಕಾಲ ಸ್ಮರಣಫಲವೂಅದುಂಟಾಗುವುದಕ್ಕೆ ತಕ್ಕ ಸಾಧನವೂ ಬ್ರಹ್ಮಪ್ರಾಪ್ತಿಗೆ ಯೋಗ್ಯವಾದಮಾರ್ಗವೂನಿರೂಪಿ ಸಲ್ಪಡುವುದರಿಂದ ಪೂರ್ವೋತ್ತರಾಧ್ಯಾಯಗಳಪೌರ್ವಾಪರ್ಯಭೇದಾದಿಗ ಳೂತಿಳಿಯತಕ್ಕವುಗಳಾಗಿರುವುವು. ಸ್ಮರಣ ವಿಷಯತ್ವಪ್ರಾಪ್ಯತ್ವರೂ ಪವಾದ ಭಗವನ್ಮಹಿಮಾನುವರ್ಣನ ಪರವಾಗಿರುವುದರಿಂದ ಈಅಧ್ಯಾ ಯಕ್ಕೆ ಭಗವನ್ಮಹಿಮಾಪ್ರದರ್ಶಕವಾದ ಮಧ್ಯಮ ಷಟ್ಕಾಂತರ್ಭಾವ ವನ್ನೂ ತಿಳಿಯಬೇಕು. ಪೂರ್ವಾಧ್ಯಾಯಾಂತ್ಯದಲ್ಲಿ 'ತದ್ಬ್ರಹ್ಮ ವಿದುಃ' ಎಂಬ ಪರೋಕ್ಷ ನಿರ್ದೇಶದಿಂದ ಬ್ರಹ್ಮವು ಭಗವಂತನಾದ ಶ್ರೀಕೃಷ್ಣನಿಗಿಂತಲೂ ಬೇರೆಯೆಂಬದಾಗಿ ತಿಳಿಯಬರುತ್ತದೆ. ಇದೆ ಉತ್ತರಶ್ಲೋಕದಲ್ಲಿಯೂ "ಸಾಧಿಭೂತಂ- ಸಾಧಿದೈವಂ- ಸಾಧಿ ಯಜ್ಞಂ- ಮಾಂಚವಿದುಃ" ಎಂಬ ಯೋಜನೆಯಿಂದ ಭಗವತ್ಜ್ಞಾನ ಕ್ಕಿಂತಲೂ ಬ್ರಹ್ಮಜ್ಞಾನವೂ ಬೇರೆಯಾಗಿರುವುದೆಂದು ತಿಳಿಯಬರು ತ್ತದೆ. "ವಾಸುದೇವಾತ್ಮಕಂಬ್ರಹ್ಮ" ಇತ್ಯಾದಿ ಪ್ರಮಾಣಗಳಲ್ಲಿ ಭಗವಂತನೆ ಬ್ರಹ್ಮ ಎಂದು ತಿಳಿಯಬರುತ್ತದೆ. ಆದುದರಿಂದ ಈವಿ ಪ್ರತಿಪತ್ತಿಯುಂಟಾಗಲೂ ಸಂಶಯಗ್ರಸ್ತನಾಗಿ ಅರ್ಜುನನು ಪ್ರಶ್ನೆ ಮಾಡುತ್ತಾನೆ. ಮೊದಲನೇ ಶ್ಲೋಕದಲ್ಲಿ ಕಿಂ ಎಂಬುವುದಾಗಿ ಬ್ರ ಹ್ಮಾದಿವಿಷಯಕವಾದ ಸ್ವರೂಪ ಪ್ರಶ್ನೆವೆಂತಲೂ, ಯರಡನೇಶ್ಲೋಕ ದಲ್ಲಿ ಕಥಂ? ಎಂಬುವುದಾಗಿ ಪ್ರಕಾರಪ್ರಶ್ನೆವೆಂತಲೂತಿಳಿಯಬೇಕು. ಈದೇಹದಲ್ಲಿ ಅಧಿಯಜ್ಞವೆಂಬುವುದು ಹೇಗೆ? ಎಂಬದಾಗಿ ಪ್ರಕಾರ ಪ್ರಶ್ನೆವು. ಈ ದೇಹದಲ್ಲಿ ಅಧಿಯಜ್ಞನು ಯಾವನೆಂಬದಾಗಿ ಸ್ವರೂ ಪಪ್ರಶ್ನೆವು, ಈದೇಹದಲ್ಲೆಂಬ ಯರಡುಪದಗಳ ಕೃತ್ಯವೂ ಮುಂದೆ ಇವುಗಳಿಗೆ ಸಮಾಧಾನ ಹೇಳುವ ವಾಕ್ಯದಲ್ಲಿ ವಿವೃತವಾಗುವುದು. ಮರಣಕಾಲದಲ್ಲಿ ಯೆಂತಹ ಪ್ರಯೋಜನಕ್ಕಾಗಿ ಯೆಂತಹ ಬ್ರಹ್ಮನು ಯಾವಪ್ರಕಾರದಿಂದ ಸ್ಮರಿಸಲ್ಪಡತಕ್ಕವನೆಂಬೀ ಪ್ರಶ್ನಾರ್ಥಗಳಂ ತಿಳಿಯಬೇಕು. ... ॥೧॥೨॥

ಶ್ಲೋ ॥ ಶ್ರೀಭಗವಾನುವಾಚ॥ ಅಕ್ಷರಂಬ್ರಹ್ಮಪರಮಂ

ಸ್ವಭಾವೋಽಧ್ಯಾತ್ಮಮುಚ್ಯತೇ। ಭೂತಭಾವೋದ್ಭವಕರೋ
ವಿಸರ್ಗಃಕರ್ಮಸಂಜ್ಞಿತಃ ॥ ।೩।

ಪ॥ ಶ್ರೀಭಗವಾನ್- ಉವಾಚ, ಅಕ್ಷರಂ- ಬ್ರಹ್ಮ- ಪರಮಂ, ಸ್ವಭಾವಃ- ಅಧ್ಯಾತ್ಮಂ-ಉಚ್ಯತೇ। ಭೂತಭಾವೋದ್ಭವಕರಃ- ವಿಸರ್ಗಃ- ಕರ್ಮಸಂಜ್ಞಿತಃ ॥

ಶ್ರೀಭಗವಾನುವಾಚ- ಶ್ರೀಕೃಷ್ಣನು ಹೇಳಿದನು. ಪರಮಂ ಬ್ರಹ್ಮ- "ಕಿಂತತ್ ಬ್ರಹ್ಮ" ಎಂಬದಾಗಿ ಪ್ರಶ್ನಿಸಲ್ಪಟ್ಟ ವಸ್ತುವು, ಪರಮುಕ್ಷರಂ- ನಾಶರಹಿತವಾದ ವುತ್ತಮವಾಗಿರುವ ಆತ್ಮಸ್ವರೂಪವೆನ್ನಲ್ಪಡುವುದು. ಸ್ವಭಾವಃ- ಭೂತಸೂಕ್ಷ್ಮವೂ ಅದರ ವಾಸನೆಗಳೂ, ಅಧ್ಯಾತ್ಮಮುಚ್ಯತೇ-ಅಧ್ಯಾತ್ಮವೆನ್ನಲ್ಪಡುವುದು. ಭೂತಭಾವೋದ್ಭವಕರಃ-ಪ್ರಾಣಿಗಳ ಭಾವವನ್ನುಂಟುಮಾಡುವ, ವಿಸರ್ಗಃ- ಸ್ತ್ರೀಸಂಬಂಧ ಜನ್ಯವಾದ ಶುಕ್ಲವಿಸರ್ಜನವು, ಕರ್ಮಸಂಜ್ಞಿತಃ. ಕರ್ಮವೆನ್ನಲ್ಪಡುವುದು. ॥೩॥

(ಶಂ॥ ಭಾ॥) ಪರಮಂ- ನಿರತಿಶಯವಾದ, ಅಕ್ಷರಂ- ನಾಶರಹಿತವಾದದ್ದು, ಬ್ರಹ್ಮ- ಬ್ರಹ್ಮವೆನ್ನಲ್ಪಡುವುದು. ಸ್ವಭಾವಃ-ಜೀವಸಂಜ್ಞೆಯುಳ್ಳ ಪ್ರತ್ಯಗಾತ್ಮಭಾವವು, ಅಧ್ಯಾತ್ಯಮುಚ್ಯತೇ- ಅಧ್ಯಾತ್ಮವೆನ್ನಲ್ಪಡುವುದು. ಭೂತಭಾವೋದ್ಭವಕರಃ- ಪ್ರಾಣಿಗಳಿಗೆ ಉತ್ಪತ್ತಿಯನ್ನುಂಟುಮಾಡುವ, ವಿಸರ್ಗಃ- ದೇವತೆಗಳನುದ್ದೇಶಿಸಿ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ಚರುಪುರೋಡಾಶಾದಿಗಳನ್ನು ಹೋಮವಂ ಮಾಡುವುದೆಂಬ ಯಜ್ಞವು, ಕರ್ಮಸಂಜ್ಞಿತಃ- ಕರ್ಮವೆಂಬದಾಗಿ ಹೆಸರುಳ್ಳದ್ದು, ಈಪೂರ್ವೋಕ್ತಗಳಾದ ಪ್ರಶ್ನೆಗಳಿಗೆ ಯಥಾಕ್ರಮವಾಗಿ ನಿರ್ಣಯವುಂಟಾಗಲೋಸುಗ ಪ್ರತ್ಯುತ್ತರವನ್ನು ಶ್ರೀಭಗವಚ್ಛಬ್ದವಾಚ್ಯನಾದ ಶ್ರೀಕೃಷ್ಣನು ಹೇಳುವನು. (ಯಥಾಕ್ರಮವಾಗಿ ಪ್ರಶ್ನೆಗಳಿಗೆ ಉತ್ತರವು ಹೇಗೆಂದರೆ ಅದಂ ತೋರಿಸುವೆವು.) 'ಕಿಂತದ್ಬ್ರಹ್ಮ ಎಂಬುವ ಪ್ರಶ್ನಕ್ಕೆ "ಅಕ್ಷರಂ ಬ್ರಹ್ಮಪರಮಂ" ಎಂಬುವ ವಾಕ್ಯವು ಪ್ರತ್ಯುತ್ತರವಾಗಿರುವುದು. ಮತ್ತು ಅವಿನಾಶಿತ್ವ ವ್ಯಾಪ್ತಿಮತ್ತ್ವಗಳೆಂಬೀ ಅರ್ಥಯುಕ್ತವಾಗಿರುವುದರಿಂದ ಅಕ್ಷರಶಬ್ದಕ್ಕೆ ನಿರುಪಾಧಿಕನಾದ ಪರಮಾತ್ಮನೇ ಅರ್ಥವೆಂದರಿಯಬೇಕು. ಆದರೆ ಅಕ್ಷರಶಬ್ದಕ್ಕೆ "ಓಮ್ ಎಂಬ ಒಂದಕ್ಷರವು ಬ್ರಹ್ಮವು, ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಓಂಕಾರವೂ ಅರ್ಥವಾಗುವುದರಿಂದ ವೃದ್ಧಪ್ರಯೋಗವಿಲ್ಲದೇನೆ ಅಕ್ಷರಶಬ್ದಕ್ಕೆ ನಿರುಪಾಧಿಕ ಪರಬ್ರಹ್ಮವರ್ಥವೆಂದು ಹೇಳುವುದು ಯುಕ್ತವೋ? ಎಂಬಸಂದೇಹಕ್ಕೆ ಆಸ್ಪದವಂಕೊಡದೆ" ರಾಜಾ

ಜ್ಞೆಯಲ್ಲಿ ರಾಜ್ಯವು ಚಲಿಸದೇ ಇರುವಂತೆ ಈಪರಮಾತ್ಮನ ಆಜ್ಞೆ ಯಲ್ಲಿ ಸರ್ವವೂ ನಿಯತಿಯನ್ನತಿಕ್ರಮಿಸದೇಇರುವುದು,, ಎಂಬಅರ್ಥ ಪ್ರತಿಪಾದಕವಾದ ಶ್ರುತಿಯಲ್ಲಿ ಹೇಳಲ್ಪಟ್ಟ ದ್ಯಾವಾಪೃಥಿವ್ಯಾದಿವಿಷ ಯಕವಾದ ನಿರಂಕುಶ ಪ್ರಶಾಸನವು (ದ್ಯಾವಾಪೃಥಿವ್ಯಾದಿ ಸರ್ವಕ್ಕೂ ನಿರಾತಂಕವಾಗಿ ಆಜ್ಞಾಪಿಸುವಿಕೆಯಂ ಪ್ರಶಾಸನವೆನ್ನುವರು.) ಪರ ಮಾತ್ಮಭಿನ್ನವಾದ ಓಂಕಾರಕ್ಕೆ ಸಂಭವಿಸುವುದಿಲ್ಲವಾದುದರಿಂದ ಅಕ್ಷ ರಶಬ್ದಕ್ಕೆ ನಿರುಪಾಧಿಕ ಬ್ರಹ್ಮವೇ ಅರ್ಥವೆಂದರಿಯಬೇಕು. ಆದರೂ ‹‹ರೂಢಿರ್ಯೋಗಮಪಹರತಿ" (ರೂಢಿಯೆಂಬುವುದು ಯೋಗವನ್ನಪಹರಿ ಸುತ್ತದೆ) ಎಂಬ ನ್ಯಾಯಾನುಸಾರವಾಗಿ ಅಕ್ಷರಶಬ್ದವು ವರ್ಣಸಮುದಾ ಯಾತ್ಮಕವಾದ ಓಂಕಾರದಲ್ಲಿ ರೂಢವಾಗಿರುವುದರಿಂದ ಅಕ್ಷರಶಬ್ದಕ್ಕೆ ಓಂಕಾರವೇ ಅರ್ಥವೆಂದು ನೆನಯದೆ ‹ಪರಂ‹ ಎಂಬ ವಿಶೇಷಣವಿರು ವುದರಿಂದ ಈ ವಿಶೇಷಣವು ಓಂಕಾರಕ್ಕೆ ಬರುವುದಿಲ್ಲವು, ಆದುದ ರಿಂದ ಅಕ್ಷರಶಬ್ದಕ್ಕೆ ಇಲ್ಲಿ ರೂಢ್ಯರ್ಥವಂ ಹೇಳುವುದುಯುಕ್ತವಲ್ಲವು, ಬ್ರಹ್ಮವೇ ಅರ್ಥವೆಂದು ಹೇಳುವುದು ಉಚಿತವಾಗಿರುವದು. ಆದರೆ ಮುಂದೆ ಶ್ರೀಕೃಷ್ಣನು ಹೇಳುವ ವಾಕ್ಯಗಳಲ್ಲಿಯೂಕೂಡ ಅಲ್ಲಲ್ಲಿ ಓಂಕಾರವನ್ನು ಕುರಿತು ಹೇಳಲುದ್ಯುಕ್ತನಾಗುವುದರಿಂದ ಈಪ್ರತ್ಯುತ್ತ ರೋಪಕ್ರಮದಲ್ಲಿಯೂ ಓಂಕಾರವನ್ನು ಕುರಿತೇ ಉಪಕ್ರಮಿಸಿರುತ್ತಾ ನೆಂದರಿಯದೆ ಪರಮ ವಿಶೇಷಣಕ್ಕೆ ವಿರೋಧ ಉಂಟಾಗುವದರಿಂದ ಓಂಕಾರವನ್ನು ಕುರಿತೇ ಉಪಕ್ರಮಿಸಿ ಹೇಳಿದನೆಂಬುವದು ಯುಕ್ತ ವಲ್ಲವು.

‹‹ಸ್ವಭಾವೋಽಧ್ಯಾತ್ಮಮುಚ್ಯತೇ‹‹ ಎಂಬುವ ವಾಕ್ಯವು ಕಿಮ ಧ್ಯಾತ್ಮಂ‹ ಎಂಬ ಪ್ರಶ್ನಕ್ಕೆ ಪ್ರತ್ಯುತ್ತರವಾಗಿರುವುದು. ಸ್ವಕೀಯ ವಾದ ಭಾವವು ಸ್ವಭಾವವು- ಶ್ರೋತ್ರಾದೀಂದ್ರಿಯ ಸಮುದಾಯವು, ಅಂತಹ ಶ್ರೋತ್ರಾದೀಂದ್ರಿಯ ಸಮುದಾಯವು ಅಹಂಪ್ರತ್ಯಯಾಪೇ ಕ್ಷ್ಯವಾದ (ನಾನು ಎಂಬ ತಿಳುವಳಿಕೆಯಿಂದ ತಿಳಿಯತಕ್ಕದ್ದಾದ) ದೇಹದಲ್ಲಿರುತ್ತದೆ ಯಾದುದರಿಂದ ಸ್ವಭಾವವೆಂದರೆ ಅಧ್ಯಾತ್ಮವೆನ್ನಲ್ಪ ಡುವುದೆಂದು ಅರ್ಥವಂ ಹೇಳದೆ ಆ ಪರಬ್ರಹ್ಮಕ್ಕೇನೆ ಪ್ರತಿ ದೇಹದ ಲ್ಲಿಯೂ ಆಗುವಂತಹ ಪ್ರತ್ಯಗಾತ್ಮ (ಜೀವ) ಭಾವವು ಸ್ವಭಾವಕ

ಬ್ದಕ್ಕೆ ಅರ್ಥವೆಂದರಿಯಬೇಕು. ಸ್ವಭಾವಶಬ್ದಕ್ಕೆ ಶ್ರೋತ್ರಾದೀಂದ್ರಿಯ ಸಮುದಾಯವೇ ಅರ್ಥವೆಂದು ಹೇಳದೆಹೋಗುವುದಕ್ಕೆ ಕಾರಣವೇನೆಂದು ಸಂಶಯಪಡದೆ "ಆಜಗತ್ತನ್ನು ಸೃಷ್ಟಿಮಾಡಿ ಆಜಗತ್ತಿನಲ್ಲಿಯೇ ಪ್ರವೇಶಿಸಿದನು,, ಎಂಬೀ ಅರ್ಥ ಪ್ರತಿಪಾದಕವಾದ ಶ್ರುತಿಯುಪರಬ್ರಹ್ಮವೇ ದೇಹಾದಿಕದಲ್ಲಿ ಪ್ರವೇಶಿಸಿ ಪ್ರತ್ಯಗಾತ್ಮ ಭಾವವನ್ನನುಭವಿಸುತಲಿರುವುದೆಂಬೀ ಅರ್ಥವನ್ನು ತೋರಿಸುವುದರಿಂದ ದೇಹವನ್ನಧಿಷ್ಠಾನವನ್ನಾಗಿ ಮಾಡಿಕೊಂಡು ಪ್ರತ್ಯಗಾತ್ಮ ಭಾವದೊಡನೆ ಪ್ರವರ್ತಿಸಿಯೂ ಪರಮಾರ್ಥ ಬ್ರಹ್ಮಾವಸಾನವೂ ಆಗಿರುವ ವಸ್ತುವು ಸ್ವಭಾವವೆನ್ನಲ್ಪಡುವುದು. ಆಸ್ವಭಾವವೇ ಅಧ್ಯಾತ್ಮಶಬ್ದದಿಂದಹೇಳಲ್ಪಡುವುದೆಂದರಿಯಬೇಕು.

ಈಶ್ಲೋಕದ ಉತ್ತರಾರ್ಧದಿಂದ "ಕಿಂಕರ್ಮ" ಎಂಬುವಪ್ರಶ್ನೆಕ್ಕೆಸಮಾಧಾನವು ಹೇಳಲ್ಪಡುವುದು. 'ಭೂತಭಾವೋದ್ಭವಕರಃ, ಎಂಬ ಸಮಸ್ತಪದಕ್ಕೆ ಭೂತಗಳೇ ಭಾವಗಳೆನ್ನಲ್ಪಡುವುದು, ಭಾವವೆಂದರೆ ವಸ್ತುವು, ಅಂತಹ ಭೂತಭಾವಗಳಿಗೆಹುಟ್ಟುವಿಕೆಯನ್ನುಂಟುಮಾಡುವುದು 'ಭೂತಭಾವೋದ್ಭವಕರಃ' ಎನ್ನಲ್ಪಡುವುದು. ಭೂತ (ವಸ್ತು)ಗಳನ್ನುಂಟುಮಾಡುವಂತ ದೇವತೆಗಳನ್ನುದ್ದೇಶಿಸಿ ಮಂತ್ರಪೂರ್ವಕವಾಗಿ ಅಗ್ನಿಯಲ್ಲಿ ತಾನು ಸಂಪಾದಿಸಿರುವ ಚರುಪುರೋಡಾಶಾದಿಕವನ್ನು ಸಮರ್ಪಣೆಮಾಡುವುದೆಂಬ ಯಜ್ಞವು ಕರ್ಮವೆನ್ನಲ್ಪಡುವುದು. ಕರ್ಮವೆನ್ನಲ್ಪಡುವ ಈಯಜ್ಞವು ಸರ್ವಭೂತಗಳಿಗ ಉತ್ಪತ್ತಿಸ್ಥಿತಿಲಯಗಳನ್ನುಂಟುಮಾಡುವುದು ಹೇಗೆ? ಎಂದರೆ "ಅಗ್ನೌಪ್ರಾಸ್ತಾಹುತಿಸ್ಸಮ್ಯಗಾದಿತ್ಯಮುಪತಿಷ್ಠತೆ । ಆದಿತ್ಯಾಜ್ಜಾಯತೆ ವೃಷ್ಟಿರ್ವೃಷ್ಟೇರನ್ನಂತತಃಪ್ರಜಾಃ" ಎಂಬೀ ಪ್ರಮಾಣಾನುಸಾರವಾಗಿ ಬೀಜಭೂತಗಳಾದ ಕರ್ಮಗಳ ದಶೆಯಿಂದ ವೃಷ್ಟ್ಯಾದಿದ್ವಾರಾ ಕ್ರಮವಾಗಿ ಸ್ಥಾವರ ಜಂಗಮಾತ್ಮಕಗಳಾದ ಸಕಲಭೂತಗಳೂ ಹುಟ್ಟುವುವೆಂದು ತಿಳಿಯಬೇಕು. ॥೩॥

ರಾ॥ ಭಾ॥ ಆಅರ್ಜುನನಪ್ರಶ್ನೆಗಳಿಗೆ ಉತ್ತರವಂ ಶ್ರೀಕೃಷ್ಣನುಪೇಳುತ್ತಾನೆ. ಎಲೈ ಅರ್ಜುನನೆ ಬ್ರಹ್ಮವೆಂಬುವುದು ಪರಮಾಕ್ಷರವುಎಂದರೆ ಪ್ರಕೃತಿಯಿಂದ ಬಿಡಲ್ಪಟ್ಟ ಆತ್ಮಸ್ವರೂಪವು. "ಅವ್ಯಕ್ತವು

ಅಕ್ಷರದಲ್ಲಿ ಲಯಿಸುತ್ತದೆ. ಅಕ್ಷರವು ತಮಸ್ಸಿನಲ್ಲಿ ಲಯಿಸುತ್ತದೆ,, ಎಂಬಿದೇ ಮೊದಲಾದ ಶ್ರುತಿಗಳಲ್ಲಿ ಹೇಳಿರುವಂತೆ ಅಕ್ಷರವೆಂಬದಾಗಿ ಜೀವಸಮುದಾಯವಂ ಹೇಳುವುದರಿಂದ ಪರಮಾಕ್ಷರವೆಂಬದಾಗಿ ಪ್ರಕೃತಿ ವಿನಿರ್ಮುಕ್ತವಾದ ಆತ್ಮಸ್ವರೂಪವನ್ನು ಹೇಳುತ್ತಾರೆ.

ಅಧ್ಯಾತ್ಮವೆಂದರೆ ಪಂಚಾಗ್ನಿ ವಿದ್ಯೆಯಲ್ಲಿ ತಿಳಿಯತಕ್ಕದ್ದೆಂಬದಾಗಿ ಹೇಳಲ್ಪಟ್ಟು ಆತ್ಮನೊಡನೆ ಸಂಬಂಧಿಸುವುದೂ ಆಗಿರುವ ಭೂತಸೂಕ್ಷ್ಮ ತದುಪಾಸನಾದಿಗಳು. ಮೋಕ್ಷಾರ್ಥಿಯಾದವನಿಗೆ ಈಯೆರಡರಲ್ಲಿ ಒಂದು ಪರಿಗ್ರಾಹ್ಯವಾಗಿಯೂ ಒಂದು ಪರಿತ್ಯಾಜ್ಯವಾಗಿಯೂ ಯಿರುವುದೆಂದರಿಯಬೇಕು.

ಮನುಷ್ಯಾದಿ ಶರೀರಗಳ ಉತ್ಪತ್ತಿ ಕಾರಣಭೂತವಾದ ಸ್ತ್ರೀ ಸಂಬಂಧ ಜನ್ಯವಾಗಿರುವ ಶುಕ್ಲ ವಿಸರ್ಜನವು 'ಕರ್ಮಾಖಿಲಂ,ಎಂಬುವ ಸ್ಥಾನದಲ್ಲಿ ಕರ್ಮಶಬ್ದದಿಂದ ಹೇಳಲ್ಪಟ್ಟಿರುವುದು. ಇಲ್ಲಿ ಪಂಚಾಗ್ನಿವಿದ್ಯಾಪ್ರಸಿದ್ಧಗಳಾದ 'ದ್ಯುಲೋಕ ಪರ್ಜನ್ಯ ಪೃಥಿವೀ ಪುರುಷ ಯೊಷಿದೂಪಕಗಳಾದ ಪಂಚಾಗ್ನಿಗಳನ್ನೂ ಶ್ರದ್ಧಾಸೋಮವರ್ಷಾನ್ನ ರೇತೋ ರೂಪಗಳಾದ ಐದು ಹೋಮಾರ್ಹ ದ್ರವ್ಯಗಳನ್ನೂ, ಶ್ರದ್ಧಾಶಬ್ದದಿಂದ ಹೇಳಲ್ಪಟ್ಟ ಸಜೀವವಾದ ಭೂತಸೂಕ್ಷ್ಮವೇಕ್ರಮವಾಗಿ' ಸೋಮ-ವರ್ಷ-ಅನ್ನ- ರೇತೊ, ರೂಪವಾಗಿ ಪರಿಣಾಮವಂ ಹೊಂದಿರುವಿಕೆಯನ್ನೂ, ದೇಹಧಾರಕವಾದ ಪ್ರಾಣಾದಿ ವಾಯುಗಳನ್ನು ಹೋಮಕರ್ತರೆಂಬದಾಗಿಯೂ ಛಾಂದೋಗ್ಯ ಶ್ರುತಿಯಲ್ಲಿ ವಿಸ್ತಾರವಾಗಿ ಪಂಚಾಗ್ನಿ ಪರಿಕರಗಳನ್ನೂ ಮುಮುಕ್ಷುವಾದವನು ಉದ್ವೇಗೋತ್ಪಾದಕವಾಗಿಯೂ ಪರಿಹರಿಸಲ್ಪಡತಕ್ಕದ್ದೆಂಬದಾಗಿಯೂ ತಿಳಿಯಬೇಕು. ಪರಿಹರಿಸಲ್ಪಡಬೇಕಾದ ಅಂಶವು "ಯದಿಚ್ಛಂತೋಬ್ರಹ್ಮಚರ್ಯಂಚರಂತಿ,, ಎಂಬದಾಗಿ (೮-೧೧) ಮುಂದೆ ಹೇಳುತ್ತಾನೆ. ॥೧೩॥

(ಮ ॥ ಗೀ ॥ ವಿ) ಉತ್ತಮನಾಗಿಯೂ ನಾಶರಹಿತನಾಗಿಯೂ ಇರುವ ವಿಷ್ಣುವೇ ಪರಬ್ರಹ್ಮವು. ಜೀವನಿಗೆ ಸೇರಿದ ವಸ್ತುವೇ ಸ್ವಭಾವವೆನ್ನಲ್ಪಡುವುದು; ಎಂದರೆ ಆಜೀವನಿಗೆ ಉಪಕಾರಿಗಳಾದ ದೇಹೇಂದ್ರಿಯಾಂತಃಕರಣಾದಿಗಳು, ಇವುತಾನೆ ಅಧ್ಯಾತ್ಮವೆನ್ನಲ್ಪಡುವುದು. (ಅಥವಾ) ಜೀವಾತ್ಮನ ಸ್ಥಿರವಾದ ಸ್ಥಿತಿಯೇ ಸ್ವಭಾವವು, ಇದು

ತಾನೆ ಅಧ್ಯಾತ್ಮವು. ಭೂತಭಾವೋದ್ಭವಕರೋವಿಸರ್ಗಃಕರ್ಮಸಂಜ್ಞಿತಃ ಭೂತ- ಜೀವರಿಗೂ, ಭಾವ-ಜಡಪದಾರ್ಥಗಳಿಗೂ, ಉದ್ಭವ- ಉತ್ಪತ್ತಿಯನ್ನು, ಕರ- ಮಾಡುವ, ವಿಸರ್ಗಃ- ಈಶ್ವರಸೃಷ್ಟಿಯು, ಕರ್ಮಸಂಜ್ಞಿತಃ- ಕರ್ಮವೆನ್ನಲ್ಪಡುವುದು. .. ॥೩॥

ಶ್ಲೋ॥ಅಧಿಭೂತಂಕ್ಷರೋಭಾವಃಪುರುಷಶ್ಚಾಧಿದೈವತಂ।
ಅಧಿಯಜ್ಞೋಹಮೇವಾತ್ರದೇಹೇದೇಹಭೃತಾಂವರ॥೪॥

ಪ॥ ಅಧಿಭೂತಂ- ಕ್ಷರಃ- ಭಾವಃ- ಪುರುಷಃ- ಚ- ಅಧಿದೈವತಂ । ಅಧಿಯಜ್ಞಃ- ಅಹಂ- ಏವ- ಅತ್ರ- ದೇಹೇ- ದೇಹಭೃತಾಂ-ವರ॥

ಅ॥ ಹೇದೇಹಭೃತಾಂವರ- ದೇಹಧಾರಿಗಳಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೇ, ಕ್ಷರೋಭಾವಃ- ಶಂ॥ ಗೀ॥ ಉತ್ಪತ್ತಿ ವಿನಾಶಗಳುಳ್ಳ ವಸ್ತುಗಳೆಲ್ಲವೂ, ಅಧಿಭೂತಂ- ಅಧಿಭೂತವೆನ್ನಲ್ಪಡುವುದು. (ಶ್ರೀ) ನಾಶಹೊಂದತಕ್ಕ ದೇಹಾದಿಗಳೆಲ್ಲವೂ ಅಧಿಬೂತವೆನ್ನಲ್ಪಡುವುದು ಎಂದರೆ (ಮ॥ ಭಾ॥) ಸಕಲವಸ್ತುಗಳೂ ಜೀವೋಪಕರಣಗಳೆ, ಜೀವನಿಗೆ ಉಪಯೋಗವಾಗದವಸ್ತುವು ಯಾವದೂ ಇಲ್ಲವೆಂದು ತಾತ್ಪರ್ಯವು. ಪುರುಷಶ್ಚಾಧಿದೈವತಂ-(ಶಂ॥) ಸೂರ್ಯಮಂಡಲದಲ್ಲಿರುವಂತವನಾಗಿರುವ ಇಂದ್ರಾದಿಗಳಿಗೆ ಪ್ರೇರಕನಾದ ಹಿರಣ್ಯಗರ್ಭನೆ ಅಧಿದೈವತವು. (ಶ್ರೀ) ಸೂರ್ಯಮಂಡಲದಲ್ಲಿರುವಂತವನೂ ತನ್ನ ಅಂಶಗಳಾದ ದೇವತೆಗಳಿಗೆ ಅಧಿಕಾರಿಯೂ ಆದ ವಿರಾಟ್ಪುರುಷನೆ ಅಧಿದೈವತವು. (ಮ॥ಗೀ॥ವಿ ದೇವೇಂದ್ರನೇ ಮೊದಲಾದ ದೇವತೆಗಳಿಗೆ ಅಧಿಪತಿಯಾದ ಬ್ರಹ್ಮದೇವರೇ ಅಧಿದೈವತವು. ಅಥವಾ ಜೀವಾಭಿಮಾನಿಯಾದ ಸಂಕರ್ಷಣಮೂರ್ತಿಯೇ ಅಧಿದೈವತವು. ಅತ್ರದೇಹೆ ಅಹಮೇವ ಅಧಿಯಜ್ಞಃ- (ಶಂ) ದೇಹಗಳಿಂದ ನಡೆಯಿಸಲ್ಪಡುವ ಯಜ್ಞಗಳಿಗೆ ಅಭಿಮಾನಿಯಾದ ವಿಷ್ಣುವೇ ಅಧಿಯಜ್ಞ ನೆನ್ನಲ್ಪಡುವನು, ಅಂತವನು ನಾನೆ. (ಶ್ರೀ) ದೇಹದಲ್ಲಂತರ್ಯಾಮಿ ಯಾಗಿರುತ ಯಜ್ಞ ಪ್ರವರ್ತಕನಾಗಿಯೂ ಅದರ ಫಲವಂ ಕೊಡುವಂತವನಾಗಿಯೂ, ಇರುವ ನಾನೇ ಅಧಿಯಜ್ಞನು. (ಮ॥ ಗೀ॥ ವಿ) ಅಖಿಲ ದೇಹಗಳಲ್ಲಿಯೂ ಅಂತರ್ಯಾಮಿಯಾಗಿರುವ ನಾನು ಯಜ್ಞಫಲವನ್ನನುಭವಿಸುವಂತವನಾಗಿರುವುದರಿಂದ ನಾನೇ ಅಧಿಯಜ್ಞನು. ಇವನು ತಾನೆ ಅಕ್ಷರಂ ಬ್ರಹ್ಮಪರಮಂ ಎನ್ನಲ್ಪಟ್ಟ ಪರಮಾತ್ಮನು. (ಗೀ॥ ವಿ) ಅಧಿಯಜ್ಞನು ಎಂತವನು? ಅವನು ಯಾರು ಎಂಬೀಪ್ರಶ್ನಗಳಿಗಿದು ಉತ್ತರವು. .... ... ೪॥

(ರಾ॥ ಭಾ॥) ಎಲೈ ದೇಹಿಗಳಲ್ಲಿ ಶ್ರೇಷ್ಠನಾದ ಅರ್ಜುನನೆ ! ಐಶ್ವರ್ಯಾರ್ಥಿಗಳಿಂದ ತಿಳಿಯಲ್ಪಡತಕ್ಕೆಂಬದಾಗಿ ನಿರ್ದೇಶಿಸಲ್ಪಟ್ಟಅಧಿಭೂತ ನೆಂಬುವುದು ಅಕಾಶಾದಿ ಭೂತಗಳಲ್ಲಿರುವ ಅವುಗಳ ಪರಿಣಾಮವು ವಿಶೇಷಗಳಾದ ಕ್ಷರಣಸ್ವಭಾವ ಸಾಶ್ರಯ ವಿಲಕ್ಷಣಗಳಾದ ಶಬ್ದಸ್ಪ

ಕಾರ್ದಿಗಳು, ವಿಲಕ್ಷಣಗಳಾಗಿಯೂ ಸಾಶ್ರಯಗಳಾಗಿಯೂ ಇರುವ ಶಬ್ದಸ್ಪರ್ಶ ರೂಪ ರಸಗಂಧಗಳು ಐಶ್ವರ್ಯಾರ್ಥಿಗಳಿಂದ ಹೊಂದಲ್ಪಡ ತಕ್ಕವುಗಳಾದುದರಿಂದ ಅವು ಅವರಿಂದ ಅನು ಸಂಧೇಯಗಳಾಗಿರು ವುವು ಪುರುಷಶ್ಚಾಧಿದೈವತಂ- ಐಶ್ವರ್ಯಾರ್ಥಿಗೇನೆ ತಿಳಿಯತಕ್ಕ ದ್ದೆಂಬದಾಗಿ ನಿರ್ದೇಶಿಸಲ್ಪಟ್ಟ ಅಧಿದೈವತವೆಂದರೆ ದೈವತಗಳಿಗೆ ಮೇ ಲಿರುವುದು. ಎಂಬುವ ಆಯಾಪದಗಳ ಅರ್ಥಾನುಗುಣವಾಗಿ ಇಂದ್ರ ಪ್ರಜಾಪತಿ ಪ್ರಭೃತಿಗಳಿಗೆ ಭೋಗ್ಯಗಳಾದವುಗಳಿಗಿಂತಲೂ ವಿಲಕ್ಷಣಗ ಳಾದ ಶಬ್ದಾದಿಗಳಿಗೆ ಭೋಕ್ತಾ ಆದಪುರುಷನು. ಅಂತಹ ಭೋಕ್ತೃ ತ್ವಾವಸ್ಥೆಯು ಐಶ್ವರಾರ್ಥಿಗಳಿಗೆ ಪ್ರಾಪ್ಯವಾಗಿರುವುದರಿಂದ ಅವರು ಗಳಿಗೆ ಅನುಸಂಧೇಯವಾಗಿರುವುದು. ಅಧಿಯಜ್ಞಃ ಅತ್ರದೇಹೇ ಅಹಮೇವ- ತ್ರಿವಿಧಾಧಿಕಾರಿಗಳಿಗೂ ಅನುಸಂಧೇಯವೆಂಬದಾಗಿನಿರ್ದೇ ಶಿಸಲ್ಪಟ್ಟ ಅಧಿಯಜ್ಞವೆಂಬುವುದು, 'ಯಜ್ಞದಮೇಲೆ ಇರುವುದು, ಎಂಬುವ ಆಶಬ್ದದ ಅರ್ಥಾನುಗುಣವಾಗಿ ಯಜ್ಞಾರಾಧ್ಯನಾಗಿಯೂ ಇಂದ್ರಾದಿ ದೇವತಾರೂಪವಾದ ಶರೀರದಲ್ಲಿ ಆತ್ಮವಾಗಿಯೂ ಇರುವ ನಾನೆ ಯಜ್ಞಗಳಿಂದ ಆರಾಧ್ಯನಾಗಿರುವೆನೆಂದು ಮಹಾಯಜ್ಞಾದಿ ನಿತ್ಯ ನೈಮಿತ್ತಿಕಾನುಷ್ಠಾನ ಸಮಯದಲ್ಲಿ ಮೂರಧಿಕಾರಿಗಳಿಂದಲೂ ಅನು ಸಂಧಿಸಲ್ಪಡತಕ್ಕದ್ದು. ... ॥೪॥

(ಸುಖಬೋಧಕ್ಕಾಗಿ ಬ್ರಹ್ಮಾದಿ ಪದಾರ್ಥಗಳನ್ನು ವಿವರಿಸು ವೆವು ಬ್ರಹ್ಮ- ಶಂ॥ ಶ್ರೀ॥ ಮ॥ ಗೀ॥ ವಿ॥--ಪರಬ್ರಹ್ಮವು (ರಾ) ಪ್ರಕೃತಿವಿನಿರ್ಮುಕ್ತಾತ್ಮ ಸ್ವರೂಪವು.

ಅಧ್ಯಾತ್ಮಂ- ಶಂ॥ ಶ್ರೀ॥ಮ॥ ಗೀ॥ ವಿ- ಜೀವಸ್ವಭಾವವು.(ರಾ) ಜೀವನಿಗೆ ಸಾಧಕವಾಗಿರುವ ಸೂಕ್ಷ್ಮಭೂತಗಳು. ( ಮ॥ಗೀ॥ ವಿ ) ಅಥವಾ- ದೇಹೇಂದ್ರಿಯಾಂತಃಕರಣಾದಿಗಳು. ಕರ್ಮ-ಕ್ರಿಯೆಯು.

ಅಧಿಭೂತಂ- ನಾಶಾರ್ಹವಾಗಿರುವ ಅಚೇತನ ಭೂತಗಳು.

ಅಧಿದೈವತಂ- (ಶಂ॥ ಶ್ರೀ॥ ಮ॥ ಗೀ॥ ವಿ) ಬ್ರಹ್ಮನು, ಇವನು ಹಿರಣ್ಯಗರ್ಭನು, ವಿರಾಟ್‌ಪುರುಷನು, ಸೃಷ್ಟಿಕರ್ತನು, ಆದಿಪುರು ಷನೆಂಬೀ ಮೊದಲಾದ ನಾಮಗಳುಳ್ಳವನು (ರಾ॥) ಬ್ರಹ್ಮಾದಿ ದೇವತೆಗ ಳಿಗೂ ಮೇಲಾದ ಪರಮಪುರುಷನು. ಅಧಿಯಜ್ಞಃ (ಶಂ॥ಶ್ರೀ॥ ಗೀ॥

ವಿ||ರಾ||)ಯಜ್ಞಾರಾಧ್ಯನಾಗಿಯೂ ಯಜ್ಞಪ್ರವರ್ತಕನಾಗಿಯೂ ಇರುವ ಪರಮಪುರುಷನು.

ಶ್ಲೋ|| ಅಂತಕಾಲೇಚಮಾಮೇವಸ್ಮರನ್ಮುಕ್ತ್ವಾಕಳೇಬರಂ |ಯಃಪ್ರಯಾತಿಸಮದ್ಭಾವಂ ಯಾತಿನಾಸ್ತ್ಯತ್ರ ಸಂಶಯಃ || ... ||೫||

ಪ|| ಅಂತಕಾಲೇ- ಚ- ಮಾಂ- ಏವ- ಸ್ಮರ್ರ್‌- ಮುಕ್ತ್ವಾ- ಕಳೇಬರಂ | ಯಃ-ಪ್ರಯಾತಿ- ಸಃ- ಮದ್ಭಾವಂ- ಯಾತಿ-ನಾಸ್ತಿ- ಅತ್ರ- ಸಂಶಯಃ||

ಅ|| ಅಂತಕಾಲೆ- ಮರಣಕಾಲದಲ್ಲಿ, ಮಾಮೇವಸ್ಮರ್ರ್‌- ನನ್ನನ್ನೇ ಚಿಂತಿಸಿಕೊಂಡು, ಕಳೇಬರಂಮುಕ್ತ್ವಾ- ಶರೀರವಂಬಿಟ್ಟು, ಯಃಪ್ರಯಾತಿ- ಯಾವನಾದರೆ ಮೃತನಾಗುತ್ತಾನೊ, ಸಃ- ಅವನು, ಮದ್ಭಾವಂ- ನನ್ನ ಸ್ವಭಾವವನ್ನು, ಯಾತಿ- ಹೊಂದುತ್ತಾನೆ. ... ... ||೫||

(ಶ್ರೀ||) ಮಾಮೇವ- ಅಂತರ್ಯಾಮಿರೂಪಿಯಾದಪರಮೇಶ್ವರನಾಗಿರುವ ನನ್ನನ್ನೇ ಪ್ರಯಾತಿ- ಅರ್ಚಿರಾದಿಮಾರ್ಗದಿಂದ ಹೊಂದುತ್ತಾನೆ, ||೫||

(ಮ|| ಭಾ||ಗೀ|| ವಿ||) ಮದ್ಭಾವಂ- ನಮ್ಮಲ್ಲಿ ನಿರ್ದುಃಖವಾದ ನಿರತಿಶಯಾನಂದವಾದ ಸ್ಥಿತಿಯನ್ನು. ... ... ||೫||

(ಶಂ|| ಭಾ||) ಎಲೈ ಅರ್ಜುನನೆ! ಯಾವ ಪುರುಷನಾದರೆ ಮರಣಕಾಲದಲ್ಲಿಯೂಕೂಡ ನನ್ನನ್ನೇ ಸ್ಮರಿಸುತ ಶರೀರವಂ ಬಿಟ್ಟುಹೋಗುತ್ತಾನೊ ಅಂತವನು ವೈಷ್ಣವತತ್ವವನ್ನು (ಮೋಕ್ಷವನ್ನು)ಹೊಂದುವನು. ಈವಿಷಯದಲ್ಲಿ ಮೋಕ್ಷವಂ ಹೊಂದುತ್ತಾನೆಯೋ? ಇಲ್ಲವೆ ಎಂಬದಾಗಿ ಸಂಶಯಪಡಬೇಕಾಗಿರುವುದಿಲ್ಲವು. ||೫||

(ರಾ|| ಭಾ||) ಎಲೈ ಅರ್ಜುನನೆ! ಈಗ ನಮ್ಮಿಂದ ಪ್ರತಿಪಾದಿಸುವ ವಿಷಯವು ಈ ತ್ರಿವಿಧಾಧಿಕಾರಿಗಳಿಗೂ ಜ್ಞಾತವ್ಯವಾಗಿಯೇ ಇರುವುದು. ಮದ್ಭಾವಂ-ನನ್ನ ಸ್ವಭಾವವನ್ನು, ಅಂತಿಮಕಾಲದಲ್ಲಿ ಯಾವ ಆಕಾರದೊಡನೆ ನನ್ನನ್ನನು ಸಂಧಾನಮಾಡುತ್ತಾನೊ ಅಂತಹ ಆಕಾರವನ್ನು ಹೊಂದುತ್ತಾನೆ. ಆದಿ ಭರತನೂ ತಮ್ಮಿಂದ ಸ್ಮರಿಸಲ್ಪಟ್ಟ ಮೃಗಶರೀರವನ್ನು ಹೇಗಾದರೆ ಹೊಂದಿದರೊ ಅದರಂತೆ ಭಗವಂತನನ್ನು ಸ್ಮರಿಸುವವನು ಭಗವದ್ಭಾವವನ್ನು ಹೊಂದುವನು. ||೫||

(ತಾ|| ಚಂ||) "ಪ್ರಯಾಣಕಾಲೇಚಕಥಂಜ್ಞೇಯೋಸಿ"(೮-೨) ಎಂಬ ಪ್ರಶ್ನಕ್ಕೆ ಪ್ರತ್ಯುತ್ತರವನ್ನು ಹೇಳುತ್ತಾನೆ. ಮದ್ಭಾವಂಯಾ

ತಿಎಂಬುವ ಸ್ಥಲದಲ್ಲಿ ಶ್ರುತ್ಯಾದಿವಿರುದ್ಧವಾದ ಭಗವತ್ತಾದಾತ್ಮ್ಯಪ್ರಾಪ್ತಿಶಂಕೆಯನ್ನು ನಿವಾರಿಸುವುದಕ್ಕಾಗಿ ಭಾಷ್ಯದಲ್ಲಿ 'ಮಮಯೋಭಾವಃ'ಎಂಬದಾಗಿ ಪ್ರಯುಕ್ತವಾಗಿರುವುದು. ಆದಿಭರತದೃಷ್ಟಾಂತದಿಂದಲೂ ಐಕ್ಯ ಹೇಳುವುದಕ್ಕಾಗುವುದಿಲ್ಲವು. ಮೃಗವನ್ನು ಸ್ಮರಿಸಿ ಪ್ರಾಣವಂಬಿಟ್ಟ ಆದಿಭರತರು ತಮ್ಮಿಗಳಿಂದ ಸ್ಮೃತವಾದ ಮೃಗಶರೀರದೊಡನೆ ಐಕ್ಯವಂಹೊಂದಲಿಲ್ಲವು. ಕಿಂತು ಆ ಮೃಗಕ್ಕೆ ಸಮಾನವಾದ ಆಕಾರದೊಡನೆ ಕೂಡಿದ ಮೃಗಾಂತರ ಶರೀರವಂ ಹೊಂದಿದರೆಂಬುವುದೆ ಪ್ರಸಿದ್ಧವಾಗಿರುವುದು. ಆದರಂತೆ ಇಲ್ಲಿಯು ಪರಮಾತ್ಮನಂ ಸ್ಮರಿಸಿ ಶರೀರತ್ಯಾಗವಂಮಾಡಿದವನು ಪರಮಾತ್ಮನಲ್ಲಿ ಐಕ್ಯವಂಹೊಂದುವುದಿಲ್ಲವು. ಮತ್ತೇನೆಂದರೆ ಗುಣಾಷ್ಟಕಾವಿರ್ಭಾವಾದಿ ಈಶ್ವರ ಸ್ವಭಾವ ಪ್ರಾಪ್ತಿಯನ್ನೇ ಹೊಂದುತ್ತಾನೆಂದು ತಿಳಿಯಬೇಕು. ॥೫॥

ಶ್ಲೋ॥ ಯಂಯಂವಾಪಿಸ್ಮರ‌ನ್ ಭಾವಂತ್ಯಜತ್ಯಂತೇಕಳೇಬರಂ । ತಂತಮೇವೈತಿಕೌಂತೇಯ ಸದಾತದ್ಭಾವಭಾವಿತಃ ॥ ॥೬॥

ಪ॥ ಯಂ- ಯಂ- ವಾ- ಅಪಿ- ಸ್ಮರ‌ನ್- ಭಾವಂ-ತ್ಯಜತಿ- ಅಂತೇ-ಕಳೇಬರಂ। ತಂ- ತಂ- ಏವ- ಏತಿ- ಕೌಂತೇಯ- ಸದಾ- ತದ್ಭಾವ ಭಾವಿತಃ॥

ಅ॥ ಅಂತೇ- ಅಂತಿಮಕಾಲದಲ್ಲಿ, ಯಯುಂವಾಪಿಭಾವಂಸ್ಮರ‌ನ್‌ಕಳೇಬರಂ ತ್ಯಜತಿ- ಯಾವಯಾವ ಆಕಾರಮುಳ್ಳ ವಸ್ತುವನ್ನು ನೆನೆಸಿಕೊಂಡು ಶರೀರವಂ ಬಿಡುತ್ತಾನೋ, ಸದಾತದ್ಭಾವಭಾವಿತಃ- ಆವಸ್ತುವನ್ನೇ ಧ್ಯಾನಿಸಿಕೊಂಡಿರುವಂತವನಾದುದರಿಂದ,ತಂತಮೇವೈತಿ- ಅಂತಿಮಸ್ಮೃತಿವಿಷಯವಾದ ಆಕಾರಕ್ಕೆ ಸಮಾನವಾದ ಆಕಾರವನ್ನೇ ಹೊಂದುತ್ತಾನೆ. ... ... ॥೬॥

(ಶಂ॥ ಭಾ॥) ನನ್ನನ್ನು ಸ್ಮರಣೆಮಾಡುತ ಶರೀರವನ್ನು ತ್ಯಾಗಮಾಡುವುದರಿಂದ ನನ್ನನ್ನು ಹೊಂದುವರೆಂಬೀ ನಿಯಮವು ನನ್ನವಿಷಯದಲ್ಲಿಮಾತ್ರವೇ ಅಲ್ಲವು, ಮತ್ತೇನೆಂದರೆ! ಎಲೈ ಅರ್ಜುನನೆ! ಯಾವನಾದರೆ ಮರಣಕಾಲದಲ್ಲಿ ಯಾವಯಾವ ದೇವತಾರೂಪವನ್ನು ಸ್ಮರಣೆಮಾಡುತ ಶರೀರವನ್ನುಬಿಡುತ್ತಾನೋ ಅಂತವನು ಸರ್ವಕಾಲದಲ್ಲಿಯು ನನ್ನ ಆಯಾರೂಪಗಳ ಸ್ಮರಣದಿಂದುಂಟಾದ ಸಂಸ್ಕಾರವುಳ್ಳವನಾಗಿ ಆಯಾಸ್ವರೂಪಗಳನ್ನೇ ಹೊಂದುವನು. ॥೬॥

(ರಾ॥ ಭಾ॥) ಅಂತಿಮಕಾಲದಲ್ಲಿ ನೆನೆಸುವ ವಿಷಯಕ್ಕೆ ಧ್ಯಾನಿಸಿ ಲ್ಪಟ್ಟ ವಿಷಯಾನುಗುಣವಾದ ಆಕಾರತಾಪಾದನವು ಅಂತಿಮ ಪ್ರತ್ಯ ಯದಸ್ವಭಾವವೆಂದು ಬೋಧಿಸುತ್ತಾನೆ.(ತಾತ್ಪರ್ಯವನ್ನು ಪ್ರತಿಪದಾರ್ಥ ದಂತೆಯೇ ನೋಡಬಹುದು) ಅಂತಿಮ ಪ್ರತ್ಯಯವೂ ತತ್ಪೂರ್ವಕಾಲ ದಲ್ಲಿ ಯಾವದನ್ನು ಸ್ಮರಿಸಿಕೊಂಡಿರುತ್ತಾನೊ ತದನುಗುಣವಾಗಿಯೆ ಇರುವುದೆಂದರಿಯಬೇಕು. ... ॥೬॥

ಶ್ಲೋ॥ ತಸ್ಮಾತ್ಸರ್ವೇಷುಕಾಲೇಷು ಮಾಮನುಸ್ಮರಯು
ಧ್ಯಚ । ಮಯ್ಯರ್ಪಿತಮನೋಬುದ್ಧಿ ರ್ಮಾಮೇವೈಷ್ಯಸ್ಯ
ಸಂಶಯಃ ॥ ... ॥೭॥

ಪ॥ ತಸ್ಮಾತ್-ಸರ್ವೇಷು- ಕಾಲೇಷು- ಮಾಂ- ಅನುಸ್ಮರ- ಯುಧ್ಯ- ಚ॥ಮಯಿ- ಅರ್ಪಿತಮನೊಬುದ್ಧಿಃ- ಮಾಂ- ಏವ- ಏಷ್ಯಸಿ- ಅಸಂಶಯಃ॥

ಅ॥ ತಸ್ಮಾತ್- ಪೂರ್ವಾಭ್ಯಸ್ತವಾದ ವಿಷಯದಲ್ಲಿಯೇ ಅಂತಿಮ ಪ್ರತ್ಯಯವುಂ ಟಾಗುವುದರಿಂದ, ಸರ್ವೇಷುಕಾಲೇಷು- ಸರ್ವಕಾಲಗಳಲ್ಲಿಯೂ, ಮಾಂ- ನನ್ನನ್ನು,ಅನು ಸ್ಮರ- ಸ್ಮರಣೆಮಾಡು, ಯುಧ್ಯಚ- ಯುದ್ಧವನ್ನೂ ಮಾಡು. ಮಯಿ- ನನ್ನಲ್ಲಿ, ಅರ್ಪಿತ ಮನೋಬುದ್ಧಿಃ- ಸಮರ್ಪಿಸಲ್ಪಟ್ಟ ಮನೊಬುದ್ಧಿಯುಳ್ಳವನಾಗಿ, ಮಾಮೇವ- ನನ್ನನ್ನೆ, ಏಷ್ಯಸಿ- ಹೊಂದುತ್ತೀ. ಅಸಂಶಯಃ- ಸಂಶಯವಿಲ್ಲವು. ॥೭॥

(ಶಂ॥ ಭಾ॥) ಸರ್ವಕಾಲಗಳಲ್ಲಿಯೂ ವಿರಾಮವಿಲ್ಲದಿರುವ ಈಭಾ ವನೆಯು ತಪ್ಪದೆ ಫಲವನ್ನೀಯುವ ಅಂತಿಮ ಪ್ರತ್ಯಯಕ್ಕೆ ಕಾರಣ ವಾಗಿರುವುದರಿಂದ ತಪ್ಪದೆ ಸರ್ವಕಾಲದಲ್ಲಿಯೂ ಭಗವಚ್ಚಿಂತನವಂ ಮಾಡೆಂದೀಶ್ಲೋಕದಿಂದ ಬೋಧಿಸುತ್ತಾನೆ. ದೇಹತ್ಯಾಗ ಕಾಲೀನ ವಾದ ಭಾವನೆಯು ದೇಹಾಂತರ ಪ್ರಾಪ್ತಿಗೆ ಕಾರಣವಾಗಿರುವುದರಿಂದ ಸರ್ವಕಾಲಗಳಲ್ಲಿಯೂ ನನ್ನನ್ನೇ ಸ್ಮರಿಸುತಲಿರು. ಈಭಗವದನುಸಂ ಧಾನದೊಡನೆ| ಸ್ವಧರ್ಮವಾದ ಯುದ್ಧವನ್ನೂಮಾಡು. ಇಷ್ಟುಮಾ ತ್ರವಲ್ಲದೇ ಮನೋಬುದ್ಧಿಗಳನ್ನು ವಾಸುದೇವನಾದ ನನ್ನಲ್ಲಿಯೇ ಇಡು ವಂತವನಾಗು. ಈರೀತಿಯಾಗಿ ಮಾಡಿದರೆ ನೀನುನನ್ನನ್ನೇಹೊಂದು ತ್ತೀಎಂಬೀವಿಷಯದಲ್ಲಿ ಸಂಶಯಪಡಬೇಕಾದದ್ದಿಲ್ಲವು. ಆದರ ನೈರಂ ತರ್ಯದಿಂದ ಭಗವದನು ಸಂಧಾನವಂ ಮಾಡುವುದು ಶಾಸ್ತ್ರೋಕ್ತಪ್ರ ಕಾರವಾಗಿ ಸ್ವಧರ್ಮಗಳ ನ್ನಾಚರಿಸುವುದು ಮನೋಬುದ್ಧಿಗಳನ್ನು

ಭಗವಂತನಲ್ಲಿರುವುದೆಂಬೀ ವಿಶೇಷಣತ್ರಯ ಯುಕ್ತವಾದ ಭಗವತ್ಸ್ಮರಣವು ಭಗವತ್ಪ್ರಾಪ್ತಿಗೆ ಕಾರಣವಾಗಿರುವುದೆಂದರಿಯಬೇಕು. ||೭||

(ರಾ|| ಭಾ||) ಪೂರ್ವಾಭ್ಯಸ್ತವಿಷಯದಲ್ಲಿಯೇ ಅಂತಿಮ ಪ್ರತ್ಯಯವುಂಟಾಗುವುದರಿಂದ ಮರಣ ಪರ್ಯಂತವು ಪ್ರತಿದಿನದಲ್ಲೂ, ನಮ್ಮನ್ನೇ ನೆನೆಸಿಕೊಳ್ಳುಂಡಿರು, ಅನುದಿನವೂ ನಮ್ಮ ಸ್ಮೃತಿಯ ನ್ನುಂಟುಮಾಡುವ ಯುದ್ಧಾದಿ ರೂಪವಾದ ವರ್ಣಾಶ್ರಮಾನು ಗುಣವಾಗಿರುವ ಶ್ರುತಿಸ್ಮೃತಿ ಚೋದಿತವಾದ ನಿತ್ಯ ನೈಮಿತ್ತಿಕ ಕರ್ಮಗಳನ್ನನುಷ್ಠಿಸುತಲಿರು. ಈಪ್ರಕಾರವಾಗಿ ಉಪಾಯದಿಂದ ನನ್ನಲ್ಲಿ ಮನಸ್ಸನ್ನೂ ಬುದ್ಧಿಯನ್ನೂ ಇಟ್ಟವನಾಗಿ ನನ್ನನ್ನೇ ಅಂತಿಮಕಾಲದಲ್ಲಿ ಸ್ಮರಣೆಮಾಡಿಕೊಳ್ಳುಂಡಿದ್ದರೆ ನಿನ್ನ ಅಭಿಲಾಷಾನುಗುಣವಾಗಿ ನನ್ನನ್ನೇ ಹೊಂದುತ್ತೀ, ಈವಿಷಯದಲ್ಲಿ ಸಂಶಯಪಡಬೇಕಾಗಿಲ್ಲವು. ||೭||

ಶ್ಲೋ|| ಅಭ್ಯಾಸಯೋಗಯುಕ್ತೇನಚೇತಸಾನಾನ್ಯಗಾ
ಮಿನಾ | ಪರಮಂಪುರುಷಂದಿವ್ಯಂಯಾತಿಪಾರ್ಥಾನು
ಚಿಂತಯನ್ || ... ... ||೮||

ಪ|| ಅಭ್ಯಾಸಯೋಗಯುಕ್ತೇನ -ಚೇತಸಾ -ನ-ಅನ್ಯಗಾಮಿನಾ | ಪರಮಂ-ಪುರುಷಂ-ದಿವ್ಯಂ-ಯಾತಿ-ಪಾರ್ಥ-ಅನುಚಿಂತಯನ್ ||

ಅ|| ಹೇಪಾರ್ಥ-ಎಲೈ ಅರ್ಜುನನೇ? ಅಭ್ಯಾಸ ಯೋಗಯುಕ್ತೇನ-ಅಭ್ಯಾಸವೆಂಬ ಉಪಾಯದಿಂದ ಕೂಡಿರುವ, (ಶಂ|| ಶ್ರೀ) ಮೊದಲು ಯಾವ ವಸ್ತುವನ್ನು ಧ್ಯಾನಿಸಲಾರಂಭಿಸಿರುವನೊ ಅದನ್ನೇ ಬಿಡದೆ ಧ್ಯಾನಮಾಡುವುದು ಅಭ್ಯಾಸವೆನ್ನಲ್ಪಡುವುದು, ಇದೇ ಹೊಂದುವುದಕ್ಕೆ ಉಪಾಯವಾಗುವುದು. ನಾನ್ಯಗಾಮಿನಾ-ಇತರ ವಿಷಯಗಳಲ್ಲಿ ಪ್ರವೇಶವಿಲ್ಲದ, ಚೇತಸಾ-ಮನಸ್ಸಿನಿಂದ, ದಿವ್ಯಂ-ಪ್ರಕಾಶ ರೂಪನಾದ, (ಗೀ|| ವಿ||) ಸ್ವಪ್ರಾಪ್ತಿ ಬಿಕ್ರೀತಾದಿ ಗುಣಯುಕ್ತನಾದ, (ಶಂ) ಸೂರ್ಯಮಂಡಲ ಮಧ್ಯಸ್ಥನಾದ, ಪರಮಂಪುರುಷಂ-ಪರಮ ಪುರುಷನನ್ನು, (ಗೀ|| ವಿ||) ಸರ್ವಪ್ರಾಣಿಗಳ ದೇಹಗಳಲ್ಲಿ ನಿಯಾಮಕನಾದ ಪುರುಷನನ್ನು (ಅಥವಾ) ಪೂರ್ಣನಾದ ಪುರುಷನನ್ನು, ಅನುಚಿಂತಯನ್-ಧ್ಯಾನಿಸುವಂತವನಾಗಿ, ಯಾತಿ-ಅವನನ್ನೆ ಹೊಂದುತ್ತಾನೆ. ... ... ||೮||

(ಶಂ|| ಭಾ||) ಈ ಶ್ಲೋಕದಿಂದಲೂ ಪೂರ್ವ ಶ್ಲೋಕೋಕ್ತವಾದ ಅರ್ಥವನ್ನನುಷ್ಠಿಸುವಂತವನು ಅಂತಕಾಲದಲ್ಲಿ ಭಗವಂತನನ್ನು ಹೊಂದುತ್ತಾನೆನ್ನುತ್ತಾರೆ. ಚಿತ್ತ ಸಮರ್ಪಣಕ್ಕೆ ವಿಷಯ ಭೂತನಾಗಿಯೂ ಒಬ್ಬನಾಗಿಯೂ ಇರುವ ಪರಮಾತ್ಮನಲ್ಲಿ ಏಕಾಕಾರ ಪ್ರತ್ಯ

ಯಾವೃತ್ತಿಯೇ ಲಕ್ಷಣವಾಗಿಯೂ, ವಿಲಕ್ಷಣ ಪ್ರತ್ಯಯಾನಂತರಿತವಾಗಿಯೂ, (ಎಂದರೆ ವಿಷಯಾಂತರಗಳನ್ನು ಬಿಟ್ಟು ಪರಮಾತ್ಮನಲ್ಲಿಯೇ ಚಿತ್ತವನ್ನು ಸದಾನಿಲ್ಲಿಸುವಿಕೆಯು ಅಭ್ಯಾಸವೆನ್ನಲ್ಪಡುವುದು.) ಇರುವ ಚಿತ್ತವೃತ್ತಿಯುಕ್ತವಾಗಿರುವಂತೆ ಮಾಡಿಕೊಳ್ಳುವಿಕೆಯು ಅಭ್ಯಾಸವೆನ್ನಲ್ಪಡುವುದು. ಚಿತ್ತ ಸಮರ್ಪಣಕ್ಕೆ ವಿಷಯ ಭೂತವಾದ ವಸ್ತುವು ಭಗವಂತನಿಗಿಂತಲೂ ಬೇರೊಂದಿಲ್ಲವಾದುದರಿಂದ ವಿಷಯಾಂತರಗಳಂ ಬಿಟ್ಟು ಭಗವಂತನಲ್ಲಿಯೇ ಮನಸ್ಸನ್ನು ನಿಲ್ಲುವಂತೆ ಮಾಡುವಿಕೆಯೆಂಬ ಅಭ್ಯಾಸವೇ ಯೋಗವೆನ್ನಲ್ಪಡುವುದು. ಚಿತ್ತವು ವಿಷಯಾಂತರಗಳಲ್ಲಿ ಪ್ರವೇಶಿಸಿದರೆ ಪರಮ ಪುರುಷಾರ್ಥ ಪ್ರಾಪ್ತಿಯಾಗುವುದಿಲ್ಲವಾದುದರಿಂದ ಇದಂ ವ್ಯಕ್ತಪಡಿಸಲೂ, ನಾನ್ಯಗಾಮಿನಾ, ಎಂಬದಾಗಿ ಹೇಳಿದನು. ಒಂದುವೇಳೆ ಪ್ರಮಾದ ವಶದಿಂದ ಚಿತ್ತವು ವಿಷಯಾಂತರಗಳಲ್ಲಿ ಪ್ರವೇಶಿಸಿದರೂ ಪರಮ ಪುರುಷಾರ್ಥವು ಲಭಿಸದೆ ಹೋಗುವುದೆಂಬ ಶಂಕಾಪರಿಹಾರಕ್ಕಾಗಿ 'ನಾನ್ಯಗಾಮಿನಾ, ಎಂಬಸ್ಥಳದಲ್ಲಿ ಇತರವನ್ನು ಹೊಂದುವಂತ ಸ್ವಭಾವ ವಿಲ್ಲದ ಚಿತ್ತವೆಂಬ ಅರ್ಥವು ಹೇಳಲ್ಪಟ್ಟತೆಂತಲೂ, ಈ ಪ್ರಕಾರವಾಗಿ ಹೇಳುವುದರಿಂದ ಬುದ್ಧಿಪೂರ್ವಕವಾಗಿ ವಿಷಯಾಂತರಗಳಲ್ಲಿ ಚಿತ್ತವನ್ನು ಪ್ರವೇಶಮಾಡಿಸದೆ ಪರಮ ಪುರುಷನಿಷ್ಠನಾಗಿರುವವನ ಚಿತ್ತವು ಒಂದುವೇಳೆ ಪ್ರಮಾದ ವಶದಿಂದ ವಿಷಯಾಂತರಗಳಲ್ಲಿ ಪ್ರವೇಶಿಸಿದರೂ ಪರಮಪುರುಷಾರ್ಥಕ್ಕೆ ಹಾನಿ ಇಲ್ಲವೆಂತಲೂ ತಿಳಿಯಬೇಕು. ಆದುದರಿಂದ ವಿಷಯಾಂತರಗಳಲ್ಲಿ ವ್ಯಾಪಿಸುವಂತಹ ಸ್ವಭಾವವಿಲ್ಲದ್ದಾಗಿಯೂ ಅಭ್ಯಾಸವೆಂಬ ಯೋಗದೊಡನೆ ಕೂಡಿರುವುದಾಗಿಯೂ ಇರುವ ಚಿತ್ತದಿಂದ ಸೂರ್ಯಮಂಡಲದಲ್ಲಿ ವಿಶೇಷವಾಗಿ ಅಭಿವ್ಯಕ್ತನಾಗಿರುವ ನಿರತಿಶಯಾನಂದ ಸ್ವರೂಪನಾದಪರಮ ಪುರುಷನನ್ನು ಶಾಸ್ತ್ರಾಚಾರ್ಯೋಪದೇಶಗಳಿಂದ ಸರ್ವಕಾಲಗಳಲ್ಲಿಯೂ ಧ್ಯಾನಮಾಡುವಂತವನು ಆ ಪರಮ ಪುರುಷನನ್ನೇ ಹೊಂದುತ್ತಾನೆಂದರಿಯಬೇಕು. ... ... ... ‖೮‖

(ರಾ‖ ಭಾ‖) ಈ ಪ್ರಕಾರ ಸಾಮಾನ್ಯವಾಗಿ ಹೊಂದತಕ್ಕಪರಮ ಪುರುಷನ ಪ್ರಾಪ್ತಿ ಅಂತಿಮ ಪ್ರತ್ಯಯಾಧೀನವೆಂಬದಾಗಿಹೇಳಿ ಅದಕ್ಕಾಗಿ ಮೂರಧಿಕಾರಿಗಳಿಗೂ ಉಪಾಸನ ಪ್ರಕಾರ ಭೇದವನ್ನು

ಹೇಳಲುಪಕ್ರಮಿಸುತ್ತಾರೆ. ಈ ಶ್ಲೋಕದಿಂದ ಐಶ್ವರ್ಯಾರ್ಥಿಗಳಿಗೆಉಪಾಸನಪ್ರಕಾರವನ್ನೂ, ಉಪಾಸನಾನುಗುಣವಾದ ಅಂತಿಮಪ್ರತ್ಯಯಪ್ರಕಾರವನ್ನೂ ಹೇಳುತ್ತಾರೆ. ನಿತ್ಯನೈಮಿತ್ತಿಕಾ ವಿರುದ್ಧಗಳಾದ ಸರ್ವಕಾಲಗಳಲ್ಲಿಯೂ ಉಪಾಸ್ಯ ವಿಷಯವನ್ನು ಪರಿಶೀಲನೆ ಮಾಡುವುದು ಅಭ್ಯಾಸವೆನ್ನಲ್ಪಡುವುದು. ಪ್ರತಿದಿನವೂ ಯೋಗಕಾಲದಲ್ಲಿ ಮಾಡುವುದಾದ ಹಿಂದೇ ಹೇಳಿರುವ ಉಪಾಸನವು ಯೋಗವೆನ್ನಲ್ಪಡುವುದು. ಇವುಗಳಿಂದ ಕೂಡಿರುವುದರಿಂದ ವಿಷಯಾಂತರಗಳಲ್ಲಿ ಪ್ರವಿಷ್ಟವಾಗದ ಮನಸ್ಸಿನಿಂದ ಸರ್ವೋತ್ಕೃಷ್ಟ ದಿವ್ಯೈಶ್ವರ್ಯ ವಿಶಿಷ್ಟಪುರುಷನಾಗಿರುವ ನನ್ನನ್ನು ಮುಂದಿನ ಶ್ಲೋಕದಲ್ಲಿ ಹೇಳುವಂತೆ ಅಂತಿಮಕಾಲದಲ್ಲಿ ಸ್ಮರಿಸುವಂತವನು ನನ್ನನ್ನೇ ಹೊಂದುತ್ತಾನೆ. ಎಂದರೆ ಆದಿಭರತರು ಮಧ್ಯಕಾಲದಲ್ಲಿ ಮೃಗಜನ್ಮವಂ ಹೊಂದಿದಂತೆ ಐಶ್ವರ್ಯವನ್ನು ಹೊಂದಿ ನಮ್ಮೊಡನೆ ಸಮಾನ (ಸಮಾನ ಧರ್ಮವುಳ್ಳವ) ನಾಗುವನೆಂದರ್ಥವು. ... ... ||೮||

(ಶ್ರೀ) ಸಂತತ ಭಗವತ್ಸ್ಮರಣಕ್ಕೆ ಅಭ್ಯಾಸವು ಅಂತರಂಗಸಾಧನವೆಂಬದಾಗಿ ಶ್ರೀಕೃಷ್ಣ ಪರಮಾತ್ಮನೀ ಶ್ಲೋಕದಿಂದ ಬೋಧಿಸಿದನು. ... ... ||೮||

ಶ್ಲೋ||ಕವಿಂಪುರಾಣಮನುಶಾಸಿತಾರಮಣೋರಣೀಯಾಂ
ಸಮನುಸ್ಮರೇದ್ಯಃ । ಸರ್ವಸ್ಯಧಾತಾರಮಚಿಂತ್ಯರೂಪ
ಮಾದಿತ್ಯವರ್ಣಂತಮಸಃಪರಸ್ತಾತ್ ॥ ೯ ॥ ಪ್ರಯಾ
ಣಕಾಲೇಮನಸಾಚಲೇನ ಭಕ್ತ್ಯಾಯುಕ್ತೋಯೋಗಬಲೇ
ನಚೈವ| ಭ್ರುವೋರ್ಮಧ್ಯೇಪ್ರಾಣಮಾವೇಶ್ಯ ಸಮ್ಯಕ್ಸತಂ
ಪರಂಪುರುಷಮುಪೈತಿದಿವ್ಯಂ॥ ॥ ೧೦॥

ಪ|| ಕವಿಂ- ಪುರಾಣಂ- ಅನುಶಾಸಿತಾರಂ- ಅಣೋಃ- ಅಣೀಯಾಂಸಂ- ಅನುಸ್ಮರೇತ್- ಯಃ||ಸರ್ವಸ್ಯ-ಧಾತಾರಂ- ಅಚಿಂತ್ಯರೂಪಂ- ಆದಿತ್ಯವರ್ಣಂ- ತಮಸಃ- ಪರಸ್ತಾತ್ || ಪ್ರಯಾಣಕಾಲೇ- ಮನಸಾ- ಅಚಲೇನ- ಭಕ್ತ್ಯಾ- ಯುಕ್ತಃ- ಯೋಗಬಲೇನ- ಚ- ಏವ|ಭ್ರುವೋಃ- ಮಧ್ಯೇ- ಪ್ರಾಣಂ- ಆವೇಶ್ಯ- ಸಮ್ಯಕ್- ಸಃ- ತಂ-ಪರಂ-ಪುರುಷಂ- ಉಪೈತಿ- ದಿವ್ಯಂ ||

(ಅ॥ ರಾ॥ ಭಾ॥ ) ಯಃ- ಯಾವ ಐಶ್ವರ್ಯಾರ್ಥಿಯಾದ ಅಧಿಕಾರಿಯು, ಕವಿಂ- ಸರ್ವಜ್ಞನಾಗಿಯೂ, ಪುರಾಣಂ- ಪುರಾತನನಾಗಿಯೂ, ಅನುಶಾಸಿತಾರಂ- ವಿಶ್ವನಿಯಂತಾವಾಗಿಯೂ, ಅಣೋರಣೀಯಾಂಸಂ- ಜೀವನಿಗಿಂತಲೂ ಸೂಕ್ಷ್ಮತರನಾಗಿಯೂ,ಸರ್ವಸ್ಯಧಾತಾರಂ- ಸಮಸ್ತವನ್ನು ಸೃಷ್ಟಿಮಾಡುವಂತವನಾಗಿಯೂ, ಅಚಿಂತ್ಯರೂಪಂ- ಸಕಲೇತರ ವಿಲಕ್ಷಣಸ್ವರೂಪನಾಗಿಯೂ, ತಮಸಃ ಪರಸ್ತಾದಾದಿತ್ಯವರ್ಣಂ- ಅಪ್ರಾಕೃತಸ್ವಾಸಾಧಾರಣ ದಿವ್ಯರೂಪನಾಗಿಯೂ ಇರುವ, ದಿವ್ಯಂ ಪರಂಪುರುಷಂ-ಅಚಿಂತ್ಯ ವೈಭವನಾದ ಪರಮಪುರುಷನನ್ನು, ಭಕ್ತ್ಯಾಯೋಗಬಲೇನಚಯುಕ್ತಃ- ಪ್ರತಿದಿನದಲ್ಲಿಯೂ ಅಭ್ಯಾಸಮಾಡಲ್ಪಟ್ಟ ಭಕ್ತಿಯಿಂದಲು ಯೋಗಬಲದಿಂದಲೂಸಂಯುಕ್ತನಾಗಿರುವುದರಿಂದ, ಅಚಲೇನಮನಸಾ- ನಿಶ್ಚಲವಾದ ಮನಸ್ಸಿನಿಂದ, ಪ್ರಯಾಣಕಾಲೇ- ಮರಣಕಾಲದಲ್ಲಿ, ಭ್ರುವೋರ್ಮಧ್ಯೆ ಪ್ರಾಣಮಾವೇಶ್ಯ- ಭ್ರೂಮಧ್ಯಸ್ಥಾನದಲ್ಲಿ ಪ್ರಾಣವಾಯುವನ್ನು ಸಮೀಚೀನವಾಗಿ ಸ್ಥಾಪಿಸಿಕೊಂಡು, ತತ್ರ- ಆಭ್ರೂಮಧ್ಯದಲ್ಲಿ ಅನುಸ್ಮರೇತ್- ಅನುಭೂತವಾಗಿರುವಂತೆ ಸ್ಮರಿಸುತ್ತಾನೋ, ಸಃ- ಆಅಧಿಕಾರಿಯು, ತಂಪರಂದಿವ್ಯಂ ಪುರುಷಮುಪೈತಿ- ತನ್ನಿಂದ ಭಜಿಸಲ್ಪಟ್ಟವನಾಗಿಯೂ ಅಚಿಂತ್ಯ ವೈಭವನಾಗಿಯೂ ಇರುವ ಪರಮಪುರುಷನನ್ನು ಹೊಂದುತ್ತಾನೆ. ಆಪರಮಪುರುಷನ ಐಶ್ವರ್ಯಕ್ಕೆ ಸಮಾನವಾದ ಐಶ್ವರ್ಯವನ್ನು ಹೊಂದುತ್ತಾನೆಂದು ತಾತ್ಪರ್ಯವು. ॥ ೯ ॥ ೧೦ ॥

(ಶಂ॥ ಭಾ॥) ಸಮ್ಯಕ್-ಜಾಗ್ರತೆಯಾಗಿ, ಅನುಶಾಸಿತಾರಂ-ಸಕಲಲೋಕನಿಯಾಮಕನು, ಸರ್ವಸ್ಯಧಾತಾರಂ-ಸಕಲ ಕರ್ಮಫಲಗಳನ್ನು ಭಾಗಿಸಿಕೊಡುವಂತವನು, ಆದಿತ್ಯವರ್ಣಂ-ಸೂರ್ಯನ ಪ್ರಕಾಶದಂತೆ ನಿತ್ಯಚೈತನ್ಯ ಪ್ರಕಾಶವುಳ್ಳವನು, ತಮಸಃ ಪರಸ್ತಾತ್-ಮೋಹಾಂಧಕಾರರಹಿತನು, (ಉಳಿದ ಪದಗಳಿಗೆ ಮೇಲೇ ವಿವರಿಸಿರುವಂತೆ ಅರ್ಥವಂ ತಿಳಿಯಬೇಕು.) ತಾ॥ ಅತೀತಾನಾಗತ ವರ್ತಮಾನ ವಿಷಯಗಳೆಲ್ಲವನ್ನು ತಿಳಿದಿರುವನಾಗಿಯೂ, (ಸರ್ವಜ್ಞನಾಗಿಯೂ) ಸರ್ವಕಾಲ ವರ್ತಿಯಾಗಿಯೂ, ಸಕಲ ಲೋಕನಿಯಾಮಕನಾಗಿಯೂ, ಸೂಕ್ಷ್ಮ ಪದಾರ್ಥಗಳಿಗಿಂತಲು ಅತ್ಯಂತ ಸೂಕ್ಷ್ಮಭೂತನಾಗಿಯೂ, ಸಮಸ್ತ ಕರ್ಮಗಳಿಗೂ ಆ ಕರ್ಮಫಲಗಳಿಗೂ ವಿಚಿತ್ರವಾಗಿ ಪ್ರಾಣಿಗಳಿಗೆ ವಿಭಜನ ಕರ್ತನಾಗಿಯೂ, ಸೂರ್ಯನ ಪ್ರಕಾಶದಂತೆ ಪ್ರಕಾಶವುಳ್ಳ ನಿತ್ಯಚೈತನ್ಯ ಪ್ರಕಾಶವುಳ್ಳವನಾಗಿಯೂ, ಅಜ್ಞಾನವೆಂಬ ಮೋಹಾಂಧಕಾರಾತೀತನಾಗಿಯೂ ಇರುವ ಪರಮ ಪುರುಷನನ್ನು ಧ್ಯಾನಿಸುವಂತವನು ಆ ಪರಮ ಪುರುಷನನ್ನೇ ಹೊಂದುವನು. ॥೯॥ ಯಾವನಾಡೀ ಮಾರ್ಗದಿಂದ ಹೊರಟವನು ಆ ಪರಮ ಪುರುಷನನ್ನು ಹೊಂದುವನು ? ಎಂಬ ಪ್ರಶ್ನಕ್ಕೆ

ಉತ್ತರವನ್ನು ಹೇಳುತ್ತಾನೆ. ಯಾವ ಪುರುಷನು ಮರಣಕಾಲದಲ್ಲಿ ನಿಶ್ಚಲವಾದ ಮನಸ್ಸುಳ್ಳವನಾಗಿಯೂ ಸಮಾಧಿ ಸಂಸ್ಕಾರಗಳಿಂದುಂಟಾದ ಚಿತ್ತಸ್ಥೈರ್ಯವೇ ಸ್ವರೂಪವಾಗಿ ಉಳ್ಳ ಯೋಗಬಲವುಳ್ಳವನಾಗಿಯೂ ಭಕ್ತಿಯುಳ್ಳವನಾಗಿಯೂ ಆಗುತ ಚಿತ್ತವನ್ನು ಹೃದಯ ಪುಂಡರೀಕದಳದಿಂದ ಮೇಲೆ ಹೋಗಿರುವ ನಾಡೀಮಾರ್ಗವಾಗಿ ಭೂಜಯಾದಿತತ್ವಗಳನ್ನು ಜಯಿಸಿ ಪ್ರಾಣವಾಯುವನ್ನು ಭ್ರೂಮಧ್ಯಸ್ಥಾನದಲ್ಲಿ ಸ್ಥಾಪಿಸಿ ಪ್ರಮಾದಗಳ್ಯಾವವೂ ಇಲ್ಲದವನಾಗಿ ಪೂರ್ವಶ್ಲೋಕೋಕ್ತ ವಿಶೇಷಣ ವಿಶಿಷ್ಟನಾದ ಪರಮಾತ್ಮನನ್ನು ಸ್ಮರಿಸುವನೋ ಅಂತವನು ಪ್ರಕಾಶಾತ್ಮಕನಾದ ಆಪರಮಪುರುಷನನ್ನೇ ಹೊಂದುವನೆಂದು ತಾತ್ಪರ್ಯವು. ... ... ॥೧೦॥

(ಗೀ॥ ವಿ॥) ಅನುಶಾಸಿತಾರಂ-ಸಕಲಲೋಕನಿಯಾಮಕನು, ಸರ್ವಸ್ಯಧಾತಾರಂ-ಸಕಲ ಪ್ರಪಂಚಗಳಿಗು ಧಾರಕನೂ ಪೋಷಕನೂ ಆಗಿರುವಂತವನು. ತಮಸಃ ಪರಸ್ತಾತ್-ಮಾಯೆಯನ್ನು (ಅಥವಾ) ಮೃತ್ಯುವನ್ನತಿಕ್ರಮಿಸಿದವನು. .. ... ... ॥೯॥೧೦॥

ಶ್ಲೋ॥ ಯದಕ್ಷರಂವೇದವಿದೋವದಂತಿ ವಿಶಂತಿಯದ್ಯ
ತಯೋವೀತರಾಗಾಃ । ಯದಿಚ್ಛಂತೋಬ್ರಹ್ಮಚರ್ಯಂಚ
ರಂತಿತತ್ತೇಪದಂಸಂಗ್ರಹೇಣಪ್ರವಕ್ಷ್ಯೇ ॥೧೧॥

ಪ॥ ಯತ್-ಅಕ್ಷರಂ-ವೇದವಿದಃ-ವದಂತಿ-ವಿಶಂತಿ-ಯತ್-ಯತಯಃ-ವೀತರಾಗಾಃ। ಯತ್-ಇಚ್ಛಂತಃ-ಬ್ರಹ್ಮಚರ್ಯಂ-ಚರಂತಿ-ತತ್-ತೇ-ಪದಂ-ಸಂಗ್ರಹೇಣ-ಪ್ರವಕ್ಷ್ಯೇ॥

(ಅ॥ ರಾ॥ ಭಾ॥) ಅನಂತರದಲ್ಲಿ ಕೈವಲ್ಯಾರ್ಥಿಯಾದವನ ಸ್ಮರಣ ಪ್ರಕಾರವನ್ನು ಹೇಳುತ್ತಾನೆ. ವೇದವಿದಃ-ವೇದಾರ್ಥಗಳನ್ನರಿತವರು, ಯದಕ್ಷರಂ-ಯಾವ ಅಕ್ಷರವನ್ನು, ವದಂತಿ-ಅಸ್ಥೂಲತ್ವಾದಿ ಗುಣಯುಕ್ತವಾಗಿರುವಂತೆ ಆಥರ್ವಣಿಕಾದಿ ವೈದಿಕರು ಹೇಳುವರೋ, ವೀತರಾಗಾಯತಯಃ-ವೈರಾಗ್ಯಶಾಲಿಗಳಾದ ಯತಿಗಳೂ, ಯತ್-ಯಾವ ಅಕ್ಷರವನ್ನು, ವಿಶಂತಿ-ಪ್ರವೇಶಿಸುವರೋ, ಯತ್-ಯಾವ ಅಕ್ಷರವನ್ನು, ಇಚ್ಛಂತಃ-ಹೊಂದಬೇಕೆಂಬ ಇಚ್ಛೆಯುಳ್ಳವರು, ಬ್ರಹ್ಮಚರ್ಯಂ-ವಿಷಯತ್ಯಾಗನಿಯಮವನ್ನು, ಚರಂತಿ-ಅನುಷ್ಠಿಸುತ್ತಾರೋ, ತತ್ಪದಂ-ನಿಖಿಲವೇದಾಂತ ವೇದ್ಯವಾಗಿಯೂ ನನ್ನ ಸ್ವರೂಪವಾಗಿಯೂ, ಇರುವ ಅಕ್ಷರವನ್ನು, ಯಾವ ರೀತಿಯಿಂ ದುಪಾಸನ ಮಾಡಬೇಕೋ ಆ ಪ್ರಕಾರವನ್ನು, ಸಂಗ್ರಹೇಣ-ಸಂಕ್ಷೇಪವಾಗಿ, ತೇ-ನಿನಗೆ, ಪ್ರವಕ್ಷ್ಯೇ-ಹೇಳುವೆನೆಂದನು. .... .... ... ... ॥೧೧॥

(ಶಂ॥ ಭಾ॥) ಯಾವದೋ ಒಂದಾದ ಮಂತ್ರಾದಿಕದಿಂದ ಧ್ಯಾ

ನಕಾಲದಲ್ಲಿ ಭಗವದನುಸ್ಮರಣವಂ ಮಾಡಿದರೂ ಅಷ್ಟುಮಾತ್ರದಿಂದೆ ಲೇ ಮೋಕ್ಷವು ಲಭಿಸಲಾರದೆಂತಲೂ ಬ್ರಹ್ಮವಾಚಕವಾದ ಪ್ರಣವಧ್ಯಾನದಿಂದಲೇ ಪರಮ ಪುರುಷ ಧ್ಯಾನವು ಮಾಡತಕ್ಕದ್ದೆಂಬದಾಗಿ ವೇದಾರ್ಥಗಳಂ ತಿಳಿದವರು ಹೇಳುತ್ತಾರಾದುದರಿಂದ ಶ್ರುತಿಪ್ರಮಾಣಾನುಸಾರವಾಗಿ ಪ್ರಣವಾಭಿಧ್ಯಾನದಿಂದಲೇ ಮೋಕ್ಷಪ್ರಾಪ್ತಿಯಾಗುವು ದೆಂತಲೂ ಬೋಧಿಸುತ್ತಾನೆ.

ಆದರೆ ಗೋಚರವಲ್ಲದ ಪ್ರತ್ಯಗ್ಬ್ರಹ್ಮವನ್ನು ವೇದಾರ್ಥವಂ ತಿಳಿದವರುಮಾತ್ರ ಹೇಗೆ ಹೇಳುವುರೆಂಬು ಸಂದೇಹಿಸದೇ ಅತೀಂದ್ರಿಯುವಾಗಿರುವುದರಿಂದ ಬ್ರಹ್ಮವು ಗೋಚರವಾಗದಿದ್ದರೂ “ಎಲೈಗಾರ್ಗಿಯೇ! ನೀನು ಯಾವದನ್ನು ಕುರಿತು ಪ್ರಶ್ನೆವಂಮಾಡಿದೆಯೋ ಆದನ್ನು ವೇದಾರ್ಥವಂ ತಿಳಿದವರು ನಾಶರಹಿತವಾದದ್ದನ್ನಾಗಿಹೇಳುವರು,, ಎಂಬೀಅರ್ಥವಂ ಪ್ರತಿಪಾದಿಸುವ ಶ್ರುತಿವಾಕ್ಯಾನುಸಾರವಾಗಿ ವೇದಾರ್ಥಾಭಿಜ್ಞರು ಬ್ರಹ್ಮವನ್ನು ನಾಶರಹಿತವಾದದ್ದನ್ನಾಗಿ ಹೇಳುವುರೆಂದರಿಯುಬೇಕು. ಆದರೇ ಸರ್ವ ವಿಶೇಷ ಶೂನ್ಯವಾಗಿಯೂ (ಎಂದರೇ ಯಾವಧರ್ಮವೂಇಲ್ಲದ್ದಾಗಿಯೂ ಅಗೋಚರವಾಗಿಯೂಇರುವ ಬ್ರಹ್ಮವನ್ನು ಶ್ರುತಿಪ್ರಮಾಣವೂ ಪ್ರತಿಪಾದಿಸಕೂಡದೆಂದು ಸಂದೇಹಿಸದೆ (ಸ್ಥೂಲವಾದದ್ದಲ್ಲವು. ಅಣುವಾದದ್ದಲ್ಲವು) ಎಂಬ ಶ್ರುತ್ಯನುಸಾರವಾಗಿ ನಾಶರಹಿತವಾದ ಆಬ್ರಹ್ಮವು ಸರ್ವ ವಿಶೇಷರಹಿತವಾಗಿಯೆ ಇರುವುದೆಂದು ತಿಳಿಯುಬೇಕು. “ವಿಶಂತಿಯದ್ಯತಯೋವೀತರಾಗಾಃ” ಎಂಬ ದ್ವಿತೀಯುಪಾದದಿಂದ ಈಬ್ರಹ್ಮವು ವಿದ್ವದನುಭವ ಸಿದ್ಧವಾಗಿರುವುದು ಮಾತ್ರವಲ್ಲದೆ ಮುಕ್ತರಿಗೂ ಪ್ರಸಿದ್ಧವಾಗಿರುವುದೆಂದು ತಿಳಿಯಬೇಕು. ರಾಗಾದಿದೋಷಗಳಿಂದ ಬಿಡಲ್ಪಟ್ಟವರು ಸನ್ಯಾಸಕ್ಕೆ ಯೋಗ್ಯರಾಗಿರುವರು ವೇದಾರ್ಥ ಪರಿಜ್ಞಾತೃಗಳು ಹೇಳುವುದು ಮುಕ್ತಪ್ರಾಪ್ಯವಾಗಿರುವುದೆಂಬೀ ಯೆರಡು ಕಾರಣಗಳಿಂದಲೇ ಅಲ್ಲದೆ ಜ್ಞಾನಾರ್ಥವಾಗಿ ಬ್ರಹ್ಮಚರ್ಯ ವಿಧಾನವಿರುವುದರಿಂದಲೂ ಬ್ರಹ್ಮವು ತಿಳಿಯತಕ್ಕದ್ದೆಂದು ಪ್ರಸಿದ್ಧವಾಗಿರುವುದು. ಆದದರಿಂದ ವಿವೇಕಿಗಳು ಯಾವ ವಸ್ತುವನ್ನು ತಿಳಿಯಲಪೇಕ್ಷಿಸುವಂತವರಾಗಿ ಗುರುಶುಶ್ರೂಷಾದಿ ಬ್ರಹ್ಮಚರ್ಯವ್ರತಗಳನ್ನಾಚರಿಸುತ್ತಾರೊ ಅಂತಹ ಅಕ್ಷರವೆಂಬ ಹೆಸರುಳ್ಳ

ಷಾ ಪ್ಯವಸ್ತುವನ್ನು ನಿನಿಗೆ ಸಂಗ್ರಹವಾಗಿ ತಿಳಿಸುವೆನುಕೇಳು. ಇಲ್ಲಿ ಧ್ಯಾನಫಲವನ್ನು ತಿಳಿಯಲಪೇಕ್ಷೆಯುಳ್ಳ ಸತ್ಯಕಾಮನೆಂಬ ಋಷಿಕು ಮಾರನಿಂದ ಪಿಪ್ಪಲಾದನೆಂಬ ಬ್ರಹ್ಮಜ್ಞಾನಿಯು ಭಗವನ್, ಎಂಬದಾಗಿ ಸಂಬೋಧಿಸಲ್ಪಡುತ್ತಾನೆ. ಎಲೈ ಪಿಪ್ಪಲಾದ ಮುಹಾಮುನಿಯೆ! ಮನುಷ್ಯರಲ್ಲಿ ಅಧಿಕಾರಿಯಾದವನು ಧ್ಯಾನಸಿದ್ಧಿಯುಂಟಾಗುವಂತೆ "ಅಪ್ರಯಾಣಾತ್ತತ್ರಾಪಿಹಿದೃಷ್ಟಮ್" (ಅ೪ ॥ ಪಾ॥ ೧॥ ಸೂ॥ ೧೨) ಎಂಬ ಬ್ರಹ್ಮಸೂತ್ರಪ್ರಕಾರವಾಗಿ ಮರಣಪರ್ಯಂತವೂ ಸರ್ವವೇದ ಸಾರವಾದ ಓಂಕಾರವನ್ನು ಅತಿ ಶ್ರದ್ಧಾಭಕ್ತಿಗಳೊಡನೆ ಧ್ಯಾನವನ್ನು ಮಾಡಿದರೆ ಪುಣ್ಯಲೋಕಗಳನೇಕಗಳಿರುವುದರಿಂದ ಅಂತಹ ಲೋಕಗ ಳಲ್ಲಿ ಯಾವಲೋಕವನ್ನು ಜಯಿಸುವನು(ಹೊಂದುವನು)? ಎಂಬದಾಗಿ ಪ್ರಶ್ನವನ್ನು ಮಾಡುವ ಸತ್ಯಕಾಮನಿಗೆ ಪಿಪ್ಪಲಾದನೆಂಬ ಆಚಾರ್ಯನು ಪ್ರತಿವಚನವನ್ನು ಹೇಳುತ್ತಾನೆ. 'ಎಲೈ ಸತ್ಯಕಾಮನೆಂಬ ಶಿಷ್ಯನೆ! ಪರಾಪರ ಸ್ವರೂಪಿಯಾದ ಬ್ರಹ್ಮವೆನ್ನಲ್ಪಡುವುದು ಓಂಕಾರವು, ಎಂ ದಾರಂಭಿಸಿ " ಯಃಪುನರೇತಂ" ಇತ್ಯಾದಿಯಿಂದ ಅಕಾರ, ಉಕಾರ, ಮಕಾರ, ಸ್ವರೂಪವಾದ ಪ್ರಣವಾಕ್ಷರ ರೂಪನಾಗಿರುವ ಪರಬ್ರಹ್ಮ ವನ್ನು ಧ್ಯಾನಮಾಡಿದರೆ ಬ್ರಹ್ಮವನ್ನು ಹೊಂದುತ್ತಿ" ಎಂಬಿದೇ ಮೊ ದಲಾದ ಪ್ರಶ್ನೋಪನಿಷತ್ಪಂಚಮ ಪ್ರಶ್ನಶ್ರುತಿ ವಾಕ್ಯದಿಂದಲೂ, "ಶಾಸ್ತ್ರೀಯ ಧರ್ಮಾನುಷ್ಠಾನಕ್ಕಿಂತಲೂ ಕಾರ್ಯಕಾರಣ ಸಂಘಾತ ರೂಪವೃಕ್ಷ ವಸ್ತುಸಮುದಾಯಕ್ಕಿಂತಲೂ ಬೇರೆ ಯಾಗಿರುವುದು" ಎಂದಾರಂಭಿಸಿ "ಸಮಸ್ತವೇದಗಳು ಯಾವ ಪ್ರಾಪ್ಯವಸ್ತುವನ್ನು ಪ್ರತಿಪಾದಿಸುವುವೊ, ಚಿತ್ತಶುದ್ಧಿದ್ವಾರಾ ಜ್ಞಾನದಿಂದ ಯಾವವಸ್ತು ವನ್ನು ಹೊಂದುವುದಕ್ಕಾಗಿ ತಪಸ್ಸೆಲ್ಲವೂ ಮಾಡಲ್ಪಡುವುದೊ, ಯಾವ ಬ್ರಹ್ಮವನ್ನು ಹೊಂದುವುದಕ್ಕಾಗಿ ಗುರುಕುಲವಾಸವೆ ಮೊದಲಾದ ಬ್ರಹ್ಮಚರ್ಯವ್ರತಗಳು ಮಾಡಲ್ಪಡುವುವೊ, ಅಂತಹ ಓಂಶಬ್ದವಾ ಚ್ಯವಾದ ಬ್ರಹ್ಮಸ್ವರೂಪವನ್ನು ನಿನಿಗೆ ಸಂಗ್ರಹವಾಗಿ ಹೇಳುವೆನು,, ಎಂಬಿದೇ ಮೊದಲಾದ ಕಠೋಪನಿಷದ್ವಿತೀಯವಲ್ಲೀ ಶ್ರುತಿವಾಕ್ಯದಿಂ ದಲೂ, ಪರಬ್ರಹ್ಮಾಭೇದಕವಾದ ಪ್ರಣವಾಕ್ಷರವಾಲಿವಾಗಿಯಾದರೂ ವಿಗ್ರಹವನ್ನೆದುರಾಗಿಟ್ಟುಕೊಂಡು ಪಾದಾದಿ ಕಿರೀಟಾಂತವಾಗಿ ಓಂ

ದೊಂದು ಅವಯುವಗಳನ್ನು ಕ್ರಮಕ್ರಮವಾಗಿ ಧ್ಯಾನಿಸುತಾ ಕಡೆಯಲ್ಲಿ ವಿಗ್ರಹವೆಲ್ಲವೂ ಹೇಗಾದರೆ ಧ್ಯಾನಕ್ಕೆ ವಿಷಯವಾಗುವುದೋ ಆಪ್ರಕಾರವಾಗಿ ಅಕಾರೋಕಾರ ಮಕಾರಗಳಲ್ಲಿ ಒಂದೊಂದಕ್ಷರವನ್ನು ಸ್ಮರಣ ಮಾಡುತಾ ಕ್ರಮವಾಗಿ ಓಂಕಾರಸ್ಮರಣಮಂಮಾಡಿಯಾದರೂ ತದ್ವಾರಾಪರಬ್ರಹ್ಮಾನುಭವವು ಪ್ರಾಪ್ತವಾಗುವುದೆಂದು ಪರಬ್ರಹ್ಮಪ್ರಾಪ್ತಿಸಾಧನವಾಗಿ ಮಂದ ಮಧ್ಯಮಾಧಿಕಾರಿ ನಿಮಿತ್ತವಾಗಿ ಹೇಳಲುದ್ದೇಶಿಸಲ್ಪಟ್ಟ ಪ್ರಣವಾಕ್ಷರದ ಉಪಾಸನವೂ ಬ್ರಹ್ಮಜ್ಞಾನಾದಿ ಸಾಧಕವಾಗುತಾ ಕ್ರಮವಾಗಿ ಮುಕ್ತಿಪ್ರದವಾಗುವುದು. ಆದರಂತೆಇಲ್ಲಿಯೂ "ಕವಿಂಪುರಾಣಂ" (೮॥೯॥) "ಯದಕ್ಷರಂ,, ಎಂಬದಾಗಿ ಉಪನ್ಯಾಸ ಮಾಡಲ್ಪಟ್ಟ ಪರಬ್ರಹ್ಮವನ್ನು ಪೂರ್ವೋಕ್ತಪ್ರಕಾರದಿಂದಹೊಂದುವುದಕ್ಕೆ ಸಾಧನವಾದ ಕ್ರಮಮುಕ್ತಿ ಪ್ರದವಾಗಿಯೂ ಯೋಗಧಾರಣಾಸಹಿತವಾಗಿಯೂಇರುವಓಂಕಾರದಉಪಾಸನದಲ್ಲಿಯೂ ಮತ್ತು ಪ್ರಸಕ್ತಾನು ಪ್ರಸಕ್ತವಾಗಿ ಇಲ್ಲಿ ವಿವರಿಸಬೇಕಾದ ಕೆಲವುಅರ್ಥಗಳ ವಿಷಯದಲ್ಲಿಯೂ ಮುಂದಿನಗ್ರಂಥವು ಆರಂಭಿಸಲ್ಪಡುವುದೆಂದರಿಯಬೇಕು. ... ... ॥೧೧॥

(ರಾ॥ ಭಾ॥) ಇನ್ನು ಮುಂದೆ ಕೈವಲ್ಯಾರ್ಥಿಗಳಿಗೆ ಸ್ಮರಣಪ್ರಕಾರವನ್ನು ಹೇಳುತ್ತಾರೆ. ಯಾವ ಅಕ್ಷರವನ್ನು ಅಸ್ಖಲಿತತ್ವಾದಿಗುಣಯುಕ್ತವಾಗಿರುವಂತೆಆಥರ್ವಣಿಕಾದಿ ವೈದಿಕರು ಹೇಳುತ್ತಾರೆಯೋ, ವೈರಾಗ್ಯಶಾಲಿಗಳಾದ ಯತಿಗಳೂ ಯಾವ ಅಕ್ಷರವನ್ನು ಪ್ರವೇಶಿಸುತ್ತಾರೆಯೋ,ಯಾವಅಕ್ಷರವನ್ನು ಹೊಂದಬೇಕೆಂಬದಾಗಿಇಚ್ಛೈಸುವಂತವರು ವಿಷಯತ್ಯಾಗ ನಿಯಮವೆಂಬ ಬ್ರಹ್ಮಚರ್ಯವನ್ನು ಅನುಷ್ಠಿಸುತ್ತಾರೆಯೋ,ಅಂತಹ ನಿಖಿಲ ವೇದಾಂತವೇದ್ಯವಾಗಿಯೂನನ್ನಸ್ವರೂಪವಾಗಿಯೂ ಇರುವ ಅಕ್ಷರವನ್ನು ಹೇಗೆ ಉಪಾಸನಮಾಡಬೇಕೋ ಆ ಪ್ರಕಾರವನ್ನು ಸಂಕ್ಷೇಪದಿಂದ ನಿನಿಗುಪದೇಶಿಸುವೆನು. ॥೧೧॥

(ಗೀ॥ವಿ॥) ವಾಯುಜಯಾದಿ ಯುಕ್ತರಿಗೆ ಮರಣಕಾಲದಲ್ಲಿ ಮಾಡಬೇಕಾದ ಕರ್ತವ್ಯವನ್ನು ಹಾಗೆಯೇ ಧ್ಯಾನಯೋಗ್ಯವಾದ ರೂಪವನ್ನೂ ಹೇಳುತ್ತಾನೆ. (ಅಥವಾ) "ಪ್ರಯಾಣಕಾಲೇಚಕಥಂ" ಎಂಬುವಪ್ರಶ್ನಕ್ಕೆ ಪ್ರತ್ಯುತ್ತರವನ್ನು ಹೇಳುತ್ತಾನೆಂದರಿಯಬೇಕು. ವೇದಾ

ರ್ಥವಂ ತಿಳಿದವರು ಯಾವವಸ್ತುವನ್ನು ಸರ್ವಥಾ ನಾಶರಹಿತವಾದದ್ದ ನ್ನಾಗಿ ಹೇಳುವರೋ, ರಾಗಾದಿ ದೋಷವಿಹೀನರಾದ ಪ್ರಯತ್ನಶೀಲ ರಾಗಿರುವ ಯೋಗಿಗಳು ಯಾವವಸ್ತುವನ್ನು ಪ್ರವೇಶಿಸುತ್ತಾರೆಯೊ, ಯಾವವಸ್ತುವನ್ನಿಚ್ಛಯಿಸುವಂತವರುಪರಮಾತ್ಮನಲ್ಲಿ ಮನಸ್ಸುಮೊದ ಲಾದ ಇಂದ್ರಿಯಗಳ ಸಮರ್ಪಣವನ್ನು ಮಾಡುತ್ತಾರೆಯೋ ಅಂತಹ ಮೋಕ್ಷಾಪೇಕ್ಷಿಗಳಾದ ಮುನಿಗಳಿಂದ ಹೊಂದುವುದಕ್ಕೆ ಯೋಗ್ಯನಾದ ಪರಮಾತ್ಮನ ಸ್ಮರಣ ಪ್ರಕಾರವನ್ನು ಸಂಕ್ಷೇಪವಾಗಿ ನಿನಿಗೆ ಬೋಧಿ ಸುವೆನು. ... ... ॥೧೧॥

(ಶ್ರೀ ॥) ಕೇವಲಾಭ್ಯಾಸಯೋಗಕ್ಕಿಂತಲೂ ಪ್ರಣವಾಭ್ಯಾ ಸವು ಅಂತರಂಗ ಸಾಧನವೆಂಬದಾಗಿ ಈ ಶ್ಲೋಕದಿಂದ ಉಪದೇಶಿಸು ತ್ತಾನೆಂದರಿಯಬೇಕು. ... ... ॥೧೧॥

ಶ್ಲೋ॥ ಸರ್ವದ್ವಾರಾಣಿಸಂಯಮ್ಯ ಮನೋಹೃದಿನಿರುಧ್ಯ ಚ।ಮೂರ್ಧ್ನ್ಯಾಧಾಯಾತ್ಮನಃ ಪ್ರಾಣಮಾಸ್ಥಿತೋಯೋ ಗಧಾರಣಾಮ್ ॥೧೨॥ ಓಮಿತ್ಯೇಕಾಕ್ಷರಂಬ್ರಹ್ಮವ್ಯಾಹ ರನ್ಮಾಮನುಸ್ಮರನ್ ।ಯಃಪ್ರಯಾತಿತ್ಯಜನ್‌ದೇಹಂ ಸಯಾತಿಪರಮಾಂಗತಿಮ್॥ ... ॥೧೩॥

ಪ॥ ಸರ್ವದ್ವಾರಾಣಿ-ಸಂಯಮ್ಯ- ಮನಃ- ಹೃದಿ- ನಿರುಧ್ಯ- ಚ। ಮೂರ್ಧ್ನಿ- ಆಧಾಯ- ಆತ್ಮನಃ- ಪ್ರಾಣಂ- ಆಸ್ಥಿತಃ - ಯೋಗಧಾರಣಾಂ ॥ ಓಂ- ಇತಿ- ಏಕಾಕ್ಷ ರಂ-ಬ್ರಹ್ಮ- ವ್ಯಾಹರನ್- ಮಾಂ- ಅನುಸ್ಮರನ್ । ಯಃ- ಪ್ರಯಾತಿ- ತ್ಯಜನ್- ದೇಹಂ- ಸಃ- ಯಾತಿ- ಪರಮಾಂ- ಗತಿಂ॥

ಅ॥ ಯಃ- ಯಾವನು, ಆತ್ಮನಃ- ತನ್ನ, ಸರ್ವದ್ವಾರಾಣಿ- ಸಕಲೇಂದ್ರಿಯದ್ವಾರ ಗಳನ್ನು, (ರಾ) ಜ್ಞಾನೇಂದ್ರಿಯ ದ್ವಾರಗಳನ್ನು, (ಗೀ॥ ವಿ) ಸುಷುಮ್ನಾನಾಡಿಗಿಂತ ಲೂ ಇತರಗಳಾದ ದ್ವಾರಗಳನ್ನು, ಸಂಯಮ್ಯ- ಅಡಗಿಸಿ, ಮನಃ- ಮನಸ್ಸನ್ನು, ಹೃದಿ- ಹೃದಯದಲ್ಲಿ, (ರಾ॥ ಮ॥ ಗೀ॥ ವಿ॥) ಹೃದಯವರ್ತಿಯಾದ ನನ್ನಲ್ಲಿ, ನಿರುಧ್ಯ- ನಿಲ್ಲಿಸಿ, ಮೂರ್ಧ್ನಿ- ಶಿರಸ್ಸಿನಲ್ಲಿ, (ಶ್ರೀ) ಭ್ರೂಮಧ್ಯಸ್ಥಾನದಲ್ಲಿ, (ಗೀ॥ ವಿ॥) ಬ್ರಹ್ಮರಂಧ್ರದಲ್ಲಿ, ಪ್ರಾಣಂ- ಪ್ರಾಣವಾಯುವನ್ನು, ಆಧಾಯ- ಇಟ್ಟು, ಯೋಗಧಾರಣಾಂ-ಸ್ಥಿರವಾದ ಯೋಗವನ್ನು, (ರಾ॥ ಗೀ॥ ವಿ॥) ಯೋಗವೆಂಬಧಾರಣೆಯನ್ನು, ಎಂದರೆ ಅಖಂಡಧ್ಯಾನ ವನ್ನು, ಆಸ್ಥಿತಃ- ಹೊಂದಿದವನಾಗಿ, ಓಮಿತ್ಯೇಕಾಕ್ಷರಂಬ್ರಹ್ಮ ವ್ಯಾಹರನ್- ಓಂಎಂ ಬುವ ಒಂದೇಅಕ್ಷರವಾಗಿಯೂ ನನಗೆ ವಾಚಕವಾದ ಮಂತ್ರವನ್ನುಚ್ಚರಿಸುವಂತವನಾಗಿಯೂ,

ಮಾಂ ಅನುಸ್ಮರನ್- ನನ್ನನ್ನು ಸ್ಮರಣೆಮಾಡಿಕೊಂಡಿರುವಂತವನಾಗಿಯೂ, ದೇಹಂ ದೇಹವನ್ನು, ತ್ಯಜಂಶ್ಚ- ಬಿಡುವಂತವನಾಗಿಯೂ, ಪ್ರಯಾತಿ-ಹೋಗುತ್ತಾನೆಯೋ, ಸಪರಮಾಂಗತಿಂಯಾತಿ- ಅವನು ಶ್ರೇಷ್ಠವಾದ ಗತಿಯನ್ನು ಹೊಂದುತ್ತಾನೆ. (ರಾ) ಪ್ರಕೃತಿ ವಿಯುಕ್ತವಾಗಿಯೂ ನನಿಗೆ ಸಮಾನವಾದ ಆಕಾರವುಳ್ಳದ್ದಾಗಿಯೂ ಪುನರಾವೃತ್ತಿ ಶೂನ್ಯವಾಗಿಯೂ ಇರುವ ತನ್ನಾತ್ಮಸ್ವರೂಪವನ್ನುಹೊಂದುತ್ತಾನೆ.||೧೩|| ೧೪||

(ಶಂ|| ಭಾ||) ಎಲೈ ಶ್ರೀಕೃಷ್ಣಸ್ವಾಮಿಯೆ ! ನಿನ್ನ ವಾಕ್ಯಗಳಂಪರ್ಯಾಲೋಚಿಸಿದರೆ ಯೋಗಧಾರಣೆಯಂ ಮಾಡದವನಿಗೆ ಮುಕ್ತಿಯಿಲ್ಲವೆಂದು ತೋರುತದೆ. ಆಪ್ರಕಾರವಾದರೆ "ಅನನ್ಯಚೇತಾಸ್ಸತತಂ,,) (೮|| ೧೪||) ಎಂಬ ಮುಂದಿನ ಗ್ರಂಥವು ವಿರೋಧಿಸುವುದಿಲ್ಲವೆ? ಎಂಬ ಅರ್ಜುನ ಶಂಕೆಯನ್ನು ತಾನೆ ಚಿಂತಿಸಿ (ಅಥವಾ) ಎಲೈ ಶ್ರೀಕೃಷ್ಣ ಪರಮಾತ್ಮನೆ! ಪರಮಪುರುಷ ಪ್ರಾಪ್ತಿಯಾಗುವುದಕ್ಕೆ ತಕ್ಕ ಉಪಾಯವನ್ನು ಹೇಳಿರುತ್ತೀಯಲ್ಲವೆ, ಆದರೂ ಮುಂದೆ "ಅನನ್ಯಚೇತಾಸ್ಸತತಂ,, (೮|| ೧೪||) ಎಂಬಿದೇಮೊದಲಾದ ಗ್ರಂಥಗಳನ್ನಾರಂಭಮಾಡುವವನಂತೆ ತೋರುತ್ತಿ? ಆಪ್ರಕಾರವಾಗಿ ಆರಂಭಿಸಲುಪ್ರಸಕ್ತವೇನು? ಎಂಬಅರ್ಜುನನಸಂದೇಹವನ್ನು ತಾನೇತಿಳಿದುಪ್ರಸಕ್ತಾನುಪ್ರಸಕ್ತವಾಗಿ ಈಶ್ಲೋಕದಮೊದಲು ಅಧ್ಯಾಯಪೂರ್ತಿ ಪರ್ಯಂತವಾಗಿ ಓಂಕಾರೋಪಾಸನವು, ಅದರಿಂದುಂಟಾಗುವಫಲವು, ಪುನರಾವೃತ್ತಿ ಶೂನ್ಯವಾದ ಮಾರ್ಗನಿರೂಪಣವು, ಎಂಬಿದೇ ಮೊದಲಾದವಿಷಯಗಳನ್ನು ಬೋಧಿಸುತ್ತಾನೆ. (ಓಂಕಾರೋಪಾಸನವು ಮೊದಲು ಪ್ರಸಕ್ತವಾಗಿರುವುದು ಅನಂತರದಲ್ಲಿ ಆ ಉಪಾಸನೆಯ ಫಲವು ಅನುಪ್ರಸಕ್ತವಾಯಿತು. ಫಲನಿರೂಪಣಾವಸರದಲ್ಲಿ ಪುನರಾವೃತ್ತಿ ಶೂನ್ಯವಾದ ಮಾರ್ಗನಿರೂಪಣಾದಿಗಳು ಪ್ರಾಪ್ತವಾಯಿತೆಂದರಿಯಬೇಕು.) ಸಕಲೇಂದ್ರಿಯ ದ್ವಾರಗಳನ್ನು ಸಮಾಚೀನವಾಗಿ ಬಂಧಿಸಿ ಹೃತ್ಪುಂಡರೀಕದಲ್ಲಿ ಮನಸ್ಸನ್ನುನಿಲ್ಲಿಸಿ, ಪ್ರಾಣವಾಯುವನ್ನು ಶಿರಸ್ಸಿಗೆ ಸಮೀಪಸ್ಥವಾದ ಭ್ರೂಮಧ್ಯಸ್ಥಾನದಲ್ಲಿಟ್ಟು ಯೋಗಸ್ಥೈರ್ಯವನ್ನು ಆಶ್ರಯಿಸಿದವನಾಗುತ ಸರ್ವೋತ್ತಮವಾದ ಗತಿಯನ್ನು ಹೊಂದುತ್ತಾನೆ. ಎಂದರೆ ವಿಷಯಗಳಲ್ಲಿರುವ ದೋಷಗಳನ್ನುಹುಡುಕುವುದೆಂಬ ಅಭ್ಯಾಸದಿಂದ ಶ್ರೋತ್ರಾದೀಂದ್ರಿಯಗಳನ್ನು ಶಬ್ದಾದಿವಿಷಯಗಳಮೇಲೆ ಹೋಗದಂತೆಮಾಡಿ, ಆರೀತಿಯಾಗಿ ಇಂದ್ರಿಯದ್ವಾರಗಳನ್ನು ನಿಯಮನಮಾಡಿದಮೇಲೂ ಮನಃಪ್ರ

ಚಾರಕ್ಕೆ ಅವಕಾಶವುಂಟಾಗುವುದರಿಂದ ಅಭ್ಯಾಸ ವೈರಾಗ್ಯಗಳಿಂದ ಮನಸ್ಸನ್ನು ವೃತ್ತಿರಹಿತವನ್ನಾಗಿಮಾಡಿ ಎಂದರೆ ಹೃದಯದಲ್ಲಿಕೂಡ ವಿಷಯಗಳನ್ನು ನೆನೆಯದೆ ಅಂತಹ ಸಮಯದಲ್ಲಿ ಸ್ವಾಧೀನವಾದ ಮನಸ್ಸಿನಿಂದ ಹೃದಯೊರ್ಧ್ವಭಾಗದಲ್ಲಿ ಪ್ರಸರಿಸಿರುವ ನಾಡಿಯಿಂದ ತನ್ನ ಪ್ರಾಣವಾಯುವನ್ನು ಊರ್ಧ್ವಭಾಗಾರೂಢವನ್ನಾಗಿ ಮಾಡಿ ಶಿರಸ್ಸಿಗೆ ಸಮೀಪದಲ್ಲಿರುವ ಭ್ರೂಮಧ್ಯಸ್ಥಾನದಲ್ಲಿಟ್ಟು, ಯೋಗಧಾರಣೆಯನ್ನಾಶ್ರಯಿಸಿದವನಾಗುತ ಸರ್ವೋತ್ತಮವಾದ ಗತಿಯನ್ನುಹೊಂದುತ್ತಾನೆ. ॥೧೨

ಈರೀತಿಯಾಗಿ ಯೋಗಧಾರಣೆಯನ್ನಾಶ್ರಯಿಸಿದವನು ಮಾಡತಕ್ಕ ಕಾರ್ಯವನ್ನು ಹದಿಮೂರನೆ ಶ್ಲೋಕದಿಂ ದುಪದೇಶಿಸುತ್ತಾನೆ. ಬ್ರಹ್ಮ ಪ್ರತಿಪಾದಕವಾದ (ಓಮ್) ಎಂಬ ಮುಖ್ಯವಾದ (ಅಥವ) ಒಂದಾದ ಅಕ್ಷರವನ್ನು ಉಚ್ಚರಿಸುವಂತವನಾಗಿಯೂ, ಆಓಂಕಾರಕ್ಕೆ ಅರ್ಥವಾದ ನನ್ನನ್ನು ಸ್ಮರಿಸುವಂತವನಾಗಿಯೂ ಇರುವ ಯಾವನಾದರೆ ಶರೀರವನ್ನು ಬಿಟ್ಟು ಹೋಗುತ್ತಾನೊ ಅಂತವನು ಸರ್ವೋತ್ತಮವಾದ ಗತಿಯನ್ನು (ಮೋಕ್ಷವನ್ನು) ಹೊಂದುತ್ತಾನೆ. “ಯಃಪ್ರಯಾತಿ,॥ ಎಂಬುವುದರಿಂದ ಸ್ವರೂಪನಾಶವಾಗುವುದೆಂಬ ಅರ್ಥವೂ ಆಗಬಹುದಾದುದರಿಂದ ಆರೀತಿಯಾಗಿ ಅರ್ಥವು ಹೇಳಕೂಡದೆನ್ನುವುದಕ್ಕಾಗಿ “ತ್ಯಜನ್‌ದೇಹಂ,, ಎಂಬದಾಗಿ ಹೇಳಿದನು॥೧೩॥

(ರಾ॥ಭಾ॥) ಜ್ಞಾನದ್ವಾರಭೂತಗಳಾದ ಶ್ರೋತ್ರಾದೀಂದ್ರಿಯಗಳನ್ನು ಆಯಾವ್ಯಾಪಾರಗಳಲ್ಲಿ ಪ್ರವೇಶಿಸದಂತೆ ನಿಲ್ಲಿಸಿಕೊಂಡು ಹೃದಯಕಮಲಪ್ರವಿಷ್ಟರಾದ ನಮ್ಮಲ್ಲಿ ಮನಸ್ಸನ್ನುನಿಲ್ಲಿಸಿ ಯೋಗವೆಂಬ ನನ್ನಲ್ಲಿ ನಿಶ್ಚಲವಾದ ಬುದ್ಧಿಧಾರಣೆಯನ್ನು ಅವಲಂಬಿಸಿಕೊಂಡು ಓಂಎಂಬ ಏಕಾಕ್ಷರವಾಗಿ ನನಗೆವಾಚಕವಾದ ಮಂತ್ರವನ್ನುಚ್ಚರಿಸುವಂತವನಾಗಿಯೂ, ಆಪ್ರಣವಕ್ಕೆ ವಾಚ್ಯರಾದ ನಮ್ಮನ್ನು ದೃಢವಾಗಿ ಸ್ಮರಿಸುವಂತವನಾಗಿಯೂ, ತನ್ನ ಪ್ರಾಣವಾಯುವನ್ನು ಶಿರಸ್ಸಿನಲ್ಲಿ ನಿಲ್ಲಿಸುವಂತವನಾಗಿಯೂ ಇರುವ ಯಾವನಾದರೆ ದೇಹವನ್ನು ಬಿಡುತ್ತಾಹೋಗುತ್ತಾನೊ ಅವನು ಶಿರಸ್ಸನ್ನು ಭೇದಿಸಿಕೊಂಡು ಹೊರಡುವ ಮೂರ್ಧನ್ಯನಾಡಿಯಿಂದ ಪ್ರಕೃತಿ ವಿಮುಕ್ತವನಾಗಿಯೂ

ಸಮಾನವಾದ ಆಕಾರವುಳ್ಳದ್ದಾಗಿಯೂ ಪುನರಾವೃತ್ತಿ ಶೂನ್ಯವಾಗಿಯೂ ಇರುವ ತನ್ನ ಆತ್ಮಸ್ವರೂಪವನ್ನೇ ಹೊಂದುತ್ತಾನೆ.೧೩॥೧೩॥

ಶ್ಲೋ ॥ ಅನನ್ಯಚೇತಾಸ್ಸತತಂಯೋಮಾಂಸ್ಮರತಿನಿತ್ಯಶಃ । ತಸ್ಯಾಹಂಸುಲಭಃಪಾರ್ಥನಿತ್ಯಯುಕ್ತಸ್ಯ ಯೋಗಿನಃ ॥ ... ... ॥೧೪॥

ಪ॥ ಅನನ್ಯಚೇತಾಃ- ಸತತಂ- ಯಃ- ಮಾಂ- ಸ್ಮರತಿ- ನಿತ್ಯಶಃ । ತಸ್ಯ- ಅಹಂ- ಸುಲಭಃ- ಪಾರ್ಥ- ನಿತ್ಯಯುಕ್ತಸ್ಯ- ಯೋಗಿನಃ॥

ಅ॥ ಹೇಪಾರ್ಥ- ಎಲೈ ಅರ್ಜುನನೆ, ಸತತಂ-ಸರ್ವಕಾಲದಲ್ಲಿಯೂ, ಅನನ್ಯಚೇತಾಃ- ಅನ್ಯಗತವಾದ ಮನಸ್ಸಿಲ್ಲದವನಾಗಿ, ಯಃ - ಯಾವ ಅಧಿಕಾರಿಯು, ಮಾಂ- ನ್ನನ್ನು, ನಿತ್ಯಶಃ- ಪ್ರತಿದಿನದಲ್ಲಿಯೂ, (ಶಂ) ದೀರ್ಘಕಾಲವೂ, ಎಂದರೆ ಮರಣಕಾಲದವರೆಗೂ, ಸ್ಮರತಿ- ಚಿಂತಿಸುತ್ತಾನೆಯೋ, ತಸ್ಯ ನಿತ್ಯಯುಕ್ತಸ್ಯ - ಅಂತಹಸ್ಥಿರಮನಸ್ಕನಾದ, ಯೋಗಿನಃ- ಯೋಗಿಯಾದವನಿಗೆ, ಅಹಂ-ನಾನು, ಸುಲಭಃ- ಸುಲಭನಾಗುವೆನು. ... ... .... ... ॥೧೪॥

(ಶಂ॥ ಭಾ॥) ವಾಯುಸಿರೋಧವಿಲ್ಲದವನಿಗೆ ಇದುವರೆಗೂ ಪ್ರತಿಪಾದಿಸಲ್ಪಟ್ಟ ಪ್ರಕಾರದಿಂದ ಇಚ್ಛಾನುಸಾರವಾಗಿ ಪ್ರಾಣೋತ್ಕ್ರಮಣವು ಸಂಭವಿಸುವುದಿಲ್ಲವಾದುದರಿಂದ ಸರ್ವೋತ್ತಮವಾದ ಗತಿಯುಂಟಾಗುವುದು ದುರ್ಲಭವಲ್ಲವೆ ? ಎಂಬ ಶಂಕೆಗೆ ಸಮಾಧಾನಾರ್ಥವಾಗಿ ಈಶ್ಲೋಕವು ಪ್ರವರ್ತಿಸಿರುವುದೆಂದರಿಯಬೇಕು. ಈಶ್ಲೋಕಾರ್ಥದಿಂದ ಭಗವದನುಸ್ಮರಣದಲ್ಲಿ ಪ್ರಯತ್ನಿಸಬೇಕೆಂದು ತೋರುವುದು. ಮತ್ತು ಸತತಂ- ನಿತ್ಯಶಃ, ಎಂಬೀಪದಗಳಿಗೆ ಪುನರುಕ್ತದೋಷವಂ ಬರಿಸದೆ ಸತತ ಶಬ್ದಕ್ಕೆ ನೈರಂತರ್ಯವರ್ಥವೆಂತಲೂ ನಿತ್ಯಶಃ, ಎಂಬಪದಕ್ಕೆ ಜೀವಿತಕಾಲವೆಲ್ಲವೂ ಎಂಬ ಅರ್ಥವೆಂತಲೂತಿಳಿಯಬೇಕು. ಇದರಿಂದ ಒಂದುತಿಂಗಳೊ (ಅಥವಾ) ಆರುಮಾಸಗಳೊ (ಯದ್ವಾ) ಒಂದುವರ್ಷವೊ ಭಗವದ್ಧ್ಯಾನಮಾಡಿ ಅನಂತರ ಭಗವದನುಸ್ಮರಣವಿಲ್ಲದೇಇರಬಹುದೊ? ಎಂದರೆ ಆರೀತಿಯಾಗಿರದೇ ಶರೀರಪಾತಪರ್ಯಂತವೂ ಕ್ಷಣವಿರಾಮವುಂ ಹೊಂದದೆ ಭಗವದನುಸ್ಮರಣೆಯುಳ್ಳಿರಬೇಕೆಂಬ ಅರ್ಥದಲ್ಲಿ 'ನಿತ್ಯಶಃ, ಸತತಂ' ಎಂಬ ಪದಗಳು ಪ್ರಯುಕ್ತವಾಗಿರುವುವೆಂದರಿಯಬೇಕು. ಆದುದರಿಂದ ಯಾವ ಯೋಗಿಯು ಇತರವಿಷಯ ... ಚಿಂತಾರಹಿತನಾಗಿ ಜೀವಿತಕಾಲಪರ್ಯಂತವೂ ಸ್ವಲ್ಪವೂ ವಿರಾ

ಮೆಯಿಲ್ಲದೆ ನನ್ನನ್ನೇ ಸ್ಮರಿಸುತಲಿರುವನೊ ಸರ್ವಕಾಲದಲ್ಲಿಯೂ ಸಮಾಹಿತ ಚಿತ್ತನಾದ ಅಂತಹ ಯೋಗಿಯಾದವನಿಗೆ ನಾನು ಸುಲಭನೆಂಬ ತಾತ್ಪರ್ಯವಂ ತಿಳಿಯಬೇಕು. ... ॥೧೪॥

(ರಾ॥ ಭಾ॥) ಈಪ್ರಕಾರವಾಗಿ ಐಶ್ವರ್ಯಾರ್ಥಿಗೂ ಕೈವಲ್ಯಾಪೇಕ್ಷೆಯುಳ್ಳವನಿಗೂ ತಮ್ಮತಮ್ಮಗಳ ಪ್ರಾಪ್ಯಾನುಗುಣವಾದ ಭಗವದುಪಾಸನ ಪ್ರಕಾರವು ಹೇಳಲ್ಪಟ್ಟಿತು. ಇನ್ನು ಮುಂದೆ ಜ್ಞಾನಿಯೆಂಬ ಭಗವತ್ಪ್ರಾಪ್ತಿಕಾಮನಾದ ಮೂರನೇಅಧಿಕಾರಿಯ ಭಗವದುಪಾಸನಾಪ್ರಕಾರವೂ, ಪ್ರಾಪ್ತಿಪ್ರಕಾರವೂ ಹೇಳಲ್ಪಡುವು ದೆಂದರಿಯಬೇಕು. ಇತರ ವಸ್ತುವಿನಲ್ಲಿ ಪ್ರವೇಶಿಸದ ಮನಸ್ಸುಳ್ಳವನಾಗಿ ಯಾವನಾದರೆ ನನ್ನನ್ನುಪಾಸನಮಾಡುತ್ತಾನೊ, ಎಂದರೆ ನನ್ನನ್ನೇ ಹೇಳಲಸಾಧ್ಯವಾದ ಪ್ರಿಯವಸ್ತುವಿನಂತೆ ಪರಿಗ್ರಹಿಸಿರುವವನಾದುದರಿಂದ ನನ್ನ ಸ್ಮೃತಿಯನ್ನುಬಿಟ್ಟು ಆತ್ಮಧಾರಣವಂ ಮಾಡದಂತೆ ತಾನಾಗಿಯೇನಿರತಿಶಯ ಪ್ರಿಯರೂಪೆಯಾಗಿರುವ ನನ್ನ ಸ್ಮೃತಿಯನ್ನು (ಸ್ಮರಣವನ್ನು- ಧ್ಯಾನವನ್ನೆಂದರ್ಥವು,) ಮಾಡುತ್ತಾನೊ, ನನ್ನಲ್ಲಿ ನಿತ್ಯಯೋಗವನ್ನಪೇಕ್ಷಿಸುವ ಅಂತಹ ಯೋಗಿಯಾದವನಿಗೆ ನಾನು ಸುಲಭನಾಗಿರುವೆನು. ಎಂದರೆ ಸುಲಭವಾಗಿ ಹೊಂದಲರ್ಹನಾಗಿರುವೆನೆಂದರ್ಥವು. ಸುಖವಾಗಿ ಹೊಂದತಕ್ಕದ್ದಾಗಿದ್ದರೂ ನನ್ನ ಐಶ್ವರ್ಯಾದಿಗಳು ಅವನಿಗೆ ಪ್ರಾಪ್ಯವಲ್ಲವು ಅವನ ವಿಶ್ಲೇಷವನ್ನು ಸಹಿಸಲಾರದೆ ನಾನೆ ಅವನನ್ನು ವರಿಸುತ್ತೇನೆ. ನನ್ನನ್ನು ಹೊಂದುವುದಕ್ಕೆ ಅನುಗುಣವಾದ ಉಪಾಸನ ವಿಪಾಕವನ್ನು ಅದಕ್ಕೆ ವಿರೋಧಿನಿರಾಸವನ್ನೂ ಅತ್ಯಂತವಾಗಿ ನನಿಗೆ ಪ್ರಿಯನಾಗಿರ ವಿಕೆ ಎಂಬಿದೇ ಮೊದಲಾದವುಗಳನ್ನೂ ನಾನೆ ಅವನಿಗೆ ಕೊಡುವೆನೆಂದು ತಾತ್ಪರ್ಯವು. ಈಅರ್ಥವು ಶ್ರುತಿಯಲ್ಲಿಯೂ "ತೇಷಾಂಸತತಯುಕ್ತಾನಾಂಭಜತಾಂಪ್ರೀತಿಪೂರ್ವಕಂ । ದದಾಮಿಬುದ್ಧಿಯೋಗಂತಂಯೇನಮಾಮುಪಯಾಂತಿತೇ॥ ತೇಷಾಮೇವಾನುಕಂಪಾರ್ಥ ಮಹಮಜ್ಞಾನಜಂ ತಮಃ । ನಾಶಯಾಮ್ಯಾತ್ಮಭಾವಸ್ಥೋ ಜ್ಞಾನದೀಪೇನಭಾಸ್ವತಾ॥ (೧೦॥೧೦॥೧೧॥) ಇತ್ಯಾದಿಗಳಲ್ಲಿಯೂ ಹೇಳಲ್ಪಟ್ಟಿರುವುವು. ॥೧೪॥

ಶ್ಲೋ॥ ಮಾಮುಪೇತ್ಯಪುನರ್ಜನ್ಮ ದುಃಖಾಲಯಮಶಾ
ಶ್ವತಂ । ನಾಪ್ನುವಂತಿಮಹಾತ್ಮಾನ ಸ್ಸಂಸಿದ್ಧಿಂಪರ
ಮಾಂಗತಾಃ ॥ ॥೧೫॥

ಪ॥ ಮಾಂ- ಉಪೇತ್ಯ- ಪುನಃ- ಜನ್ಮ- ದುಃಖಾಲಯಂ- ಅಶಾಶ್ವತಂ। ನ-ಆಪ್ನು ವಂತಿ- ಮಹಾತ್ಮಾನಃ- ಸಂಸಿದ್ಧಿಂ- ಪರಮಾಂ- ಗತಾಃ॥

ಅ ॥ ಮಹಾತ್ಮಾನಃ - ಮಹಾತ್ಮರಾದವರು, ಮಾಂ - ನನ್ನನ್ನು, ಉಪೇತ್ಯ- ಹೊಂದಿ, ಪರಮಾಂ- ಸರ್ವೋತ್ತಮವಾದ, ಸಂಸಿದ್ಧಿಂ- ಮೋಕ್ಷಪರ್ಯಂತವಾದ ಸಿದ್ಧಿ ಯನ್ನು, ಗತಾಃ - ಹೊಂದಿದವರಾಗಿ, ದುಃಖಾಲಯಂ - ಆಧ್ಯಾತ್ಮಿಕಾದಿ ದುಃಖಗಳಿಗೆ ಸ್ಥಾನಭೂತವಾದ, ಅಶಾಶ್ವತಂ - ನಿತ್ಯವಲ್ಲದ, ಪುನರ್ಜನ್ಮ - ಪುನಶ್ಚ ಜನ್ಮವನ್ನು, ನಾಪ್ನುವಂತಿ- ಹೊಂದುವುದಿಲ್ಲವು. ... .... ॥೧೫॥

(ಶಂ॥ ಭಾ॥) "ತಸ್ಯಾಹಂಸುಲಭಃ,, (೮॥೧೪॥) ಎಂಬ ಶ್ಲೋಕದಲ್ಲಿ ಹೇಳಿರುವಂತೆ ನೀನು ಸುಲಭನಾದರೆ ಅದರಿಂದೇನಾಗುವುದು? ಎಂದರೆ ಅದಕ್ಕೆ ಪ್ರತ್ಯುತ್ತರವಾಗಿ ನನ್ನ ಸೌಲಭ್ಯದಿಂದೇನು ಆಗುವುದೊ ಅದಂ ಕೇಳೆಂದು ಶ್ರೀಕೃಷ್ಣನರ್ಜುನನಿಗೆಬೋಧಿಸುತ್ತಾನೆ. ಮಹಾನುಭಾವರಾದ ಯತಿಗಳು ಉತ್ತಮವಾದ ಮೋಕ್ಷರೂಪ ಸಿದ್ಧಿಯಂ ಹೊಂದಿದವರಾಗಿ, ಆರೀತಿಯಾಗಿ ನನ್ನನ್ನು ಹೊಂದಿದಮೇಲೆ (ಬ್ರಹ್ಮತ್ವವನ್ನು ಹೊಂದಿದಮೇಲೆ) ಆಧ್ಯಾತ್ಮಿಕಾದಿ ದುಃಖಗಳಿಗೆಮುಖ್ಯಸ್ಥಾನವಾಗಿಯೂ ಶೀಘ್ರಕಾಲದಲ್ಲಿಯೇ ನಶಿಸಿಹೋಗುವಂತಾದ್ದಾಗಿಯೂ ಇರುವ ಸಂಸಾರವನ್ನು ಹೊಂದುವುದಿಲ್ಲವು. ಇಲ್ಲಿ ಬ್ರಹ್ಮಪ್ರಾಪ್ತಿಗೂ ಮೋಕ್ಷಪ್ರಾಪ್ತಿಗೂ ಭೇದವಿಲ್ಲವೆಂದರಿಯಬೇಕು॥೧೫॥

(ರಾ ಭಾ॥ ಇನ್ನು ಮುಂದೆ ಅಧ್ಯಾಯಶೇಷದಿಂದ ಮೂರನೇ ಅಧಿಕಾರಿಯಾದ ಜ್ಞಾನಿಗೂ ಕೈವಲ್ಯಾರ್ಥಿಗೂ ಪುನರಾವೃತ್ತಿ ರಾಹಿತ್ಯವನ್ನೂ ಐಶ್ವರ್ಯಾರ್ಥಿಗೆ ಪುನರಾವೃತ್ತಿಯನ್ನೂ ಹೇಳುತ್ತಾರೆ. ಮಹಾಮನಸ್ಕರಾಳಾದ ಅಧಿಕಾರಿಗಳು ಯಥಾವತ್ತಾಗಿ ನನ್ನ ಸ್ವರೂಪವಂತಿಳಿದು ನನ್ನನ್ನೇ ಅತ್ಯರ್ಥ ಪ್ರಿಯನನ್ನಾಗಿ ಉಳ್ಳವರಾದುದರಿಂದ ನನ್ನನ್ನುಬಿಟ್ಟು ಪ್ರತ್ಯೇಕವಾಗಿದ್ದರೆ ಆತ್ಮಧಾರಣವಂ ಮಾಡಲು ಶಕ್ತರಾಗದೇನನ್ನಲ್ಲಿಯೇ ಲಯಿಸಿರುವ ಮನಸ್ಸುಳ್ಳವರಾಗಿ ನನ್ನಲ್ಲಿ ಶರಣಾಗತಿಯನ್ನೂ ಮಾಡಿ ಅದರಿಂದ ಉಪಾಯ ವಿರೋಧಿಗಳಾದ ಪಾಪಗಳಂ

ತೊಲಗಿಸಿಕೊಂಡವರಾಗುತ ನನ್ನನ್ನುಪಾಸನೆಮಾಡಿ ಸರ್ವೋತ್ತಮ ಸಿದ್ಧಿರೂಪನಾಗಿರುವ ನನ್ನನ್ನು ಹೊಂದಿದವರಾಗುತ್ತಾರೆ. ಆಪ್ರಕಾರವಾಗಿ ನನ್ನನ್ನು ಹೊಂದಿದಮೇಲೆ ಪುನಃ ಅನೇಕ ದುಃಖಗಳಿಗೆ ಸ್ಥಾನವಾಗಿಯೂ ಅಸ್ಥಿರವಾಗಿಯೂ ಇರುವ ಜನ್ಮವನ್ನು ಹೊಂದುವುದಿಲ್ಲವು. ... ... ||೧೫||

ಶ್ಲೋ|| ಆಬ್ರಹ್ಮಭುವನಾಲ್ಲೋಕಾಃಪುನರಾವರ್ತಿನೋಽರ್ಜು
ನ|ಮಾಮುಪೇತ್ಯತುಕೌಂತೇಯಪುನರ್ಜನ್ಮನವಿದ್ಯತೇ ||೧೬||

ಪ|| ಆಬ್ರಹ್ಮಭುವನಾತ್– ಲೋಕಾಃ– ಪುನರಾವರ್ತಿನಃ– ಅರ್ಜುನ| ಮಾಂ–ಉಪೇತ್ಯ–ತು– ಕೌಂತೇಯ– ಪುನಃ– ಜನ್ಮ– ನ– ವಿದ್ಯತೇ ||

ಅ|| ಹೇಅರ್ಜುನ– ಎಲೈಅರ್ಜುನನೆ, ಆಬ್ರಹ್ಮಭುವನಾತ್– ಬ್ರಹ್ಮಲೋಕದೊಡನೆ, ಲೋಕಾಃ– ಸಮಸ್ತಲೋಕಗಳು, ಪುನರಾವರ್ತಿನಃ– ಪುನರಾವೃತ್ತಿಯುಳ್ಳದ್ದಾಗಿರುವುವು. ಹೇಕೌಂತೇಯ– ಎಲೈ ಅರ್ಜುನನೆ, ಮಾಂ– ನನ್ನನ್ನು, ಉಪೇತ್ಯತು– ಹೊಂದಿದಮೇಲೆ, ಪುನಃ– ತಿರಿಗಿಯೂ, ಜನ್ಮ– ಹುಟ್ಟುವಿಕೆಯು, ನವಿದ್ಯತೇ– ಇಲ್ಲವು. ||೧೬||

(ಶಂ||ಭಾ||) 'ಸೋಮಪಾನವಂಮಾಡಿ ಅಮೃತರಾದೆವು, ಎಂಬೀಅರ್ಥಉಳ್ಳಶ್ರುತಿ ಪ್ರಮಾಣದಿಂದ ಸ್ವರ್ಗಾದಿಲೋಕಗಳನ್ನು ಹೊಂದಿದವರಿಗೂಪುನರಾವೃತ್ತಿಇಲ್ಲದೇಇರುವುದರಿಂದ ನಿನ್ನನ್ನುಹೊಂದಿದವರಿಗೆ ಮಾತ್ರವೆ ಪುನರಾವೃತ್ತಿ ಇಲ್ಲವೆನ್ನುವುದುಉಚಿತವ್ರೋ? ಮತ್ತು ನಿನಿಗಿಂತಲೂ ಇತರವಾದದ್ದನ್ನು ಹೊಂದಿದವರಲ್ಲಿ ಯಾರಿಗೆ ಪುನರಾವೃತ್ತಿಯುಂಟಾಗುವುದು? ಎಂಬ ಅರ್ಜುನಪ್ರಶ್ನೆಗಳಿಗೆ ಸಮಾಧಾನವಂಹೇಳುವಂತವನಾಗಿ ಶ್ರೀಕೃಷ್ಣ ಪರಮಾತ್ಮನು ಸ್ವರ್ಗಲೋಕವಂಹೊಂದಿದವರಿಗೆ ಅಪುನರಾವೃತ್ತಿಶ್ರುತಿಯು ಕರ್ಮಫಲ ಪ್ರರೋಚನಕ್ಕಾಗಿಪ್ರವರ್ತಿಸಿರುವುದರಿಂದ ಅರ್ಥವಾದ ಶ್ರುತಿಎಂತಲೂ ಬ್ರಹ್ಮಲೋಕಪರ್ಯನ್ತವಾಗಿರುವ ಸಮಸ್ತ ಲೋಕಗಳನ್ನು ಹೊಂದಿದವರಿಗೂ ಪುನರಾವೃತ್ತಿಯುಂಟೆಂತಲೂ ಬೋಧಿಸುತ್ತಾನೆ. ... ||೧೬||

(ರಾ|| ಭಾ||) ಐಶ್ವರ್ಯಾದಿ ಗತಿಯನ್ನು ಹೊಂದಿದವರಿಗೆ ಪುನರಾವೃತ್ತಿಯುಂಟಾಗುವುದಕ್ಕೂ ಭಗವತ್ಪ್ರಾಪ್ತಿಯನ್ನೈದಿದವರಿಗೆ ಪುನರಾವೃತ್ತಿ ಇಲ್ಲದೇ ಇರುವುದಕ್ಕೂ ಕಾರಣವನ್ನುಪದೇಶಿಸುತ್ತಾನೆ.

ಅರ್ಜುನನೇ ! ಬ್ರಹ್ಮಲೋಕ ಪರ್ಯಂತಗಳಾದ ಬ್ರಹ್ಮಾಂಡೋದರವ
ರ್ತಿಗಳಾದ ಭೋಗೈಶ್ವರ್ಯಸ್ಥಾನಗಳೆಲ್ಲವೂ ವಿನಾಶವುಳ್ಳವುಗಳು. ಆದು
ದರಿಂದ ಐಶ್ವರ್ಯಗತಿಯನ್ನು ಹೊಂದಿದವರಿಗೆ ಸ್ಥಾನನಾಶದಿಂದ ಐಶ್ವ
ರ್ಯನಾಶವೂ ದುರ್ನಿವಾರವಾಗಿರುವುದು. ಹೇಕೌಂತೇಯ, ಎಲೈ ಅರ್ಜು
ನನೇ ! ಸರ್ವಜ್ಞನಾಗಿಯೂ, ಸತ್ಯಸಂಕಲ್ಪನಾಗಿಯೂ, ಸಮಸ್ತ ಜ
ಗದುತ್ಪತ್ತಿ ಸ್ಥಿತಿಲಯಗಳನ್ನೆ ಲೀಲೆಯಾಗಿ ಉಳ್ಳವನಾಗಿಯೂ, ಪರಮ
ಕಾರುಣಿಕನಾಗಿಯೂ, ಸದಾ ಏಕರೂಪನಾಗಿಯೂ ಇರುವ ನನ್ನನ್ನು
ಹೊಂದಿದ ಮೇಲೆ ಅಂತವರಿಗೆ ಸ್ಥಾನನಾಶ ಪ್ರಯುಕ್ತವಾದ ನಾಶ ಪ್ರ
ಸಂಗವೇ ಇಲ್ಲವಾದುದರಿಂದ ಪುನಶ್ಚ ಜನ್ಮವಿಲ್ಲವು. ... ||೧೬||

(ಶ್ರೀ||) ಬ್ರಹ್ಮಲೋಕವನ್ನು ಮೋಕ್ಷಕ್ಕೆ ಹೋಗುವ ಮಾರ್ಗ
ವನ್ನಾಗಿ ಭಾವಿಸಿ ಹೋಗುತಲಿರುವ ಕ್ರಮಮುಕ್ತಿಯಂ ಹೊಂದುವಂ
ತವರಿಗೆ ಪುನರ್ಜನ್ಮವಿಲ್ಲವೆಂದರಿಯಬೇಕು. ... ||೧೬||

(ಗೀ|| ವಿ||) ಬ್ರಹ್ಮಾದಿಗಳನ್ನು ಹೊಂದಿದವರಿಗೂ ಪುನರ್ಜನ್ಮ
ವಿಲ್ಲದೇ ಇರುವುದರಿಂದ " ಮಾಮುಪೇತ್ಯತು ಕೌಂತೇಯ ಪುನರ್ಜ
ನ್ಮನವಿದ್ಯತೇ " (೮|| ೧೬||) ಎಂಬ ವಿಶೇಷೋಕ್ತಿಯಿಂದೇನು ಪ್ರ
ಯೋಜನವೆಂದರೆ ಅದಕ್ಕೆ ಸಮಾಧಾನವನ್ನುಪದೇಶಿಸುತ್ತಾನೆ. ಮೇರು
ಸ್ಥವಾದ ಬ್ರಹ್ಮಗೃಹಕ್ಕಿಂತಲೂ ಕೆಳಗೆ ಇರುವ ಲೋಕಗಳಿಗು ಅಲ್ಲಿರು
ವ ಜನಗಳಿಗೂ ಪುನರ್ಜನ್ಮವಿರುವುದು. ಇದಕ್ಕೆ " ಮೇರುಸ್ಥ ಬ್ರಹ್ಮ
ಸದನಾದಾಜನಾನ್ನ ಜನಿರ್ಧ್ರುವಿ,, ಎಂಬ ಸಮ್ಮತಿಯೂ ಇರುವುದು. ಈ
ಪ್ರಕಾರವಾಗಿ ಹೇಳುವುದರಿಂದ ಬ್ರಹ್ಮಲೋಕದಲ್ಲಿರುವಂತವರಿಗೆ ಪು
ನರ್ಜನ್ಮವಿಲ್ಲ ವೆಂದು ಹೇಳಿದಂತೆ ಆಗುವುದು. ನನ್ನನ್ನು ಹೊಂದಿದವ
ರಿಗೆ ಪುನರ್ಜನ್ಮವಿಲ್ಲವೆಂದು ಹೇಳಿರುವುದಂ ನೋಡಿದರೆ ಬ್ರಹ್ಮಲೋಕ
ವನ್ನು ಹೊಂದಿದವರಿಗೂ ಪುನರಾವೃತ್ತಿಯುಂಟೆಂದು ಹೇಳಿದಂತೆ
ಆಗಿರುವುದು. ಈ ವಾಕ್ಯಗಳು ಪರಸ್ಪರ ವಿರುದ್ಧಗಳಾಗಿದ್ದರೂ ವಿಷ
ಯ ಭೇದದಿಂದ ವಿರೋಧ ಪರಿಹಾರವಂ ಮಾಡಬೇಕು. ಬ್ರಹ್ಮಲೋ
ಕದಲ್ಲಿಯೂ ಭಗವದುಪಾಸನವಂ ಮಾಡುವಂತವರಿಗೆ ಪುನರ್ಜನ್ಮ
ವಿಲ್ಲವೆಂತಲೂ ತದಿತರರಿಗೆ ಅಂಶವಾದ ಜನ್ಮ ಉಂಟೆಂತಲೂ ತಿಳಿಯ
ಬೇಕು. ... ... ||೧೬||

ಶ್ಲೋ॥ ಸಹಸ್ರಯುಗಪರ್ಯಂತಮಹರ್ಯದ್ಬ್ರಹ್ಮಣೋವಿದುಃ।ರಾತ್ರಿಂಯುಗಸಹಸ್ರಾಂತಾಂತೇಽಹೋರಾತ್ರವಿದೋಜನಾಃ॥ ... ... ॥೧೭॥

ಪ॥ ಸಹಸ್ರಯುಗ ಪರ್ಯಂತಂ-ಅಹಃ-ಯತ್-ಬ್ರಹ್ಮಣಃ-ವಿದುಃ । ರಾತ್ರಿಂ-ಯುಗಸಹಸ್ರಾಂತಾಂ-ತೇ-ಅಹೋರಾತ್ರವಿದಃ-ಜನಾಃ ॥

ಅ॥ ಬ್ರಹ್ಮಣಃ-ಬ್ರಹ್ಮದೇವರಿಗೆ, ಯತ್-ಯಾವ, ಅಹಃ-ಹಗಲನ್ನು, ಸಹಸ್ರಯುಗಪರ್ಯನ್ತಂ-ಸಹಸ್ರಯುಗಗಳನ್ನು ಪೂರ್ತಿಯಾಗಿ ವುಳ್ಳವುಗಳನ್ನಾಗಿಯೂ, ರಾತ್ರಿಂ-ರಾತ್ರಿಯನ್ನು, ಯುಗಸಹಸ್ರಾನ್ತಾಂ-ಸಹಸ್ರಯುಗಳನ್ನು ಪೂರ್ತಿಯಾಗಿ ಉಳ್ಳವುಗಳನ್ನಾಗಿಯೂ, ಯೇಜನಾವಿದುಃ-ಯಾವ ಜನಗಳು ತಿಳಿಯುತ್ತಾರೊ, ತೇ-ಅವರುಅಹೋರಾತ್ರವಿದಃ-ಹಗಲುರಾತ್ರಿಗಳನ್ನು ತಿಳಿದವರು. ... ... ॥೧೭॥

(ಶಂ॥ ಭಾ॥) ಬ್ರಹ್ಮಲೋಕದೊಡನೆ ಕೂಡಿರುವ ಸಕಲಲೋಕಗಳೂ ಪುನರಾವೃತ್ತಿಯುಳ್ಳವುಗಳೆನ್ನುವುದಕ್ಕೆ ಕಾರಣವೇನು? ಎಂದರೆ ಆಲೋಕಗಳೆಲ್ಲವು ಕಾಲಪರಿಚ್ಛಿನ್ನಗಳಾದುದರಿಂದ ಪುನರಾವೃತ್ತಿಯನ್ನುಂಟುಮಾಡತಕ್ಕವುಗಳೆಂದೀಶ್ಲೋಕದಿಂದಬೋಧಿಸುತ್ತಾನೆ. ಬ್ರಹ್ಮದೇವರು ತನ್ನ ಪ್ರಮಾಣದಿಂದಲಾದರೂ ದಿನರಾತ್ರಿ ಮಾಸಾಯನಋತುಗಳೊಡನೆ ಕೂಡಿರುವ ನೂರುಸಂವತ್ಸರಗಳಕಾಲವೆ ಆಯುಸ್ಸುಳ್ಳವರಾದುದರಿಂದ ಆಬ್ರಹ್ಮಲೋಕಕ್ಕೆ ಅಂತರ್ಗತಗಳಾದ ಸರ್ವಲೋಕಗಳು ಆಯಾಲೋಕಗಳಿಗೆ ತಕ್ಕ ಪರಿಮಾಣವುಳ್ಳುಗಳಾಗಿರುವುವು. ಆದುದರಿಂದ ಅಂತಹಕಾಲವು ಪೂರ್ತಿಯಾದಮೇಲೆ ಪುನರಾವೃತ್ತಿಯು ಅವುಗಳಿಗೆ ಉಂಟೆಂತಲೆ ತಿಳಿಯಬೇಕು. ॥೧೭॥

(ಮ)॥ಸೂ॥)ಚಂದ್ರಾರ್ಕಗತಿಗಳಿಂದ ಅಹೋರಾತ್ರ ಪರಿಮಾಣವನ್ನುತಿಳಿದವರು ಸ್ವಲ್ಪಕಾಲ ಪರಿಮಾಣವನ್ನು ತಿಳಿದವರಾದುದರಿಂದ ಅಂತವರು ಅಹೋರಾತ್ರ ಪರಿಮಾಣವನ್ನು ತಿಳಿದವರಲ್ಲವೆಂತಲೂ, "ಚತುರ್ಯುಗಸಹಸ್ರಂತು ಬ್ರಹ್ಮಣೋದಿನಮುಚ್ಯತೆ,, ಎಂಬ ಪ್ರಮಾಣಾನುಸಾರವಾಗಿ ಬ್ರಹ್ಮಮಾನವನ್ನನುಸರಿಸಿ ಅಹೋರಾತ್ರಗಳಂತಿಳಿದವರೆ ರಾತ್ರಿಹಗಲುಗಳನ್ನುತಿಳಿದವರೆಂತಲೂ ಹೇಳಲ್ಪಡುತ್ತಾರೆ.೧೭॥

(ಶಂ॥ ಅ॥) ಇದುವರೆಗೂ ಹೇಳಲ್ಪಟ್ಟ ಶ್ಲೋಕಗಳಿಂದ ಭಗವಂತನಾದ ತನ್ನನ್ನು ಹೊಂದಿದವರಿಗೆ ಪುನರಾವೃತ್ತಿಯಿಲ್ಲವೆಂದುಪದೇಶಿಸಿದನು. ಈಗ ಸರ್ವಪ್ರಾಣಿಗಳಿಗೂ, ಸತ್ಯಾದಿ ಲೋಕಗಳು

ನಿತ್ಯಗಳೆಂತಲೂ ನಿತ್ಯಸುಖಗಳನ್ನುಂಟು ಮಾಡತಕ್ಕವು ಗಳೆಂತಲೂ, ಪುನರಾವೃತ್ತಿಯನ್ನು ಕೊಡತಕ್ಕವುಗಳಲ್ಲವೆಂತಲೂ ತಿಳಿದು ಪುಣ್ಯಕರ್ಮಗಳನ್ನು ಮಾಡಿ ಆಯಾ ಲೋಕಗಳಿಗೆ ಹೋಗಿ ಬರುವುದೆಂಬ ಪರಿಭ್ರಮಣದಿಂದ ಜನ್ಮಮರಣ ಪರವಶರಾಗಿ ಸರ್ವಕಾಲದಲ್ಲಿಯೂ ದುಃಖಗಳನ್ನೆ ಅನುಭವಿಸುತ್ತಾರೆಂತಲೂ, ಅರ್ಥವಾದವಾಕ್ಯಗಳಿಂದ ಮೋಹಿತರಾಗಿ ಕಣ್ಣಿಲ್ಲದ ಅಂಧನನ್ನು ಅನುಸರಿಸಿಹೋಗುವ ಅಂಧನಂತೆ ಇಂತವರು ಆಗಿರುತ್ತಾರೆಂತಲೂ, ಆಪ್ರಾಣಿಗಳಲ್ಲಿ ಒಬ್ಬನೂ ವಾಸ್ತವವನ್ನು ವಿಚಾರಿಸುವವನಲ್ಲವೆಂತಲೂ, ಓ! ಹೊ! ಅವಿವೇಕ ಮಹಾಕಷ್ಟವೆಂತಲೂ ತಿಳಿದು ಆಸರ್ವಪ್ರಾಣಿಗಳಿಗೂ ಸದಸದ್ವಿವೇಕ ವೈರಾಗ್ಯವೂ ಅಸತ್ತ್ಯಾಗ ಸದುಪಾದಾನ ವೆಂಬಿವು ಸಿದ್ಧಿಸುವುದಕ್ಕಾಗಿ ಸತ್ಯಾದಿ ಲೋಕಗಳು ಕಾಲ ಪರಿಚ್ಛಿನ್ನಗಳಾಗುತ್ತ ಬ್ರಹ್ಮದೇವರ ಅಹೋರಾತ್ರಗಳಿಂದ ಆವಿರ್ಭಾವ ತಿರೋಭಾವಗಳುಳ್ಳವುಗಳೆಂತಲೂ, ಬ್ರಹ್ಮದೇವರ ದಿವಾರಾತ್ರಗಳಿಂದ ಸಕಲಲೋಕಗಳಿಗೂ ಉತ್ಪತ್ತಿ ಪ್ರಲಯಗಳುಂಟಾಗುವುವೆಂತಲೂ, ಈ ಶ್ಲೋಕವನ್ನಾರಂಭಮಾಡಿ ಮೂರುಶ್ಲೋಕಗಳಿಂದ ಶ್ರೀಕೃಷ್ಣ ಪರಮಾತ್ಮನು ಬೋಧಿಸುತ್ತಾನೆ. ಸತ್ಯಲೋಕಕ್ಕೇನೆ ನಿತ್ಯತ್ವಾದಿಗಳಿಲ್ಲದಮೇಲೆ ಇತರ ಲೋಕಗಳು, ಅನಿತ್ಯಗಳು, ಅಲ್ಪಸುಖಮಂ ಕೊಡತಕ್ಕವುಗಳು, ಎಂಬದಾಗಿ ಹೇಳತಕ್ಕದ್ದೇ ಅನಪೇಕ್ಷಿತವೆಂದರಿಯಬೇಕು॥೧೭॥

(ಶ್ರೀ) ಬ್ರಹ್ಮ ಲೋಕವು ದೀರ್ಘಕಾಲವರ್ತಿಯೆಂತಲೂ ಶ್ರೇಷ್ಠವೆಂತಲೂಹೇಳುವದಕ್ಕಾಗಿ ಈಶ್ಲೋಕವುಪ್ರವೃತ್ತವಾಯಿತು. ಸಹಸ್ರಯುಗಗಳೆಂದರೆ ಸಹಸ್ರ ಚತುರ್ಯುಗಗಳೆಂದರ್ಥವು. ॥೧೭॥

ಶ್ಲೋ ॥ ಅವ್ಯಕ್ತಾದ್ವ್ಯಕ್ತಯಸ್ಸರ್ವಾಃಪ್ರಭವಂತ್ಯಹರಾಗಮೇ। ರಾತ್ರ್ಯಾಗಮೇ ಪ್ರಲೀಯಂತೇತತ್ರೈವಾವ್ಯಕ್ತಸಂಜ್ಞಕೇ ॥ ... ... ॥೧೮॥

ಪ॥ ಅವ್ಯಕ್ತಾತ್- ವ್ಯಕ್ತಯಃ- ಸರ್ವಾಃ- ಪ್ರಭವಂತಿ- ಅಹರಾಗಮೇ । ರಾತ್ರ್ಯಾಗಮೇ- ಪ್ರಲೀಯಂತೇ- ತತ್ರ- ಏವ- ಅವ್ಯಕ್ತಸಂಜ್ಞಕೇ॥

ಅ|| ಅಹರಾಗಮೇ- ಬ್ರಹ್ಮದೇವರಿಗೆ ಹಗಲು ಪ್ರಾಪ್ತವಾದ ಸಮಯದಲ್ಲಿ, ಅವ್ಯಕ್ತಾತ್- (ಶಂ) ಬ್ರಹ್ಮದೇವರ ನಿದ್ರಾವಸ್ಥಾದಶೆಯಿಂದ, (ಶ್ರೀ) ಕಾರಣ ದಶೆಯಿಂದ, (ರಾ) ಚತುರ್ಮುಖಬ್ರಹ್ಮನ ದೇಹದ್ದ ಶೆಯಿಂದ, (ಮ) ವಿಷ್ಣುವಿನ ದಶೆಯಿಂದ, ಸರ್ವಾವ್ಯಕ್ತಯಃ- ಕಾಣಲ್ಪಡುವ ಸಮಸ್ತ ಪ್ರಪಂಚಗಳೂ, ಪ್ರಭವಂತಿ- ಉಂಟಾಗುವುವು.ರಾತ್ರ್ಯಾಗಮೇ- ಬ್ರಹ್ಮದೇವರಿಗೆ ರಾತ್ರಿಕಾಲ ಪ್ರಾರಂಭವಾದ ಸಮಯದಲ್ಲಿ, ಅವ್ಯಕ್ತಸಂಜ್ಞಕೇ- ಅವ್ಯಕ್ತವೆಂಬ ಹೆಸರುಳ್ಳ, ತತ್ರೈವ-ಆಬ್ರಹ್ಮದೇವರ ನಿದ್ರಾವಸ್ಥೆಯಲ್ಲಿಯೇ,ಪ್ರಲೀಯಂತೇ- ಲಯಿಸಿಹೋಗುವುವು. ... .... ||೧೮||

(ಶಂ || ಭಾ|| ) ಎಲೈ ಅರ್ಜುನನೇ; ಬ್ರಹ್ಮಲೋಕವೇ ಮೊದಲಾದ ಲೋಕಗಳೆಲ್ಲವೂ ಕಾಲ ಪರಿಚ್ಛಿನ್ನಗಳಾಗಿರುವವು ವಾದುದರಿಂದ ಪುನರಾವೃತ್ತಿಯನ್ನುಂಟುಮಾಡತಕ್ಕವುಗಳೆಂತಲೂ, ಯುಗಸಹಸ್ರಪರಿಮಿತಿಯುಳ್ಳ ಬ್ರಹ್ಮದೇವರ ಹಗಲಿನಂತೆ ರಾತ್ರಿಯೂ ಯುಗಸಹಸ್ರ ಪರಿಮಿತಿಯುಳ್ಳದಾಗಿಯೇ ಇರುವುದೆಂಬೀಕಾಲಜ್ಞರ ಅಭಿಪ್ರಾಯವನ್ನನುಸರಿಸಿ ಬ್ರಹ್ಮದೇವರ ಅಹೋರಾತ್ರಪರಿಮಾಣವನ್ನು ತಿಳಿಸಿದಪರಮಾತ್ಮನು ಈಶ್ಲೋಕದಿಂದ ಆ ಬ್ರಹ್ಮದೇವರ ರಾತ್ರಿ ಹಗಲುಗಳಲ್ಲಿ ನಡೆಯುವ ಕಾರ್ಯಗಳನ್ನು ವಿಭಜಿಸಿ ಹೇಳುತ್ತಾನೆ. ಬ್ರಹ್ಮದೇವರ ಹಗಲು ಪ್ರಾಪ್ತವಾದ ಕಾಲದಲ್ಲಿ ಸ್ಥಾವರಜಂಗಮಾತ್ಮಕವಾದ ಸರ್ವಪ್ರಪಂಚವೂ ಸ್ಪಷ್ಟವಾಗಿ ಕಾಣಲ್ಪಡುವುದೆಂತಲೂ ಆ ಬ್ರಹ್ಮದೇವರ ರಾತ್ರಿಯು ಪ್ರಾಪ್ತವಾದ ಕಾಲದಲ್ಲಿ ಆ ಪ್ರಪಂಚವು ಆ ಬ್ರಹ್ಮದೇವರ ನಿದ್ರಾವಸ್ಥೆಯಲ್ಲಿಯೇ ಲಯಿಸುವುದೆಂತಲೂ ತಿಳಿಯಬೇಕು. ... ... ||೧೮||

(ಶಂ|| ಅ||) ಈ ರೀತಿಯಾಗಿ ಸತ್ಯಾದಿ ಲೋಕಗಳು ಅನಿತ್ಯಗಳೆಂದು ಬೋಧಿಸಿ ಈಗ ಈ ಶ್ಲೋಕದಿಂದ ಆ ಸತ್ಯಾದಿ ಲೋಕಗಳನ್ನು ಹೊಂದಿದವರಿಗೆ ಜನನ ಮರಣಗಳಿಂದುಂಟಾಗುವ ಅಧಿಕ ದುಃಖಗಳುಂಟಾಗುವುದೆಂದು ಬೋಧಿಸುತ್ತಾನೆ. ಕಾರ್ಯಮೂಲಕವಲ್ಲದೆ ಮತ್ತೊಂದರಿಂದ ಕಾಣಲ್ಪಡದೆ ಇರುವುದು ಅವ್ಯಕ್ತವೆನ್ನಲ್ಪಡುವುದು. ಬ್ರಹ್ಮನ ನಿದ್ರಾವಸ್ಥೆಯು ಮೂಲಕಾರಣವಾದ ಅವ್ಯಕ್ತದಂತೆ ಸರ್ವೋತ್ಪತ್ತಿ ಪ್ರಲಯ ಕಾರಣವಾಗಿರುವುದರಿಂದ ಅವ್ಯಕ್ತವೆನ್ನಲ್ಪಡುವುದು. ಬ್ರಹ್ಮನ ಹಗಲು ಪ್ರಾಪ್ತವಾದ ಕಾಲದಲ್ಲಿ ಸರ್ವಪ್ರಾಣಿಕೋಟಿಗಳೂ

ಬೀಜಗಳದೆಶೆಯಿಂದ ಅಂಕುರಗಳು ಹೊರಗೆ ಬರುವಂತೆ ಅಭಿವ್ಯಕ್ತವಾಗುವುವೆಂತಲೂ, ಬ್ರಹ್ಮನ ರಾತ್ರಿಕಾಲದಲ್ಲಿ ಧಾನ್ಯಾದಿಗಳು ಬೀಜದಲ್ಲಿ ಅನ್ತರ್ಭವಿಸುವಂತೆ ಅಡಗಿರುವುವೆಂತಲೂ, ಈ ಪ್ರಕಾರವಾಗಿರುವುದರಿಂದ ಸರ್ವಪ್ರಾಣಿ ಕೋಟಿಗಳೂ ಬ್ರಾಹ್ಮಾಹೋರಾತ್ರಗಳಲ್ಲಿ ತಪ್ಪದೆ ಜನನ ಮರಣ ದುಃಖಗಳ ನ್ನನುಭವಿಸುವುವೆಂತಲೂ ತಿಳಿಯಬೇಕು. ... ||೧೮||

ಶ್ಲೋ||ಭೂತಗ್ರಾಮಸ್ಸಏವಾಯಂಭೂತ್ವಾಭೂತ್ವಾಪ್ರಲೀಯತೇ । ರಾತ್ರ್ಯಾಗಮೇಽವಶಃಪಾರ್ಥಪ್ರಭವತ್ಯಹರಾಗಮೇ || ... ... ||೧೯||

ಪ|| ಭೂತಗ್ರಾಮಃ-ಸಃ-ಏವ-ಅಯಂ-ಭೂತ್ವಾ-ಭೂತ್ವಾ-ಪ್ರಲೀಯತೇ|ರಾತ್ರ್ಯಾಗಮೇ-ಅವಶಃ-ಪಾರ್ಥ-ಪ್ರಭವತಿ-ಅಹರಾಗಮೇ||

ಅ|| ಹೇಪಾರ್ಥ-ಎಲೈ ಅರ್ಜುನನೇ! ಭೂತಗ್ರಾಮಃ-ಭೂತಗಳಸಮೂಹವು, ಅವಶಃ-ಪರಾಧೀನವಾಗಿ, (ರಾ) ಕರ್ಮಾಧೀನವಾಗಿ, (ಗೀ|| ವಿ||) ಭಗವದಧೀನವಾಗಿ, ಅಹರಾಗಮೇ-ಹಗಲಿನ ಆರಂಭದಲ್ಲಿ, ಪ್ರಭವತಿ ಉಂಟಾಗುತ್ತದೆ. ರಾತ್ರ್ಯಾಗಮೇ-ರಾತ್ರ್ಯಾರಂಭದಲ್ಲಿ, ಪ್ರಲೀಯತೆ-ಲಯಿಸಿ ಹೋಗುವುದು. ಸಏವಾಯಂ-ಅದೇಭೂತಸಮೂಹವು, ಭೂತ್ವಾಭೂತ್ವಾಪ್ರಲೀಯತೆ-ಹುಟ್ಟಿಹುಟ್ಟಿಲಯಿಸುವುದು. ... ||೧೯||

(ಶಂ|| ಭಾ||) ಬ್ರಹ್ಮನ ಪ್ರಬೋಧಕಾಲದಲ್ಲಿ ಯಾವಭೂತ ಸಮುದಾಯವು ಹುಟ್ಟಿ ಪುನಶ್ಚ ಆ ಬ್ರಹ್ಮನಿಗೆ ನಿದ್ರೆಯು ಬಂದಕಾಲದಲ್ಲಿ ಲೀನವಾಗುವುದೋ ಅಂತಹ ಭೂತಸಮುದಾಯವಲ್ಲದೆ ಮತ್ತೊಂದು ಭೂತಸಮುದಾಯವೆ ಬ್ರಹ್ಮನ ಮತ್ತೊಂದು ಹಗಲಿನಲ್ಲಿ ಹುಟ್ಟಿ ಪುನಶ್ಚ ರಾತ್ರಿ ಬಂದ ಕಾಲದಲ್ಲಿ ಲೀನವಾಗಿ ಹೋಗುವುದು. ಆದುದರಿಂದ ಪ್ರತ್ಯವಾಂತರ ಕಲ್ಪದಲ್ಲಿಯೂ ಹುಟ್ಟುವ ಭೂತ ಸಮುದಾಯವು ಭಿನ್ನವಾದದ್ದಲ್ಲವೆ ? ಎಂಬ ಅರ್ಜುನನ ಶಂಕೆಯನ್ನು ತಾನೆ ತಿಳಿದು ಅದಕ್ಕುತ್ತರವಾಗಿ ಶ್ರೀಕೃಷ್ಣನು ಎಲೈ ಅರ್ಜುನನೇ ! ಪ್ರತಿ ಕಲ್ಪದಲ್ಲಿಯೂ ಹುಟ್ಟುವ ಪ್ರಾಣಿಗಳು ಭಿನ್ನಭಿನ್ನಗಳಾದರೆ (ಎಂದರೆ ಪೂರ್ವಕಲ್ಪಗಳಲ್ಲಿದ್ದ ಪ್ರಾಣಿಗಳೆ ಪುನಶ್ಚ ಈ ಕಲ್ಪದಲ್ಲಿ ಹುಟ್ಟದೇ ಹೋದರೆ ಅಕೃತಾಭ್ಯಾಗಮದೋಷವು ಪ್ರಾಪ್ತವಾಗುವುದು.(ಎಂದರೆ

ಅಯಾಪ್ರಾಣಿಗಳನುಭವಿಸುವ ಸುಖದುಃಖಗಳು ಪೂರ್ವಪೂರ್ವ ಪುಣ್ಯ ಪಾಪಾಧೀನಗಳಲ್ಲವೆಂತಲೂ ಪೂರ್ವಪೂರ್ವ ಪುಣ್ಯಪಾಪಗಳು ಫಲಪ್ರದಗಳಾಗದೇನಶಿಸುವುವೆಂತಲೂ ಹೇಳಿದಂತೆ ಆಗುವುದು ) ಆದುದರಿಂದ ಪೂರ್ವ ಕಲ್ಪದಲ್ಲಿದ್ದ ಪ್ರಾಣಿಕೋಟಿಗಳೆ ಈಕಲ್ಪದಲ್ಲಿ ಹುಟ್ಟುವುವೆಂದರಿಯಬೇಕು. ಕಿಂಚ, ಸ್ಥಾವರ ಜಂಗಮಾತ್ಮಕವಾದ ಪ್ರಾಣಿಸಮುದಾಯವು ಪ್ರತಿಕಲ್ಪದಲ್ಲಿಯೂ ಭಿನ್ನಭಿನ್ನವೇ ಎನ್ನುವ ಪಕ್ಷದಲ್ಲಿ ಬಂಧ ಮೋಕ್ಷಗಳಂ ಹೊಂದುವ ಪ್ರಾಣಿಗಳ್ಯಾವವೂ ಇಲ್ಲದೇಹೋಗುವುದರಿಂದ ಬಂಧಮೋಕ್ಷಗಳೆ ಪ್ರಯೋಜನವಾಗಿ ವುಳ್ಳದ್ದಾಗಿಯೂ ಕರ್ಮಜ್ಞಾನ ಕಾಂಡದ್ವಯಾತ್ಮಕವಾಗಿಯೂ ಇರುವ ಶಾಸ್ತ್ರದ ಪ್ರವೃತ್ತಿಯೂ ನಿಷ್ಫಲವಾಗುವುದು; ಆದುದರಿಂದ ಶಾಸ್ತ್ರಪ್ರವೃತ್ತಿಯಸಾಫಲ್ಯಕ್ಕಾಗಿ ಪ್ರತಿಕಲ್ಪಗಳಲ್ಲಿಯೂ ನೂತನವಾಗಿಯೆ ಪ್ರಾಣಿಕೋಟಿಗಳು ಹುಟ್ಟುವುವೆಂದು ಹೇಳುವುದು ಯುಕ್ತವಲ್ಲವು. ಆದರೆ ಪುನಶ್ಚ ಹುಟ್ಟಿದ ಭೂತಸಮುದಾಯವು ಸ್ವಾತಂತ್ರ್ಯವಿಲ್ಲದೆ ಹೇಗೆ ಲೀನವಾಗಿಹೋಗುವುದೆಂದರೆ ಅದಕ್ಕೆ ಸಮಾಧಾನವಂಕೇಳು. ಅವಿದ್ಯಾಸ್ಮಿತ ರಾಗದ್ವೇಷಾಭಿ ನಿವೇಶಗಳೆಂಬೀ ಕ್ಲೇಶ ಪಂಚಕಗಳನ್ನೆ ಕಾರಣವಾಗಿ ವುಳ್ಳ ಕರ್ಮಾಶಯದ್ದಶೆಯಿಂದ (ಕರ್ಮಗಳ ಸಂಸ್ಕಾರ ದ್ದಶೆಯಿಂದ)ಭೂತಸಮುದಾಯವು ಪುನಶ್ಚ ಹುಟ್ಟಿ ಲಯಿಸುವುದೆಂದು (ಎಂದರೆ ಪ್ರತಿಕಲ್ಪದಲ್ಲಿಯೂ ಉಂಟಾಗುವ ಅವಿದ್ಯಾದಿ ಕ್ಲೇಶಪಂಚಕದ್ದಶೆಯಿಂದ ಧರ್ಮಾಧರ್ಮ ಕರ್ಮಸಮುದಾಯವು ಅಸ್ವತಂತ್ರವಾಗಿರುತ ಜನ್ಮವಿನಾಶಗಳನ್ನು ಅನುಭವಿಸುತಲಿರುವುದೆಂದು) ತಿಳಿಯಬೇಕು. ಮತ್ತು ಈಪ್ರಕಾರವಾಗಿ ಜನನ ಮರಣಗಳಿಂದ ಕ್ಲೇಶಪಡುವ ಪ್ರಾಣಿಗಳು; ನಾವಿದುವರೆಗೂ ಪ್ರತಿಕಲ್ಪದಲ್ಲಿಯೂ ಜನನಮರಣಗಳನ್ನು ಹೊಂದಿ ಕ್ಲೇಶಪಟ್ಟದ್ದು ಸಾಕು, ಸಂಸಾರದಲ್ಲಿ ವೈರಾಗ್ಯವಂ ಸಂಪಾದಿಸಿ ಬ್ರಹ್ಮಸ್ವರೂಪಾನು ಭವವಂ ಮಾಡುವುದು ಉತ್ತಮವೆಂದು ತಿಳಿಸುವ ಅಭಿಪ್ರಾಯದಿಂದ ನಾನೀಸಂದರ್ಭವನ್ನು ನಿನಗೆಬೋಧಿಸುತ್ತೇನೆನ್ನುತ್ತಾನೆ. ಪೂರ್ವಕಲ್ಪದಲ್ಲಿ ಹುಟ್ಟಿದ ಪ್ರಾಣಿಸಮೂಹವೆ ಬ್ರಹ್ಮನಿಗೆ ಹಗಲು ಬಂದಕಾಲದಲ್ಲಿ ಹುಟ್ಟಿ ರಾತ್ರಿ ಬಂದಕಾಲದಲ್ಲಿ ಲಯಿಸಿಹೋಗುವುದು. ಈಪ್ರಕಾರವಾಗಿ ಸರ್ವಪ್ರಾಣಿ ಸಮುದಾಯವು ಹುಟ್ಟಿಹು

ಟ್ಟಿಲಯಿಸಿ ಕ್ಲೇಶಭಾಗಿಯಾಗಿರುವುದೆಂದು ಶ್ಲೋಕತಾತ್ಪರ್ಯವು.॥೧೯॥

(ರಾ॥ ಭಾ॥) ಇನ್ನು ಮುಂದೆ ಬ್ರಹ್ಮಲೋಕ ಪರ್ಯಂತವಾದ ಲೋಕಗಳಿಗೂ ಅವುಗಳಲ್ಲಿರುವ ಭೋಗಸ್ಥಾನಾದಿಗಳಿಗೂ ಪರಮ ಪುರುಷ ಸಂಕಲ್ಪಕೃತವಾದ ಉತ್ಪತ್ತಿ ವಿನಾಶಕಾಲ ವ್ಯವಸ್ಥೆಯನ್ನು ಪದೇಶಿಸುತ್ತಾರೆ. ಯಾರಾದರೆ ಮನುಷ್ಯಾದಿ ಚತುರ್ಮುಖಾನ್ತವಾದ ಪ್ರಾಣಿಗಳಿಗೆ ನನ್ನ ಸಂಕಲ್ಪದಿಂದುಂಟಾದ ಅಹೋರಾತ್ರ ವ್ಯವಸ್ಥೆ ಯನ್ನು ತಿಳಿದಿರುವರೊ ಅವರು ಚತುರ್ಮುಖನಿಗೆ ಯಾವದು ಹಗಲೊ ಅದನ್ನು ಸಹಸ್ರ ಚತುರ್ಯುಗವೆಂದು ತಿಳಿಯುತ್ತಾರೆ. ಆಚತುರ್ಮು ಖನ ರಾತ್ರಿಯನ್ನೂ ಸಹಸ್ರಯುಗವೆಂತಲೆ ತಿಳಿಯುತ್ತಾರೆ. ಚತು ರ್ಮುಖನಿಗೆ ಹಗಲು ಪ್ರಾಪ್ತವಾದ ಕಾಲದಲ್ಲಿ ತ್ರೈಲೋಕ್ಯ ವರ್ತಿಗಳಾದ ದೇಹರೂಪಗಳಾಗಿಯೂ ಇಂದ್ರಿಯರೂಪಗಳಾಗಿಯೂ ಭೋಗ್ಯರೂಪ ಗಳಾಗಿಯೂ ಭೋಗಸ್ಥಾನರೂಪಗಳಾಗಿಯೂ ಇರುವ ಸಕಲ ವ್ಯಕ್ತಿ ಗಳೂ ಚತುರ್ಮುಖ ದೇಹರೂಪವಾಗಿರುವ ಪ್ರಕೃತಿಯಿಂ ದುಂಟಾಗು ವುವು ಚತುರ್ಮುಖನಿಗೆ ಹಗಲು ಪೂರೈಸಿ ರಾತ್ರಿಯು ಬಂದಮೇಲೆ ಪ್ರಕೃತಿಯು ಅವಸ್ಥಾವಿಶೇಷವಾಗಿರುವ ಆಚತುರ್ಮುಖ ಶರೀರದಲ್ಲಿಯೇ ಹಗಲಿನಲ್ಲು ತ್ಪನ್ನಗಳಾದ ಭೂತಗಳೆಲ್ಲವೂ ಲಯಿಸಿ ಹೋಗುವುವು. ರಾತ್ರಿಯಲ್ಲಿ ಲಯಿಸಿಹೋದ ಕರ್ಮವಶ್ಯವಾದ ಪ್ರಾಣಿಸಂಘವೆ ಹುಟ್ಟಿ ಹುಟ್ಟಿ ರಾತ್ರಿಯು ಬರುವಕಾಲದಲ್ಲಿ ಲಯಿಸಿಹೋಗುವುವು. ಎಲೈಅ ರ್ಜುನನೆ! ಪುನಶ್ಚ ಹಗಲು ಬಂದವೇಳೆಯಲ್ಲಿ ಹುಟ್ಟುವುವು. ಆಪ್ರಕಾ ರವೇ ಬ್ರಹ್ಮದೇವರ ಅಯುರವಸಾನದಲ್ಲಿ ಬ್ರಹ್ಮಲೋಕಪರ್ಯಂತಗ ಳಾದ ಸರ್ವಲೋಕಗಳೂ ಬ್ರಹ್ಮದೇವರೂ ಪೃಥಿವ್ಯಪ್ತೇಜೋವಾಯ್ವಾ ಕಾಶಾದಿ ಕ್ರಮವಾಗಿ ಅವ್ಯಕ್ತ ಅಕ್ಷರ ತಮಃಪರ್ಯಂತವಾದ ಸಮಸ್ತ ಪ್ರಾಕೃತವರ್ಗವೂ ನನ್ನಲ್ಲಿಯೇ ಲಯಿಸುವುವು. ಈ ಪ್ರಕಾರವಾಗಿ ನನಿಗಿಂತಲೂ ಭಿನ್ನವಾದ ಸಮಸ್ತವಸ್ತುವಿಗೂ ಕಾಲವ್ಯವಸ್ಥೆಯಿಂದ ನನ್ನ ದಶೆಯಿಂದ ಉತ್ಪತ್ತಿ ಯುಂಟಾಗಿರುವುದರಿಂದಲೂ ನನ್ನಲ್ಲಿಯೇ ಲಯಿಸುವುದರಿಂದಲೂ ಉತ್ಪತ್ತಿನಾಶಗಳು ಅವರ್ಜನೀಯಗಳಾಗಿರು ವುವು. ಆದುದರಿಂದ ಐಶ್ವರ್ಯಗತಿಯನ್ನು ಹೊಂದಿದವರಿಗೆ ಪುನರಾ ವೃತ್ತಿಯು ಅಪರಿಹಾರ್ಯವೆಂತಲೂ ನನ್ನನ್ನುಹೊಂದಿದವರಿಗೆ ಪುನರಾವೃ ತ್ತಿಪ್ರಸಂಗವೇ ಇಲ್ಲವೆಂತಲೂ ತಿಳಿಯಬೇಕು. ೧೭ ॥ ೧೮ ॥ ೧೯ ॥

ಶ್ಲೋ॥ ಪರಸ್ತಸ್ಮಾತ್ತು ಭಾವೋಽನ್ಯೋಽವ್ಯಕ್ತೋಽವ್ಯಕ್ತಾತ್ಸನಾತನಃ । ಯಸ್ಸಸರ್ವೇಷು ಭೂತೇಷು ನಶ್ಯತ್ಸು ನ ವಿನಶ್ಯತಿ ॥ ... ... ॥ ೨೦ ॥

ಪ॥ ಪರಃ- ತಸ್ಮಾತ್- ತು- ಭಾವಃ- ಅನ್ಯಃ- ಅವ್ಯಕ್ತಃ - ಅವ್ಯಕ್ತಾತ್ - ಸನಾತನಃ- ಯಃ- ಸಃ- ಸರ್ವೇಷು- ಭೂತೇಷು- ನಶ್ಯತ್ಸು- ನ- ವಿನಶ್ಯತಿ॥

ಅ॥ ಯಃ- ಯಾವವಸ್ತುವು, ತಸ್ಮಾದವ್ಯಕ್ತಾತ್- (ಪ್ರಕೃತಿ ಎಂಬದಾಗಿ ಹೇಳಲ್ಪಟ್ಟ) ಆ ಅವ್ಯಕ್ತಕ್ಕಿಂತಲೂ, ಅನ್ಯಃ- ವಿಲಕ್ಷಣವಾಗಿಯೂ, (ಬೇರೆ ಯಾದದ್ದಾಗಿಯೂ) ಪರಃ- ಶ್ರೇಷ್ಠವಾಗಿಯೂ, ಅವ್ಯಕ್ತಃ- ಕಾಣಲ್ಪಡದೇ ಇರತಕ್ಕದ್ದಾಗಿಯೂ, ಸನಾತನಃ- ಅನಾದಿಯಾಗಿಯೂ ಇರುವುದೊ, ಸಃಭಾವಃ-ಆ ಬ್ರಹ್ಮವು, ಸರ್ವೇಷು ಭೂತೇಷು- ಸಕಲಭೂತಗಳು, ನಶ್ಯತ್ಸು-ನಾಶಹೊಂದಿದರೂ, ನ ವಿನಶ್ಯತಿ-ನಾಶಹೊಂದುವುದಿಲ್ಲವು.॥೨೦॥

(ಶಂ॥ ಭಾ॥) "ಅಕ್ಷರಂ ಬ್ರಹ್ಮ ಪರಮಂ,, (೮॥ ೩॥) ಎಂಬದಾಗಿ ಉಪಕ್ರಮಿಸಲ್ಪಟ್ಟ ಆ ಅಕ್ಷರ ಪರಬ್ರಹ್ಮವನ್ನು ಹೊಂದುವುದಕ್ಕೆ ಯೋಗ್ಯವಾದ ಉಪಾಯವು "ಓಮಿತ್ಯೇಕಾಕ್ಷರಂ ಬ್ರಹ್ಮ,, (೮॥ ೧೩॥) ಎಂಬಿದೇ ಮೊದಲಾದ ಶ್ಲೋಕಗಳಿಂದ ತಿಳಿಸಲ್ಪಟ್ಟಿರುವುದೆಂತಲೂ, ಈಗ ಆ ಅಕ್ಷರ ಪರಬ್ರಹ್ಮದ ಸ್ವರೂಪ ನಿರ್ದೇಶವಂ ಮಾಡಬೇಕೆಂಬ ಇಚ್ಛೆಯಿಂದ ಈ ಯೋಗ ಮಾರ್ಗದಿಂದ ಇದು ಹೊಂದತಕ್ಕದ್ದಾಗಿರುವುದೆಂದು ತಿಳಿಸುವುದಕ್ಕಾಗಿ ಇದು ಹೇಳಲ್ಪಡುವುದೆಂತಲೂ ತಿಳಿಯಬೇಕು. ಅಕ್ಷರಸ್ವರೂಪವನ್ನು ನಿರ್ದೇಶಿಸಿದಮಾತ್ರದಿಂದಲೇ ಇದುವರೆಗೂ ಹೇಳಲ್ಪಟ್ಟ ಯೋಗಮಾರ್ಗಕ್ಕೆ ಆ ಬ್ರಹ್ಮದಲ್ಲಿ ಉಪಯೋಗವು ಹೇಗೆ ಆಗುವುದೆಂದು ಸಂದೇಹಿಸದೆ ಆ ಬ್ರಹ್ಮವನ್ನು ಹೊಂದುವುದಕ್ಕೆ ತಕ್ಕ ಉಪಾಯವಾಗುತ್ತ ಉಪಯೋಗಿಸುವುದೆಂದು ತಿಳಿಯಬೇಕು. ಭೂತಸಮೂಹಕ್ಕೆ ಬೀಜವಾಗಿ ಪ್ರಸಿದ್ಧವಾದ ಪ್ರಕೃತಿಯೆನ್ನಲ್ಪಡುವ ಅವ್ಯಕ್ತಕ್ಕಿಂತಲೂ ವಿಲಕ್ಷಣವಾದದ್ದಾಗಿಯೂ, ಯೋಗಮಾರ್ಗನಿಷ್ಠರಿಂದ ಹೊಂದತಕ್ಕದ್ದಾಗಿರುವುದರಿಂದ ಸಕಲವಾದವುಗಳಿಗಿಂತಲೂ ಶ್ರೇಷ್ಠವಾದದ್ದಾಗಿಯೂ, ಇಂದ್ರಿಯಗಳಿಗೆ ಗೋಚರವಲ್ಲದ್ದಾಗಿಯೂ, ಚಿರಂತನವಾಗಿಯೂ, ಇರುವ ಅಕ್ಷರಶಬ್ದವಾದ ಪರಬ್ರಹ್ಮವು ಚತುರ್ಮುಖ ಬ್ರಹ್ಮಾದಿಗಳು ಮುಂತಾ

ಕಲ್ಪಾದಿ ನಿರ್ಣೀತಕಾಲಗಳಲ್ಲಿನಶಿಸಿದರೂ ನಶಿಸಿಹೋಗುವಂತಹದ್ದಲ್ಲ ವೆಂದು ಸಮೀಚೀನವಾಗಿತಿಳಿದುಕೊಳ್ಳೆಂದು ತಾತ್ಪರ್ಯವು.॥೨೦॥

ಶ್ಲೋ॥ಅವ್ಯಕ್ತೋಽಕ್ಷರಇತ್ಯುಕ್ತಸ್ತಮಾಹುಃಪರಮಾಂ ಗತಿಂ । ಯಂಪ್ರಾಪ್ಯನನಿವರ್ತಂತೇತದ್ಧಾಮಪರಮಂ ಮಮ ॥ ... ... ॥೨೧॥

ಪ॥ ಅವ್ಯಕ್ತಃ- ಅಕ್ಷರಃ- ಇತಿ- ಉಕ್ತಃ- ತಂ- ಆಹುಃ- ಪರಮಾಂ- ಗತಿಂ।ಯಂ ಪ್ರಾಪ್ಯ- ನ- ನಿವರ್ತಂತೇ- ತತ್- ಧಾಮ- ಪರಮಂ- ಮಮ॥

ಅ॥ ಯಃ- ಯಾವಪರಮಾತ್ಮನು, ಅವ್ಯಕ್ತಃ - ಕಾಣಲ್ಪಡತಕ್ಕವನಲ್ಲವೆಂತಲೂ, ಅಕ್ಷರಇತಿ- ನಾಶರಹಿತನೆಂತಲೂ. ಉಕ್ತಃ- ಹೇಳಲ್ಪಟ್ಟಿರುವನೊ, ತಂ ಪರಮಾಂಗತಿ ಮಾಹುಃ- ಅವರನ್ನು (ಪರಮಪುರುಷಾರ್ಥವಾಗಿ) ಶ್ರೇಷ್ಠವಾದ ಗತಿಯೆಂಬದಾಗಿ ಹೇಳುವರು. ಯಂ- ಯಾವದನ್ನು. ಪ್ರಾಪ್ಯ- ಹೊಂದಿ, ನನಿವರ್ತಂತೇ- ತಿರುಗುವುದಿ ಲ್ಲವೊ, ತತ್ಪರಮಂಧಾಮ ಮಮ- ಆಶ್ರೇಷ್ಠವಾದ ಸ್ವರೂಪವು ನನ್ನದು. ॥೨೧॥

(ರಾ॥ ಭಾ॥) ಇದರಿಂದ ಕೈವಲ್ಯವನ್ನು ಹೊಂದಿದವರಿಗೂ ಪುನ ರಾವೃತ್ತಿ ಇಲ್ಲವೆನ್ನುತ್ತಾನೆ. ತಸ್ಮಾದವ್ಯಕ್ತಾತ್ತು- ಆ ಅಚೇತನ ಪ್ರಕೃತಿಗಿಂತಲೂ, ಪರಃ- ಪುರುಷಾರ್ಥರೂಪವಾಗಿರುವುದರಿಂದ ಶ್ರೇ ಷ್ಠವಾದ, ಭಾವಃ- ಆತ್ಮವಸ್ತುವು, ಅನ್ಯಃ- ಜ್ಞಾನೈಕಾಕಾರವಾಗಿ ರುವುದರಿಂದ ಆ ಅಚೇತನಕ್ಕಿಂತಲೂ ವಿಸಜಾತೀಯವಾಗಿರುವುದು. ಅವ್ಯಕ್ತಃ- ಬೇರೊಂದು ಪ್ರಮಾಣದಿಂದ ಪ್ರಕಾಶಪಡಿಸತಕ್ಕದ್ದಲ್ಲವು. ಪ್ರತ್ಯಗ್ವಸ್ತುವಾದುದರಿಂದ ತನಿಗೆ ತಾನೆ ತೋರುವ ಪ್ರತ್ಯಕ್ತ್ವ ಅನುಕೂಲತ್ವ ಏಕತ್ವಗಳೆಂಬ ಅಸಾಧಾರಣ ಧರ್ಮಗಳುಳ್ಳದ್ದೆಂದುಭಾ ವವು. ಸನಾತನಃ- ಉತ್ಪತ್ತಿ ವಿನಾಶಾನರ್ಹ ವಾಗಿರುವುದರಿಂದ ನಿತ್ಯವಾಗಿರುವುದು. ಯಸ್ಸಃ- ಯಾವ ವಸ್ತುವಾದರೆ, ಸರ್ವೇಷು ಭೂತೇಷುನಶ್ಯತ್ಸು- ಆಕಾಶಾದಿಗಳಾದ ಭೂತಗಳು ತಮ್ಮತಮ್ಮಗಳ ಆಕಾರಗಳೊಡನೆಯೂ ತಮ್ಮತಮ್ಮ ಕಾರ್ಯಗಳೊಡನೆಯೂ ನಶಿಸಿ ಹೋಗುವ ಕಾಲದಲ್ಲಿಯೂ, ನವಿನಶ್ಯತಿ- ಆವಸ್ತುಗಳಲ್ಲಿ ತಾನಿದ್ದರೂ ನಶಿಸಿಹೋಗುವುದಿಲ್ಲವೊ, ಕಿಂಚ,ಅವ್ಯಕ್ತೋಽಕ್ಷರ ಇತ್ಯುಕ್ತಃ-"ಏತ್ವ ಕ್ಷರಮನಿರ್ದೇಶ್ಯಮವ್ಯಕ್ತಂ ಪರ್ಯುಪಾಸತೆ,, (೧೨॥೩॥) ಇತ್ಯಾದಿ ಸ್ಥಲಗಳಲ್ಲಿ ಅವ್ಯಕ್ತವೆಂತಲೂ ಅಕ್ಷರವೆಂತಲೂ ಯಾವವಸ್ತುವುಹೇಳ

ಲ್ಪಟ್ಟಿತೋ, ತಂ-ಅಂತಹ ಆತ್ಮವಸ್ತುವನ್ನು, ಪರಮಾಂಗತಿಮಾಹುಃ-
ವೇದವಿತ್ತುಗಳು ಪರಮಗತಿಯಾಗಿ ಹೇಳುವರು. ಯಂ- ಯಾವ
ವಸ್ತುವನ್ನು, ಪ್ರಾಪ್ಯ- ಸ್ವಸ್ವರೂಪದೊಡನೆ ಹೊಂದಿ, ನನಿವರ್ತಂತೆ-
ಯಾವದನ್ನು ಬಿಟ್ಟು ಜಾರಿದರೂ ಕೆಳಗೆ ಬೀಳುವುದಿಲ್ಲವೋ, ತನ್ಮಮ
ಪರಮಂಧಾಮ- ಅಂತಹ ಪ್ರಕೃತಿ ವಿಯುಕ್ತವಾದ ಶುದ್ಧಾತ್ಮಸ್ವ
ರೂಪವು ನನಗೆ ಶ್ರೇಷ್ಠವಾದ ನಿಯಮನಸ್ಥಾನವು. ಅಚೇತನ
ಪ್ರಕೃತಿಯು ಮೊದಲನೆ ನಿಯಮನ ಸ್ಥಾನವು. ಅದರೊಡನೆ ಸೇರಿ
ರುವ ಬದ್ಧ ಜೀವನೆಂಬ ಪ್ರಕೃತಿಯು ಯೆರಡನೆ ನಿಯಮನಸ್ಥಾನವು.
ಅಚಿತ್ಸಂಸರ್ಗಶೂನ್ಯವಾಗಿ ಸ್ವಸ್ವರೂಪದೊಡನೆಪ್ರಕಾಶಿಸುವ ಮುಕ್ತಾ
ತ್ಮಸ್ವರೂಪವು ತನಗೆ ಶ್ರೇಷ್ಠವಾದ ನಿಯಮನಸ್ಥಾನವೆಂ ದರಿಯ
ಬೇಕು. (ಅಥವಾ) ಧಾಮಶಬ್ದವು ಪ್ರಕಾಶವಾಚಿಯಾಗಿರುವುದು.
ಮುಕ್ತಾತ್ಮಸ್ವರೂಪವು ನಿರುಪಾಧಿಕಾಸಂಕುಚಿತ ಜ್ಞಾನೈಕಾಕಾರವಾ
ಗಿರುವುದರಿಂದ ಪ್ರಕಾಶರೂಪವಾಗಿರುವುದು. ಉತ್ತಮಪ್ರಕಾಶರೂ
ಪವಾದ ಮುಕ್ತಾತ್ಮಸ್ವರೂಪವು ನನಗೆ ಉತ್ತಮವಾದ ಶರೀರವೆಂ
ದರ್ಥವು. ... ||೨೦||೨೧||

(ವಿಶೋಕ್ತಿಗೀತಾವ್ಯಾಖ್ಯಾನ) "ಯಂಪ್ರಾಪ್ಯನನಿವರ್ತಂತೇ,,
ಎಂಬುವ ಸ್ಥಾನದಲ್ಲಿ ಯಾವಸ್ಥಾನವನ್ನುಬಿಟ್ಟು ಜಾರಿದರೂ ಕೆಳಗೆ
ಬರುವುದಿಲ್ಲವೋ ಎಂಬದಾಗಿ ಅರ್ಥವಂ ಹೇಳುವುದಕ್ಕೆ ಕಾರಣವ
ನ್ನೀರೀತಿಯಾಗಿ ತಿಳಿಯಬೇಕು. "ಪಂಚಾಗ್ನಿ ವಿದ್ಯಾನಿಷ್ಠನಾದ
ಕೈವಲ್ಯಾಧಿಕಾರಿಯು ಕಾಮನಾಭೇದದಿಂದ ಆಪಂಚಾಗ್ನಿ ವಿದ್ಯೆಯ
ನ್ನನುಷ್ಠಿಸಿ ಅರ್ಚಿರಾದಿ ಗತಿಯಲ್ಲಿ ಕೆಲವು ಪ್ರದೇಶಗಳನ್ನುಹೊಂದಿ
ಅನಂತರದಲ್ಲಿ "ಯೋಗಿನಾಮಮೃತಂಸ್ಥಾನಂ ಸ್ವಾತ್ಮಸಂತೋಷ
ಕಾರಿಣಾಂ,, ಎಂಬುವಂತೆ ಪ್ರಾಕೃತವಾದ ಸ್ಥಾನವಿಶೇಷದಲ್ಲಿಯೆ
ಕೆಲವುಕಾಲವು ಕೇವಲಾತ್ಮಾನುಭವವಂ ಮಾಡಿ ತರುವಾಯ ಆಕೇವ
ಲಾತ್ಮಾನುಭವಸ್ಥಾನದಿಂದ ಬಿಡಲ್ಪಟ್ಟು ಅರ್ಚಿರಾದಿಗತಿ ವಿಶೇಷ
ದಿಂದ ಬ್ರಹ್ಮಾನುಭವರೂಪ ಮೋಕ್ಷವನ್ನು ಹೊಂದುತ್ತಾನೆಂದು
ಸೂತ್ರಭಾಷ್ಯಗೀತಾಭಾಷ್ಯಾದಿ ತಾತ್ಪರ್ಯವು ಸಿದ್ಧವಾಗಿರುವುದರಿಂ
ದಲೂ "ಪರಪ್ರಾಪ್ತ್ಯವಧಿ ರಹಿತೆ ನಿತ್ಯಕೈವಲ್ಯಕಲ್ಪನಾ । ಸೂತ್ರ

ಭಾಷ್ಯ ಶ್ರುತಿಸ್ಮೃತ್ಯಾದೀನಾಂಬಾಧೇನಸಿದ್ಧ್ಯತಿ,, ಎಂಬುವುದಾಗಿ ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲಿ ಶ್ರೀಮನ್ನಿಗಮಾನ್ತ ಮಹಾದೇಶಿಕರು ನಿತ್ಯ ಕೈವಲ್ಯ ಕಲ್ಪನವನ್ನು ನಿರಾಸ ಮಾಡಿರುವುದರಿಂದಲೂ, ''ಸರ್ವೇಚ್ಯವನಧರ್ಮಾಣಃ,, ಎಂಬುವುದಾಗಿ ಕೈವಲ್ಯಕ್ಕೂಅನಿತ್ಯತ್ವವು ವಚನ ಸಿದ್ಧವಾಗಿರುವುದರಿಂದಲೂ, ಅಂತಹ ಕೈವಲ್ಯಸ್ಥಾನವಂಬಿಟ್ಟು ಮೇಲೆ ಹೋದರೂ ''ಇಂದ್ರಲೋಕಾತ್ಪರಿಭ್ರಷ್ಟೋಪುಮಾನ್ಯೇಯುಪರಾಯಣಃ । ವಿಮುಕ್ತಸ್ಸರ್ವಸಂಸಾರೈರ್ಮಮಲೋಕಂಸಗಚ್ಛತಿ'' ಎಂಬುವ ಸ್ಥಾನದಲ್ಲಿ ಇಂದ್ರಲೋಕದಿಂದ ಪರಮಪದಕ್ಕೆಹೋಗುವವನಂಕುರಿತು ಪರಿಭ್ರಷ್ಟನೆಂದು ಹೇಳುವಂತೆ ಕೈವಲ್ಯಸ್ಥಾನತ್ಯಾಗಮಾತ್ರದಿಂದ ಚ್ಯವನ ಧರ್ಮತ್ವ ವಾಚೋಯುಕ್ತಿಯು ಸಂಗತವಾಗಿರುವುದರಿಂದಲೂ, ಪಂಚಾಗ್ನಿ ವಿದ್ಯಾನಿಷ್ಠನಿಗೂ ''ಸಏನಾನ್ಬ್ರಹ್ಮಗಮಯತಿ,, ಎಂಬುವಶ್ರುತಿಯಿಂದ ಬ್ರಹ್ಮಪ್ರಾಪ್ತಿಯು ಸಿದ್ಧವಾಗಿರುವುದರಿಂದ ತತ್ಕ್ರತು ನ್ಯಾಯದಿಂದ ಬ್ರಹ್ಮಾತ್ಮಕಸ್ವಾತ್ಮೋಪಾಸನವು ಪಂಚಾಗ್ನಿ ವಿದ್ಯಾನಿಷ್ಠನಿಗೂ ಅನುಷ್ಠೇಯವೆಂಬದಾಗಿ ಶ್ರೀಭಾಷ್ಯ ಗೀತಾಭಾಷ್ಯ ಕಂಠೋಕ್ತಿಯಿಂದಲೂ'' ನನಿವರ್ತಂತೇ'' ಎಂಬುವುದಕ್ಕೆ ಪೂರ್ವೋಕ್ತರೀತಿಯಾಗಿಯೇ ಅರ್ಥವಂ ತಿಳಿಯಬೇಕು. ... ॥೨೦॥

(ಗೀ॥ ವಿ॥) ತಸ್ಮಾದವ್ಯಕ್ತಾತ್- ಆಭೂತ ಗ್ರಾಮಕ್ಕಿಂತಲೂ, ಅನ್ಯಃ- ವಿಲಕ್ಷಣನಾಗಿಯೂ, ಭಾವಃ- ಸ್ವತಂತ್ರನಾಗಿಯೂ, ಪರಃ- ಉತ್ತಮನಾಗಿಯೂ, ಸನಾತನಃ- ಅನಾದಿಯಾಗಿಯೂ ಇರುವ, ಯಃ ಅವ್ಯಕ್ತಃ- ಯಾವ ಪರಮಾತ್ಮನು, ಸರ್ವೇಷು ಭೂತೇಷು- ಸಕಲ ಭೂತಗಳೂ, ನಶ್ಯತ್ಸು- ನಶಿಸಿಹೋದರೂ, ನವಿನಶ್ಯತಿ- ನಾಶಹೊಂದುವುದಿಲ್ಲವೋ, ಸತು- ಆಪರಮಾತ್ಮನೆ, ಅಕ್ಷರ ಇತ್ಯುಕ್ತಃ- ಅಕ್ಷರನೆಂದು ಹೇಳಲ್ಪಡುತ್ತಾನೆ. ತಂ- ಅವನನ್ನು, ಪರಮಾಂಗತಿಂ-ಹೊಂದಬೇಕಾದ ಶ್ರೇಷ್ಠವಾಗಿರುವ ಸ್ಥಾನವೆಂಬದಾಗಿ, ಆಹುಃ - ಜ್ಞಾನಿಗಳು ಹೇಳುವರು. ಯಂಪ್ರಾಪ್ಯ - ಯಾವದನ್ನುಹೊಂದಿ, ನನಿವರ್ತಂತೇ- ತಿರುಗುವುದಿಲ್ಲವೋ, ತತ್- ಅದು, ಮಮ ಪರಮಂಧಾಮ- ನನ್ನ ಶ್ರೇಷ್ಠವಾದ ಸ್ವರೂಪವು. ॥೨೦॥೨೧॥

ಶ್ಲೋ॥ ಪುರುಷ ಸ್ಸ ಪರಃಪಾರ್ಥ ಭಕ್ತ್ಯಾ ಲಭ್ಯ ಸ್ತ್ವ ನನ್ಯಯಾ।ಯಸ್ಯಾನ್ತಸ್ಸ್ಥಾನಿ ಭೂತಾನಿ ಯೇನ ಸರ್ವ ಮಿದಂತತಂ ॥ ... ... ॥೨೨॥

ಪ॥ ಪುರುಷಃ- ಸಃ- ಪರಃ- ಪಾರ್ಥ- ಭಕ್ತ್ಯಾ-ಲಭ್ಯಃ - ತು-ಅನನ್ಯಯಾ।ಯಸ್ಯ- ಅಂತಸ್ಸ್ಥಾನಿ- ಭೂತಾನಿ-ಯೇನ- ಸರ್ವಂ-ಇದಂ- ತತಂ॥

(ಅ॥ ರಾ॥ ಭಾ॥) ಜ್ಞಾನಿಯಾದವನಿಗೆ ಪ್ರಾಪ್ಯವಾದದ್ದೋ ಎಂದರೆ ಪೂರ್ವೋಕ್ತ ವಾದ ಐಶ್ವರ್ಯ ಕೈವಲ್ಯಗಳಿಗಿಂತಲೂ ಅತ್ಯಂತ ವಿಲಕ್ಷಣ ವೆನ್ನುತ್ತಾನೆ. ಹೇಪಾರ್ಥ- ಎಲೈ ಅರ್ಜುನನೆ, ಭೂತಾನಿ-ಸರ್ವಭೂತಗಳೂ, ಯಸ್ಯಾನ್ತಸ್ಸ್ಥಾನಿ-ಸರ್ವವ್ಯಾಪಕಸ್ವರೂ ಪನಾದ ಯಾವ ಸರ್ವೇಶ್ವರನ ಸ್ವರೂಪದಲ್ಲಿಯೂ ಸರ್ವ ವ್ಯಾಪಕವಾದ ವಿಶ್ವರೂಪಾದಿಶರೀ ರದಲ್ಲಿಯೂ ಅಡಗಿರುವುದೊ, ಯೇನ - ಯಾವ ಪರಮಪುರುಷನಿಂದ, ಸರ್ವಮಿದಂ - ಸಮಸ್ತವಾದ ಚೇತನಾಚೇತನಾತ್ಮಕವಾಗಿರುವ ಈಪ್ರಪಂಚವು, ತತಂ-ವ್ಯಾಪ್ತವಾಗಿ ರುವುದೊ, ಸಪರಃಪುರುಷಃ - ಆ ಪರಮಪುರುಷನು, ಅನನ್ಯಯಾ ಭಕ್ತ್ಯಾಲಭ್ಯಃ-ದೇವ ತಾಂತರ ಸಂಬಂಧ ಶೂನ್ಯವಾಗಿರುವ ಪರಭಕ್ತಿಯಿಂದ ಹೊಂದತಕ್ಕವನು. ಆದುದರಿಂದ ಜ್ಞಾನಿಯಾದವನ ಪ್ರಾಪ್ಯವು ಫಲಾಂತರಕ್ಕಿಂತಲೂ ಅತ್ಯಂತವಿಲಕ್ಷಣವೆಂದರ್ಥವು.೨೨॥

(ಶಂ॥ ಭಾ॥) ಹಿಂದಿನ ಶ್ಲೋಕದಲ್ಲಿ ಹೇಳಲ್ಪಟ್ಟ ಬ್ರಹ್ಮಸ್ವ ರೂಪವನ್ನು ಹೊಂದುವುದಕ್ಕೆ ಯೋಗ್ಯವಾದ ಉಪಾಯವನ್ನುಹೇಳು ತ್ತೇನೆ ಕೇಳೆಂದುಬೋಧಿಸುತ್ತಾನೆ. ಶರೀರದಲ್ಲಿರುವಂತವನೂ(ಅಥವಾ) ಸರ್ವ ಪರಿಪೂರ್ಣನೂ, ಆದುದರಿಂದ ಪುರುಷನೆಂದು ಹೇಳಲ್ಪಡುವಂತ ವನು (ಬ್ರಹ್ಮಸ್ವರೂಪವು) ಆತ್ಮವಿಷಯವಾದ ಜ್ಞಾನನಿಷ್ಠೆಯಿಂದ (ಸ್ವಸ್ವರೂಪಾನು ಭವಸಮಾಧಿಯಿಂದ) ಹೊಂದಲ್ಪಡುತ್ತಾನಲ್ಲದೆಸ್ವಾ ನುಭವ ಪ್ರಾಪ್ತಿಗೆ ಜ್ಞಾನನಿಷ್ಠೆಗಿಂತಲೂ ಬೇರೆಮಾರ್ಗವಿಲ್ಲವು. ಆಪರ ಮಾತ್ಮನಿಗೆ ಸರ್ವ ಪರಿಪೂರ್ಣತ್ವವು ಹೇಗೆಂದರೆ! ಆಕಾಶವು ಒಂದಾ ಗಿದ್ದರೂ ಘಟಾದ್ಯನೇಕ ವಸ್ತುಗಳಲ್ಲಿ ವ್ಯಾಪಿಸಿರುವಂತೆ ಆಪರಮಪು ಷನಿಂದ ಸರ್ವಪ್ರಪಂಚವೂ ವ್ಯಾಪ್ತವಾಗಿರುವುದೆಂದರಿಯಬೇಕು.॥೨೨॥

ಶ್ಲೋ॥ಯತ್ರಕಾಲೇ ತ್ವನಾವೃತ್ತಿ ಮಾವೃತ್ತಿಂ ಚೈವ ಯೋಗಿನಃ । ಪ್ರಯಾತಾ ಯಾಂತಿ ತಂಕಾಲಂ ವಕ್ಷ್ಯಾ ಮಿಭರತರ್ಷಭ॥ ... ॥೨೩॥

ಪ॥ ಯತ್ರ - ಕಾಲೇ - ತು- ಅನಾವೃತ್ತಿಂ - ಆವೃತ್ತಿಂ - ಚ- ಏವ- ಯೋಗಿ ನಃ॥ ಪ್ರಯಾತಾಃ- ಯಾನ್ತಿ - ತಂ - ಕಾಲಂ - ವಕ್ಷ್ಯಾಮಿ ಭರತರ್ಷಭ ।

ಅ || ಹೇ ಭರತರ್ಷಭ- ಎಲೈ ಅರ್ಜುನನೆ, ಯತ್ರಕಾಲೇತು- ಯಾವಕಾಲದಲ್ಲಿ, (ಶ್ರೀ|| ರಾ|| ಮ|| ಗೀ|| ವಿ||) ಕಾಲಾಭಿಮಾನಿ ದೇವತೆಗಳು ವಾಸಮಾಡುವ ಲೋಕಗಳಮಾರ್ಗವಾಗಿ, ಪ್ರಯಾತಾಃ - ಹೋಗಿರುವ, ಯೋಗಿನಃ - (ಶಂ|| ಶ್ರೀ) ರಾ||) ಜ್ಞಾನಯೋಗಿಗಳು, ಕರ್ಮಯೋಗಿಗಳು, ಅನಾವೃತ್ತಿಂ- ಜನ್ಮವಿಲ್ಲದೇಇರುವುದನ್ನು, ಆವೃತ್ತಿಂಚೈವ- ಪುನರ್ಜನ್ಮವನ್ನೂ, ಯಾಂತಿ- ಹೊಂದುತ್ತಾರೊ, ತಂಕಾಲಂ- ಆಕಾಲವನ್ನು, (ಶ್ರೀ|| ರಾ|| ಮ|| ಗೀ|| ವಿ||) ಕಾಲಾಭಿಮಾನಿ ದೇವತೆಗಳು ವಾಸಮಾಡುವ ಲೋಕಗಳ ಮಾರ್ಗವನ್ನು, ವಕ್ಷ್ಯಾಮಿ- ಹೇಳುವೆನು. ... ... ||೨೩||

(ಶಂ||ಭಾ||) ಶ್ರೀಕೃಷ್ಣನೆ, ವಿದ್ವಾಂಸನಿಗೆ ಗತಿಯೂ ಉತ್ಕ್ರಮಣವೂ ಇಲ್ಲವೆಂಬದಾಗಿ ಶ್ರುತಿಯಲ್ಲಿ ನಿಷೇಧಿಸಲ್ಪಟ್ಟಿರುವುದರಿಂದ ಜ್ಞಾನವು ಮಾರ್ಗವನ್ನಪೇಕ್ಷಿಸಿ ಫಲಪ್ರದ ವಾಗಲಾರದು. ಇದಲ್ಲದೆ ಪರಮಪುರುಷ ಪ್ರಾಪ್ತಿಯು ಜ್ಞಾನಾಧೀನವಾಗಿರುವುದೆಂದು ಹೇಳಲ್ಪಟ್ಟಿರುವುದು. ಆದುದರಿಂದ ಆಲೋಚಿಸಿದರೆ ಮಾರ್ಗವನ್ನುಹೇಳುವುದು ಉಚಿತವಾಗಿರಲಿಲ್ಲವೆಂದರೆ ಸಗುಣೋಪಾಸಕರಿಗೆ ಮಾರ್ಗೋಪದೇಶವು ಆವಶ್ಯಕವೆಂತಲೂ ಸಾರ್ಥಕವಾಗಿರುವುದೆಂತಲೂ ಶ್ರೀಕೃಷ್ಣನು ಈ ಶ್ಲೋಕದಿಂದ ಮಾರ್ಗೋಪದೇಶವನ್ನು ಮಾಡುತ್ತಾನೆ. ಮತ್ತು ಇದುವರೆಗೂ ಹೇಳಲ್ಪಟ್ಟ ಶ್ಲೋಕಾರ್ಥದಿಂದ ತಿಳಿಸಲ್ಪಟ್ಟವರಾಗಿಯೂ ಪ್ರಣವದಲ್ಲಿಡಲ್ಪಟ್ಟ ಬ್ರಹ್ಮ ಬುದ್ಧಿಯುಳ್ಳವರಾಗಿಯೂ ಕಾಲಾಂತರದಲ್ಲಿ ಮುಕ್ತಿಯನ್ನು ಹೊಂದುವಂತವರಾಗಿಯೂ ಇರುವ ಯೋಗಿಗಳಿಗೆ ಆ ಬ್ರಹ್ಮಪ್ರಾಪ್ತಿಗೋಸ್ಕರವಾಗಿ ಉತ್ತರಾಯಣಮಾರ್ಗವು ಹೇಳಲ್ಪಡಬೇಕಾಗಿರುವುದರಿಂದ ಬ್ರಹ್ಮಲೋಕಪ್ರಾಪಕವಾದಮಾರ್ಗವನ್ನು ತಿಳಿಸುವುದಕ್ಕಾಗಿ ಈಶ್ಲೋಕ ವಾರಂಭಿಸಲ್ಪಟ್ಟಿತು. ಆದರೂ ಎಲೈ ಶ್ರೀಕೃಷ್ಣನೆ ಆಮಾರ್ಗವು ಹೇಳಲ್ಪಡಬೇಕಾಗಿದ್ದರೆ ಅಧ್ಯಾತ್ಮಾದಿ ಭಾವದಿಂದ ಸಗುಣ ಬ್ರಹ್ಮವನ್ನು ಧ್ಯಾನ ಮಾಡುವಂತವರಿಗೆ ಆಬ್ರಹ್ಮಲೋಕಾ ವಾಪ್ತಿರೂಪವಾದ ಫಲಪ್ರಾಪ್ತಿಗಾಗಿ ಶಿರೋಗತವಾದ ನಾಡಿಗಳ ಸಂಬಂಧವುಳ್ಳ ದೇವಯಾನ ಮಾರ್ಗವು ಸೇವಿಸಲ್ಪಡತಕ್ಕದ್ದೆಂದು ಹೇಳಬೇಕಾಗಿರುವಲ್ಲಿ ಇದರಿಂದ ಕಾಲವನ್ನು ಹೇಳುವುದಕ್ಕೆ ಕಾರಣವೇನೆಂದು ಸಂದೇಹಿಸದೆ ಮೇಲೆ ಹೇಳಲ್ಪಟ್ಟ ವಿವಕ್ಷಿತಾರ್ಥಸಮರ್ಪಣಕ್ಕಾಗಿ ಹೇಳಲ್ಪಟ್ಟಿತೆಂದರಿಯಬೇಕು. (ಎಂದರೆ ಮಾರ್ಗಸಂಬಂಧಿತ್ವೇನ ಕಾಲವು ಹೇಳಲ್ಪಟ್ಟಿತೆಂದರಿಯಬೇಕು.) ಆದರೆ ದೇವಯಾ

ನಮಾರ್ಗ ಒಂದನ್ನೇ ಹೇಳಬೇಕಾಗಿರುವಲ್ಲಿ ಧೂಮಾದಿಮಾರ್ಗವನ್ನು ಕೂಡ ಹೇಳುವುದಕ್ಕೆ ಕಾರಣ ವೇನೆಂದು ಸಂದೇಹಪಡದೆ ದೇವಯಾನಮಾರ್ಗವು ಅತ್ಯಂತ ಶ್ರೇಷ್ಠವೆಂದು ಸ್ತುತಿಸುವುದಕ್ಕಾಗಿ ( ಪಿತೃಯಾನಮಾರ್ಗವು ಪುನರಾವೃತ್ತಿಯು ನ್ನುಂಟುಮಾಡುತ್ತದಾದುದರಿಂದ ಅದಕ್ಕಿಂತಲೂ ಪುನರಾವೃತ್ತಿ ಶೂನ್ಯವಾದ ದೇವಯಾನಮಾರ್ಗವು ಶ್ರೇಷ್ಠವೆಂದು ಸ್ತೋತ್ರಮಾಡುವುದಕ್ಕಾಗಿ) ಹೇಳಲ್ಪಟ್ಟಿತೆಂದರಿಯಬೇಕು. ಸಮಾಧಿನಿಷ್ಠರಾದ ಸನ್ಯಾಸಿಗಳು ಯಾವಕಾಲದಲ್ಲಿ ಶರೀರ ಪರಿತ್ಯಾಗವನ್ನು ಮಾಡಿ ಪುನರ್ಜನ್ಮವಂ ಹೊಂದುವುದಿಲ್ಲವೋ, 'ಕರ್ಮಯೋಗೇನಯೋಗಿನಾಂ, (೩॥೩) ಎಂಬೀಪ್ರಕಾರವಾಗಿರುವ ಕರ್ಮಯೋಗಿಗಳು ಯಾವಕಾಲದಲ್ಲಿ ಶರೀರ ಪರಿತ್ಯಾಗವಂಮಾಡಿ ಪುನರ್ಜನ್ಮವನ್ನು ಹೊಂದುವರೊ, ಅಂತಹ ಕಾಲವಿಭಾಗವನ್ನು ನಿನಿಗುಪದೇಶಿಸುವೆನು. ... ... ॥೨೩॥

(ರಾ॥ ಭಾ॥) ಅನಂತರದಲ್ಲಿ ಆತ್ಮಯಾಥಾತ್ಮ್ಯವೇದಿಯಾದವನಿಗೂ (ಪಂಚಾಗ್ನಿವಿದ್ಯಾನಿಷ್ಠನಾದ ಕೇವಲಾತ್ಮಾನುಭವಪೂರ್ವಕ ಬ್ರಹ್ಮಪ್ರಾಪ್ತಿ ಕಾಮುನಿಗೂ) ಪರಮಪುರುಷ ನಿಷ್ಠನಿಗೂ ಸಾಧಾರಣವಾದ ಅರ್ಚಿರಾದಿ ಗತಿಯನ್ನು ಹೇಳುತ್ತಾರೆ. ಪುನರಾವೃತ್ತಿ ರಹಿತವಾದ ಅರ್ಚಿರಾದಿಗತಿಯು ಇವರಿಬ್ಬರಿಗೂ ಉಂಟೆಂದು ಶ್ರುತಿಯುಹೇಳುತ್ತದೆ. ಅದು ಎಲ್ಲಿಂದರೆ, ಪಂಚಾಗ್ನಿವಿದ್ಯೆಯಲ್ಲಿ "ತದ್ಯಇತ್ಥಂವಿದುರ್ಯೇಚೇಮೇರಣ್ಯೇಶ್ರದ್ಧಾತಪಇತ್ಯುಪಾಸತೆ ತೇರ್ಚಿಷಮಭಿಸಂಭವಂತ್ಯರ್ಚಿಷೋಹಃ,, ಎಂಬುವುದಾಗಿ ಈಇಬ್ಬರಿಗೂ ಅರ್ಚಿರಾದಿಮಾರ್ಗವೂ ಆಪ್ರಕಾರವಾಗಿ ಅರ್ಚಿರಾದಿ ಮಾರ್ಗದಿಂದ ಹೋದವನಿಗೆ "ಸಏನಾನ್ಬ್ರಹ್ಮಗಮಯತಿ ಏತೇನ ಪ್ರತಿಪದ್ಯಮಾನಾಇಮಂಮಾನವಮಾವರ್ತಂನಾವರ್ತಂತೆ,, ಎಂಬದಾಗಿ ಪರಬ್ರಹ್ಮಪ್ರಾಪ್ತಿಯೂ ಅಪುನರಾವೃತ್ತಿಯೂ ಕೇಳಲ್ಪಟ್ಟಿರುವುದು. ಆದರೆ "ತದ್ಯಇತ್ಥಂವಿದುಃ,,ಎಂಬುವಗತಿ ಶ್ರುತಿಯು ಪ್ರಜಾಪತಿವಾಕ್ಯದಲ್ಲಿ ಶ್ರುತವಾದ ಪರವಿದ್ಯೆಗೆ ಅಂಗವಾದ ಆತ್ಮಪ್ರಾಪ್ತಿಯನ್ನು ಕುರಿತು ಹೇಳಲ್ಪಟ್ಟಿರುವುದೆಂದರೆ ಅದು ಯುಕ್ತವಲ್ಲವು. ಆಪ್ರಕಾರವಾಗಿ ಶ್ರುತವಾಗಿರುವ ಪಕ್ಷದಲ್ಲಿ "ಏಕೆ ಮೆಉರಣ್ಯೇಶ್ರದ್ಧಾತಪಇತ್ಯುಪಾಸತೆ,, ಎಂಬದಾಗಿ ಪರವಿದ್ಯೆಯು ಪೃಥ

ಕ್ಕಾಗಿ ಪಠಿತವಾದದ್ದು ವ್ಯರ್ಥವಾಗುವುದು. ಪಂಚಾಗ್ನಿ ವಿದ್ಯೆಯಲ್ಲಿ ಯೂ, "ಇತಿತುಪಂಚಮ್ಯಾಮಾಪಃಪುರುಷವಚಸೋಭವಂತಿ,,ಎಂಬು ವುದಾಗಿಯೂ"ರಮಣೀಯಚರಣಾಃಕಪೂಯಚರಣಾಃ,,ಎಂಬುವುದಾ ಗಿಯೂ ಪುಣ್ಯಪಾಪಗಳಿಂದುಂಟಾಗುವ ಮನುಷ್ಯಾದಿಭಾವವು ಭೂತಾಂ ತರಗಳಿಂದ ಕೂಡಿರುವ ಜಲ (ನೀರು) ಕ್ಕಲ್ಲದೆ ಆತ್ಮನಿಗಲ್ಲವು. ಆತ್ಮನಿ ಗೂ ಇವುಗಳೊಡನೆ ಸೇರಿರುವುದುಮಾತ್ರವೆ ಯೆಂಬದಾಗಿ ಚಿದಚಿತ್ತು ಗಳ ವಿವೇಕವನ್ನು ಹೇಳಿ "ತದ್ಯ ಇತ್ಥಂವಿದುಃ ತೇರ್ಚಿಷಮಭಿಸಂ ಭವಂತಿ ಇಮಂಮಾನವ ಮಾವರ್ತಂನಾವರ್ತಂತೆ,, ಎಂಬುವುದಾಗಿ (ವಿಭಾಗಿಸಿ ಹೇಳಲ್ಪಟ್ಟ) ಚಿದಚಿತ್ತುಗಳನ್ನು ಕ್ರಮವಾಗಿ ಹೊಂದಬೇ ಕೆಂಬದಾಗಿಯೂ ಬಿಡಬೇಕೆಂಬದಾಗಿಯೂ ಯಾರಾದರೆ ಈರೀತಿಯಾಗಿ ತಿಳಿದಿರುವರೊ ಅವರು ಅರ್ಚಿರಾದಿಗತಿಯಿಂದ ಹೋಗುವರು. ಪುನಶ್ಚ ಹಿಂದಕ್ಕೆ ತಿರಗಲಾರರೆಂದು ಹೇಳಿದಂತೆ ಕಾಣಲ್ಪಡುವುದು. (ಆತ್ಮ ಜ್ಞಾನಿಗೂ (ಪಂಚಾಗ್ನಿ ವಿದ್ಯಾನಿಷ್ಠನಿಗೂ) ಬ್ರಹ್ಮಜ್ಞಾನಿಗೂ "ಸಏ ನಾನ್ಬ್ರಹ್ಮಗಮಯತಿ" ಎಂಬುವುದಾಗಿ ಬ್ರಹ್ಮಪ್ರಾಪ್ತಿ ವಚನವಿರು ವುದರಿಂದ ಇಲ್ಲಿ ಅಚಿದ್ವಿಯುಕ್ತವಾದ ಆತ್ಮವಸ್ತುವು ಬ್ರಹ್ಮಕ್ಕೆ ಶರೀ ರವಾಗಿರುವುದರಿಂದ ಬ್ರಹ್ಮಕ್ಕೆ ಶೇಷಭೂತವಾಗಿರುವುದೆಂತಲೆ ತಿಳಿಯು ತಕ್ಕದ್ದಾಗಿರುವುದು.ತತ್ಕ್ರತುನ್ಯಾಯದಿಂದಲೂ ಆಪ್ರಕಾರವೇ ಏರ್ಪ ಟ್ಟಿರುವುದು. ಬ್ರಹ್ಮಕ್ಕೆನೇ ಶೇಷಭೂತವಾಗಿರುವುದೆಂಬುವ ವಿಷ ಯವು,, ಈಆತ್ಮನಿತಿಷ್ಠನ್ ಯಸ್ಯಾತ್ಮಾಶರೀರಂ,, ಇತ್ಯಾದಿ ಶ್ರುತಿ ಗಳಲ್ಲಿ ಪ್ರಸಿದ್ಧವಾಗಿರುವುದು. ಇಲ್ಲಿ ಹಗಲನ್ನು ಮೊದಲು ಮಾಡಿ ಕೊಂಡು ಸಂವತ್ಸರಪರ್ಯಂತವಾದ ಕಾಲಾಭಿಮಾನಿ ದೇವತೆಗಳಿಂದ ಪೂರ್ಣವಾಗಿರುವುದರಿಂದ ಮಾರ್ಗವನ್ನಿಲ್ಲಿ ಕಾಲಶಬ್ದದಿಂದ ತೋರಿಸು ತ್ತಾರೆಂದರಿಯಬೇಕು. ಭರತರ್ಷಭ-ಎಲೈ ಅರ್ಜುನನೆ, ಯತ್ರಕಾಲೆ- ಯಾವದೊಂದು ಅಹಃ (ಹಗಲು) ಪಕ್ಷಾದಿ ಕಾಲಾಭಿಮಾನಿ ದೇವತಾ- ಪ್ರಚುರವಾದ ಅರ್ಚಿರಾದಿ ಮಾರ್ಗದಲ್ಲಿ, ಪ್ರಯಾತಾಃ-ದೇಹನ್ಯಾಸವಂ ಮಾಡಿಹೋಗಿರುವ, ಯೋಗಿನಃ-ಭಕ್ತಿಯೋಗನಿಷ್ಠರು. ಅನಾವೃತ್ತಿಂ- ಪುನರಾವೃತ್ತಿ ಇಲ್ಲದಿರುವಿಕೆಯನ್ನೂ, ಯತ್ರಕಾಲೇ- ಯಾವದೊಂದು ಧೂಮಾದಿಮಾರ್ಗದಲ್ಲಿ, ಪ್ರಯಾತಾಃ- ಹೋಗಿರುವ ಪುಣ್ಯಕರ್ಮಿಗಳು,

(ಯಜ್ಞಾನುಷ್ಠಾನ ತಟಾಕ ನಿರ್ಮಾಣಾದಿ ಪುಣ್ಯ ಕರ್ಮಾನುಷ್ಠಾನವಂ ಮಾಡತಕ್ಕವರು) ಆವೃತ್ತಿಂಚೈವ-ಪುನರಾವೃತ್ತಿಯನ್ನೂ, ಯಾಂತಿ-ಹೊಂದುತ್ತಾರೋ, ತಂಕಾಲಂ- ಅಂತಹ ಕಾಲಾಭಿಮಾನಿ ದೇವತಾಪ್ರಚುರವಾದ ಮಾರ್ಗವನ್ನು, ವಕ್ಷ್ಯಾಮಿ- ನಿನಿಗುಪದೇಶಿಸುವೆನುಕೇಳು. (ಇಲ್ಲಿ ಪಂಚಾಗ್ನಿವಿದ್ಯಾಪ್ರಸ್ತಾಪವು ಪ್ರಾಪ್ತವಾದುದರಿಂದ ಅದರ ವಿಷಯವನ್ನು ಸ್ವಲ್ಪಮಟ್ಟಿಗೆ ವಿವರಿಸುವೆವು. ಈಪಂಚಾಗ್ನಿ ವಿದ್ಯೆಯೆಂಬುವುದು ವೇದಾಂತಪ್ರಸಿದ್ಧಗಳಾದ"ಈಶಾವಾಸ್ಯವಿದ್ಯಾ ||೧|| ಪರಮಪುರುಷವಿದ್ಯಾ ||೨|| ಸದ್ವಿದ್ಯಾ ||೩|| ಆನಂದಮಯವಿದ್ಯಾ ||೪|| ಅಂತರಾದಿತ್ಯವಿದ್ಯಾ ||೫|| ಆಕಾಶವಿದ್ಯಾ ||೬|| ಪ್ರಾಣವಿದ್ಯಾ ||೭|| ಪರಂಜ್ಯೋತಿವಿದ್ಯಾ ||೮|| ಪ್ರತರ್ದನವಿದ್ಯಾ ||೯|| ಶಾಂಡಿಲ್ಯವಿದ್ಯಾ||೧೦|| ನಾಚಿಕೇತವಿದ್ಯಾ ||೧೧|| ಉಪಕೋಸಲವಿದ್ಯಾ ||೧೨|| ಉದ್ದಾಲಕಾಂತರ್ಯಾಮಿವಿದ್ಯಾ||೧೩||ಅಕ್ಷರಪರವಿದ್ಯಾ||೧೪||ವೈಶ್ವಾನರವಿದ್ಯಾ ||೧೫|| ಭೂಮವಿದ್ಯಾ||೧೬||ಗಾರ್ಗ್ಯಕ್ಷರವಿದ್ಯಾ||೧೭||ಸತ್ಯಕಾಮವಿದ್ಯಾ||೧೮|| ದಹರವಿದ್ಯಾ||೧೯||ಅಂಗುಷ್ಠಪ್ರಮಿತವಿದ್ಯಾ||೨೦||ಮಧುವಿದ್ಯಾ ||೨೧|| ಸಂವರ್ಗವಿದ್ಯಾ ||೨೨|| ಅಜಾವಿದ್ಯಾ ||೨೩|| ಜ್ಯೋತಿಷಾಂಜ್ಯೋತಿರ್ವಿದ್ಯಾ ||೨೪|| ಬಾಲಕಿವಿದ್ಯಾ ||೨೫|| ಮೈತ್ರೇಯಿವಿದ್ಯಾ ||೨೬|| ರುದ್ರವಿದ್ಯಾ||೨೭||ಚತುರ್ಮುಖವಿದ್ಯಾ ||೨೮|| ಉಷಸ್ತಿಕಹೋಳವಿದ್ಯಾ||೨೯|| ಪಂಚಾಗ್ನಿವಿದ್ಯಾ ||೩೦|| ಆದಿತ್ಯಮಂಡಲಸ್ಥ ಸತ್ಯಬ್ರಹ್ಮವಿದ್ಯಾ||೩೧|| ಅಕ್ಷಿಸ್ಥಸತ್ಯಬ್ರಹ್ಮವಿದ್ಯಾ ||೩೨|| ಎಂಬೀ ( ೩೨ ) ಬ್ರಹ್ಮವಿದ್ಯೆಗಳಲ್ಲಿ ಒಂದಾಗಿರುವುದು. ಈ ಪಂಚಾಗ್ನಿವಿದ್ಯೆಯಲ್ಲಿ ಪ್ರಕೃತಿ ವಿಲಕ್ಷಣವಾದ ಪರಿಶುದ್ಧಾತ್ಮಸ್ವರೂಪವನ್ನು ಬ್ರಹ್ಮಾತ್ಮಕವಾಗಿ ಉಪಾಸನೆಮಾಡಬೇಕೆಂದು ವ್ಯವಸ್ಥಿತವಾಗಿರುವುದು. ಈ ವಿದ್ಯಾನುಷ್ಠಾನಕ್ಕೆ ಸ್ವಾತ್ಮಾವಲೋಕನ ಪೂರ್ವಕವಾದ ಪರಿಪೂರ್ಣ ಬ್ರಹ್ಮಾನುಭವವೇ ಫಲವಾಗಿರುವುದು. ಮಧುವಿದ್ಯಾನಿಷ್ಠನಿಗೆ ವಸ್ವಾದಿ ಪದಪ್ರಾಪ್ತಿಯು ಅವಾಂತರ ಫಲವಾದಂತೆ ಈಪಂಚಾಗ್ನಿ ವಿದ್ಯಾನಿಷ್ಠನಿಗೆ ಸ್ವಾತ್ಮಾನುಭವವು ಅವಾಂತರಫಲವಾಗಿರುವುದು. ಈಪಂಚಾಗ್ನಿ ವಿದ್ಯೆಯುಛಾಂದೋಗ್ಯದಲ್ಲಿ"ಶ್ವೇತಕೇತುರ್ಹಾರುಣೇಯಃ ಪಾಂಚಾಲಾನಾಂ ಸಮಿತಿಮೇಯಾಯ" ಎಂದಾರಂಭಿಸಿ ಪಠಿತವಾಗಿರುವುದು. ಇದರತಾತ್ಪರ್ಯವೇ

ನೆಂದರೆ? ಉದ್ದಾಲಕರ ಪುತ್ರನಾಗಿ ಸದ್ವಿದ್ಯೆಯಲ್ಲಿ ಶಿಷ್ಯನಾದ ಶ್ವೇತ ಕೇತುವೆಂಬ ಋಷಿಯು ಪ್ರವಾಹಣರೆಂಬ ನಾಮವುಳ್ಳ ಪಾಂಚಾಲ ದೇಶ ರಾಜರ ಸದಸ್ಸಿಗೆ ಹೋದನು. ಆಶ್ವೇತ ಕೇತುವನ್ನು ಕುರಿತು ಆರಾಜರು ಐದುಪ್ರಶ್ನೆಗಳನ್ನು "ವೇತ್ಥಯದಿ ತೋಧಿಪ್ರಜಾಃಪ್ರ ಯಂತಿ,, ಇತ್ಯಾದಿಗಳಿಂದ ಮಾಡಿದರು. ಅವು ಯಾವವೆಂದರೆ? (೧) ಈಲೋಕದಿಂದ ಪ್ರಜೆಗಳು ಪರಲೋಕಕ್ಕೆ ಹೋಗುವ ಪ್ರಕಾರವನ್ನು ನೀವು ತಿಳಿದಿರುತ್ತೀರೋ? (೨) ಅಲ್ಲಿಂದಿಲ್ಲಿಗೆ ಬರುವಪ್ರಕಾರವು ನಿಮಗೆ ತಿಳಿದಿರುತ್ತದೆಯೋ? (೩) ದೇವಯಾನಕ್ಕೂ ಪಿತೃಯಾನಕ್ಕೂ ವೈಲ ಕ್ಷಣ್ಯವಂ ತಿಳಿದಿರುತ್ತೀರೋ? (೪) ಸ್ವರ್ಗಲೋಕವು ಪೂರ್ಣವಾಗದೆ ಇರುವುದಕ್ಕೆ ಕಾರಣವಂಬಲ್ಲರಾ? (೫) ಪಂಚಮಾಹುತಿಯಲ್ಲಿ ಅಪ್ಪು ಗಳಿಗೆ ಪುರುಷವಚಸ್ತ್ವವನ್ನು ತಿಳಿದಿರುತ್ತೀರಾ? ಎಂಬಿದೆ (೫) ಪ್ರಶ್ನೆ ಗಳು. ಇದಕ್ಕೆ ಪ್ರತ್ಯುತ್ತರ ವಾಕ್ಯಗಳನ್ನು ಶಾರೀರಕಸೂತ್ರದ ತೃತೀ ಯಾಧ್ಯಾಯ ಪ್ರಥಮಪಾದಾದಿಗಳಲ್ಲಿ ಸ್ಪಷ್ಟವಾಗಿ ಕಾಣಬಹುದು. ಗ್ರಂಥವಿಸ್ತರ ಭಯದಿಂದ ಸಂಕ್ಷೇಪವಾಗಿ ಅವಿದ್ಯಾಪ್ರಸ್ತಾಪಮಾತ್ರವೆ ಇಲ್ಲಿ ಮಾಡಲ್ಪಟ್ಟಿತು. ಇಂತಹ ಬ್ರಹ್ಮವಿದ್ಯಾನಿಷ್ಠನಿಗೂ ಈಶ್ಲೋಕ ದಲ್ಲಿ ಅಪುನರಾವೃತ್ತಿಯನ್ನು ಹೇಳಿರುವಂತೆ ತಿಳಿಯಬೇಕು. ॥೨೩॥

(ಈ ಶ್ಲೋಕದ ಭಾಷ್ಯಾವತಾರಿಕೆಯಲ್ಲಿ ಆತ್ಮ ಯಥಾತ್ಮ್ಯವಿ ದಃ ಎಂಬ ಪದದಿಂದ ಆತ್ಮಾನು ಸಂಧಾಯಿಯಾದ ಕೇವಲನಿಗೂ ಅರ್ಚಿ ರಾದಿಗತಿಯು ಶ್ರುತವಾಗಿರುವಂತೆ ತೋರಿರುವ ವಿಷಯದಲ್ಲಿ ಶ್ರೀಮ ತ್ತಾತ್ಪರ್ಯ ಚಂದ್ರಿಕಾನ್ಯಾಯ ಸಿದ್ಧಾಂಜನಾದಿ ಪ್ರತಿಪಾದಿತ ವಿಷಯ ಗಳನ್ನು ಸ್ವಲ್ಪಮಟ್ಟಿಗೆ ವಿವರಿಸುವೆವು) ಸ್ವಾತ್ಮಾನು ಸಂಧಾನರೂಪ ವಾದ ಕೈವಲ್ಯವು ಮೋಕ್ಷಕ್ಕಿಂತಲೂ ವ್ಯತಿರಿಕ್ತವಾಗಿಧೆಯೋ? ಇಲ್ಲವೆ? ಎಂಬ ಸಂದೇಹದಲ್ಲಿ ಮೋಕ್ಷಕ್ಕಿಂತಲೂ ವ್ಯತಿರಿಕ್ತವೆಂದು ಕೆಲವರು ವ್ಯತಿರಿಕ್ತವಲ್ಲವೆಂದು ಕೆಲವರೂ ಹೇಳುವರು. ಈ ವಿಷಯದಲ್ಲಿ ಪೂರ್ವ ಪಕ್ಷವನ್ನು ಮೊದಲು ಉಪನ್ಯಾಸಮಾಡಿ ಅನಂತರದಲ್ಲಿ ಸಿದ್ಧಾಂತೋ ಪನ್ಯಾಸ ಮಾಡಲ್ಪಡುವುದು.

"ಶ್ರೀಮದ್ಗೀತಾರ್ಥಸಂಗ್ರಹದ "ಐಶ್ವರ್ಯಾಕ್ಷರ ಯಾಥಾತ್ಮ್ಯ ಭಗವಚ್ಚರಣಾರ್ಥಿನಾಂ । ವೇದ್ಯೋಪಾದೇಯಭಾವಾನಾಮಷ್ಟಮೇ

ಭೇದೇಉಚ್ಯತೇ,, ಎಂಬುವ ಶ್ಲೋಕದಲ್ಲಿ ಭಗವಚ್ಚರಣವೆಂಬುವ ಮೋಕ್ಷಕ್ಕಿಂತಲೂ ಭಿನ್ನವಾದ ಅಕ್ಷರ ಯಾಥಾತ್ಮ್ಯವೆಂಬುವ ಕೈವಲ್ಯವನ್ನು ಶ್ರೀಭಗವದ್ಗೀತಾ (೮) ನೇ ಅಧ್ಯಾಯದಲ್ಲಿ ಶ್ರೀಯಾಮುನಾಚಾರ್ಯರು ನಿರೂಪಿಸಿರುವುದರಿಂದಲೂ, ಮತ್ತು ಅವರೆ ಚತುಶ್ಶ್ಲೋಕಿಯಲ್ಲಿಯೂ "ಸಂಸೃತ್ಯ ಕ್ಷರವೈಷ್ಣವಾಧ್ವಸು ನೃಣಾಂ" ಎಂಬುವ ಸ್ಥಲದಲ್ಲಿ ವೈಷ್ಣವಾಧ್ವವೆಂಬುವ ಮೋಕ್ಷಕ್ಕಿಂತಲೂ ಅಕ್ಷರವೆಂಬುವ ಕೈವಲ್ಯವನ್ನು ಬೇರೆಯಾಗಿ ಉದಹರಿಸಿರುವುದರಿಂದಲೂ ಅವರ ಸಿದ್ಧಾನ್ತಾನುಸಾರಿಗಳಾದ ಶ್ರೀಭಗವದ್ರಾಮಾನುಜಾಚಾರ್ಯರು "ಚತುರ್ವಿಧಾಭಜನ್ತೇಮಾಂ" (೭॥ ೧೬॥) ಎಂಬುವ ಶ್ಲೋಕದಲ್ಲಿ ಜಿಜ್ಞಾಸುಪದಕ್ಕೆ ಪ್ರಕೃತಿವಿಯುಕ್ತವಾದ ಕೇವಲಾತ್ಮಸ್ವರೂಪವನ್ನೆ ಹೊಂದಲಪೇಕ್ಷೆಯುಳ್ಳವನೆಂದು ವ್ಯಾಖ್ಯಾನ ಮಾಡಿರುವುದರಿಂದಲೂ, ಮತ್ತು ಶ್ರೀಗೀತಾಭಾಷ್ಯದ ಅಷ್ಟಮಾಧ್ಯಾಯಾರಂಭದಲ್ಲಿ ಸಪ್ತಮಾಧ್ಯಾಯಾರ್ಥಗಳನ್ನು ಸಂಗ್ರಹಿಸುವ ಕಾಲದಲ್ಲಿ ಅಕ್ಷರ ಯಾಥಾತ್ಮ್ಯವನ್ನು ಭಗವತ್ಪ್ರಾಪ್ತಿಯನ್ನೂ ಬೇರೆಯಾಗಿ ಹೇಳಿ ಹಾಗೆಯೆ "ಕೈವಲ್ಯಾರ್ಥಿಗಳಿಗೆ ಸ್ಮರಣಪ್ರಕಾರವನ್ನು ಹೇಳುತ್ತಾನೆ.,, ಎಂಬದಾಗಿ "ಯದಕ್ಷರಂವೇದವಿದೋವದಂತಿ" (೮॥ ೧೧) ಎಂಬುವ ಶ್ಲೋಕಕ್ಕೆ ಅವತಾರಿಕೆಯಂ ಕೊಟ್ಟು "ಸರ್ವದ್ವಾರಾಣಿ,, (೮॥ ೧೨॥ ೧೩) ಎಂಬೀಶ್ಲೋಕಗಳ ಭಾಷ್ಯದಲ್ಲಿ ಪ್ರಕೃತಿ ವಿಯುಕ್ತನಾಗಿಯೂ ಮತ್ಸಮಾನಾಕಾರನಾಗಿಯೂ ಇರುವ ಪುನರಾವೃತ್ತಿ ರಹಿತವಾದ ಆತ್ಮನನ್ನು ಹೊಂದುತ್ತಾನೆಂಬದಾಗಿ ಹೇಳಿರುವುದರಿಂದಲೂ, ಅನಂತರದಲ್ಲಿ "ಐಶ್ವರ್ಯಾರ್ಥಿಗೂ ಕೈವಲ್ಯಾರ್ಥಿಗೂ ತಮ್ಮಗಳ ಪ್ರಾಪ್ಯಾನುಗುಣವಾದ ಭಗವದುಪಾಸನ ಪ್ರಕಾರವು ಹೇಳಲ್ಪಟ್ಟಿತು. ಅನಂತರ ಜ್ಞಾನಿಯಾದ ಮೋಕ್ಷಾರ್ಥಿಯಾದವನಿಗೆ ಉಪಾಸನ ಪ್ರಕಾರವನ್ನು ಹೇಳಲುಪಕ್ರಮಿಸುತ್ತಾನೆ,, ಎಂಬದಾಗಿ "ಅನನ್ಯ ಚೇತಾಸ್ಸತತಂ,, (೮॥೧೪॥) ಎಂಬೀಶ್ಲೋಕಕ್ಕೆ ಅವತಾರಿಕೆಯಂ ಕೊಟ್ಟಿರುವುದರಿಂದಲೂ, ಮುಂದೆ ಅಧ್ಯಾಯಶೇಷದಿಂದ ಜ್ಞಾನಿಗೂ ಕೈವಲ್ಯಾರ್ಥಿಗೂ ಅಪುನರಾವೃತ್ತಿಯನ್ನೂ ಐಶ್ವರ್ಯಾರ್ಥಿಗೆ ಪುನರಾವೃತ್ತಿಯನ್ನೂ ಹೇಳುತ್ತಾರೆಂದು, "ಮಾಮುಪೇತ್ಯ,, (೮॥ ೧೫+೧೯॥) ಎಂಬೀ ಐದು,, ಶ್ಲೋಕಗಳಿಗೆ

ವ್ಯಾಖ್ಯಾನವಂ ಮಾಡಿ ಕೈವಲ್ಯವನ್ನು ಹೊಂದಿದವರಿಗೆ ಅಪುನರಾವೃತ್ತಿಯನ್ನು ತಿಳಿಸುತ್ತಾರೆಂದು "ಪರಸ್ತಸ್ಮಾತ್ತುಭಾವೋನ್ಯಃ,, (೮॥೨೧॥) ಎಂಬುವ ಶ್ಲೋಕಗಳಿಗೆ ವ್ಯಾಖ್ಯಾನಮಾಡಿ ಅನಂತರದಲ್ಲಿ ಜ್ಞಾನಿಗೆ ಪ್ರಾಪ್ಯವಾದದ್ದು ಕೈವಲ್ಯಕ್ಕಿಂತಲೂ ವಿಲಕ್ಷಣವಾಗಿರುವುದೆಂದು ಹೇಳಿ "ಪುರುಷಸ್ಸಪರಃಪಾರ್ಥ,, (೮॥೨೨॥) ಎಂಬಶ್ಲೋಕವು ವ್ಯಾಖ್ಯಾತವಾಗಿರುವುದರಿಂದಲೂ, "ಯತ್ರಕಾಲೇತ್ವನಾವೃತ್ತಿಮಾವೃತ್ತಿಂಚೈವಯೋಗಿನಃ,, (೮॥೨೩॥) ಎಂಬ ಶ್ಲೋಕ ಭಾಷ್ಯಾರಂಭದಲ್ಲಿ "ಕೇವಲನಿಗೂ ಮುಕ್ತನಿಗೂ ಸಾಧಾರಣವಾದ ಅರ್ಚಿರಾದಿಗತಿಯನ್ನು ಹೇಳುತ್ತಾನೆಂದು ಅವತಾರಿಕೆಯನ್ನುಕೊಟ್ಟು ಅಧ್ಯಾಯಶೇಷಕ್ಕೆ ಭಾಷ್ಯಮಾಡುವುದರಿಂದಲೂ, "ಯೇತ್ವಕ್ಷರಮನಿರ್ದೇಶ್ಯಂ,, (೧೨॥೩॥) ಎಂಬೀಶ್ಲೋಕ ವ್ಯಾಖ್ಯಾನದಲ್ಲಿ "ತೇಪಿಮಾಂಪ್ರಾಪ್ನುವಂತ್ಯೇವ,, ಎಂಬುವ ವಾಕ್ಯಕ್ಕೆ ಮತ್ಸಮಾನಾಕಾರನಾಗಿಯೂ ಅಸಂಸಾರಿಯಾಗಿಯೂ ಇರುವ ಆತ್ಮನನ್ನು ಹೊಂದುತ್ತಾನೆಂದು ಭಾಷ್ಯಮಾಡಲ್ಪಟ್ಟಿರುವುದರಿಂದಲೂ, ಕೇವಲ ಸ್ವಾತ್ಮಾನಂದಾನುಭವರೂಪಮಾಗಿಯೂ ಅರ್ಚಿರಾದಿ ಮಾರ್ಗಗಮನ ಪ್ರಾಪ್ಯವಾಗಿಯೂ ಪುನರಾವೃತ್ತಿ ಶೂನ್ಯವಾಗಿಯೂ ಇರುವ ಮೋಕ್ಷಾತಿರಿಕ್ತವಾದ ಕೈವಲ್ಯ ಅಕ್ಷರ ಆತ್ಮಯಾಥಾತ್ಮ್ಯ ಶಬ್ದಗಳಿಂದ ವ್ಯವಹರಿಸಲ್ಪಡುವ ಮೋಕ್ಷವು ಸಂಪ್ರದಾಯ ಸಿದ್ಧವಾಗಿರುವುದು. ಆದರೆ "ಚತುರ್ವಿಧಾ ಮಮಜನಾಭಕ್ತಾ ಏವಹಿತೇಸ್ಮೃತಾಃ । ತೇಷಾಮೇಕಾಂತಿನಶ್ಶ್ರೇಷ್ಠಾಸ್ತೇಚೈವಾನನ್ಯದೇವತಾಃ ॥ ಅಹಮೇವಗತಿಸ್ತೇಷಾಂನಿರಾಶೀಃಕರ್ಮಕಾರಿಣಾಂ । ಯೇತುಶಿಷ್ಟಾಸ್ತ್ರಯೊಭಕ್ತಾಃ ಫಲಕಾಮಾಹಿತೇಮತಾಃ ॥ ಸರ್ವೇಚ್ಯವನಧರ್ಮಾಣಃ ಪ್ರತಿಬುದ್ಧಸ್ತುಮೋಕ್ಷಭಾಕ್ ॥ ಎಂಬೀ ಪ್ರಮಾಣಗಳಲ್ಲಿ ಕೇವಲನಿಗೆ ನಶ್ವರತ್ವವು ಹೇಳಲ್ಪಟ್ಟಿರುವುದರಿಂದ ಈಮೋಕ್ಷವನ್ನಂಗೀಕರಿಸಬಹುದೊ, ಎಂದರೆ ಈನಶ್ವರತ್ವ ವಚನಕ್ಕೆ ಬ್ರಹ್ಮಾನಂದಕ್ಕಿಂತಲೂ ಆತ್ಮಾನಂದವು ಅಪಕೃಷ್ಟವೆಂಬುವುದರಲ್ಲಿಮಾತ್ರವೇ ತಾತ್ಪರ್ಯವನ್ನಂಗೀಕರಿಸಬೇಕಲ್ಲದೆ ಈಮೋಕ್ಷವನ್ನೆ ಅಂಗೀಕರಿಸಕೂಡದೆಂದು ಹೇಳಕೂಡದು. ಆದರೂ "ಯೋಗಿನಾಮಮೃತಂಸ್ಥಾನಂಸ್ವಾತ್ಮಸಂತೋಷಕಾರಿಣಾಂ। ಏಕಾಂ

ತಿನಸ್ಸದಾಬ್ರಹ್ಮಧ್ಯಾಯಿನಸೊಂಯೋಗಿನೊಹಿಯೆ । ತೇಷಾಂತತ್ಪರಮಂ ಸ್ಥಾನಂಯದ್ವೈಪಶ್ಯಂತಿಸೂರಯಃ"ಎಂಬೀ ಪ್ರಮಾಣಗಳಲ್ಲಿ ಕೇವಲ ನಿಗೂ ಮುಕ್ತನಿಗೂ ಸ್ಥಲಭೇದವನ್ನು ಹೇಳಿರುವುದರಿಂದ ಇದು ಮೋಕ್ಷವಲ್ಲವೆಂದರೆ ವೈಕುಂಠದಲ್ಲಿಯೇ ಮುಕ್ತಪ್ರಾಪ್ಯವಾದ ಪ್ರದೇಶಕ್ಕಿಂತಲು ಕೇವಲ ಪ್ರಾಪ್ಯವಾದ ಪ್ರದೇಶವು ಭಿನ್ನವಾಗಿರುವುದರಿಂದ ಇದು ಮೋಕ್ಷವಲ್ಲವೆಂದು ಹೇಳಲಾಗುವುದಿಲ್ಲವು. ಆದರೆ ಈಕೇವಲನ ಸ್ಥಾನವು ಶ್ರೀವೈಕುಂಠದಲ್ಲಿ ಯೆಲ್ಲಿ? ಎಂದರೆ ಅದಕ್ಕುತ್ತರವು." ವಿರಜಾಪರಮವ್ಯೋಮ್ನೋರಂತರಾಕೇವಲಸ್ಸ್ಮೃತಃ । ತತ್ಸ್ಥಾನಮುಪಭೋಕ್ತವ್ಯಮವ್ಯಕ್ತಬ್ರಹ್ಮಸೇವಿನಾಂ ॥ ಸ್ವಾತ್ಮಾನುಭವಜಾನಂದಸುಖದಂಕೇವಲಂಪದಂ । ನಿಶ್ರೇಯಸಂಚನಿರ್ವಾಣಂಕೈವಲ್ಯಂಮೋಕ್ಷ ಉಚ್ಯತೆ ॥ ಶ್ರೀಶಾಂಘ್ರಿಭಕ್ತಿಸೇವೈಕರಸಭೋಗವಿವರ್ಜಿತಂ।ತದಿಚ್ಛಂತ್ಯಪ್ಯಮತಯೊಮೋಕ್ಷಂಸುಖವಿವರ್ಜಿತಂ" ಇತ್ಯಾದಿ ಪಾದ್ಮಪುರಾಣ ಪ್ರಮಾಣಗಳಿಂದ ಪ್ರಕೃತಿಮಂಡಲವನ್ನತಿಕ್ರಮಿಸಿ ವಿರಜಾಪರಮಪದ ಮಧ್ಯದಲ್ಲಿಯೇ ಬ್ರಹ್ಮಾನುಭವ ರಹಿತನಾಗಿ ಕೇವಲ ನಿರುತ್ತಾನೆಂದು ಹೇಳಲ್ಪಟ್ಟಿರುವುದರಿಂದಈಮೋಕ್ಷವನ್ನಂಗೀಕರಿಸಬೇಕೆಂದರೆ,, ಕ್ರಮವಾಗಿ ಇವುಗಳಿಗೆ ಪ್ರತ್ಯುತ್ತರವು ಹೇಳಲ್ಪಡುವುದು.

ಆದರೆ ನಿಮ್ಮಗಳಿಗಭಿಮತವಾದ ಈಮೋಕ್ಷವು ಶ್ರೀಭಾಷ್ಯಕಾರರಿಗೆ ಸಮ್ಮತವಲ್ಲವೆಂಬುವುದು ಶ್ರೀಭಾಷ್ಯದಲ್ಲಿಯೆ ಸ್ಪಷ್ಟವಾಗಿಧೆ. ಅದು ಹೇಗೆಂದರೆ! ವಾಕ್ಯಾನ್ವಯಾಧಿ ಕರಣದಲ್ಲಿ(ಬ್ರ॥ಸೂ॥೧॥೪॥೧೯) ಮೋಕ್ಷಕ್ಕೆ ಕಾರಣವಾದದ್ದು ಪರಮಪುರುಷ ವೇದನವೆ; ಪರಮಪುರುಷವಿಭೂತಿಯಾದ ಜೀವಸ್ವರೂಪಜ್ಞಾನವು ಮೋಕ್ಷಕಾರಣವಾದ ಪರಮಪುರುಷೊಪಾಸನವಲ್ಲುಪಯೋಗಿಸುವುದರಿಂದ ಆವಶ್ಯ ಸಂಪಾದನೀಯುಮಾಗಿದ್ದರು ಅದಕ್ಕೆ ಸ್ವತಃಪುರುಷಾರ್ಥತ್ವವಿಲ್ಲವೆಂದುಹೇಳಿರುವುದರಿಂದಈಮೋಕ್ಷವು ಶ್ರೀಭಗವದ್ರಾಮಾನುಜಾಚಾರ್ಯಾದಿಗಳಿಗೆ ಸಮ್ಮತವಾಗಿಲ್ಲವು. ಮತ್ತು ಅತ್ರ್ಯಧಿಕರಣದ (೧॥೨॥೯॥) ಲ್ಲುದಾಹೃತ ಮಾಪಃಯೇಯಂಪ್ರೇತೆ,, ಎಂಬ ಮಂತ್ರವ್ಯಾಖ್ಯಾನಸಮಯದಲ್ಲಿ ಆಯಾವಾದಿಗಳಿ ಗಭಿಮತವಾದ ಮೊಕ್ಷಗಳೆಲ್ಲವನ್ನೂ ಉಪನ್ಯಾಸಮಾಡಿ 'ತ್ರಯಾಣಾಮೇವಚೈವಮುಪನ್ಯಾಸಃಪ್ರಶ್ನಶ್ಚ' ಇತ್ಯಾದಿನಾ ಜೀವಾತ್ಮ ಪರಮಾತ್ಮರುಗ

ಳಗಿರುವ ಸ್ವರೂಪ ಸ್ವಭಾವಗೆಳನ್ನು ಹೇಳಿ ಅನಾದಿ ಕರ್ಮವಾಸನೆಯಿಂದ ಆವೃತನಾದ ಜೀವನಿಗೆ ಆ ಅನಾದಿ ಕರ್ಮವಾಸನಾನಿವೃತ್ತಿ ಪೂರ್ವಕ ವಾದ ಸ್ವಾಭಾವಿಕ ಪರಮಾತ್ಮಾನಂದಾನುಭವವೆ ಮೋಕ್ಷವಲ್ಲದೆ ಬೇರೆ ಯಾವದೂ ಮೋಕ್ಷವಲ್ಲವೆಂಬುವುದೆ ಸಂಪ್ರದಾಯಸಿದ್ಧವಾಗಿರುವುದೆಂ ಪು ಸಿದ್ಧಾನ್ತ ಪಡಿಸಿರುತ್ತಾರೆ.

ಮತ್ತು ವೇದಾರ್ಥ ಸಂಗ್ರಹದಲ್ಲಿ ಸರ್ವಕರ್ಮ ವಿನಿರ್ಮುಕ್ತವಾದ ಸ್ವಾತ್ಮಯಾಥಾತ್ಮ್ಯವಾಪ್ತಿಯು ಬ್ರಹ್ಮಾನಂದಪ್ರಾಪ್ತಿಯನ್ನು ಒಳ ಪಡಿಸಿಕೊಂಡಿರುತ್ತದೆ. ಅದು ಹೇಗೆಂದರೆ! ಕರ್ಮವು ಭಗವತ್ಸ್ವರೂ ಪವನ್ನು ತಿಳಿಯುವದಕ್ಕೆ ಪ್ರತಿಬಂಧಕವಾದುದರಿಂದ ನಿಶ್ಶೇಷ ಕರ್ಮ ಕ್ಷಯವಾದರೇನೆ ಸ್ವತಸ್ಸಿದ್ಧವಾದ ಬ್ರಹ್ಮಾನಂದವು ಆವಿರ್ಭವಿಸು ತ್ತದೆಂದು ಹೇಳಿರುತ್ತಾರೆ.

ಪ್ರಕೃತಸಿದ್ಧಾನ್ತವನ್ನೆ ಅವಲಂಬಿಸಿರುವ ವರದ ವಿಷ್ಣು ಮಿಶ್ರ ಪರಾಶರಭಟ್ಟ ಪ್ರಭೃತಿಗಳು ಕೈವಲ್ಯವೆಂಬುವದು ಮೋಕ್ಷವಲ್ಲವು, ಐ ಶ್ವರ್ಯಾದಿ ಸದೃಶವಾದ್ದರಿಂದ ಜುಗುಪ್ಸಿತವಾದದ್ದು, ನಶ್ವರವಾದದ್ದು, ಅದನ್ನು ಹೊಂದಿದವನು ಸಂಸಾರಿಯಲ್ಲದೆ ಮುಕ್ತನಲ್ಲವೆಂಬದಾಗಿ ತ ಮ್ಮತಮ್ಮ ಗ್ರನ್ಥಗಳಲ್ಲಿ ಸ್ಥಾಪಿಸಿರುತ್ತಾರೆ.

ಮತ್ತು ಕೈವಲ್ಯವೆಂಬುವದು ಮೋಕ್ಷವಾಗುವ ಪಕ್ಷದಲ್ಲಿ ಸ್ವಾ ಭಾವಿಕವಾದ ಪರಬ್ರಹ್ಮಾನಂದಾನುಭವದಲ್ಲಿ ಪರ್ಯವಸಾನವಾಗದೇಹೊ ಗಲಾರದು. ಆಪ್ರಕಾರ ಪರ್ಯವಸಾನವಾಗದೇಯಿದ್ದಲ್ಲಿಈಸ್ಥಾನವನ್ನು ನಿತ್ಯವೆಂಬುವುದಾಗಿ ಹೇಳುವುದರಿಂದ ಇದು ನಿತ್ಯ ಸಂಸಾರವೆಂದೇ ಪರ್ಯವಸಾನವಾಗುತ್ತದೆ. ಯಾವಾಗಲಾದರೂ ಒಂದುವೇಳೆ ಮುಕ್ತನಾ ದರೆ ಸ್ವಾಭಾವಿಕವಾದ ಪರಬ್ರಹ್ಮಾನಂದಾನುಭವ ವುಂಟಾಗಬಹುದೆಂಬ ಸಂಭಾವನೆಯಾದರು ಒದ್ಧಚೇತನನಿಗಿರಬಹುದು, ಈಕೈವಲ್ಯವೆಂಬುವ ಮೋಕ್ಷವನ್ನು ಹೊಂದಿದವನಿಗೆ ಈಸಂಭಾವನೆಯೂಕೂಡ ಇಲ್ಲದೆ ನಿತ್ಯ ವಾದಕಷ್ಟವನ್ನೆ ಸಂಪಾದಿಸಿಕೊಂಡವನಾಗುತ್ತಾನೆ.ಆದರೆ ಕೈವಲ್ಯ ದಲ್ಲಿ ಶರೀರವೆ ಇಲ್ಲದಿರುವದರಿಂದ ಇವನು ಸಂಸಾರಿಯಾಗುವುದು ಹೇ ಗೆ?ಎಂದರೆ! ಪ್ರಳಯಕಾಲದಲ್ಲಿ ಶರೀರವಿಲ್ಲದಿದ್ದಾಗ್ಯೂ ಜೀವನು ಹೇಗೆಸಂಸಾರಿಯಾಗುತ್ತಾನೊ ಅದರಂತೆ ಇಲ್ಲಿಯೂ ತಿಳಿಯಬೇಕು.

ಪ್ರಳಯಕಾಲದಲ್ಲಿ ಶರೀರಾರಂಭಕವಾದ ಸೂಕ್ಷ್ಮರೂಪವಾಗಿರುವ ಪ್ರಕೃತಿಸಂಬಂಧವಿರುವುದರಿಂದ ಸಂಸಾರಿಯಾಗುತ್ತಾನೆಂದರೆ ಕೈವಲ್ಯವನ್ನು ಹೊಂದಿದವರಿಗೂ ಪ್ರಕೃತಿ ಸಂಬಂಧವನ್ನಂಗೀಕರಿಸಬೇಕು. ಆದರೆ ಬದ್ಧನಪ್ರಕೃತಿ ಸಂಬಂಧದಿಂದ ಶರೀರ ವುಂಟಾಗುತ್ತದೆ, ಕೇವಲನ ಪ್ರಕೃತಿಸಂಬಂಧದಿಂದ ಶರೀರ ವುಂಟಾಗುವದಿಲ್ಲವೆಂಬುವ ವಿಶೇಷವನ್ನುಮಾತ್ರವೆಸ್ವೀಕರಿಸಬೇಕಾಗುತ್ತದೆ.ಆದರೆಕೇವಲನಿಗೆ ಪ್ರಕೃತಿ ಸಂಬಂಧವಿರುವುದೆಂಬುವದಕ್ಕೆ ಪ್ರಮಾಣವೇನು ? ಎಂದರೆ ಸ್ವಪರ ಯಾಥಾತ್ಮ್ಯಾನುಭವಿಲ್ಲದೇಇರೋಣವೆ ಪ್ರಮಾಣವೆಂದರಿಯಬೇಕು. ಪ್ರಕೃತಿಸಂಬಂಧದಿಂದ ಮೂಢನಾಗಿರುವುದರಿಂದಲೇಯಲ್ಲವೆಸ್ವಸ್ವರೂಪವನ್ನೂ ಪರಸ್ವರೂಪವನ್ನೂ ತಿಳಿಯಲು ಅಶಕ್ತನಾಗಿರುತ್ತಾನೆ.ಆದಕ್ಕೆ ಕರ್ಮವಿಶೇಷವೆ ಕಾರಣವೆಂದರಿಯಬೇಕು.

ಮತ್ತು ಕೈವಲ್ಯದಲ್ಲಿ ನಿಶ್ಶೇಷವಾಗಿ ಕರ್ಮಕ್ಷಯು ವಾದಾಗ್ಯೂ ಪರಬ್ರಹ್ಮಾನಂದಾನುಭವವಿಲ್ಲದಿದ್ದರೆ ಮುಕ್ತಿಯಲ್ಲೂ ಪರಬ್ರಹ್ಮಾನಂದಾನುಭವವಿಲ್ಲದೇಹೋಗಲಿ.ಎರಡುಕಡೆಯಲ್ಲೂ ನಿಶ್ಶೇಷ ಕರ್ಮನಿವೃತ್ತಿ ಸಮವಾಗಿರುವದಲ್ಲವೆ. ಆದರೆ ಕೆವಲನಿಗೆ ಪ್ರಕೃತಿಸಂಬಂಧವೂ ಆದಕ್ಕೆ ಕಾರಣವಾದ ಕರ್ಮವಿಶೇಷವೂ ಇದ್ದಲ್ಲಿ ಯಾವಾಗಲಾದರೂ ಇವನು ಸಂಸಾರಿಯಾಗಿ ಏತಕ್ಕೆ ಆಗುವದಿಲ್ಲವೆಂದರೆ ಕೈವಲ್ಯಕ್ಕಾಗಿ ಈತನು ಮಾಡಿರುವ ಕರ್ಮದಿಂದುಂಟಾದ ಭಗವತ್ಸಂಕಲ್ಪವೇ ಅದಕ್ಕೆ ಕಾರಣವೆಂದಂಗೀಕರಿಸಬೇಕು.

ತಾಪತ್ರಯದಿಂದ ಪೀಡಿತನಾದ ಜೀವನು ಭಗವಂತನ ಧ್ಯಾನದಿಂದ ವಿಶುದ್ಧಿಯನ್ನುಹೊಂದಿದಮೇಲೆ ವಿಶದವಾಗಿ ಸ್ವಾತ್ಮನನ್ನು ಅನುಭವಿಸುವಕಾಲದಲ್ಲಿ ಭಗವಂತನನ್ನು ಹೇಗೆಮರೆತಿರುವನೆಂದರೆ ಇದಕ್ಕಾಗಿಯೇ ನಾವುಇಂಥಾ ಕೈವಲ್ಯವನ್ನು ಅಂಗೀಕರಿಸುವದಿಲ್ಲವು. ಆಪ್ರಕಾರ ಕೈವಲ್ಯದಲ್ಲಿ ನಿರ್ಬಂಧವಿರುವಪಕ್ಷಕ್ಕೆ ಪೂರ್ವೋಕ್ತವಾದ ಭಗವತ್ಸಂಕಲ್ಪವೆ ಕಾರಣವೆಂದು ಅಂಗೀಕರಿಸಬೇಕಾಗುತ್ತದೆ.

ಆದರೆ ಬ್ರಹ್ಮಾನಂದಕ್ಕೋಸ್ಕರ ಪ್ರವರ್ತಿಸಿದವನಿಗೆ ಆಫಲವಿಲ್ಲದೆ ಕೇವಲಾತ್ಮಾನಂದಾನುಭವವು ಹೇಗೆ ಸಿದ್ಧಿಸುತ್ತದೆ? ಎಂದರೆ ಸ್ವರ್ಗಕ್ಕೋಸ್ಕರ ಮಾಡತಕ್ಕ ಯಜ್ಞಾದಿಗಳನ್ನು ಯಥಾವತ್ತಾಗಿಮಾ

ಡದಿದ್ದರೆ ಸ್ವರ್ಗಪ್ರಾಪ್ತಿಇಲ್ಲದೆ ಬ್ರಹ್ಮರಾಕ್ಷಸರಾಗಿ ಹೇಗೆ ಆಗುತ್ತಾರೆಯೊಅದೆಪ್ರಕಾರ ಇಲ್ಲಿಯೂ ತಿಳಿಯಬೇಕು.

ಇಂಥಾ ಬ್ರಹ್ಮಾನಂದಾನುಭವವು ಸ್ವಲ್ಪವೂ ಇಲ್ಲದಿರುವ, ಪತಿ ಪರಿತ್ಯಕ್ತಪತ್ನಿಯ ಅವಸ್ಥಾಸದೃಶವಾದ, ಪರ್ಯಾಯ ಸಂಸಾರವಾಗಿರುವ ಕೈವಲ್ಯದಲ್ಲಿ ಪ್ರವೃತ್ತಿ ಹೇಗೆ ವುಂಟಾಗುವುದೆಂದರೆ ಇದಕ್ಕಿಂತ ಲೂಹೀನವಾದ ಅತಿಜುಗುಪ್ಸಿತವಾಗಿರುವ ಸ್ವರ್ಗಪಶುಪುತ್ರ ಭಿಕ್ಷಾನ್ನಾದಿಗಳಲ್ಲಿ ವಿಶೇಷಾಸಕ್ತಿಯಿಂದ ಪ್ರವರ್ತಿಸಿರುವ ಜನಗಳನ್ನು ಪ್ರತ್ಯಕ್ಷವಾಗಿ ನೋಡುತ್ತಿರುವಲ್ಲಿ ಪ್ರಪಂಚದಲ್ಲಿರುವ ಪ್ರಿಯವಾದ ಪದಾರ್ಥಕ್ಕಿಂತಲೂ ಅತಿ ಪ್ರೇಮಾಸ್ಪದವಾದ ಸ್ವಾತ್ಮಾನುಭವದಲ್ಲಿ ಪ್ರವೃತ್ತಿಯುಂಟಾಗುವದಕ್ಕೆ ಕೇಳತಕ್ಕದ್ದೇನಿರುವುದು. ಸ್ವಾತ್ಮನು ಸಮಸ್ತಕ್ಕಿಂತಲೂ ಪ್ರಿಯನೆಂಬುವ ವಿಷಯವು ಸರ್ವಸ್ಪಷ್ಟವಾಗಿರುವುದರಿಂದಇಲ್ಲಿ ವಿಸ್ತರಿಸುವುದೇ ಅನಾವಶ್ಯಕವು.

ಕೈವಲ್ಯ ವೀಪ್ರಕಾರವಾದರೆ ಇದಕ್ಕೆ ಮೋಕ್ಷವೆಂಬುವ ವ್ಯವಹಾರ ಹೇಗೆಂದರೆ ದುಃಖಕ್ಕೆ ಕಾರಣವಾದಶರೀರೇಂದ್ರಿಯಾದಿಗಳಿಲ್ಲದೆಇರುವದರಿಂದ ಗೌಣವೆಂದು ಹೇಳಬೇಕು. ಈಪ್ರಕಾರವಾದರೆ ಈಕೆವಲನೆಲ್ಲಿರುತ್ತಾನೆ? ಯಾವಮಾರ್ಗದಿಂದ ಹೋಗುತ್ತಾನೆ? ಎಂದರೆ ಇವನಸ್ಥಾನವಿಷಯದಲ್ಲಿ ನಮಗೆ ವಿಪ್ರತಿ ಪತ್ತಿಯಿಲ್ಲವು. ಪ್ರಕೃತಿಮಂಡಲದಲ್ಲಿ ಎಲ್ಲಾದರೂ ಇರಲಿ; ಪ್ರಕೃತಿಮಂಡಲವನ್ನತಿಕ್ರಮಿಸಿರುವ ಸ್ಥಾನಗಳಲ್ಲಿ ವಾಸವೂ ಅರ್ಚಿರಾದಿಮಾರ್ಗಮಾತ್ರವೂಇವನಿಗೆ ಸಂಭವಿಸುವದಿಲ್ಲವು. ಇವೆರಡೂ ಉಪನಿಷತ್ತು ಮೊದಲಾದ ಪ್ರಮಾಣಗಳಲ್ಲಿ ಪರಬ್ರಹ್ಮೋಪಾಸನಾ ಪ್ರಕರಣದಲ್ಲೇ ಹೇಳಲ್ಪಡುತ್ತದೆ.

ಈ ಕೆವಲನೂ ಅರ್ಚಿರಾದಿಮಾರ್ಗದಿಂದಲೆ ಹೋಗುವಪಕ್ಷಕ್ಕೆ ಅರ್ಚಿರಾದಿಮಾರ್ಗವು ಹೇಳಲ್ಪಡುವ ಶ್ರುತಿ ಸ್ಮೃತಿ ಮೊದಲಾದಪ್ರಮಾಣಗಳಲ್ಲಿ ಅಮಾನವನೆಂಬುವನು ಈಮಾರ್ಗದಲ್ಲಿ ಹೋಗುವಪುರುಷನನ್ನು ಪರಮಾತ್ಮನ ಸಮೀಪಕ್ಕೆ ಕರೆದುಕೊಂಡು ಹೋಗುತ್ತಾನೆಂದು ಹೇಳಲ್ಪಟ್ಟಿರುವುದರಿಂದ ವಿಲಕ್ಷಣ ದೇಶಪ್ರಾಪ್ತಿಯಿಂದ ನಿಶ್ಶೇಷಕರ್ಮಕ್ಷಯವಾಗಿ ಬ್ರಹ್ಮಾನಂದಪ್ರಾಪ್ತಿಯೂ ಆಗದೆ ಹೋಗಲಾರದು. ಈವಿಷಯದಲ್ಲಿ ಬ್ರಹ್ಮಸೂ (೧-೨-೧೭॥೪-೩-೧೨+೧೪)ತ್ರ

ಗಳೂ ಅದರಭಾಷ್ಯಗಳೂ ನಿಸ್ಸಂಶಯವಾಗಿ ಪ್ರಮಾಣವಾಗುತ್ತವೆ.

ಭೂಮಾಧಿಕರಣದಲ್ಲಿ (೧-೩-೭-) ಕೇವಲ ಜೀವೋಪಾಸಕನಿಗೆ ಅರ್ಚಿರಾದಿ ಮಾರ್ಗವಿಲ್ಲವೆಂಬುವುದನ್ನು ¦ಕಂಠೋಕ್ತ್ಯಾ ನಿಷೇಧಿಸಿ (೪-೩-೧೫) ಫಲಾನ್ತರವನ್ನು ಪ್ರದರ್ಶನಮಾಡಿರುತ್ತಾರೆ. ಇದೇಪ್ರಕಾರವಾಗಿ ವೇದಾನ್ತದೀಪ ವೇದಾನ್ತಸಾರಾದಿ ಗ್ರನ್ಥಗಳಲ್ಲಿಯೂಕೇವಲಾತ್ಮೋಪಾಸಕನಿಗೆ ಅರ್ಚಿರಾದಿಗತಿ ಯಿಲ್ಲವೆಂಬುವದುಸ್ಪಷ್ಟವಾಗಿಧೆ.

ಏವಂಸತಿ ಗೀತಾಭಾಷ್ಯಕ್ಕೂ ಶ್ರೀಭಾಷ್ಯಾದಿ ಗ್ರನ್ಥಗಳಿಗೂ ತೋರುವ ವಿರೋಧ ಪರಿಹಾರಕ್ಕಾಗಿ ಶ್ರೀಭಾಷ್ಯಾದ್ಯನೇಕ ಗ್ರನ್ಥಗಳಿಗನುಕೂಲವಾಗಿ ಗೀತಾಭಾಷ್ಯಕ್ಕೆ ತಾತ್ಪರ್ಯ ನಿರ್ಣಯವು ಮಾಡತಕ್ಕದ್ದಾಗಿರುತ್ತದೆ. ಹೇಗಂದರೆ ಗೀತಾಭಾಷ್ಯದಲ್ಲಿ ಹೇಳಲ್ಪಡುವ ‹‹ಜಿಜ್ಞಾಸುಃ, ಕೈವಲ್ಯಾರ್ಥೀ, ಆತ್ಮಯಾಥಾತ್ಮ್ಯವಿತ್, ಅಕ್ಷರನಿಷ್ಠಃ, ಅವ್ಯಕ್ತೋಪಾಸಕಃ,, ಇತ್ಯಾದಿ ಹೆಸರುಗಳೆಲ್ಲಾ ಛಾನ್ದೋಗ್ಯೋಪನಿಷತ್ (೫-೧೦) ನಲ್ಲಿ ಹೇಳಲ್ಪಡುವ ಪಂಚಾಗ್ನಿವಿದ್ಯಾ ನಿಷ್ಠನನ್ನೇ ಹೇಳುತ್ತವೆ. ಪಂಚಾಗ್ನಿ ವಿದ್ಯಾನಿಷ್ಠನೆಂಬುವನು ಜೀವಾತ್ಮೋಪಾಸಕನು. ಇವನು ಜೀವಾತ್ಮನನ್ನು ಹೇಗೆ ಉಪಾಸನ ಮಾಡುತ್ತಾನೆಂದರೆ ಚಿದಚಿದಾತ್ಮಕವಾದ ಈ ಪ್ರಪಂಚವೆಲ್ಲಾ ಈಶ್ವರನಿಗೆ ಶರೀರವು, ಈಶ್ವರನು ಶರೀರಿಯು ಆದುದರಿಂದ ಜೀವಾತ್ಮನು ಪರಮಾತ್ಮನಿಗೆಶರೀರವು,ಪರಮಾತ್ಮನುಜೀವಾತ್ಮನಿಗೆಶರೀರಿಯು, ಎಂಬೀಪ್ರಕಾರವಾಗಿ ಸಿದ್ಧಾನ್ತವಿರುವುದರಿಂದ ಪರಮಾತ್ಮನನ್ನು ಉಪಾಸನಮಾಡತಕ್ಕವರುಶರೀರವಾದ ಜೀವನನ್ನು ವಿಶೇಷಣವಾಗಿಯೂಈಶ್ವರನನ್ನು ಪ್ರಧಾನವಾಗಿಯೂಇಟ್ಟುಕೊಂಡು ಜೀವನಿಗೆಶರೀರಿಯಾದಪರಮಾತ್ಮನನ್ನು ಪಾಸನಮಾಡುತ್ತಾರೆ. ಹಾಗೆಯೆ ಶರೀರಿಯಾದ ಈಶ್ವರನನ್ನು ವಿಶೇಷಣವಾಗಿಯೂ ಶರೀರವಾದ ಜೀವನನ್ನು ಪ್ರಧಾನವಾಗಿಯೂ ಇಟ್ಟುಕೊಂಡುಈಶ್ವರನಿಗೆ ಶರೀರವಾದ ಜೀವನನ್ನು ಪಾಸನೆಮಾಡುತ್ತಾರೆ. ಈವಿಧವಾದ ಉಪಾಸನೆಗಳು ಶ್ರೀಭಾಷ್ಯಾದಿ ಸಕಲ ಗ್ರಂಥಗಳಲ್ಲಿಸುವ್ಯಕ್ತವಾಗಿವೆ.ಈಎರಡು ವಿಧವಾದ ಉಪಾಸನೆಗಳಲ್ಲಿಯೂಪರಮಾತ್ಮ ಜೀವಾತ್ಮರು ವಿಷಯವಾಗುತ್ತಾರೆ. ಆದರೆ ವಿಶೇಷಣ ವಿಶೇಷ್ಯಭಾವದಲ್ಲಿಮಾತ್ರವೆ ವ್ಯತ್ಯಾಸವಿರುತ್ತವೆ. ಒಂದರಲ್ಲಿ ಜೀವನು ಪ್ರಧಾನನಾದುದರಿಂದ

ಆಉಪಾಸನೆಯನ್ನು ಮಾಡತಕ್ಕವನುಜೀವಾತ್ಮೋಪಾಸಕನೆಂದುಹೇಳ ಲ್ಪಡುತ್ತಾನೆ. ಮತ್ತೊಂದರಲ್ಲಿ ಈಶ್ವರನು ಪ್ರಧಾನ ನಾದುದರಿಂದ ಆ ಉಪಾಸನೆಮಾಡುವವನು ಪರಮಾತ್ಮೋಪಾಸಕನೆಂದು ಹೇಳಲ್ಪ ಡುತ್ತಾನೆ. ಇವರಿಬ್ಬರಿಗೂ ಅರ್ಚಿರಾದಿಗತಿಯೂ ಪರಮಾತ್ಮಪ್ರಾಪ್ತಿ ಯೂಅಪುನರಾವೃತ್ತಿಯೂ ಉಪನಿಷತ್ತೇಮೊದಲಾದ ಅನೇಕಪ್ರಮಾ ಣಗಳಲ್ಲಿ ಸಿದ್ಧವಾಗಿರುತ್ತದೆ. ಇವರಲ್ಲಿ ಜೀವಾತ್ಮನನ್ನು ಪ್ರಧಾನವಾಗಿ ಟ್ಟುಕೊಂಡು ಉಪಾಸನಮಾಡತಕ್ಕವನೇ ಪಂಚಾಗ್ನಿವಿದ್ಯಾನಿಷ್ಠನು. "ಆತ್ಮಯಾಥಾತ್ಮ್ಯವಿತ್ತಿಗೂ ಪರಮಪುರುಷ ನಿಷ್ಠನಿಗೂ ಸಾಧಾರಣ ವಾದ ಅರ್ಚಿರಾದಿಗತಿಯನ್ನು ಹೇಳುತ್ತಾ,,ರೆಂಬುವ ಗೀತಾಭಾಷ್ಯ (೮-೨೩) ದಲ್ಲಿ ಪ್ರತಿಪಾದಿತನಾದ ಆತ್ಮ ಯಾಥಾತ್ಮ್ಯವಿತ್ತೆಂಬುವನು ಪಂಚಾಗ್ನಿ ವಿದ್ಯಾನಿಷ್ಠನೆಂದು ಸ್ಪಷ್ಟವಾಗುತ್ತದೆ. ಆದುದರಿಂದ ಇದಕ್ಕೆ ಅನುಕೂಲವಾಗಿ ಪೂರ್ವಭಾಗದಲ್ಲಿರುವ ವಾಕ್ಯಗಳಿಗೂ ತಾತ್ಪ ರ್ಯವಿರಬೇಕಾದ್ದರಿಂದ ಪೂರ್ವವಾಕ್ಯವೆಲ್ಲಾ ಈಪಂಚಾಗ್ನಿ ವಿದ್ಯಾನಿಷ್ಠ ನವಿಷಯವಾಗಿಯೆ ಆಗುವದರಲ್ಲಿ ಯಾವ ವಿರೋಧವೂ ಇಲ್ಲವು.

ಪರಮಪುರುಷನಿಷ್ಠನಿಗೆ "ಜ್ಞಾನೀ,, ಯೆಂಬದಾಗಿಯೂ ಕೇವಲನಿಗೆ "ಜಿಜ್ಞಾಸು.,,ಎಂಬದಾಗಿಯೂಇರುವ ಸಂಜ್ಞೆಗಳಿಗೆ ಅರ್ಥವೇನೆಂದರೆ! ವಿಲಂಬವಿಲ್ಲದೆ ಮೋಕ್ಷವನ್ನು ಹೊಂದಲಪೇಕ್ಷೆಯನ್ನುಂಟುಮಾಡುವ ಜ್ಞಾನವುಳ್ಳವನು ಜ್ಞಾನೀಎನ್ನಲ್ಪಡುತ್ತಾನೆ. ಕೆಲವುಕಾಲವು ಆತ್ಮಸುಖವ ನ್ನನುಭವಿಸಿಕೊಂಡು ಅನಂತರ ಪರಮಾತ್ಮಾನಂದವನ್ನು ಹೊಂದ ಲಪೇಕ್ಷೆಗೆ ಕಾರಣವಾದ ಜ್ಞಾನವುಳ್ಳವನು ಜಿಜ್ಞಾಸು ಎನ್ನಲ್ಪಡುವ ನೆಂದು ತಿಳಿಯತಕ್ಕದ್ದು. ಅದು ಹೇಗೆಂದ , ಒಂದು ನಗರವನ್ನು ಕುರಿತು ಪ್ರಯಾಣಮಾಡುತ್ತಲಿರುವ ಮಾರ್ಗಸ್ಥನಾದ ಪುರುಷನೊ ಬ್ಬನು ಮಾರ್ಗದಲ್ಲಿರುವ ಛಾಯಾವೃಕ್ಷದಕೆಳಗೆ ನಿದ್ರಾಸುಖವನ್ನು ಕೆಲವುಕಾಲವನುಭವಿಸಿ ಅನಂತರ ನಗರವನ್ನು ಹೇಗೆ ಸೇರುತ್ತಾ ನೆಯೊ ಅದೇಪ್ರಕಾರ ಈ ಕೇವಲನೆಂಬುವ ಪಂಚಾಗ್ನಿ ವಿದ್ಯಾನಿಷ್ಠನು ಕೆಲವು ಕಾಲ ಆತ್ಮ ಸುಖವನ್ನುಅನುಭವಿಸಿ ಅನಂತರ ಪರಮಾತ್ಮನನ್ನು ಹೊಂದುತ್ತಾನೆ. ಜ್ಞಾನಿ ಎಂಬುವನು ಈ ಪ್ರಕಾರ ವಿಲಂಬವಿಲ್ಲದೆ ಮಧ್ಯಮಾರ್ಗದಲ್ಲಿ ನಿಲ್ಲದೆ ಪಟ್ಟಣವನ್ನು ಸೇರುವ ಮತ್ತೊಬ್ಬ ಪುರು

ಷನೋಪಾದಿಯಲ್ಲಿ ಪರಮಾತ್ಮನನ್ನು ಹೊಂದುತ್ತಾನೆ.

ಕೇವಲನು ಅಪ್ರಕಾರಹೋಗುತ್ತಾನೆನ್ನುವದಕ್ಕೆ ದೃಷ್ಟಾನ್ತವೇನೆಂದರೆ (ಛಾನ್ದೊಗ್ಯ-೩-೧...೧೧) ರಲ್ಲಿ ಹೇಳಲ್ಪಡುವ ಮಧುವಿದ್ಯಾ ಎಂಬುವ ಬ್ರಹ್ಮವಿದ್ಯಾನಿಷ್ಠನು ಕೆಲವುಕಾಲ ವಸ್ವಾದಿಪದವಿಯನ್ನು ಅನುಭವಿಸಿ ಅನಂತರ ಪರಮಾನಂದವನ್ನು ಹೊಂದುತ್ತಾನೆಂಬುವುದೇ ದೃಷ್ಟಾಂತವೆಂದರಿಯಬೇಕು.

ಮೇಲೆಹೇಳಲ್ಪಟ್ಟ ಯರಡುವಿಧವಾದ ಉಪಾಸನೆಗಳಲ್ಲಿ ವಿಶೇಷಣ ವಿಶೇಷ್ಯ ಭಾವವ್ಯತ್ಯಾಸಮಾತ್ರದಿಂದ ಮೋಕ್ಷಕ್ಕೆ ಒಂದರಲ್ಲಿ ವಿಲಂಬವೂ ಮತ್ತೊಂದರಲ್ಲಿ ವಿಲಂಬವಿಲ್ಲದಿರೋಣವೂ, ಆರುವದಕ್ಕೆ ಕಾರಣ ವೇನೆಂದರೆ! ಕೈವಲ್ಯೆಚ್ಛೆಗೆ ಕಾರಣವಾದ ಕರ್ಮವಿಶೇಷವೇ ಕಾರಣವೆಂದಂಗೀಕರಿಸಲ್ಪಡಬೇಕು.

ಈಕೈವಲ್ಯಾರ್ಥಿಯಾದ ಜಿಜ್ಞಾಸುವೂಪಂಚಾಗ್ನಿ ವಿದ್ಯಾನಿಷ್ಠನೂ ಭಿನ್ನನಾದುದರಿಂದ "ಚತುರ್ವಿಧಾಭಜನ್ತೇಮಾಂ ಜನಾಸ್ಸುಕೃತಿನೋರ್ಜುನ । ಆರ್ತೋಜಿಜ್ಞಾಸುರರ್ಥಾರ್ಥೀಜ್ಞಾನೀಚಭರತರ್ಷಭ,, ಎಂಬುವ ಶ್ಲೋಕದಲ್ಲಿ ನಾಲ್ಕುವಿಧವಾಗಿ ವಿಭಾಗಮಾಡಿದ್ದು ಅಸಂಗತವಲ್ಲವೆ ಎಂದರೆ ಈಮಧ್ವಾದಿವಿದ್ಯಾನಿಷ್ಠನುಕೂಡಾ ಜಿಜ್ಞಾಸುಕೋಟಿಯಲ್ಲೆ ಸೇರುತ್ತಾನೆ. ಹೇಗೆಂದರೆ ಜಿಜ್ಞಾಸುಪದಕ್ಕೆ ಆತ್ಮಸುಖವನ್ನು ಕೆಲವುಕಾಲ ಅನುಭವಿಸಿ ಅನಂತರ ಮೋಕ್ಷವನ್ನು ಹೊಂದಲಪೇಕ್ಷೆಯುಳ್ಳವನೆಂಬುವುದೇ ಅರ್ಥವಲ್ಲವು. ಆದರೆ ಪ್ರಯೋಜನಾಂತರವನ್ನು ಕೆಲವುಕಾಲದವರೆಗೂ ಅನುಭವಿಸಿ ಅನಂತರ ಮೋಕ್ಷಸುಖವನ್ನು ಹೊಂದಲಪೇಕ್ಷೆಯುಳ್ಳವನೆಂಬುವುದೇ ಅರ್ಥವು. ಮಧುವಿದ್ಯಾನಿಷ್ಠನಿಗೆ ಪ್ರಯೋಜನಾಂತರವು ವಸ್ವಾದಿ ಪದವಿಯು. ಪಂಚಾಗ್ನಿ ವಿದ್ಯಾನಿಷ್ಠನಿಗೆಸ್ವಾತ್ಮಸುಖವು ಪ್ರಯೋಜನಾಂತರವಾದುದರಿಂದ ನಾಲ್ಕುವಿಧವಾಗಿ ಭಕ್ತರನ್ನು ವಿಭಾಗಮಾಡಿರುವದು ಅಸಂಗತವಲ್ಲವು.

ಆದರೆ ಮೋಕ್ಷಕ್ಕೆಹೋಗುವಂತವನುಕೂಡಾ ದಕ್ಷಿಣಾಯನದಲ್ಲಿ ಮೃತನಾದರೆ ಚಂದ್ರಸಾಯುಜ್ಯವನ್ನೂ, ಉತ್ತರಾಯಣದಲ್ಲಿ ಮೃತನಾದರೆ ಸೂರ್ಯಸಾಯುಜ್ಯವನ್ನೂ, ಹೊಂದಿ ಅನಂತರ ಮುಕ್ತಿಯನ್ನು ಹೊಂದುತ್ತಾನೆಂದು ಪ್ರಮಾಣಸಿದ್ಧವಾಗಿರುವುದರಿಂದ ಅವನಿಗೂಚಂ

ದ್ರಸಾಯುಜ್ಯ ಸೂರ್ಯಸಾಯುಜ್ಯ ವೆಂಬುವ ಪ್ರಯೋಜನಾನ್ತರವಿರು ವುದರಿಂದ ಈ ಜ್ಞಾನಿಯೂ ಜಿಜ್ಞಾಸುಕೋಟಿಯಲ್ಲಿಯೇ ಸೇರುತ್ತಾನೆಂದರೆ ಚಂದ್ರಾದಿ ಸಾಯುಜ್ಯಕಾಲದಲ್ಲಿಯೂ ತತ್ಕಾಲೋಚಿತವಾದ ಭಗವದ ನುಭವವಿರುವುದರಿಂದ ಆರಾಶಿಯಲ್ಲಿ ಸೇರಲಾರನು. ಕೇವಲನಿಗೆ ಭಗವ ದನುಭವವನ್ನು ಸ್ವೀಕರಿಸುವಪಕ್ಷದಲ್ಲಿ ಕೈವಲ್ಯಹಾನಿ ಯುಂಟಾಗುವ ಹಾಗೆ ಮೋಕ್ಷಾರ್ಥಿಗೆ ಯಾವ ವಿರೋಧವೂ ಕಾಣಬರುವದಿಲ್ಲವು. ಪಂ ಚಾಗ್ನಿವಿದ್ಯೆಯಲ್ಲಿ ಪರಮಾತ್ಮನಿಗೆ ಶರೀರವಾದ ಜೀವನನ್ನು ಉಪಾಸನೆ ಮಾಡಬೇಕೆಂದು ಹೇಳಲ್ಪಟ್ಟಿರುತ್ತದೆ. ಕೈವಲ್ಯಾರ್ಥಿಗೆಕೈವಲ್ಯಕ್ಕೆ ಸಾ ಧನವಾಗಿ ಭಗವದುಪಾಸನೆಯುವಿಹಿತವಾಗಿರುತ್ತದೆ ಯಾದ್ದರಿಂದ ಪರ ಸ್ಪರಭೇದವು ಸ್ಪಷ್ಟವಾಗಿರುವುದೆಂದರೆ ಭಗವಂತನಿಗೆ ಅಪ್ರಧಾನವಾ ಗಿಯೆರಡುಸ್ಥಳಗಳಲ್ಲಿಯೂ ಪ್ರವೇಶವಿರುವುದರಿಂದ ಭಕ್ತಿರೂಪವಾದ ಜ್ಞಾನವು ಉಭಯತ್ರ ಏಕರೂಪವಾಗಿಧೆಯಾದ್ದರಿಂದಲೂಇವರಿಬ್ಬರೂ ಒಂದೇಯಾಗುವದಕ್ಕೆ ಬಾಧಕವೇನೂಇಲ್ಲವು.

"ಆತ್ಮಯಾಥಾತ್ಮ್ಯವಿದಃ ಪರಮಪುರುಷನಿಷ್ಠಸ್ಯಚ,, ಎಂಬು ವಸ್ಥಳದಲ್ಲಿ ಅತ್ಮಯಾಥಾತ್ಮ್ಯಪದದಿಂದ ಜ್ಞಾನಿ ವಿಶೇಷವೆ ಹೇಳಲ್ಪಡು ತ್ತಾನೆ, ಕೇವಲನು ಹೇಳಲ್ಪಡುವುದಿಲ್ಲವು. ಏತಕ್ಕೆಂದರೆ ಕೇವಲನಿಗೆ ಅರ್ಚಿರಾದಿಗತಿಯು ಬಾಧಿಸುತ್ತದೆ ಎಂದು ಕೆಲವರು ಹೇಳುತ್ತಾರೆ, ಅದು ಅಸಂಗತವು.ನಾವು ಹೇಳಿದಪ್ರಕಾರ ಕೇವಲನೆಂಬುವನು ಪಂಚಾ ಗ್ನಿವಿದ್ಯಾನಿಷ್ಠನೆಯಾಗುತ್ತಾನೆ ಯಾದ್ದರಿಂದ ವಿರೋಧವು ಯಾವ ದೂಇಲ್ಲವು.

ಆಪ್ರಕಾರವಾದರೆ " ಉಭಯೋಸ್ಸಾಧಾರಣೀ ಮರ್ಚಿರಾದಿಕಾಂ ಗತಿಮಾಹ,, ಇಬ್ಬರಿಗೂ ಸಾಧಾರಣವಾದ ಅರ್ಚಿರಾದಿಗತಿಯನ್ನು ಹೇಳುತ್ತಾರೆಂದು ಸಂಗ್ರಹವಾಗಿ ಹೇಳದೆ ಆತ್ಮಯಾಥಾತ್ಮ್ಯವಿದಃ,, ಎಂಬದಾಗಿ ವಿವರಿಸಿ ಹೇಳಿರುವುದರಿಂದ ಜ್ಞಾನಿಗಳಅವಾಂತರಭೇದವನ್ನು ತೋರಿಸುವದಕ್ಕಾಗಿ ಹೇಳಿರುತ್ತಾರೆಂಬ ಅಭಿಪ್ರಾಯವು ಸ್ವರಸವಾಗಿ ರುವು ದೆಂದರೆ! 'ಉಭಯೋಸ್ಸಾಧಾರಣೀಂ, ಎಂದುಲಘುವಾಗಿಹೇಳಿ ದರೆ 'ಅರ್ಚಿರಾದಿಗಮನವು ಕೇವಲನಿಗೆ ಹೇಗೆ ಬರುತ್ತದೆ. ಬ್ರಹ್ಮೋ ಪಾಸನೆಮಾಡುವವನಿಗೆ ಯಲ್ಲವೆ ಅರ್ಚಿರಾದಿಗಮನವು ಶ್ರುತ್ಯಾದಿಗ

ಳಲ್ಲಿ ಹೇಳಲ್ಪಟ್ಟಿದೆ,, ಎಂದು ಸಂದೇಹ ಬರುತ್ತದೆ, ಆಸಂದೇಹ ಪರಿಹಾರಕ್ಕಾಗಿ ವಿಸ್ತಾರವಾಗಿ ವಿಂಗಡಿಸಿ ಹೇಳಿರುತ್ತಾರೆ. ಆಪ್ರಕಾರವಾಗಿ ಹೇಳಿದರೇನೆಆತ್ಮ ಯಾಥಾತ್ಮ್ಯವಿಚ್ಛೇದ್ಧಕ್ಕೆ ಪಂಚಾಗ್ನಿ ವಿದ್ಯಾನಿಷ್ಠನೆಂಬುವಅರ್ಥವು ಸ್ಪಷ್ಟವಾಗಿ ತಿಳಿಯುಬಹುದೆಂದು ಭಾಷ್ಯಕಾರರಿಗೆ ಅಭಿಪ್ರಾಯವು. ಅದ್ದರಿಂದ ಈಪಕ್ಷದಲ್ಲಿಯೇ ಸ್ವಾರಸ್ಯವು ಸರಳವಾಗಿರುವುದೆಂದರಿಯಬೇಕು.

ಬ್ರಹ್ಮ ವಿದ್ಯಾನಿಷ್ಠರಲ್ಲಿ ಪಂಚಾಗ್ನಿ ವಿದ್ಯಾನಿಷ್ಠರೇ ಯಾಗಲಿ ಇತರರೇಯಾಗಲಿ ಮುಕ್ತಿಗೆ ಹೋಗುವ ಸಮಯದಲ್ಲಿ ಮಧ್ಯಮಾರ್ಗದಲ್ಲಿ ಪ್ರಯೋಜನಾಂತರವನ್ನು ಅನುಭವಿಸುವುದಾಗಿ ಶ್ರೀ ಭಾಷ್ಯಾದಿಗ್ರಂಥಗಳಲ್ಲಿ ಎಲ್ಲಿಯೂ ಹೇಳಲ್ಪಡಲಿಲ್ಲವಾಗಿ ಈಸಿದ್ಧಾಂತವು ಸಂಪ್ರದಾಯಸಿದ್ಧವಲ್ಲವೆಂದರೆ ಶ್ರೀಭಾಷ್ಯಾದಿಗ್ರನ್ಥಗಳಲ್ಲಿ ಪ್ರಯೋಜನಾಂತರವು ನಿಷೇಧ ಮಾಡಲ್ಪಡಲಿಲ್ಲವಾದುದರಿಂದಲೂ ಗೀತಾಭಾಷ್ಯಾದಿಗ್ರಂಥಸ್ವಾರಸ್ಯಕ್ಕಾಗಿ ಈಪ್ರಕಾರ ಅಂಗೀಕರಿಸಬೇಕಾದದ್ದು ಆವಶ್ಯಕವಾಗಿರುವುದರಿಂದಲೂ, ವಿರೋಧವೇನೂ ಇಲ್ಲವು.

ಈ ಕೇವಲನು ಪಂಚಾಗ್ನಿವಿದ್ಯಾನಿಷ್ಠನಾದರೆ "ಯೇತುಶಿಷ್ಟಾಸ್ತ್ರಯೋಭಕ್ತಾಃ ಫಲಕಾಮಾಹಿತೇಮತಾಃ । ಸರ್ವೇಚ್ಯವನಧರ್ಮಾಣಃ ಪ್ರತಿಬುದ್ಧಸ್ತುಮೋಕ್ಷಭಾಕ್,, ಎಂಬುವ ಪ್ರಮಾಣದಲ್ಲಿ ಮೋಕ್ಷಕ್ಕೆ ಹೋಗುವವನಿಗಿಂತಲೂ ವ್ಯತಿರಿಕ್ತರಾದ ಸಮಸ್ತರಿಗೂ ನಶ್ವರಸುಖವು ಹೇಳಲ್ಪಡುತ್ತೆಯಾದ್ದರಿಂದ ಪಂಚಾಗ್ನಿ ವಿದ್ಯಾನಿಷ್ಠನಿಗೂ ನಶ್ವರಪದವಿಯೆ ಪ್ರಾಪ್ತವಾದರೆ ಸಕಲ ಪ್ರಮಾಣ ವಿರೋಧ ಬರುತ್ತದೆಎಂದರೆ ಕೈವಲ್ಯದಲ್ಲಿ ಆತ್ಮಾನುಭವವು ಅಸ್ಥಿರವಾದ್ದರಿಂದ ಚ್ಯವನ ಧರ್ಮತ್ವಕ್ಕೆ ಬಾಧಕವಿಲ್ಲವು. ಇಷ್ಟುಮಾತ್ರದಿಂದ ಅವನಿಗೆ ಪುನರಾವೃತ್ತಿಯೂಯಿಲ್ಲವು. ಅಥವಾ "ಇಂದ್ರಲೋಕಾತ್ಪರಿಭ್ರಷ್ಟೋ ಮಮಗೆಯುಪರಾಯಣಃ । ಪ್ರಮುಕ್ತಸ್ಸರ್ವಸಂಸಾರೈರ್ಮಮಲೋಕಂಸಗಚ್ಛತಿ,, ಎಂಬುವ ಪ್ರಮಾಣದಲ್ಲಿ ಹೇಳಿರುವಂತೆ ಉತ್ತರೋತ್ತರಾತಿಶಯಿತ ಪದವಿಗಿಂತಲೂ ಪೂರ್ವ ಪೂರ್ವನಿಕೃಷ್ಟಪದವಿಗಳಿಂದ ಭ್ರಂಶಸಂಭವಿಸುವುದರಿಂದ ಚ್ಯವನ ಧರ್ಮತ್ವವು ಗೌಣವಾಗಿರಬಹುದು. ಅಥವಾ ಪರಿಮಿತ ಸುಖಾನುಭವದಿಂದ ಅಪರಿಮಿತ ಸುಖಾನುಭವಕ್ಕೆ

ವಿಲಂಬವಾದ್ದರಿಂದ ಅತಿಪರಿಮಿತ ಸುಖದಿಂದ ಕೆಲವು ಕಾಲದವರಿಗೂ ಭ್ರಷ್ಟನಾದ್ದರಿಂದ ನಿಂದಿಸಲ್ಪಡುತ್ತಾನೆ. ಅದೇ ಚ್ಯವನಧರ್ಮತ್ವವು. (ಅಥವಾ) ಉಪಾಸನಾಕಾಲದಲ್ಲಿ ಪ್ರಾಪ್ತವಾದ ಪರಮಾತ್ಮಾನುಭವವು ಫಲಕಾಲದಲ್ಲಿ ಕೆಲವುಕಾಲ ಭ್ರಂಶವಾದ್ದರಿಂದ ಚ್ಯವನ ಧರ್ಮತ್ವವುಉ ಪಪನ್ನವಾಗಬಹುದು. "ಪ್ರತಿಬುದ್ಧಸ್ತುಮೋಕ್ಷಭಾಕ್,, ಎಂಬುವುದ ರಿಂದ ಅವ್ಯಾಹತವಾದ ಮೋಕ್ಷಪ್ರಾಪ್ತಿಯು ಹೇಳಲ್ಪಡುತ್ತದೆ. ತಾವ ನ್ಮಾತ್ರದಿಂದ ಇತರರಿಗೆ ಮೋಕ್ಷ ನಿಷೇಧ ಮಾಡಲ್ಪಡಲಿಲ್ಲವು: "ಭು ಕ್ತ್ವಾಚಭೋಗಾನ್ವಿಪುಲಾಂಸ್ತ್ವಮಂತೇ ಮತ್ಪ್ರಸಾದತಃ। ಮಮಾನು ಸ್ಮರಣಂಪ್ರಾಪ್ಯ ಮಮಲೋಕಮವಾಪ್ಸ್ಯಸಿ॥,, ಎಂಬುವ ಪ್ರಮಾಣಾ ರ್ಥದೋಪಾದಿಯಲ್ಲಿ ಯಾವ ವಿರೋಧವೂ ಇಲ್ಲವು. ಆದ್ದರಿಂದ ಗೀತಾ ಭಾಷ್ಯದಲ್ಲಿ ಹೇಳಲ್ಪಡುವ ಜಿಜ್ಞಾಸುವು ಪಂಚಾಗ್ನಿ ವಿದ್ಯಾನಿಷ್ಠನೆಂಬು ವುದರಲ್ಲಿ ಸಂದೇಹವಿಲ್ಲವು. ಆದ್ದರಿಂದಲೇ ಜಿಜ್ಞಾಸುವಿಗೆ ತಿಳಿಯಬೇ ಕಾದ ವಿಷಯುವನ್ನು ಹೇಳುವಪ್ರಕರಣದಲ್ಲಿ ಜೀವಸ್ವರೂಪವೂ,ಸೃಷ್ಟಿ ಕ್ರಮವೂ,ಪಂಚಾಗ್ನಿವಿದ್ಯೆಯೂ,ಎಂಬಿವುಗಳಂ ಹೇಳಿದ್ದು ಸಂಗತವಾ ಗುತ್ತದೆ ಮತ್ತು ಆದುದರಿಂದಲೇ "ಸರ್ವದ್ವಾರಾಣಿ,ಎಂಬುವ,ಶ್ಲೋಕ ಭಾಷ್ಯದಲ್ಲಿ ದೇಹವನ್ನು ಬಿಡುತ್ತಾ ಅರ್ಚಿರಾದಿ ಮಾರ್ಗವಾಗಿ ಹೋ ಗುತ್ತಾನೆಂದು ಜಿಜ್ಞಾಸುವಿಗೆ ಅರ್ಚಿರಾದಿ ಗಮನವು ಹೇಳಲ್ಪಡುತ್ತದೆ. ನಿ ಮ್ಮಲ್ಲಿ ಕೇವಲನು ಪ್ರಕೃತಿಮಂಡಲವನ್ನತಿಕ್ರಮಿಸಿ ಹೋದಾಗ್ಯೂ ಅರ್ಚಿರಾದಿಮಾರ್ಗವಾಗಿ ಹೋಗುವದಿಲ್ಲವೆಂದು ಹೇಳುತ್ತಾರಲ್ಲವೆ.ಆದ್ದ ರಿಂದಲೂ ಗೀತಾಭಾಷ್ಯ ಸ್ವಾರಸ್ಯವಂ ನೋಡಿದರೆ ಪಂಚಾಗ್ನಿ ವಿದ್ಯಾನಿಷ್ಠನಿಗೆ ಕೈವಲ್ಯವು ಫಲವೆಂದು ಸಿದ್ಧಿಸುತ್ತದೆ.

ಆದರೆ ಕೇವಲನು ಪಂಚಾಗ್ನಿ ವಿದ್ಯಾನಿಷ್ಠನೇಯಾದ ಪಕ್ಷದಲ್ಲಿ ಜ್ಞಾನಿಗಳಲ್ಲಿಯೆ ಸೇರಬೇಕಲ್ಲದೆ ಉದಾರರಲ್ಲಿ ಸೇರುವುದು ಅಸಂಗತವೆಂ ದರೆ ಜ್ಞಾನಿಯೆಂದರೆ ಸ್ವಾತ್ಮಾನುಭವ ವಿಳಂಬದಲ್ಲಿ ವಿಮುಖನಾದವನು; ಇವನು ಸ್ವಾತ್ಮಾನುಭವದಲ್ಲಿ ಸಮ್ಮುಖನಾದವನು; ಆದ್ದರಿಂದ ಒಂದು ರಾಶಿಯಲ್ಲಿ ಇವರಿಬ್ಬರೂ ಸೇರಲಾರರೆಂದು ಚಿಂತಿಸಿಉದಾರಕೋಟಿಯ ಲ್ಲಿಸೇರಿಸಿರುವುದು ಸಂಗತವಾಗಿರುವುದು. ಏವಂಚ ನಿಷ್ಕೃಷ್ಟ ಅಭಿ ಪ್ರಾಯುವೇನೆಂದರೆ; ಶ್ರೀಭಾಷ್ಯದಲ್ಲಿ ಪಂಚಾಗ್ನಿವಿದ್ಯಾನಿಷ್ಠನಿಗೆಮೋ

ಕ್ಷನೂಲಫಲವನ್ನು ಹೇಳಿರತಕ್ಕದ್ದು ಮುಖ್ಯ ಫಲಾಭಿಪ್ರಾಯವನ್ನು ಟ್ಟುಕೊಂಡು ಹೇಳಲ್ಪಟ್ಟಿದೆ. ಗೀತಾಭಾಷ್ಯದಲ್ಲಿ ಕೈವಲ್ಯವೆಂಬುವ ಫಲವನ್ನು ಹೇಳಿರತಕ್ಕದ್ದು ಅಂತರಾಳಿಕ ಫಲವನ್ನಿಟ್ಟುಕೊಂಡು ಹೇಳಿರುತ್ತದೆ. ಎಲ್ಲಿಯೂ ಇದೇಫಲವಲ್ಲದೆ ಬೇರೆ ಫಲವಿಲ್ಲವೆಂದು ನಿಷೇಧಮಾಡಲಿಲ್ಲವಾದ್ದರಿಂದ ಈಯೆರಡು ಗ್ರಂಥಗಳಿಗೆ ಯಾವವಿರೋಧವೂಇಲ್ಲವು. ಏವಂಚ "ಯಂಪ್ರಾಪ್ಯನನಿವರ್ತಂತೆತದ್ಧಾಮಪರಮಂ ಮಮ,, ಎಂಬುವ ಶ್ಲೋಕ ಭಾಷ್ಯದಲ್ಲಿ ಪುನರಾವೃತ್ತಿ ಇಲ್ಲವೆಂದು ಹೇಳಿರುವುದಕ್ಕೆ ಕೆಳಗೆ ಅವರೋಹಣವಿಲ್ಲವೆಂಬ ಅಭಿಪ್ರಾಯವಲ್ಲದೆ ಮೇಲೆ ಆರೋಹಣವೂಕೂಡಾ ಇಲ್ಲವೆಂದಭಿಪ್ರಾಯವಲ್ಲವು.

ಆದರೆ "ವಿರಜಾಪರಮ ವ್ಯೋಮ್ನೋಃ, ಇತ್ಯಾದಿ ಪೂರ್ವಪಕ್ಷದಲ್ಲಿಹೇಳಲ್ಪಟ್ಟ ಪಾದ್ಮಪುರಾಣವಚನಕ್ಕೆ ಯೆನುಗತಿ? ಎಂದರೆಈವಚನವುಪೂರ್ವಾಚಾರ್ಯರಲ್ಲಿ ಒಬ್ಬರಿಂದಲಾದರೂ ಉದಹರಿಸಲ್ಪಡದೆ ಇರುವುದರಿಂದಲೂ ಅನೇಕವಿಧಗಳಾದ ಪ್ರಕ್ಷೇಪೊದ್ಯಾಪಶಂಕಾಸ್ಪದವಾದ್ದರಿಂದಲೂ ಇದನ್ನುಪಪತ್ತಿ ಮಾಡಲಾವಶ್ಯಕವಿಲ್ಲವು. ಒಂದುವೇಳೆ ಈಪ್ರಮಾಣವು ವಾಸ್ತವವಾದಾಗ್ಯೂ ನಾವು ಹೇಳಿದ ಪಂಚಾಗ್ನಿ ವಿದ್ಯಾನಿಷ್ಠನವಿಷಯವಾಗಿ ಉಪಪತ್ತಿಯೂ ಮಾಡಬಹುದಾದ್ದರಿಂದ ಯಾವ ವಿರೋಧವೂಇಲ್ಲವು. ಪಂಚಾಗ್ನಿ ವಿದ್ಯಾನಿಷ್ಠನಲ್ಲದವನಿಗೆ ಕೈವಲ್ಯಾನುಭವಸ್ಥಾನವು ನಿತ್ಯ ವಿಭೂತಿ ಎಂಬದಾಗಿ ಯಾರಿಂದಲೂ ಹೇಳಲಸಾಧ್ಯವು. "ಯೋಗಿನಾಮಮೃತಂಸ್ಥಾನಂ,, ಎಂಬುವ ಪೂರ್ವಪಕ್ಷದಲ್ಲಿ ಉಪನ್ಯಾಸಮಾಡಲ್ಪಟ್ಟ ವಚನದಲ್ಲಿ ನಿತ್ಯ ವಿಭೂತಿಯಲ್ಲಿಯೆ ಕೇವಲನಿಗೂ ಮುಕ್ತನಿಗೂ ಬೇರೆಬೇರೆಸ್ಥಳವೆಂದುಅರ್ಥಮಾಡುವದಕ್ಕೆ ಪ್ರಮಾಣವೇನೂ ಇಲ್ಲವು. ಆದ್ದರಿಂದ ಅದು ಅಸಂಗತವು. ಮತ್ತು "ಯದ್ವೈಪಶ್ಯಂತಿಸೂರಯಃ, ಎಂಬುವ ವಿಶೇಷಣದಿಂದ ಸೂರಿಗಳಿಂದ ನೋಡಲ್ಪಡುವಂಥಾ ಸ್ಥಳವು ಬ್ರಹ್ಮೋಪಾಸನೆ ಮಾಡುವವರಿಗೆ, ಎಂದಿರುವದರಿಂದ ನಿತ್ಯ ವಿಭೂತಿಯಲ್ಲೇ ಕೇವಲನಿಗೂಸ್ಥಾನವಿದ್ದಪಕ್ಷದಲ್ಲಿ ಸೂರಿಗಳಿಂದ ನೋಡಲ್ಪಡದೆ ಇರಲಾರದೆಂದು ಈ ವಿಶೇಷಣವು ಅನರ್ಥಕವಾಗುತದೆ. ಆದ್ದರಿಂದ ನೀವುಒಪ್ಪಿಕೊಳ್ಳುವಂತೆ ಕೇವಲನಿಗೆ ನಿತ್ಯವಿಭೂತಿಯು ಎಂದಿಗೂ ಸ್ಥಾನವಾಗಲಾರದು. ಆದರೆ ಅಮೃತಸ್ಯವ್ಯ

ಪದೇಶವು ಹೇಗೆ ಉಪಪನ್ನವಾಗುತದೆ? ಎಂದರೆ ಚಿರಕಾಲಸ್ಥಾಯಿತ್ವ ಮಾತ್ರದಿಂದಲೆ ಉಪಪನ್ನ ವಾಗಬಹುದು. ಆಪ್ರಕಾರವಾಗಿ ಅನೇಕ ಪ್ರಮಾಣ ಪ್ರಯೋಗಗಳಿರುತ್ತವೆ. ಮತ್ತು "ವಿರಜೇ,,ತ್ಯಾದಿ ಪ್ರಮಾಣದಲ್ಲಿ 'ಅವ್ಯಕ್ತಬ್ರಹ್ಮಸೇವಿನಾಂ, ಎಂಬುವವಾಕ್ಯಕ್ಕೆ,, ಅರ್ಥವಿಚಾರವಂ ಮಾಡುವಪಕ್ಷದಲ್ಲಿ ಪಂಚಾಗ್ನಿ ವಿದ್ಯಾನಿಷ್ಠನ ಪರವಾಗಿ ಬಹಳ ಸ್ವಾರಸ್ಯದಿಂದ ಅರ್ಥವಾಗುತದೆ. ಅದು ಹೇಗೆಂದರೆ. ಅಲ್ಲಿ ಅವ್ಯಕ್ತ ಪದಕ್ಕೆ ಜೀವನು ಅರ್ಥವು. ಬ್ರಹ್ಮಪದಕ್ಕೆ ಪರಮಾತ್ಮನುಅರ್ಥವು. ಈಯೆರಡುಪದಕ್ಕೂ ಇತರ ಸಮಾಸಗಳಿಗಿಂತಲೂ ಶ್ರೇಷ್ಠವಾದುದರಿಂದ ದ್ವಂದ್ವಸಮಾಸವನ್ನೇ ಗ್ರಹಿಸಬೇಕು. ಅಲ್ಲಿ ಜೀವನು ಉಪಾಸನೆಯಲ್ಲಿ ವಿಶೇಷ್ಯನಾದ್ದರಿಂದ ಪ್ರಧಾನತ್ವವನ್ನಿಟ್ಟುಕೊಂಡು, ಅಭ್ಯರ್ಹಿತತ್ವದಿಂದ ಮೊದಲು ಅವ್ಯಕ್ತಶಬ್ದಪ್ರಯೋಗವು ಸ್ವರಸವಾಗಿರುವುದು. ಆದುದರಿಂದ ಪರಮಾತ್ಮಾತ್ಮಕ ಜೀವೋಪಾಸನವೆಂಬಅರ್ಥವು ಸ್ವರಸವಾಗಿ ಲಬ್ಧವಾಗುತ್ತದೆ. ಆದುದರಿಂದ ಇಂತವರು ಪಂಚಾಗ್ನಿ ವಿದ್ಯಾನಿಷ್ಠರೇಆಗುವರು. ಈಪ್ರಕಾರವಲ್ಲದೆ ಬೇರೆ ಯಾವವಿಧವಾಗಿ ಈವಾಕ್ಯಕ್ಕೆ ಅರ್ಥಮಾಡಿದರೂ ಗೌಣವನ್ನೂ ಅಸ್ವಾರಸ್ಯವನ್ನೂ ಅಂಗೀಕರಿಸಬೇಕಾಗುತದೆ.

'ಯೋಗಿನಾಮಮೃತಂಸ್ಥಾನಂ, ಎಂಬುವ ವಚನ ವಿರೋಧದಿಂದಲೂಕೂಡ ಪೂರ್ವೋಕ್ತವಾದ ಪಾದ್ಮಪುರಾಣ ವಚನಕ್ಕೆ ಪಂಚಾಗ್ನಿ ವಿದ್ಯಾನಿಷ್ಠನವಿಷಯತ್ವವನ್ನಂಗೀಕರಿಸ ಬಹುದು. ಇವರಿಗೆ ಪ್ರಕೃತಿಮಂಡಲಾತಿಕ್ರಮಣವು ಸರ್ವಮತ ಸಿದ್ಧವಾದುದರಿಂದ ವಿರಜಾನದೀಯನ್ನು ದಾಟಿದತರುವಾಯ ಪ್ರಾಕೃತವಾದ ಸೂಕ್ಷ್ಮಶರೀರವೂ ಹೋಗುತದೆ ಯಾದ್ದರಿಂದ ಕೇವಲಾತ್ಮಾನುಭವವು ಸ್ವರಸವಾಗಿ ಉಪಪನ್ನವಾಗುತದೆ. ಪಂಚಾಗ್ನಿ ವಿದ್ಯಾನಿಷ್ಠೇತರರಿಗೆ ಕೈವಲ್ಯಾನುಭವ ಸ್ಥಾನವು. 'ಯೋಗಿನಾಮಮೃತಂಸ್ಥಾನಂ, ಎಂಬುವ ಪ್ರಮಾಣದಲ್ಲಿಹೇಳಲ್ಪಟ್ಟ ಪ್ರಕೃತಿಮಂಡಲಾಂತರ್ಗತವಾದ ಸ್ಥಾನವಿಶೇಷವೇಆದುದರಿಂದ ಈ ಎರಡುವಚನಕ್ಕೂ ವಿಷಯಗಳು ವ್ಯವಸ್ಥಿತವಾಗಿರುವುದರಿಂದ ಪರಸ್ಪರ ವಿರೋಧವೂ ಸಂಭವಿಸುವದಿಲ್ಲವು. ವಸ್ತುತಸ್ತು ಪರಮವ್ಯೋಮಶಬ್ದವು ನಿತ್ಯವಿಭೂತಿಮಾತ್ರ ವಾಚಕವಲ್ಲದೆ ಆದರಲ್ಲಿ

ರುವ ಪಟ್ಟಣ ಮುಂತಾದ್ದಕ್ಕೆ ವಾಚಕವಲ್ಲವು. ಆದುದರಿಂದ ವಿರಜಾನಿತ್ಯ ವಿಭೂತಿಗಳಿಗೆ ಮಧ್ಯೆ ಎಂಬುವ ಪ್ರದೇಶವೇ ಇಲ್ಲವು. ಅಂತರಾಶಬ್ದಕ್ಕೆ ಸಂಬಂಧಿಸಲ್ಪಡದೆ ಯಿರುವುದೆಂಬುವ ಅರ್ಥವನ್ನು 'ತೇಯದನ್ತರಾ, ಇತ್ಯಾದಿ ವಾಕ್ಯಗಳಲ್ಲಿ ಸ್ವೀಕರಿಸಿರುವುದರಿಂದ ಪ್ರಕೃತದಲ್ಲಿಯೂ ಅದೇಅರ್ಥವನ್ನೆ ಅಂಗೀಕರಿಸುವಪಕ್ಷದಲ್ಲಿ ವಿರಜಾಪರಮಪದಗಳಿಗೆ ಸಂಬಂಧಿಸಲ್ಪಡದೆ ಇರುವ ಸ್ಥಳವೆಂಬೀಅರ್ಥವೇ ಲಬ್ಧವಾಗುತದೆ. ಆದುದರಿಂದ ಪ್ರಕೃತಿಮಂಡಲಾಂತರ್ಗತತ್ವವೆ ಕೈವಲ್ಯಸ್ಥಾನಕ್ಕೆ ಸಿದ್ಧಿಸುತ್ತದೆ. ಆದುದರಿಂದಲೇ ಮೇಲೆ ಹೇಳಲ್ಪಟ್ಟ ಯೆರಡುವಚನಗಳಿಗೂ ಪರಸ್ಪರ ವಿರೋಧವಿಲ್ಲವು. ಷಷ್ಠೀವಿಭಕ್ತಿಯು ಛಾನ್ದಸವೆಂದು ನಿಮ್ಮಪಕ್ಷದಲ್ಲಿಯೂ ಒಪ್ಪಿಕೊಳ್ಳಬೇಕು.

ಅಥವಾ ಅಂತರಾಪದಕ್ಕೆ ಸಮೀಪವೆಂಬುವಅರ್ಥವು ನಿಘಂಟುಸಿದ್ಧವಾಗಿರುವುದರಿಂದ ವಿರಜಾ ಪರಮಪದಗಳಿಗೆ ಸಮೀಪವಾದಸ್ಥಲವು ಕೈವಲ್ಯಸ್ಥಾನವೆಂದು ಅರ್ಥವಾಗುತದೆ. ಅದು ಪ್ರಕೃತಿಮಂಡಲದಲ್ಲೆ ಪರಮಪದಕ್ಕೆ ಸಮೀಪವಾಗಿರಬಹುದು. ಆದರೂ ಅದಕ್ಕೆ ನಿತ್ಯತ್ವಮಾತ್ರವಿಲ್ಲವೆಂದರಿಯಬೇಕು.

ಕೆಲವರು, ಕೈವಲ್ಯವೆಂದರೆ ಪರಮಪದದಲ್ಲೆ ಪರಮಾತ್ಮನನ್ನು ಅಪ್ರಧಾನವಾಗಿಯೂ ಸ್ವಾತ್ಮನನ್ನು ಪ್ರಧಾನವಾಗಿಯೂ ಅನುಭವಿಸುತ್ತಾ ಇರುವುದೇ ಯೆಂದು ಹೇಳುತ್ತಾರೆ. ಆ ಪ್ರಕಾರವಾಗಿ ಹೇಳಿದರೆ ಇದು ಕೈವಲ್ಯವಾಗುವುದಿಲ್ಲವು. ಮತ್ತು ಇಂತಹ ಕೈವಲ್ಯಕ್ಕೆ ಸಾಧನವೂ ಗಮನವೂ ಪ್ರಮಾಣವೂ ಪ್ರಕಾರವೂ ನಿರೂಪಣೆಮಾಡುವದು ಅಶಕ್ಯವಾದುದರಿಂದ ಸರ್ವಥಾ ಅಸಂಗತವು. (ಆದರೆ ಈಕೈವಲ್ಯವಿಚಾರದಲ್ಲಿ ವಾಕ್ಯಗಳಿಗೆ ಅರ್ಥಮಾಡುವ ಸಂದರ್ಭಗಳಲ್ಲಿಯೂ ನ್ಯಾಯವಿಮರ್ಶೆಮಾಡುವ ಸಂದರ್ಭಗಳಲ್ಲಿಯೂ ಶಾಸ್ತ್ರಸಂಬಂಧವಾದ ವಿಚಾರವು ಬಹಳವಾಗಿ ಮಾಡತಕ್ಕದ್ದಿದ್ದಾಗ್ಯೂ ಭಾಷಾಂತರದಲ್ಲಿ ಅವುಗಳನ್ನು ನಿರೂಪಣೆಮಾಡಿದರೂ ತಿಳಿದುಕೊಳ್ಳುವದುಅಸಾಧ್ಯವಾದ್ದರಿಂದ ಮುಖ್ಯವಾದ ವಿಷಯಗಳನ್ನುಮಾತ್ರ ಸಂಗ್ರಹಿಸಿರುತ್ತೆ. ಗ್ರಂಥವಿಸ್ತರಭಯದಿಂದಲೂಸಂಗ್ರಹಿಸಿರುತ್ತೆಂದರಿಯಬೇಕು.

ಶ್ಲೋ॥ ಅಗ್ನಿರ್ಜ್ಯೋತಿರಹಶ್ಶುಕ್ಲಷ್ಷಣ್ಮಾಸಾಉತ್ತರಾ

ಯಣಂ । ತತ್ರಪ್ರಯಾತಾಗಚ್ಛಂತಿ ಬ್ರಹ್ಮಬ್ರಹ್ಮವಿ
ವಿದೋಜನಾಃ ‖ ... ... ‖೨೪‖

ಪ। ಅಗ್ನಿಃ- ಜ್ಯೋತಿಃ - ಅಹಃ - ಶುಕ್ಲಃ - ಷಣ್ಮಾಸಾಃ - ಉತ್ತರಾಯಣಂ ।
ತತ್ರ - ಪ್ರಯಾತಾಃ - ಗಚ್ಛಂತಿ- ಬ್ರಹ್ಮ - ಬ್ರಹ್ಮವಿದಃ - ಜನಾಃ ‖

ಅ‖ ಅಗ್ನಿಃ- ಶಂ। ಕಾಲಾಭಿಮಾನಿದೇವತೆಯು, ಜ್ಯೋತಿಃ - ಪ್ರಕಾಶಾಭಿಮಾನಿದೇವತೆಯು, (ರಾ) ಅಗ್ನಿರ್ಜ್ಯೋತಿಃ - ಅಗ್ನಿರೂಪನಾದ ಜ್ಯೋತಿರಧಿಷ್ಠಾನ ದೇವತೆಯು, ಗೀ ‖ ವಿ) ಅರ್ಚಿಸ್ಸೆಂಬ ದೇವತೆಯು, ಅಹಃ - ಹಗಲಿಗೆ ಅಭಿಮಾನಿಯಾದ ದೇವತೆಯು, (ಗೀ‖ ವಿ) ಅಭಿಜಿದ್ದೇವತೆಯು, ಎಂದರೆ ಮಧ್ಯಾಹ್ನಕಾಲಕ್ಕೆ ಅಭಿಮಾನಿಯಾದ ಅಭಿಜಿತ್ತೆಂಬ ದೇವತೆಯೊಡನೆ ಕೂಡಿರುವ ಅಹರಭಿಮಾನಿ ದೇವತೆಯು, ಶುಕ್ಲಃ - ಶುಕ್ಲಪಕ್ಷಾಭಿಮಾನಿ ದೇವತೆಯು, (ಗೀ ‖ ವಿ) ಪೂರ್ಣಿಮೆಯ ಅಭಿಮಾನ ದೇವತೆಯೊಡನೆ ಕೂಡಿದ ಶುಕ್ಲಪಕ್ಷಾಭಿಮಾನಿ ದೇವತೆಯು, ಷಣ್ಮಾಸಾಃ ಉತ್ತರಾಯಣಂ - ಆಕಾಶ ಮಧ್ಯರೇಖೆಗೆ ಉತ್ತರಭಾಗದಲ್ಲಿ ಸೂರ್ಯಗತಿಯುಳ್ಳದ್ದಾಗಿರುವುದರಿಂದ ಉತ್ತರಾಯಣವೆಂಬ ಹೆಸರುಳ್ಳ ಆರುಮಾಸಗಳಿಗೆ ಅಭಿಮಾನಿ ದೇವತೆಗಳು, (ಮ।ಗೀ‖ವಿ)ಉತ್ತರಾಯಣದಲ್ಲಿರುವ ಆರುಮಾಸಗಳಲ್ಲಿ ಒಂದೊಂದು ಮಾಸಾಭಿಮಾನಿ ದೇವತೆಗಳ ಲೋಕವನ್ನು ತರುವಾಯ ಉತ್ತರಾಯಣಾಭಿಮಾನಿದೇವತೆಯ ಲೋಕವನ್ನೂ, (ಗೀ‖ ವಿ) ವಿಷುವಾಭಿಮಾನಿ ದೇವತೆಯನ್ನೂ ಇದರಲ್ಲಿ ಸೇರಿಸಿಕೊಳ್ಳಬೇಕು. ತತ್ರ- ಆ ದೇವತೆಗಳುಳ್ಳ ಲೋಕಗಳ ಮಾರ್ಗವಾಗಿ, ಪ್ರಯಾತಾಃ - ಹೋಗಿರುವ, ಬ್ರಹ್ಮವಿದಃ - ಬ್ರಹ್ಮಜ್ಞಾನಿಗಳಾದ, ಜನಾಃ - ಜನರು, ಬ್ರಹ್ಮಗಚ್ಛಂತಿ- ಬ್ರಹ್ಮವನ್ನು ಹೊಂದುತ್ತಾರೆ. ‖೨೪‖

(ಶಂ‖ ಭಾ‖) ಆದರೆ ಆ+ತಿವಾಹಿಕರಾದ ದೇವತೆಗಳನೇಕರನ್ನು ಗ್ರಹಿಸಬೇಕಾಗಿದ್ದರೂ ಕಾಲಪ್ರಧಾನ್ಯದಿಂದ ನಿರ್ದೇಶಿಸುವಿಕೆಯು ಹೇಗೆ ಸಂಗತವಾಗಬಹುದೆಂಬ ಶಂಕಾ ಸಮಾಧಾನಾರ್ಥವಾಗಿ ಮಾರ್ಗದ್ವಯದಲ್ಲಿಯೂ ಇತರ ದೇವತೆಗಳನೇಕರಿದ್ದರೂ, ಕಾಲಾಭಿಮಾನಿದೇವತೆಗಳವರಿಗಿಂತಲೂ ಅಧಿಕರಾಗಿರುವುದರಿಂದ ಕಾಲಶಬ್ದದಿಂದ ಆ ದೇವತೆಗಳೆಲ್ಲರೂ ಲಕ್ಷಣಾವೃತ್ತಿಯನ್ನವಲಂಬಿಸಿ ಹೇಳಲ್ಪಟ್ಟರೆಂದೀ ಶ್ಲೋಕದಿಂದುಪದೇಶಿಸುತ್ತಾನೆ. ಅಗ್ನಿ ಶಬ್ದಕ್ಕೂ ಜ್ಯೋತಿಶ್ಶಬ್ದಕ್ಕೂ ಕಾಲಾಭಿಮಾನಿದೇವತೆಯೇ ಅರ್ಥವು. (ಅಥವಾ) ಅಗ್ನಿಶಬ್ದಕ್ಕೆ ಅಗ್ನಿದೇವತೆಯೇ ಅರ್ಥವೆಂತಲೂ ಜ್ಯೋತಿಶ್ಶಬ್ದಕ್ಕೆ ಪ್ರಕಾಶಾಭಿಮಾನಿ ದೇವತೆಯೇ ಅರ್ಥವೆಂತಲೂ ತಿಳಿಯಬೇಕು. ಇತರ ಗಿಡಗಳಿಂದ ಪೂರ್ಣವಾಗಿದ್ದರೂ ಮಾವಿನ ಮರಗಳು ಅಧಿಕವಾಗಿರುವುದರಿಂದ ಅದನ್ನು

ಮಾವಿನತೋಟವೆಂದು ಹೇಳುವಂತೆ ಮಾರ್ಗದ್ವಯದಲ್ಲಿಯೂ ಇತರ ದೇವತೆಗಳಿದ್ದರೂ ಕಾಲಾಭಿಮಾನಿ ದೇವತೆಗಳು ವಿಶೇಷವಾಗಿರುವುದರಿಂದ ಕಾಲಶಬ್ದವನ್ನು ಇತರ ದೇವತೆಗಳಿಗೆ ಉಪಲಕ್ಷಣವನ್ನಾಗಿ ಮಾಡಿ ಕಾಲಾದ್ಯಭಿಮಾನಿ ದೇವತೆಗಳೆಲ್ಲರನ್ನೂ ಬೋಧಿಸಿದನೆಂದರಿಯಬೇಕು.

ಆದರೆ ಮಾರ್ಗಚಿಹ್ನಗಳಾದರೂ ಭೋಗಭೂಮಿಗಳಾದರೂ ಆಯಾ ಶಬ್ದಗಳಿಂದ ಹೇಳಲ್ಪಡಬೇಕಾಗಿರುವಲ್ಲಿ ಅವುಗಳಂಬಿಟ್ಟು ದೇವತೆಗಳನ್ನು ಮಾತ್ರವೇ ಇಲ್ಲಿ ಗ್ರಹಿಸಲು ಕಾರಣವೇನೆಂದು ಸಂದೇಹಿಸದೆ "ಆತಿವಾಹಿಕಾಸ್ತಲಿಂಗಾತ್" (ಬ್ರಹ್ಮಸೂತ್ರ ॥೪॥೩॥೪॥) (ಅಮಾನವ ಪುರುಷನು ಬ್ರಹ್ಮಲೋಕವನ್ನು ಸೇರಿಸುತ್ತಾನೆಂದು ಶ್ರುತಿಯಲ್ಲಿಯೂ ಹೇಳಿರುವುದರಿಂದ ಅರ್ಚಿರಾದಿಗಳು ತದಭಿಮಾನಿ ದೇವತೆಗಳೆ ಎಂಬದಾಗಿ ಗ್ರಹಿಸಬೇಕು.) ಎಂಬ ನ್ಯಾಯವನ್ನವಲಂಬಿಸಿ ಹೇಳಲ್ಪಟ್ಟಿತೆಂದರಿಯಬೇಕು. ಈಗ ಹೇಳಲ್ಪಟ್ಟ ಅಗ್ನ್ಯಾದಿ ದೇವತೆಗಳ ಸಾನ್ನಿಧ್ಯವುಳ್ಳ ಮಾರ್ಗದಲ್ಲಿ ಮೃತರಾಗಿ ಹೋಗುವ ಬ್ರಹ್ಮೋಪಾಸಕರು ಬ್ರಹ್ಮವನ್ನು ಕ್ರಮವಾಗಿ ಹೊಂದುವರು. ಈಗತಿ ಪ್ರಕಾರವು ಸದ್ಯೋ ಮುಕ್ತಿಯನ್ನು ಹೊಂದುವ ಬ್ರಹ್ಮಜ್ಞಾನ ನಿಷ್ಠರಿಗೆ ಹೇಳಲ್ಪಡಲಿಲ್ಲವು. "ನತಸ್ಯಪ್ರಾಣಾಉತ್ಕ್ರಾಮಂತಿ" (ನಿರುಪಾಧಿಕ ಬ್ರಹ್ಮವು ನಾನು ಎಂಬೀ ನಿಶ್ಚಯ ಜ್ಞಾನವುಳ್ಳವನ ಪ್ರಾಣಗಳು ಏಳುವುದಿಲ್ಲವು. ಬ್ರಹ್ಮನಲ್ಲಿಯೇ ಲಯಿಸುವುವು.) ಎಂಬ ಶ್ರುತಿ ಪ್ರಮಾಣಾನುಸಾರವಾಗಿ ಪ್ರಾಣೋತ್ಕ್ರಮಣವೇ ಇಲ್ಲವಾದುದರಿಂದಲೂ ಅಂತವರು ಬ್ರಹ್ಮನಲ್ಲಿಯೇ ಲೀನವಾದ ಪ್ರಾಣಗಳುಳ್ಳವರಾಗಿ ಬ್ರಹ್ಮಮಯವೇ ಆಗಿರುತ್ತಾರಾದುದರಿಂದಲೂ ಸಮ್ಯಗ್ದರ್ಶನ ನಿಷ್ಠರಾದ ಆ ಮಹಾನುಭಾವರಿಗೆ ಗಮನಾಗಮನಗಳಿಲ್ಲದೆ ಇರುವುದರಿಂದಲೂ ಇಲ್ಲಿ ಹೇಳಲ್ಪಟ್ಟ ಬ್ರಹ್ಮೋಪಾಸಕರಿಗೆ ಗಮನಮಾರ್ಗವು ಹೇಳಲ್ಪಟ್ಟಿರುದರಿಂದಲೂ ಇಲ್ಲಿ ಹೇಳಲ್ಪಟ್ಟವರು ಸಗುಣ ಬ್ರಹ್ಮೋಪಾಸಕರಲ್ಲದೆ ನಿರ್ಗುಣ ಬ್ರಹ್ಮೋಪಾಸಕರಲ್ಲವೆಂದರಿಯಬೇಕು. ಆದರೆ ಈ ಶ್ಲೋಕದಲ್ಲಿರುವ ಬ್ರಹ್ಮಶಬ್ದಕ್ಕೆ ಮುಖ್ಯ ಬ್ರಹ್ಮವೇ ಅರ್ಥವೆಂದು ಹೇಳುವುದಕ್ಕಾಗಿ ಪರಬ್ರಹ್ಮವೇದಿಗಳಿಗೆ ಈ ಉತ್ತರಾಯಣ ಗತಿಯು ಹೇಳಲ್ಪಟ್ಟಿರುವು

ದೆಂಬು ವಿತಕ್ಕೆ ಹೇಳಕೂಡದೆಂದರೆ " ಕಾರ್ಯಂಬಾದರಿರಸ್ಯಗತ್ಯುಪಪತ್ತೇಃ " ಎಂಬೀ (॥೪॥ ೩॥ ೭॥) ನ್ಯಾಯಾನುಸಾರವಾಗಿ ಈ ಉತ್ತರಾಯಣ ಗತಿಯು ಪರಬ್ರಹ್ಮವೇದಿಗಳಿಗೆ ಹೇಳಕೂಡದೆಂದರಿಯಬೇಕು. ಈ ಕಾರ್ಯ ಬ್ರಹ್ಮಕ್ಕೆ ಗಂತವ್ಯತ್ವವು ಉಪಪನ್ನ ವಾಗಿರುವುದರಿಂದ ಅಮಾನವ ಪುರುಷನು ಉಪಾಸಕರಿಗೆ ಸಗುಣ ಬ್ರಹ್ಮವನ್ನು ಹೊಂದಿಸುತ್ತಾನೆಂದು ಬಾದರ್ಯಾಚಾರ್ಯರು ನೆನೆಸುತ್ತಾರೆಂದು ಸೂತ್ರಾರ್ಥವು. ॥೨೪॥

(ರಾ॥ ಭಾ॥) ಯಾವ ಅರ್ಚಿರಾದಿಮಾರ್ಗದಲ್ಲಿ ಅಗ್ನಿರೂಪವಾದ ಜ್ಯೋತಿರಧಿಷ್ಠಾನ ದೇವತೆಯೂ ದಿವಸಾಧಿಷ್ಠಾನ ದೇವತೆಯೂ, ಶುಕ್ಲ ಪಕ್ಷಾಧಿಷ್ಠಾನ ದೇವತೆಯೂ ಉತ್ತರಾಯಣವೆಂಬ ಆರುಮಾಸಗಳ ಅಧಿಷ್ಠಾನ ದೇವತೆಯೂ ಸಂವತ್ಸರವಾಯು ಸೂರ್ಯ ಚಂದ್ರ ವಿದ್ಯುದ್ವರುಣೇಂದ್ರ ಪ್ರಜಾಪತಿಗಳೂ ಆತಿವಾಹಿಕರಾಗಿರುವರೋ ಆ ಅರ್ಚಿರಾದಿಮಾರ್ಗದಲ್ಲಿದೇಹೋತ್ಕ್ರಾಂತಿಯಂಹೊಂದಿಹೋಗುವಬ್ರಹ್ಮೋಪಾಸಕರಾದಜನರುಪರಬ್ರಹ್ಮವನ್ನು ನಿಶ್ಶೇಷಾ ವಿದ್ಯಾನಿವೃತ್ತಿಪೂರ್ವಕವಾಗಿಯೂಅಪ್ರಾಕೃತವ್ಯಮಂಗಳವಿಗ್ರಹಪ್ರಾಪ್ತಿಪೂರ್ವಕವಾಗಿಯೂ ನಿತ್ಯಸೂರಿತುಲ್ಯವಾದ ಧರ್ಮಭೂತ ಜ್ಞಾನವಿಕಾಸಪೂರ್ವಕ ವಾಗಿಯೂ ವಿರಜಾನದೀತರಣಾನಂತರ ಭಾವಿಯಾದದಿವ್ಯಾಪ್ಸರಸ್ಸತ್ಕಾರ ಪೂರ್ವಕ ವಾಗಿಯೂ ಹೊಂದಿ ಪರಬ್ರಹ್ಮದೊಡನೆ ಉಕ್ತಿಪ್ರತ್ಯುಕ್ತ್ಯಾದಿ ಸಮ್ಭಾನ ದೊಡನೆ ಯಾವಾಗಲೂ ಪುನರಾವೃತ್ತಿ ಪ್ರಸಂಗವಿಲ್ಲದೆ ಪರಿಪೂರ್ಣಬ್ರಹ್ಮಾನುಭವ ಯುಕ್ತರಾಗಿರುವರು. ಇಲ್ಲಿ ಅಗ್ನ್ಯಾದಿ ಕೆಲವು ಆತಿವಾಹಿಕರನ್ನು ಹೇಳಿರುವುದು ಸಂವತ್ಸರವಾಯು ಸೂರ್ಯಾದಿಗಳಿಗೂ ಪ್ರದರ್ಶನಾರ್ಥವೆಂದರಿಯಬೇಕು. ( ಇಲ್ಲಿನಗತ್ಯನುಸಂಧಾನ ಪ್ರಕಾರವನ್ನು ಸುಖಬೋಧಕ್ಕಾಗಿ " ಜ್ವಲನದಿವಸಜ್ಯೋತ್ಸ್ನಪಕ್ಷೋತ್ತರಾಯಣ ವತ್ಸರಾರ್ಕಪವನತಪನ ಪ್ರಾಲೇಯಾಂಶರ್ಕ್ರಮಾದಚಿರ ದ್ಯುತಿಂ । ಜಲಚರಪತಿಂ ದೇವಾಧೀಶಂ ಪ್ರಜಾಪತಿಮಾಗತಸ್ಸ್ಮರತಿವಿರಜಾಂದೂರೇವಾಚಸ್ತತಃಪರಮುದ್ಭುತಂ ,,ಶ್ರೀಮನ್ನಿಗಮಾಂತಮಹಾದೇಶಿಕರು ಸಂಕಲ್ಪ ಸೂರ್ಯೋದಯಾದಿ ಗ್ರಂಥಗಳಲ್ಲಿ ಪ್ರದರ್ಶನ ಮಾಡಿರುತ್ತಾರೆ.) ... ... ॥೨೪॥

ಶ್ಲೋ॥ ಧೂಮೋರಾತ್ರಿಸ್ತಥಾಕೃಷ್ಣಃ ಷಣ್ಮಾಸಾದಕ್ಷಿಣಾಯನಂ । ತತ್ರಚಾಂದ್ರಮಸಂಜ್ಯೋತಿ ರ್ಯೋಗೀಪ್ರಾಪ್ಯನಿವರ್ತತೇ ॥ ... ... ॥೨೫॥

ಪ॥ ಧೂಮಃ- ರಾತ್ರಿಃ- ತಥಾ- ಕೃಷ್ಣಃ- ಷಣ್ಮಾಸಾಃ- ದಕ್ಷಿಣಾಯನಂ। ತತ್ರ ಚಾಂದ್ರಮಸಂ- ಜ್ಯೋತಿಃ- ಯೋಗೀ- ಪ್ರಾಪ್ಯ- ನಿವರ್ತತೆ ॥

ಅ॥ ಧೂಮಃ- ಹೊಗೆಯು, ರಾತ್ರಿಃ - ರಾತ್ರಿಯು, ತಥಾ- ಹಾಗೆಯೇ, ಕೃಷ್ಣಃ- ಕೃಷ್ಣಪಕ್ಷವು, ಷಣ್ಮಾಸಾದಕ್ಷಿಣಾಯನಂ - ದಕ್ಷಿಣಾಯನವೆಂಬ ಆರುಮಾಸಗಳೂ,(ಎಂದರೆ ಇವುಗಳಿಗೆ ಅಭಿಮಾನಿದೇವತೆಗಳು, ಯತ್ರ- ಯಾವಮಾರ್ಗದಲ್ಲಿರುತ್ತಾರೊ) ತತ್ರ- ಆಮಾರ್ಗದಲ್ಲಿ ಹೋಗಿರುವ, ಯೋಗೀ- ಪುಣ್ಯಕರ್ಮಿಯಾದ ಯೋಗಿಯು,ಚಾಂದ್ರಮಾಸಂ- ಚಂದ್ರಸಂಬಂಧಿಯಾದ, ಜ್ಯೋತಿಃ- ಪ್ರಕಾಶವುಳ್ಳ ಲೋಕವನ್ನು, ಪ್ರಾಪ್ಯ-ಹೊಂದಿ, ನಿವರ್ತತೆ- ಪುನಶ್ಚ ಬರುತ್ತಾನೆ. ॥೨೫॥

(ಶಂ॥ ಭಾ॥) ಇದುವರೆಗೂ ಪ್ರತಿಪಾದಿಸಲ್ಪಟ್ಟ ದೇವಯಾನ ಮಾರ್ಗವನ್ನು ಸ್ತುತಿಮಾಡುವುದಕ್ಕಾಗಿ ಪಿತೃಯಾನಮಾರ್ಗವನ್ನು ಹೇಳುತ್ತಾನೆ. ಧೂಮಾಭಿಮಾನಿ ದೇವತೆಯು ರಾತ್ರ್ಯಭಿಮಾನಿದೇವತೆಯು ಕೃಷ್ಣಪಕ್ಷಾಭಿಮಾನಿ ದೇವತೆಯು ಆರುಮಾಸಗಳುಳ್ಳ ದಕ್ಷಿಣಾಯನಾಭಿಮಾನಿ ದೇವತೆಯೂ ಇರುವಮಾರ್ಗದಲ್ಲಿ ಹೋಗುವ ಅಗ್ನಿಹೋತ್ರಾದಿ ವೈದಿಕ ಕರ್ಮಗಳನ್ನೂ ತಟಾಕಾರಾಮಾದಿ ಪ್ರತಿಷ್ಠೆಗಳನ್ನೂ ಗೋಭೂದಾನಾದಿ ಮಹಾದಾನಗಳನ್ನೂ ಮಾಡುವಂಥಾಕರ್ಮಯೋಗಿಯು ಇಲ್ಲಿಂದ ಹೊರಟು ಚಂದ್ರಸಂಬಂಧವಾದ ತೇಜಸ್ಸನ್ನು ಹೊಂದಿ (ಎಂದರೆ ಸ್ವರ್ಗಾದಿ ಲೋಕಗಳಂಹೊಂದಿ) ಅಂತಹ ಪುಣ್ಯಕರ್ಮಗಳು ಕ್ಷಯಿಸಿಹೋದಮೇಲೆ ಪುನಶ್ಚ ಮಾನವಲೋಕಕ್ಕೆ ಬರುತ್ತಾನೆ. ... ... ... ॥೨೫॥

(ಶ್ರೀ) ಈಮಾರ್ಗ ದ್ವಯೋಪದೇಶದಿಂದ ನಿವೃತ್ತಿ ಕರ್ಮಸಹಿತವಾದ ಉಪಾಸನದಿಂದ ಕ್ರಮಮುಕ್ತಿಯುಂಟಾಗುವುದೆಂತಲೂ, ಕಾಮ್ಯಕರ್ಮಗಳಿಂದ ಸ್ವರ್ಗಾದಿ ಭೋಗಗಳನ್ನನುಭವಿಸಿದಮೇಲೆ ಪುನರಾವೃತ್ತಿಯುಂಟಾಗುವುದೆಂತಲೂ, ನಿಷಿದ್ಧ ಕರ್ಮಗಳಾದ ಸುರಾಪಾನಾದಿಗಳನ್ನು ಮಾಡಿದವರು ನರಕಾದಿ ತತ್ತತ್ಫಲಗಳನ್ನು ಅನುಭವಿಸಿದ ಮೇಲೆ ಪುನರಾವೃತ್ತಿಯಂ ಹೊಂದುವುರೆಂತಲೂ ಕ್ಷುದ್ರ ಕರ್ಮಿಗ

ಳಾದ ಜಂತುಗಳಿಗೆ ಇಲ್ಲಿಯೇ ಪುನಃಪುನಃ ಜನ್ಮವು ಪ್ರಾಪ್ತವಾಗುವು ದೆಂತಲೂ,, ತಿಳಿಸಲ್ಪಟ್ಟಿತೆಂದರಿಯಬೇಕು. ॥೨೫॥

(ರಾ॥ ಭಾ॥) ಯಾವ ಧೂಮಾದಿ ಮಾರ್ಗದಲ್ಲಿ ಧೂಮರಾತ್ರ್ಯಧಿಷ್ಠಾನ ದೇವತೆಗಳೂ ಆಕಾಶ ಮಧ್ಯರೇಖೆಗೆ ದಕ್ಷಿಣಗಲಾದ ಭಾಗಗಳು ಸೂರ್ಯಗತಿಯುಳ್ಳದ್ದಾಗಿರುವುದರಿಂದ ದಕ್ಷಿಣಾಯನವೆಂಬ ಹೆಸರುಳ್ಳ ಆರುಮಾಸಗಳಿಗೆ ಅಧಿಷ್ಠಾನ ದೇವತೆಯೂ ಮಾರ್ಗವನ್ನು ನಡೆಸುವವರಾಗಿರುತ್ತಾರೋ, ಮತ್ತು ಯಾವಮಾರ್ಗದಲ್ಲಿ ಆವರುಗಳಿಗೆ ಮೇಲೆ ಪಿತೃಲೋಕವಿರುವುದೋ, ಅದಕ್ಕೆ ಮೇಲೆ ಆಕಾಶವೋ, ಅಂತಹ ಧೂಮಾದಿಮಾರ್ಗದಲ್ಲಿ ಹೋಗಿರುವ ಪುಣ್ಯಕರ್ಮಿಯಾದವನು ಚಂದ್ರ ಸಂಬಂಧಿಯಾದ ತೇಜಸ್ಸನ್ನು ಹೊಂದಿ ಚಂದ್ರನದಶೆಯಿಂದ ಆಕಾಶವನ್ನೂ, ಅಲ್ಲಿಂದ ವಾಯುವನ್ನೂ, ಅಲ್ಲಿಂದ ಧೂಮವನ್ನೂ, ಅದರಿಂದ ಜಲವನ್ನು ಧರಿಸಿಕೊಂಡಿರುವ ಮೇಘವನ್ನೂ, ಅಲ್ಲಿಂದವರ್ಷಿಸುವಮೇಘವನ್ನೂ, ಅಲ್ಲಿಂದ ವ್ರೀಹಿಯವಾದಿ ಧಾನ್ಯಗಳನ್ನೂ, ಅವುಗಳಮಾರ್ಗವಾಗಿ ರೇತೋತ್ಸರ್ಜನವಂ ಮಾಡುವ ಪುರುಷನನ್ನೂ ಅವನಿಂದ ಶುಕ್ಲದೊಡನೆ ತಾಯಿಯನ್ನುಹೊಂದಿ ಪುನಶ್ಚ ತನ್ನ ಕರ್ಮಾನುಗುಣವಾಗಿ ಉತ್ಕೃಷ್ಟವಾದ ಬ್ರಾಹ್ಮಣಾದಿ ಜನ್ಮವನ್ನಾದರೂ ನಿಕೃಷ್ಟವಾದ ನಾಯಿ ಹಂದಿ ಮೊದಲಾದ ಜನ್ಮವನ್ನಾದರೂ ಹೊಂದಿ ಕೆಳಗೆಬರುತ್ತಾನೆ. ... ... ... ॥೨೫॥

ಶ್ಲೋ॥ಶುಕ್ಲಕೃಷ್ಣೇಗತೀಹ್ಯೇತೇಜಗತಶ್ಶಾಶ್ವತೇಮತೇ |
ಏಕಯಾಯಾತ್ಯನಾವೃತ್ತಿ ಮನ್ಯಯಾವರ್ತತೆಪುನಃ ॥೨೬॥

ಪ॥ ಶುಕ್ಲಕೃಷ್ಣೇ – ಗತೀ – ಹಿ– ಏತೇ – ಜಗತಃ– ಶಾಶ್ವತೇ– ಮತೇ । ಏಕಯಾ– ಯಾತಿ – ಅನಾವೃತ್ತಿಂ – ಅನ್ಯಯಾ – ವರ್ತತೆ – ಪುನಃ ||

(ಅ॥ ರಾ॥ ಭಾ) ಏಕಯಾ– ಒಂದು ಅರ್ಚಿರಾದಿ ಗತಿಯಿಂದ, ಅನಾವೃತ್ತಿಂ– ಅಪುನರಾವೃತ್ತಿಯನ್ನು, ಯಾತಿ– ಹೊಂದುತ್ತಾನೆ, ಅನ್ಯಯಾ– ಎರಡನೇದಾದ ಧೂಮಾದಿಗತಿಯಿಂದ, ಪುನರಾವರ್ತತೆ – ಪುನರಾವೃತ್ತಿಯನ್ನು ಹೊಂದುತ್ತಾನೆ. ಏತೇ– ಈ, ಶುಕ್ಲಕೃಷ್ಣೇಗತೀ– ಶುಕ್ಲಶಬ್ದಿತವಾದ ಅರ್ಚಿರಾದಿ ಗತಿಯೂ, ಕೃಷ್ಣಶಬ್ದಿತವಾದ ಧೂಮಾದಿಗತಿಯೂ, ಜಗತಃ– ಜಗತ್ತಿನಲ್ಲಿರುವ ಜ್ಞಾನಿಗಳಿಗೂ ಪುಣ್ಯಕರ್ಮಿಗಳಿಗೂ, ಶಾಶ್ವತೇಮತೇ – ನಿತ್ಯಗಳಾಗಿಯೂ ಶ್ರುತಿಸಿದ್ಧಗಳಾಗಿಯೂ ಇರುವುವು. ... ॥೨೬॥

(ಶಂ॥ ಭಾ॥) ಆಯೆರಡು ಮಾರ್ಗಗಳಲ್ಲಿ ಉತ್ತರಾಯಣಮಾರ್ಗ ವು ಜ್ಞಾನಪ್ರಕಾಶಕವಾಗಿರುವುದರಿಂದ ಶುಕ್ಲಮಾರ್ಗವೆಂತಲೂ ದಕ್ಷಿಣಾ ಯನಮಾರ್ಗವು ಅಂತಾದ್ದಲ್ಲವಾದುದರಿಂದ ಎಂದರೆ ಜ್ಞಾನಪ್ರಕಾಶಕ ವಲ್ಲದೆ ತಮೋಮಯವಾಗಿರುವುದರಿಂದ ಕೃಷ್ಣಮಾರ್ಗವೆಂತಲೂ ಹೇ ಳಲ್ಪಡುವುದು. ಈಪ್ರಕಾರವಾಗಿ ಪ್ರಸಿದ್ಧಗಳಾದ ಯರಡುಮಾರ್ಗ ಗಳಲ್ಲಿ ಮೊದಲನೆದಾದ ಶುಕ್ಲಮಾರ್ಗವು ಜ್ಞಾನಾಧಿಕಾರಿಗಳಿಗೆಂತಲೂ ಯೆರಡನೇದಾದ ಕೃಷ್ಣಮಾರ್ಗವು ಕರ್ಮಾಧಿಕಾರಿಗಳಿಗೆಂತಲೂಸಮ್ಮ ತವಾಗಿರುವುದು. ಮತ್ತು ಸಂಸಾರವು ನಿತ್ಯವಾಗಿರುವುದರಿಂದ ಈ ಮಾರ್ಗಗಳೂ ನಿತ್ಯಗಳೇ ಎಂದಂಗೀಕರಿಸಲ್ಪಟ್ಟಿರುವುದು. ಈಯೆ ರಡು ಮಾರ್ಗಗಳಲ್ಲಿ ಮೊದಲನೆದಾದ ಮಾರ್ಗದಿಂದ ಹೋದವನುಮೋ ಕ್ಷವನ್ನು ಹೊಂದುತ್ತಾನೆಂತಲೂ ಯೆರಡನೇದಾದ ಕೃಷ್ಣಮಾರ್ಗ ದಿಂದ ಹೋದವನು ಪುನಃ ಮಾನವಲೋಕಕ್ಕೆಬಂದು ಸಂಸಾರಿ ಯಾಗುತ್ತಾನೆಂತಲೂ, ತಿಳಿಯಬೇಕು. ॥೨೬॥

ಶ್ಲೋ॥ ನೈತೇಸೃತೀಪಾರ್ಥಜಾನನ್ ಯೋಗೀಮುಹ್ಯತಿ
ಕಶ್ಚನ। ತಸ್ಮಾತ್ಸರ್ವೇಷುಕಾಲೇಷು ಯೋಗಯುಕ್ತೋ
ಭವಾರ್ಜುನ ॥

ಪ॥ ನ- ಏತೇ- ಸೃತೀ- ಪಾರ್ಥ- ಜಾನನ್- ಯೋಗೀ - ಮುಹ್ಯತಿ-ಕಃ-ಚನ। ತ ಸ್ಮಾತ್-ಸರ್ವೇಷು- ಕಾಲೇಷು. ಯೋಗಯುಕ್ತಃ- ಭವ- ಅರ್ಜುನ॥

(ಅ॥ ರಾ॥ ಭಾ॥) ಹೇಪಾರ್ಥ- ಎಲೈ ಅರ್ಜುನನೆ,ಏತೇಸೃತೀ- ಹಿಂದೆ ವಿವರಿಸಿರುವ ಈಅರ್ಚಿರಾದಿ ಮಾರ್ಗವನ್ನೂಧೂಮಾದಿಮಾರ್ಗ ವನ್ನೂ, ಜಾನನ್- ಅನುದಿನವೂ ಚಿಂತಿಸುತಲಿರುವ, ಯೋಗೀ-ಭಕ್ತ, ಯೋಗನಿಷ್ಠನು, (ಶಂ) ಧ್ಯಾನಯೋಗಿಯು, ಕಶ್ಚನ - ಒಬ್ಬನೂ, ನಮುಹ್ಯತಿ- ಮೋಹವನ್ನು ಹೊಂದುವುದಿಲ್ಲವು. ಮತ್ತೇನೆಂದರೆ! ಪ್ರಯಾಣಕಾಲದಲ್ಲಿ ಮೂರ್ಧನ್ಯನಾಡಿಯಿಂದ ಅರ್ಚಿರಾದಿಮಾರ್ಗವನ್ನ ವಲಂಬಿಸಿ ಬ್ರಹ್ಮವನ್ನು ಹೊಂದುತ್ತಾನೆ. (ಶ್ರೀ) ಸ್ವರ್ಗಾದಿಸುಖಗ ಳನ್ನಪೇಕ್ಷಿಸದೆ ಪರಮೇಶ್ವರನಿಷ್ಠನಾಗುತ್ತಾನೆ. (ಗೀ॥ವಿ) ಮರಣ ಕಾಲದಲ್ಲಿ ಭಗವಂತನನ್ನು ಮರೆಯುವದಿಲ್ಲವು. ತಸ್ಮಾತ್ - ಆದುದ ರಿಂದ, ಸರ್ವೇಷುಕಾಲೇಷು- ಸರ್ವದಿನಗಳಲ್ಲಿಯೂ, ಯೋಗಯುಕ್ತೋ

ಭವ- ಗತಿಚಿಂತನವೆಂಬ ಯೋಗದಲ್ಲಿ ನಿಷ್ಠೆಯುಳ್ಳವನಾಗಿರು. (ಶಂ) ಸಮಾಹಿತ ಚಿತ್ತನಾಗಿರು. (ಗೀ॥ ವಿ) ಭಕ್ತಿಯೊಡನೆ ಜ್ಞಾನಕರ್ಮಗಳೆಂಬೀ ಯೆರಡನ್ನು ಅನುಷ್ಠಿಸುವವನಾಗು. ॥೨೭॥

(ಗೀ॥ ವಿ) ಈಗ ವಿವರಿಸಲ್ಪಟ್ಟ ಮಾರ್ಗದ್ವಯ ಸ್ವರೂಪವನ್ನರಿತವನ ಫಲವನ್ನು ಹೇಳುತ್ತಾನೆ. ಎಲೈ ಅರ್ಜುನನೇ! ಈಗ ಹೇಳಿರುವ ಎರಡುಮಾರ್ಗಗಳನ್ನು ಉಪಾಯ ಸಹಿತವಾಗಿ ತಿಳಿದಿರುವಂಥಾ ಆ ಮಾರ್ಗಪ್ರಾಪ್ತ್ಯುಪಾಯಾನುಷ್ಠಾನಪರನಾದಒಬ್ಬನೂ(ಅಥವಾ) ಈ ಮಾರ್ಗಗಳನ್ನು ಸಾಕ್ಷಾತ್ಕರಿಸುವಂತ ಬ್ರಹ್ಮ ಸಾಕ್ಷಾತ್ಕಾರ ರೂಪವಾದ ಉಪಾಯವುಳ್ಳವನು ಸಂಸಾರ ಕಾರಣವಾದ ಮಿಥ್ಯಾಜ್ಞಾನದಿಂದ ಮುಕ್ತನಾಗುವುದಿಲ್ಲವು. ಆದುದರಿಂದ ಎಲೈ ಅರ್ಜುನನೆ! ನೀನು ಸಮಸ್ತ ಕಾಲಗಳಲ್ಲಿಯೂ, ನಾವು ಹಿಂದೆ ವಿವರಿಸಿರುವ ಯೋಗನಿಷ್ಠನಾಗಿರು. ಇದಕ್ಕೆ "ಸೃತೀಜ್ಞಾತ್ವಾತುಸೋಪಾಯೇ ಅನುಷ್ಠಾಯಚಸಾಧನಂ। ನಕಶ್ಚಿನ್ಮೋಹಮಾಪ್ನೋತಿ ನಚಾನ್ಯಾತತ್ರಪೈಗತಿಃ" ಎಂಬ ಸ್ಕಾಂದಪುರಾಣವಚನವು ಪ್ರಮಾಣವು. ಇದಕ್ಕನುಗುಣವಾಗಿ "ಮಾರ್ಗೌಬ್ರಹ್ಮಚೆಯಃ ಪಶ್ಯೇತ್ಸಾಕ್ಷಾದೇವಾಪರೋಕ್ಷತಃ। ಸರ್ವಪುಣ್ಯಾತಿಗೋಭೂತ್ವಾಯಾತ್ಯ ಸೌಬ್ರಹ್ಮತತ್ಪರಂ" ಎಂಬೀ ಪ್ರಮಾಣವನ್ನೂ ಅನುಸಂಧಿಸಬೇಕು. ॥೨೭॥

ಶ್ಲೋ॥ ವೇದೇಷುಯಜ್ಞೇಷು ತಪಸ್ಸುಚೈವ ದಾನೇಷು
ಯತ್ಪುಣ್ಯಫಲಂಪ್ರದಿಷ್ಟಂ। ಅತ್ಯೇತಿತತ್ಸರ್ವಮಿದಂವಿ
ದಿತ್ವಾ ಯೋಗೀಪರಂಸ್ಥಾನಮುಪೈತಿಚಾದ್ಯಂ ॥೨೮॥

ಪ॥ ವೇದೇಷು - ಯಜ್ಞೇಷು - ತಪಸ್ಸು- ಚ - ಏವ- ದಾನೇಷು - ಯತ್- ಪುಣ್ಯ- ಫಲಂ- ಪ್ರದಿಷ್ಟಂ | ಅತ್ಯೇತಿ - ತತ್- ಸರ್ವಂ - ಇದಂ - ವಿದಿತ್ವಾ - ಯೋಗೀ- ಪರಂ- ಸ್ಥಾನಂ- ಉಪೈತಿ- ಚ- ಆದ್ಯಂ॥

(ಅ॥ ರಾ।ಭಾ) ವೇದೇಷು- ಋಗ್ಯಜುಸ್ಸಾಮಾಥರ್ವಣಗಳೆಂಬ ಚತುರ್ವೇದಾಭ್ಯಾಸದಲ್ಲಿಯೂ, ಯಜ್ಞೇಷು- ಸರ್ವ ಯಜ್ಞಗಳಲ್ಲಿಯೂ, ತಪಸ್ಸುಚೈವ- ಸರ್ವ ತಪೋನುಷ್ಠಾನಗಳಲ್ಲಿಯೂ, ದಾನೇಷು - ಸರ್ವದಾನಗಳಲ್ಲಿಯೂ, ಪುಣ್ಯ ಎಂಬದಾಗಿ ಲುಪ್ತ ಸಪ್ತಮೀ ವಿಭಕ್ತಿಕವಾಗಿ ಪದಚ್ಛೇದವು, ಈ ಸರ್ವ ಪುಣ್ಯಗಳಲ್ಲಿಯೂ, ಇವುಗಳೆಲ್ಲವನ್ನೂ ಅನುಷ್ಠಿಸಿದರೆ ಎಂದರ್ಥವು. ಯತ್ಫಲಂಪ್ರದಿಷ್ಟಂ- ಯಾವಯಾವ ಫಲವು ಶಾಸ್ತ್ರಗಳಲ್ಲಿ ಹೇಳಲ್ಪಟ್ಟಿರುವುದೋ, ಇದಂವಿದಿತ್ವಾ- ಈ (೭—೮ ನೇ) ಅಧ್ಯಾಯಗಳಲ್ಲಿ ನಾನು ಸಮಾ

ಚೀನವಾಗಿ ಪ್ರತ್ಯಕ್ಷದಲ್ಲುಪದೇಶಿಸಿದ ನನ್ನ ಮಹಾತ್ಮ್ಯವನ್ನು ಯಥಾವತ್ತಾಗಿ ತಿಳಿದು, ತತ್ಸರ್ವಮತ್ಯೇತಿ- ಈ ನಮ್ಮ ಮಾಹಾತ್ಮ್ಯಜ್ಞಾನದಿಂದುಂಟಾದ ಸುಖಾತಿಶಯದಿಂದ ಆಪುಣ್ಯ ಫಲಗಳೆಲ್ಲವನ್ನೂ ತೃಣವತ್ಕರಿಸುತ್ತಾನೆ. ಯೋಗೀ- ಜ್ಞಾನಿಯಾಗಿ, ಪರಮಾದ್ಯಂಸ್ಥಾನಮುಪೈತಿ- ಜ್ಞಾನಿಗೆ ಪ್ರಾಪ್ಯವಾಗಿಯೂ ಉತ್ತಮವಾಗಿಯೂ ಸರ್ವಸ್ಥಾನಗಳಿಗೂ ಆದ್ಯವಾಗಿಯೂ ಇರುವ ನಮ್ಮ ವೈಕುಂಠವೆಂಬ ದಿವ್ಯಸ್ಥಾನವನ್ನು ಹೊಂದುವನು. ... ||೨೮||

(ಶಂ||ಭಾ||) ಎಲೈ ಅರ್ಜುನನೆ! ಈ ಅಧ್ಯಾಯದಲ್ಲಿ ಪ್ರಥಮ ದ್ವಿತೀಯ ಶ್ಲೋಕಗಳಿಂದ ನೀನು ಕೇಳಿರುವ ಯೇಳುಪ್ರಶ್ನೆಗಳಿಗೂ ನನ್ನಿಂದ ಹೇಳಲ್ಪಟ್ಟ ಪ್ರತ್ಯುತ್ತರವನ್ನು ತಿಳಿದು ಅನುಷ್ಠಾನವಂಮಾಡುವ ಧ್ಯಾನಯೋಗಿಯು, ನಿಯಮಪೂರ್ವಕವಾಗಿ ವೇದ ವೇದಾಂಗಗಳನ್ನು ಪಠನಮಾಡುವುದರಿಂದಲೂ, ಅಂಗೋಪಾಂಗ ಸಹಿತವಾಗಿ ಯಜ್ಞಗಳನ್ನನುಷ್ಠಿಸುವುದರಿಂದಲೂ, ಕಾಯಶೋಷಣಾದಿಗಳಿಂದ ಕೃಚ್ಛ್ರಚಾಂದ್ರಾಯಣಾದಿ ತಪಸ್ಸುಗಳ ನ್ನಾಚರಿಸುವುದರಿಂದಲೂ,ಉಂಟಾಗುವ ಪುಣ್ಯಫಲಗಳನ್ನು ಅತಿಕ್ರಮಿಸುತ್ತಾನೆ. ಎಂದರೆ ಅವುಗಳನ್ನು ನಿಕೃಷ್ಟಗಳನ್ನಾಗಿ ತಿಳಿದು ಬಿಟ್ಟುಬಿಡುತ್ತಾನೆಂದರ್ಥವು.ಅಷ್ಟುಮಾತ್ರವಲ್ಲದೆ ಸರ್ವಕಾರಣವೂ ಸರ್ವೋತ್ತಮವೂ ಆಗಿರುವ ವಿಷ್ಣುಸಂಬಂಧವಾದ ಮೋಕ್ಷಸ್ಥಾನವನ್ನೂ ಕ್ರಮವಾಗಿಹೊಂದುವನು. ಈತಧ್ಯಾಯದಲ್ಲಿ ಪ್ರಥಮ ದ್ವಿತೀಯ ಶ್ಲೋಕಗಳಿಂದ ಅರ್ಜುನನ ವಿಳುಪ್ರಶ್ನೆಗಳಿಗೂ ಪ್ರತ್ಯುತ್ತರಗಳಂಹೇಳುತ್ತಾ ಯೋಗಮಾರ್ಗವನ್ನು ಪ್ರದರ್ಶನಮಾಡುವುದರಿಂದ ತತ್ಪದಾರ್ಥವಾದ ಬ್ರಹ್ಮವಿಧ್ಯೇಯು ವೆಂದು ತಿಳಿಸಲ್ಪಟ್ಟಿತೆಂದರಿಯಬೇಕು. ||೨೮||

(ಶಂ|| ಅ||) ಯೋಗಿಗಳಿಂದಲೂ ಕರ್ಮಿಗಳಿಂದಲೂ ಹೊಂದಲ್ಪಡುವ ಉತ್ತರಾಯನ ದಕ್ಷಿಣಾಯನ ಮಾರ್ಗಗಳನ್ನೂ ಆಮಾರ್ಗಗಳಲ್ಲಿ ಹೋಗುವಂತ ಧ್ಯಾನಯೋಗಿಗಳಿಗೂ ಕರ್ಮಯೋಗಿಗಳಿಗೂ ಪ್ರಾಪ್ತವಾಗುವ ಫಲಗಳನ್ನು ಇದುವರೆಗೂ ಹೇಳಿದನೆಂತಲೂ ಈಶ್ಲೋಕದಿಂದ ಸಗುಣ ಬ್ರಹ್ಮೋಪಾಸಕರಿಗೆ ಅರ್ಚಿರಾದಿ ಲೋಕಗಳಲ್ಲಿಹೊಂದಲ್ಪಡುವ ಸುಖವೂ ಬ್ರಹ್ಮಪ್ರಾಪ್ತಿಯೂ ತಿಳಿಸಲ್ಪಡುವುದೆಂತಲೂ ತಿಳಿ

ಯಬೇಕು. ಸಗುಣ ಬ್ರಹ್ಮೋಪಾಸಕನು ಅಗ್ನಿಲೋಕವೇ ಮೊದ
ಲಾದ ಬ್ರಹ್ಮಲೋಕಪರ್ಯಂತಗಳಾಗಿರುವ ಲೋಕಗಳಲ್ಲಿ ಪ್ರತಿಸ್ಥಾನಗ
ಳಲ್ಲಿಯೂ ಸತ್ಕಾರವನ್ನು ಹೊಂದುತಾ ನಿಯಮ ಪೂರ್ವಕವಾಗಿ ಮಾಡ
ಲ್ಪಟ್ಟ ವೇದಾಧ್ಯಯನಾದಿಗಳಿಂದ ಪ್ರಾಪ್ತವಾಗುವ ಸುಖಕ್ಕಿಂತಲೂ
ಅಧಿಕವಾದ ಸುಖವನ್ನು ಹೊಂದುವುದು ಮಾತ್ರವಲ್ಲದೆ ಸರ್ವಾಧಿಷ್ಠಾ
ನವೂಸರ್ವಕಾರಣವೂ ಆದ ಪರಬ್ರಹ್ಮವನ್ನೂ ಹೊಂದುತ್ತಾನೆ. ॥೨೮॥

ಅದ್ವೈತ ಸಿದ್ಧಾನ್ತಾನುಸಾರಿಗಳಾದ ಪ್ರಾಚೀನವ್ಯಾಖ್ಯಾತೃಗಳ
೮ನೇ ಅಧ್ಯಾಯ ಸಂಗ್ರಹ ಶ್ಲೋಕವು.

ಮೂ॥ ಗೃಹ್ಣಾತ್ಯಾತ್ಮಪ್ರಕಾಶಾನ್ನಿಜವಿಷಯಮತೋ
ಽಧ್ಯಾತ್ಮಮತ್ರೇಂದ್ರಿಯಂಸ್ಯಾ ತ್ಸೂರ್ಯಾದ್ಯಂತಃ ಪ್ರ
ವೃತ್ತಿಂಪ್ರಜನಯತಿತತಶ್ಚಾಧಿದೈವಂತದುಕ್ತಂ । ರೂ
ಪಾದ್ಯಂ ಚಾಧಿಭೂತಂ ಯದನುಗತಮನುಧ್ಯೇಯಮಾ
ತ್ಮಸ್ವರೂಪಂ ತೇನಾಂತೇತಸ್ಯತಿಷ್ಠಾಮ್ಯಹ ಮಭಿಮು
ಖಮಿತ್ಯಷ್ಟಮೇ ಸ್ಪಷ್ಟಮಾಹ ॥ ।೮।

ತಾ॥ ದೇಹವನ್ನಾಶ್ರಯಿಸಿ ಕೊಂಡಿರುವಂತವನಾಗಿಯೂ ಇಂ
ದ್ರಿಯ ಪ್ರವೃತ್ತಿಗಳೆಲ್ಲವೂ ತನ್ನದೆಂದಭಿಮಾನಿಸಿ ಆತ್ಮಪ್ರಕಾಶದಿಂದ
ಶಬ್ದಾದಿ ವಿಷಯಾನುಭವವನ್ನು ಮಾಡುವಂತವನಾಗಿಯೂ ಇರುವ
ಪ್ರತ್ಯಗಾತ್ಮನು ಅಧ್ಯಾತ್ಮನೆನ್ನಲ್ಪಡುವನು. ಅರೀತಿಯಾಗಿ ಇಂದ್ರಿ
ಯಬಲಕ್ಕೆ ಪುಷ್ಟಿಪ್ರದನಾಗಿಯೂ ಸೂರ್ಯಮಂಡಲಾನ್ತರ್ವರ್ತಿಯಾ
ಗಿಯೂ ಇರುವ ಹಿರಣ್ಯಗರ್ಭನು ಅಧಿದೈವ ವೆನ್ನಲ್ಪಡುವನು. ನಾಶ್ಯ
ವಾದ ರೂಪಾದಿ ಸಕಲ ಪದಾರ್ಥಗಳು ಅಧಿಭೂತ ವೆನ್ನಲ್ಪಡುವುದು.
ಸರ್ವವ್ಯಾಪಿಯಾಗಿ ಸರ್ವಧ್ಯೇಯ ವಸ್ತುಗಳಲ್ಲಿ ಶ್ರೇಷ್ಠವಾಗಿರುವುದೇ
ಬ್ರಹ್ಮವೆನ್ನಲ್ಪಡುವುದು. ವೇದ ವಿಹಿತಗಳಾದ ಕರ್ಮಗಳನ್ನು ಜೀವಿ
ತಕಾಲಪರ್ಯಂತವೂ ಆಚರಿಸುತಾ ಅಂತಹ ಬ್ರಹ್ಮನನ್ನು ಧ್ಯಾನಮಾ
ಡುವಂತ ಮಹಾನುಭಾವನಿಗೆ ಮರಣಾವಸರದಲ್ಲಿ ನಾನೆದುರಾಗಿ ನಿಂತು
ನನ್ನ ಸ್ಮರಣೆಯನ್ನುಂಟುಮಾಡಿ ಅಧಿ ಯಜ್ಞನೆಂಬ ನನ್ನಲ್ಲಿ ಐಕ್ಯ
ವಂಮಾಡಿಕೊಳ್ಳುವೆನೆಂದೀ ಅಧ್ಯಾಯದಿಂದ ಶ್ರೀಕೃಷ್ಣ ಪರಮಾ

ತ್ಮನರ್ಜುನನಿಗೆ ಬೋಧಿಸಿದನೆಂದೀಶ್ಲೋಕದಿಂದ ಅಷ್ಟಮಾಧ್ಯಾಯಾರ್ಥಗಳಂ ಸಂಗ್ರಹಿಸಿರುವ ಪ್ರಕಾರವಂ ತಿಳಿಯಬೇಕು. ॥೮॥

(ಶ್ರೀಮದ್ಯಾಮುನಾಚಾರ್ಯರ ಅಧ್ಯಾಯ)
ಸಂಗ್ರಹ ಶ್ಲೋಕವು.

ಮೂ ॥ ಐಶ್ವರ್ಯಾಕ್ಷರಯಾಥಾತ್ಮ್ಯ ಭಗವಚ್ಚರಣಾರ್ಥಿನಾಂ । ವೇದ್ಯೋಪಾದೇಯಭಾವಾನಾಮಷ್ಟಮೇಭೇದ ಉಚ್ಯತೇ ॥ ... ... ॥೧೨॥

ತಾ ॥ ಇಂದ್ರಪ್ರಜಾಪತಿ ಪಶುಪತಿ ಭೋಗಕ್ಕಿಂತಲೂ ಅತಿಶಯಿತ ಭೋಗವಾದ ಐಶ್ವರ್ಯವೇನು, ವಿವಿಕ್ತಾತ್ಮಸ್ವರೂಪವೇನು, "ಅಕ್ಷರಂ ಬ್ರಹ್ಮಪರಮಂ,, (೮॥ ೩॥) ಇತ್ಯಾದಿಗಳಿಂದ ಹೇಳಲ್ಪಟ್ಟ ಶುದ್ಧಾತ್ಮಸ್ವರೂಪ ಪ್ರಭೃತಿಗಳೇನು ಆಯಾ ಇಷ್ಟಾರ್ಥಗಳಿಗೆ ಅನುರೂಪಗಳಾದ ಪರಮಪುರುಷ ಚಿಂತನವೇನು, ಅಂತಿಮಸ್ಮೃತಿ ಯೇನು, ಅರ್ಚಿರಾದಿಗತಿ ಚಿಂತನಾದಿಗಳೇನು, ಇವುಗಳೆಂಬ ಪದಾರ್ಥಗಳೂ ಆಯಾ ಅಧಿಕಾರಿಗಳಿಗೆ ಅನುರೂಪಗಳಾದ ಇವುಗಳವಿಶೇಷಗಳೂ ಹೇಳಿಲ್ಪಟ್ಟಿರುವುದೆಂದುತಿಳಿಯಬೇಕು. ... ॥೧೨॥

(ಶ್ರೀಮನ್ನಿಗಮಾನ್ತಮಹಾದೇಶಿಕ ರನುಗ್ರಹಿಸಿದಶ್ರೀಮದ್ಗೀತಾರ್ಥಸಂಗ್ರಹಗಾಥೆಯು.

ಮೂ ॥ ಆರಾವಶೆಲ್ವಮು ಮಾರುಯಿರ್ಕಾಣು ಮರುವ್ವಯನುಂ,ಪೇರಾದರ್ತ್ತಕೞ್ಕೆೞಮರುಂ ಪೆರುವಾೞ್ಚಿಕಳುಂ, ಶೋರಾದುಕನ್ದವರ್ ತೂಂಪಮದಿಕೊಳ್ವದುಂಶೆಪ್ಪವನಮುಂ, ತೋರಾವಿಶಯನುಕ್ಕುತ್ತಿರುನಾರಣ್ಚೆಪ್ಪಿನನೆ। ... ॥೯॥

ವ್ಯಾ॥ ಐಶ್ವರ್ಯಾಕ್ಷರಯಾಥಾತ್ಮ್ಯ -ಅಷ್ಟಮೇಭೇದಉಚ್ಯತೇ,, ಎಂಬುವ ಸಙ್ಗ್ರಹ ಶ್ಲೋಕದಂತೆ ಈ ಅಷ್ಟಮಾಧ್ಯಾಯಾರ್ಥಗಳನ್ನೊಂದು'ಗಾಥೆಯಿಂದ ಸಂಗ್ರಹಿಸಿ ಹೇಳುತ್ತಾರೆ. ತಿರುನಾರಣ್-ಶ್ರಿಯಃಪತಿಯಾದ ನಾರಾಯಣನು, ಶ್ರೀಕೃಷ್ಣನೆಂದರ್ಥವು."ಏಷನಾರಾಯಣಶ್ರೀಮಾನ್ ಕ್ಷೀರಾರ್ಣವನಿಕೇತನಃ। ನಾಗಪರ್ಯಂಕಮುತ್ಸೃ

ಜ್ಯ ಹ್ಯಾಗತೋಮಧುರಾಂಪುರೀಂ ,, ಎಂಬ ಪ್ರಮಾಣವನ್ನನುಸಂಧಿಸಬೇಕು. ಆರಾದಕೆಲ್‌ವಮುಮ್ - ಪರ್ಯಾಪ್ತವಾಗದ ಐಶ್ವರ್ಯವನ್ನು, ಉತ್ತರೋತ್ತರೋತ್ಕರ್ಷದಿಂದ ನಿರಂತರವಾಗಿ ಉತ್ತರೋತ್ತರತೃಷ್ಣಾಜನಕವಾದ ಐಶ್ವರ್ಯವನ್ನೆಂದರ್ಥವು. ಇವನ್ನು ಉಕನ್ದವರ್ ಎಂಬ ಪದದೊಡನೆ ಅನ್ವಯಿಸಬೇಕು. ಆರ್- ತೃಪ್ತಿಪ್ರದವಾದ, ವಿಷಯಾಂತರವೈತೃಷ್ಣ್ಯಜನಕವಾದ ಎಂದರ್ಥವು. ಉಯಿರ್_ ಆತ್ಮವನ್ನು, ಕಾಣುಮ್- ಅನುಭವಿಸುವುದೆಂಬ, ಅರುಮ್ _ ದುರ್ಲಭವಾದ, ಪಯುನುಮ್- ಫಲವನ್ನೂ, ಪೇರಾದ- ಪುನರಾವೃತ್ತಿಶೂನ್ಯಗಳಾದ, ಇದು ವಾಜ್ಖಚ್ಚೆಕಳು ಮೆಂಬುವುದಕ್ಕೆ ವಿಶೇಷಣವು. ತಕ್ಕೞ್ಲ್‌ಕೀೞ- ತನ್ನ ಚರಣಾರವಿಂದಗಳ ಛಾಯೆಯಲ್ಲಿ, ಅಮರುಮ್ - ಅಂತರ್ಭವಿಸುವುದೆಂಬ, ಪೆರುವಾಜ್ಖಚ್ಚೆಕಳುಮ್ - ಮಹಾಪುರುಷಾರ್ಥ ಗಳನ್ನೂ, ‘‘ ನಿರಸ್ತಾತಿಶಯಾಹ್ಲಾದ ಸುಖಭಾವೈಕಲಕ್ಷಣಾ । ಭೇಷಜಂಭಗವತ್ಪ್ರಾಪ್ತಿರೇಕಾಂತಾತ್ಯಂತಿಕೀಮತಾ ,, ಎಂಬುವಂತೆ ನಿರತಿಶಯವಾಗಿ ತೋರಿ ಉತ್ತರಾವಧಿ ಶೂನ್ಯವಾಗಿಯೂ ನಿರತಿಶಯ ಸುಖಾತ್ಮಕವಾಗಿಯೂ, ಭಗವಚ್ಚರಣಾರ ವಿಂದಾನುಭವ ತತ್ಪರಿಚರಣಾದಿರೂಪವಾಗಿಯೂ ಇರುವ ಪುರುಷಾರ್ಥಗಳನ್ನೆಂದು ಭಾವವು. ಇಲ್ಲಿ (ವಾಜ್ಖಚ್ಚೆ) ಎಂಬುವ ಪದಕ್ಕೆ (ಪೆರು) ಎಂಬುವ ವಿಶೇಷಣದಿಂದ ಸ್ವರೂಪತೋನಿರತಿಶಯತ್ವವು ತೋರುವುದರಿಂದ ಅತ್ಯಲ್ಪ ರಸವಾದ ಅಕ್ಷರಾನುಭವವೈಲಕ್ಷಣ್ಯವು ಜ್ಞಾಪಿತವಾಗುವುದು. ಶೊರಾದುಕನ್ದವರ್- ಬಿಡದೇ ಅಪೇಕ್ಷಿಸುವವರಿಂದ, ನಿರಂತರವೂ ಅಪೇಕ್ಷಿಸುವವರಿಂದ ಎಂದರ್ಥವು. ಶೆಯ್‌ವನವುಮ್ _ ಅನುಷ್ಠೇಯಗಳನ್ನೂ, ಈ ಅಧಿಕಾರಿಗಳಿಗೆ ಅವಶ್ಯಾನುಷ್ಠೇಯಗಳಾದ ತತ್ತದಿಷ್ಟ ಫಲಾನುರೂಪ ಪರಮಪುರುಷಚಿಂತನವೇನು, ಅಂತಿಮಪ್ರತ್ಯಯವೇನು, ಗತಿಚಿಂತನಾದಿಗಳೇನು, ಅವುಗಳನ್ನೆಂದರ್ಥವು. ತೋರಾ- ಪರಾಜಯ ಪ್ರಸಂಗರಹಿತನಾದ, ವಿಶಯನುಕ್ಕು_ಅರ್ಜುನನಿಗೆ, ಶೆಪ್ಪಿನ್ನ- ಉಪದೇಶಿಸಿದನು. ॥೯॥

ಇತಿ ಶ್ರೀಮದ್ಗೀತಾರ್ಥಸಾರೇ ಅಷ್ಟಮಾಧ್ಯಾಯಃ.

ಶ್ರೀಕೃಷ್ಣಾಯ ಪರಮಾತ್ಮನೇನಮಃ.

ಶ್ರೀ ಯೈ ನ ಮಃ.
ಶ್ರೀಕೃಷ್ಣಾಯಪರಬ್ರಹ್ಮಣೇನಮಃ.
ಶ್ರೀಮದ್ಗೀತಾರ್ಥಸಾರೇ ನವಮಾಧ್ಯಾಯ
ಪ್ರಾರಂಭಃ.



ಶ್ರೀ ಭಗವಾನ್ ಉವಾಚ.

ಶ್ಲೋ॥ ಇದಂತುತೇಗುಹ್ಯತಮಂಪ್ರವಕ್ಷ್ಯಾಮ್ಯನಸೂಯವೇ। ಜ್ಞಾನಂವಿಜ್ಞಾನಸಹಿತಂಯಜ್ಞಾತ್ವಾಮೋಕ್ಷ್ಯಸೇಽಶುಭಾತ್॥ ... ... ॥೧॥

ಪ॥ ಇದಂ- ತು- ತೇ- ಗುಹ್ಯತಮಂ- ಪ್ರವಕ್ಷ್ಯಾಮಿ- ಅನಸೂಯವೇ। ಜ್ಞಾನಂ- ವಿಜ್ಞಾನಸಹಿತಂ- ಯತ್-ಜ್ಞಾತ್ವಾ- ಮೋಕ್ಷ್ಯಸೇ- ಅಶುಭಾತ್॥

ಅ॥ ಶ್ರೀ ಭಗವಾನುವಾಚ- ಶ್ರೀ ಭಗವಂತನು ಹೇಳಿದನು. ಯತ್- ಯಾವದನ್ನು, ಜ್ಞಾತ್ವಾ- ತಿಳಿದು, (ರಾ) ತಿಳಿದು ಅನುಷ್ಠಾನವಂಮಾಡಿ, ಅಶುಭಾತ್- (ಶಂ) ಸಂಸಾರ ಬಂಧನ ದಶೆಯಿಂದ, (ರಾ) ನನ್ನನ್ನು ಹೊಂದುವುದಕ್ಕೆ ವಿರೋಧಿಯಾದ ಸಮಸ್ತ ಪಾಪ ವರ್ಗದಶೆಯಿಂದ, ಮೋಕ್ಷ್ಯಸೇ- ಬಿಡಲ್ಪಡುವಿಯೊ, (ತತ್- ಅಂತಹ) ಗುಹ್ಯತಮಂ- ಅತಿರಹಸ್ಯವಾದ, (ಶ್ರೀ) ಅತ್ಯಂತ ರಹಸ್ಯವಾದ ಪರಮಾತ್ಮಜ್ಞಾನವನ್ನು, ವಿಜ್ಞಾನ ಸಹಿತಂ- (ಶಂ) ಅನುಭವಜ್ಞಾನದೊಡನೆ ಕೂಡಿರುವಂಥ, (ರಾ)ಉಪಾಸನವ ನ್ನೀರೀತಿ ಯಾಗಿ ಮಾಡಬೇಕೆಂಬುವುದನ್ನರಿಯುವುದು ವಿಜ್ಞಾನವು, ಅದರೊಡನೆ ಕೂಡಿರುವ, (ಗೀ॥ ವಿ॥) ವಿಶೇಷವಾಗಿ ತಿಳಿಯಬೇಕಾಗಿರುವುದರೊಡನೆ ಕೂಡಿರುವ, ಇದಂ ಜ್ಞಾನಂತು- ಶಂ) ಈ ಬ್ರಹ್ಮಜ್ಞಾನವನ್ನು (ರಾ) ಇದಂ- ಭಕ್ತಿರೂಪವಾದ ಉಪಾಸನವೆಂಬ ಸಾಮು ವೃಕ್ಷ, ಜ್ಞಾನಂ- ಜ್ಞಾನವನ್ನು, (ಗೀ॥ ವಿ) ಇನ್ನು ಮುಂದೆ ಹೇಳುವ ಜ್ಞಾನವನ್ನು, ಅನಸೂಯವೇ- ಅಸೂಯಾರಹಿತನಾದ, (ಶ್ರೀ) ಆಗಾಗ್ಯೆ ತನ್ನ ಮಹಿಮೆಯನ್ನೆ ಹೇಳಿ ಕೊಳ್ಳುತ್ತಾನೆಂಬ ಅಸೂಯಾರಹಿತನಾದ, (ರಾ) ನಾನು ಹೇಳುವ ನನ್ನ ಮಹಿಮೆಗ ಳೆಲ್ಲವು ವಾಸ್ತವವೆಂಬದಾಗಿ ನಿಶ್ಚಯಿಸಿಕೊಂಡಿರುವ, ತೇ- ನಿನಗೆ, ಪ್ರವಕ್ಷ್ಯಾಮಿ- ಹೇಳುವೆನು. ... ... ॥೧॥

(ಶಂ॥ಭಾ॥ ಅಷ್ಟಮಾಧ್ಯಾಯದಲ್ಲಿ ಸುಷುಮ್ನಾನಾಡೀದ್ವಾರಾ ಮಾಡತಕ್ಕ ಧಾರಣಾಸಹಿತವಾದ ಯೋಗವು ಸರ್ವೇಂದ್ರಿಯ ದ್ವಾರ ಗಳನ್ನು ಮುಚ್ಚುವಿಕೆ ಮೊದಲಾದ ಪ್ರಕಾರ ಉಳ್ಳದ್ದಾಗಿ ಹೇಳಲ್ಪಟ್ಟಿತು. ಮತ್ತು ಅಲ್ಲಿ ಅರ್ಚಿರಾದಿ ಮಾರ್ಗವಾಗಿ ಪುನಃ ಸಂಸಾರಕ್ಕೆ ಬರುವಿಕೆಯು ಇಲ್ಲದ ಬ್ರಹ್ಮತ್ವವನ್ನು ಕ್ರಮವಾಗಿ ಬ್ರಹ್ಮಜ್ಞಾ

ನದ್ವಾರಾ ಹೊಂದುವುದೇ ಫಲವಾಗಿಯೂ ಹೇಳಲ್ಪಟ್ಟಿತು. ಮೋಕ್ಷ ವನ್ನು ಹೊಂದುವುದಕ್ಕೆ ಇದೇಸಾಧನವೇ? ಅಥವಾ ಬೇರೆಯಾವದೂ ಇಲ್ಲವೇ? ಎಂಬ ಸಂಶಯವನ್ನು (ಸರ್ವೋತ್ತಮವಾದ ಬ್ರಹ್ಮಜ್ಞಾನ ದಿಂದ ಸುಲಭವಾಗಿ ಪರಬ್ರಹ್ಮತ್ವವನ್ನು ಹೊಂದಬಹುದೆಂದು ಹೇಳಿ) ನಿವಾರಣಮಾಡವುದಕ್ಕಾಗಿ ಶ್ರೀಕೃಷ್ಣನೀ ಅಧ್ಯಾಯವನ್ನು ಹೇಳು ತ್ತಾನೆಂದರಿಯಬೇಕು.

ಎಲೈ ಅರ್ಜುನನೆ! ಯಾವಜ್ಞಾನವನ್ನು ಹೊಂದಿ ಸಂಸಾರಬಂ ಧದದಶೆಯಿಂದ ಬಿಡಲ್ಪಡುವಿಯೊ ಅಂತಹ ಬ್ರಹ್ಮಸಾಕ್ಷಾತ್ಕಾರರೂ ಪವಾದ ಅನುಭವಜ್ಞಾನದೊಡನೆ ಕೂಡಿಯೂ ಗುರೂಪದೇಶ ರಹಸ್ಯಗ ಳಲ್ಲಿ ಉತ್ತಮವಾಗಿಯೂ "ವಾಸುದೇವಸ್ಸರ್ವಂ (೭-೧೯) ಆತ್ಮಾವಾ ಇದಗ್‌ಸರ್ವಂ - ಏಕಮೇವಾದ್ವಿತೀಯಂ - ನಾನ್ಯದಥೆಯೇ‍ಽ ನ್ಯಥಾ ವಿದುರನ್ಯರಾಜಾನಂತೇಽ ಕ್ಷಯ್ಯ್ಯ ಲೋಕಾಭವಂತಿ,, (ಅ॥ಭೇದಜ್ಞಾನ ದಿಂದ ಚಿರಕಾಲ ಸುಖವನ್ನುಂಟುಮಾಡುವ ಸ್ವರಾದಿ ಲೋಕಗಳನ್ನು ಹೊಂದುತ್ತಾರಲ್ಲದೆ ಬ್ರಹ್ಮತ್ವವಂ ಹೊಂದಲಾರರು) ಎಂಬೀ ಶ್ರುತಿ ಸ್ಮೃತಿಗಳಿಂದ ಹೇಳಲ್ಪಟ್ಟಪ್ರಕಾರವಾಗಿ ಸಾಕ್ಷಾನ್ಮೋಕ್ಷಸಾಧನವಾ ಗಿಯೂ ಇರುವ ಬ್ರಹ್ಮಜ್ಞಾನ ಸ್ವರೂಪವನ್ನು, ಅಸೂಯಾರಹಿತನಾ ದುದರಿಂದ ಇದಕ್ಕೆತಕ್ಕಅಧಿಕಾರಿಯಾದ ನಿನಿಗೆಉಪದೇಶಿಸುವೆನು. ॥೧॥

(ಶಂ॥ ಆ॥) ಮಂದಬುದ್ಧಿಯಾದವನ ಚಿತ್ತಶುದ್ಧಿಗಾಗಿಯೂ ಯೋಗಮಾರ್ಗದಿಂದ ಬ್ರಹ್ಮಪ್ರಾಪ್ತಿಗಾಗಿಯೂ ಅಧ್ಯಾತ್ಮಾದಿ ಭೇದ ರಹಿತವಾದ ಅಕ್ಷರಶಬ್ದ ವಾಚ್ಯವಾಗಿರುವ ಬ್ರಹ್ಮವನ್ನು ಉಪಾಸನೆ ಮಾಡಬೇಕೆಂದುಪದೇಶಿಸಿ ಆರೀತಿಯಾಗಿ ಉಪಾಸನವಂ ಮಾಡುವಂತ ಯೋಗಿಯಾದವನಿಗೆ ಅರ್ಚಿರಾದಿ ಮಾರ್ಗದಿಂದ ಗಮನವೂ ಬ್ರಹ್ಮ ಪ್ರಾಪ್ತಿಯೂ ಅಷ್ಟಮಾಧ್ಯಾಯದಲ್ಲಿ ಪ್ರತಿಪಾದಿಸಲ್ಪಟ್ಟಿತು. ಮು ಮುಕ್ಷುಗಳಿಗೆ ಈ ಪೂರ್ವಾಧ್ಯಾಯೋಕ್ತವಾದ ಮಾರ್ಗದಿಂದಲೇ ಮೊ ಕ್ಷವಲ್ಲದೆ ಬೇರೆ ಪ್ರಕಾರದಿಂದ ಮೋಕ್ಷವಿಲ್ಲವೆಂಬ ಶಂಕೆಯನ್ನು ನಿವಾ ರಣಮಾಡುವುದಕ್ಕಾಗಿಯೂ ಶುದ್ಧವಾದ ಬುದ್ಧಿಯುಳ್ಳ ಅಧಿಕಾರಿಗ ಳಿಗೆ ಇಲ್ಲಿಯೇ ಮೋಕ್ಷಸಿದ್ಧಿ ಯಾಗುವುದಕ್ಕಾಗಿಯೂ ಸಾಕ್ಷಾನ್ಮೋ ಕ್ಷಕಾರಣವಾದ ಪರಬ್ರಹ್ಮವಿಷಯವಾದ ಜ್ಞಾನವನ್ನೂ ವಿಜ್ಞಾನವನ್ನೂ

ಪರಮಾತ್ಮಸ್ವರೂಪವನ್ನೂ ಪರಮಾತ್ಮನಿಗೆ ಪ್ರಕೃತಿ ಕರ್ತೃಕವಾದ ಸೃಷ್ಟ್ಯಾದಿಗಳಲ್ಲಿ ಸಾಕ್ಷಿತ್ವ ಅಸಂಗತ್ವ ಉದಾಸೀನತ್ವಾದಿ ಧರ್ಮಗಳನ್ನೂ ಉಪಾಸನಾ ಪ್ರಕಾರ ಭೇದಗಳನ್ನೂ ಪರಮಾತ್ಮನಿಗೆ ಸರ್ವಾತ್ಮತ್ವಾದಿಗಳನ್ನೂ ಪ್ರತಿಪಾದಿಸುವದಕ್ಕಾಗಿಯೂ ಈ ನವಮಾಧ್ಯಾಯವಾರಂಭಿಸಲ್ಪಡುವುದು. ... ... ||೧||

(ಶ್ರೀ) ಪರೇಶಃ ಪ್ರಾಪ್ಯತೇ ಶುದ್ಧಭಕ್ತ್ಯೇತಿಸ್ಥಿತಮಷ್ಟಮೇ। ನವಮೇತ್ರುತದೈಶ್ವರ್ಯಮತ್ಯಾಶ್ಚರ್ಯಂಪ್ರಪಂಚ್ಯತೇ ॥ ಶುದ್ಧವಾದ ಭಕ್ತಿಯಿಂದ ಪರಮೇಶ್ವರನು ಹೊಂದಲ್ಪಡತಕ್ಕವನೆಂದು ಅಷ್ಟಮಾಧ್ಯಾಯದಲ್ಲಿ ಹೇಳಲ್ಪಟ್ಟಿತು. ಈನವಮಾಧ್ಯಾಯದಲ್ಲಿ ಆ ಪರಮಪುರುಷನ ಅತ್ಯಾಶ್ಚರ್ಯಕರವಾದ ಐಶ್ವರ್ಯವೇವಿಸ್ತಾರವಾಗಿ ಉಪದೇಶಿಸಲ್ಪಡುವುದು. ಸ್ವಧರ್ಮಾಚರಣೋಪದೇಶವು ಗುಹ್ಯವು. ದೇಹಾತ್ಮವಿವೇಕವಿಷಯವಾದ ಉಪದೇಶವು ಗುಹ್ಯತರವು. ಅನುಭವಜ್ಞಾನದೊಡನೆಕೂಡಿರುವ ಬ್ರಹ್ಮಜ್ಞಾನೋಪದೇಶವು ಗುಹ್ಯತಮವು. ||೧||

(ರಾ|| ಭಾ||) ಉಪಾಸಕರ ಭಿನ್ನತೆಗೆ ಕಾರಣವಾದ ವಿಶೇಷಗಳು ಹೇಳಲ್ಪಟ್ಟಿತು. ಈಗ ಉಪಾಸ್ಯನಾದ ಪರಮಪುರುಷನ ಮಹಿಮೆಯನ್ನೂ ಜ್ಞಾನಿಗಳಿಗುಂಟಾದ ವಿಶೇಷವನ್ನೂ ವಿಚಾರಿಸಿ ಭಕ್ತಿರೂಪವಾದ ಉಪಾಸನದ ಸ್ವರೂಪವು ಹೇಳಲ್ಪಡುವುದು. ಎಲೈ ಅರ್ಜುನನೇ! ಅತ್ಯಂತ ಗೋಪ್ಯವಾಗಿಯೂ ಉಪಾಸನ ಗತಗಳಾದ ವಿಶೇಷಗಳ ಜ್ಞಾನದೊಡನೆ ಸೇರಿಯೂ ಇರುವ ವಿಲಕ್ಷಣವಾದ ಮುಂದೇ ಹೇಳುವ ಭಕ್ತಿ ರೂಪೋಪಾಸನವೆಂಬ ಯಾವಜ್ಞಾನವನ್ನು ಅನುಷ್ಠಾನ ಪರ್ಯಂತವಾಗಿತಿಳಿದು ನಮ್ಮಗಳನ್ನು ಹೊಂದುವುದಕ್ಕೆ ವಿರೋಧಿಯಾದ ಸಮಸ್ತ ಪಾಪವರ್ಗದ್ದೆಶೆಯಿಂದ ಬಿಡಲ್ಪಡುವಿಯೋ ಅಂತಹ ಜ್ಞಾನವನ್ನು ಪದೇಶಿಸುವೆನೆಂದು ತಾತ್ಪರ್ಯವು. ... ... ||೧||

(ಗೀ|| ವಿ||) ಸಪ್ತಮಾಧ್ಯಾಯದಲ್ಲಿ ಪರಮಾತ್ಮನ ಮಹಿಮೆಯನ್ನು ಹೇಳುತ್ತೇನೆಂದು ಪ್ರತಿಜ್ಞೆಯಂ ಮಾಡಿ ಆ ರೀತಿಯಾಗಿ ಭಗವನ್ಮಹಿಮೆಯನ್ನು ಪದೇಶಿಸಿದನು. ಆ ಸಪ್ತಮಾಧ್ಯಾಯದಲ್ಲಿ "ಜರಾಮರಣಮೋಕ್ಷಾಯ" (೭|೨೯) ಎಂಬಿದೇ ಮೊದಲಾದ ಶ್ಲೋಕಗಳಿಂದ ತನ್ನನ್ನು ಭಜಿಸಮಾಡುವಂತವರಿಗೆ ಬ್ರಹ್ಮಾದಿ ಜ್ಞಾನವಾಗುತ್ತದೆಂ

ಬ ತನ್ನ ಮಹಿಮೆಯನ್ನು ಹೇಳಿದನು. ಅದರಮೇಲೆ ಬ್ರಹ್ಮಾದಿ ಪದ ಗಳಿಗೆ ಅರ್ಥವಂ ತಿಳಿದುಕೊಳ್ಳಬೇಕೆಂಬ ಇಚ್ಛೆಯಿಂದ "ಕಿಂತತ್ ಬ್ರಹ್ಮ,, (೮॥೧॥) ಇತ್ಯಾದಿ ಶ್ಲೋಕಗಳಿಂದ ಅರ್ಜುನನು ಪ್ರಶ್ನೆ ವಂಮಾಡಿದನು. ಆದಕ್ಕೆ ಆ ಅಷ್ಟಮಾಧ್ಯಾಯದಲ್ಲಿಯೇ ಪ್ರತ್ಯುತ್ತರ ವನ್ನು ಹೇಳಿ ಈಗ ಸಪ್ತಮಾಧ್ಯಾಯದಲ್ಲಿ ಪ್ರತಿಜ್ಞಾತವಾದ ಪರಮಾ ತ್ಮನ ಮಹಿಮೆಯನ್ನು ಹೇಳುವುದಕ್ಕಾಗಿ ಪೂರ್ವ ಪ್ರತಿಜ್ಞಾತವಾಗಿರುವ ಆ ಮಹಿಮೆಯನ್ನು ಸ್ತುತಿಸುತ್ತಾನೆ. ... ... ॥೧॥

ಶ್ಲೋ॥ ರಾಜವಿದ್ಯಾರಾಜಗುಹ್ಯಂಪವಿತ್ರಮಿದಮುತ್ತ
ಮಂ । ಪ್ರತ್ಯಕ್ಷಾವಗಮಂಧರ್ಮ್ಯಂ ಸುಸುಖಂಕರ್ತು
ಮವ್ಯಯಂ ॥ ... ॥೨॥

ಪ॥ ರಾಜವಿದ್ಯಾ - ರಾಜಗುಹ್ಯಂ - ಪವಿತ್ರಂ - ಇದಂ - ಉತ್ತಮಂ । ಪ್ರತ್ಯಕ್ಷಾ ವಗಮಂ - ಧರ್ಮ್ಯಂ - ಸುಸುಖಂ - ಕರ್ತುಂ - ಅವ್ಯಯಂ ॥

ಅ॥ ಇದಂ - ಈ ಬ್ರಹ್ಮಜ್ಞಾನವು, ರಾಜವಿದ್ಯಾ - ವಿದ್ಯೆಗಳಲ್ಲಿ ಶ್ರೇಷ್ಠವಾದದ್ದು, ರಾಜಗುಹ್ಯಂ- ರಹಸ್ಯಗಳಲ್ಲಿ ಶ್ರೇಷ್ಠವಾದದ್ದು, ಉತ್ತಮಂ- ಉತ್ತಮವಾದದ್ದು, ಪವಿ ತ್ರಂ - ಪರಿಶುದ್ಧವಾದದ್ದು, ಪ್ರತ್ಯಕ್ಷಾವಗಮಂ - ಪ್ರತ್ಯಕ್ಷದಿಂದ ತಿಳಿಯುತಕ್ಕದ್ದು, ರಾ॥ ಮ॥) ಪ್ರತ್ಯಕ್ಷವಾಗಿ ನನ್ನನ್ನು ತೋರಿಸುವಂತಾದ್ದು. ಧರ್ಮ್ಯಂ- ಧರ್ಮಮಾರ್ಗ ದಿಂದ ಬಹಿರ್ಭೂತವಾಗದೇ ಇರುವಂತಾದ್ದು, (ರಾ) ಮೋಕ್ಷಸಾಧನವಾದದ್ದು, (ಮ॥ ಗೀ॥ ॥ವಿ॥) ಸಕಲ ಜಗತ್ತನ್ನೂ ಧರಿಸುವುದರಿಂದ ಧರ್ಮಶಬ್ದದಿಂದ ಪರಮಾತ್ಮನು ಹೇಳಲ್ಪಡುವನು. ಅಂತಹ ಭಗವದ್ವಿಷಯವಾದ ಜ್ಞಾನವಾದುದರಿಂದ ಧರ್ಮ್ಯಂ ಎಂಬುವು ದಾಗಿ ಹೇಳಲ್ಪಟ್ಟಿತು, ಕರ್ತುಂಸುಸುಖಂ-ಅನುಷ್ಠಿಸುವುದಕ್ಕೆ ಅತ್ಯಂತ ಸುಲಭವಾದದ್ದು, ಅವ್ಯಯಂ - ನಾಶರಹಿತವಾದದ್ದು, (ಗೀ॥ ವಿ) ನಾಶರಹಿತವಾದ ಬಲವನ್ನು ಕೊಡು ವಂಥಾದ್ದು. .... ... ... ... ... ॥೨॥

(ಶಂ॥ ಭಾ॥) ಇಂತಹ ಬ್ರಹ್ಮಜ್ಞಾನದಲ್ಲಿ ಅಭಿಮುಖ್ಯಸಿದ್ಧಿಗಾಗಿ ಈಜ್ಞಾನವನ್ನು ಸ್ತುತಿಸುತ್ತಾನೆಂದರಿಯಬೇಕು. ಬ್ರಹ್ಮಜ್ಞಾನಿಯು ಇತರಜ್ಞಾನಿಗಳಿಗಿಂತಲೂ ಅತ್ಯಂತ ಪೂಜ್ಯನಾಗಿರುವುದರಿಂದ ಬ್ರಹ್ಮವಿ ದ್ಯೆಯೂ ಇತರಗಳಾದ ವಿದ್ಯೆಗಳಿಗಿಂತಲೂ ಅತ್ಯಂತವಾಗಿ ಪ್ರಕಾಶಿಸು ವುದು. ಆದುದರಿಂದಲೆ ಅದು ವಿದ್ಯೆಗಳಲ್ಲಿ ರಾಜಾ ಎನ್ನಲ್ಪಡುವುದು. ರಹಸ್ಯಗಳಲ್ಲಿ ಉತ್ತಮ ರಹಸ್ಯವಾದುದರಿಂದ ಗೋಪ್ಯವಾದ ಪದಾ ರ್ಥಗಳಲ್ಲಿ ಇದು ರಾಜಾ ಎನ್ನಲ್ಪಡುವುದು. ಪರಿಶುದ್ಧಿಯನ್ನುಂಟು

ಮಾಡುವ ಸರ್ವಪದಾರ್ಥಗಳಲ್ಲಿಯೂ ಇದುಉತ್ತಮವಾದದ್ದು. ಅನೇಕ ಜನ್ಮ ಸಹಸ್ರಗಳ ದಶೆಯಿಂದಲೂ ಸಮೂಹವಾಗಿ ಬೆಳೆದಿರುವ ಧರ್ಮಾಧರ್ಮಾದಿ ಕರ್ಮಗಳನ್ನು ವಾಸನೆಗಳೊಡನೆ ಕ್ಷಣಮಾತ್ರದಲ್ಲಿಯೇ ಭಸ್ಮವನ್ನಾಗಿ ಮಾಡುವಂಥಾದ್ದು. ಆದುದರಿಂದ ಇದಕ್ಕಿಂತಲೂ ಪರಿಶುದ್ಧ ಸ್ತುವ್ಯಾವದಿರುವುದು ? ಶ್ರುತಿಸ್ಮೃತಿಗಳಿಂದ ಇಂಥಾದ್ದೆಂದು ತಿಳಿಸಲು ಶಕ್ಯವಲ್ಲದ್ದು, ಆದರೆ ಇದು ಶಾಸ್ತ್ರಾಚಾರ್ಯೋಪದೇಶಾದಿಗಳಿಂದತಿಳಿಯತಕ್ಕದ್ದೋ ? ಎಂದರೇ ಈ ಜ್ಞಾನವು ಶಾಸ್ತ್ರೈಕಗಮ್ಯವಾದ್ದಲ್ಲವು. ಕೇವಲಾನುಭವದಿಂದಲೇ ಇಂಥಾದ್ದೆಂದು ತಿಳಿಯತಕ್ಕದ್ದು. ಅನೇಕಲಾಭಗಳಿದ್ದರೂ ಕೆಲವು ಕಾರ್ಯಗಳು ಧರ್ಮವಿರುದ್ಧಗಳಾಗಿರುವುವು; ಅದರಂತೆ ಇದೂ ಧರ್ಮವಿರುದ್ಧವೋ ? ಎಂದರೆ ಬ್ರಹ್ಮಜ್ಞಾನವು ಆರೀತಿಯಾಗಿಲ್ಲದೆ ಧರ್ಮಮಾರ್ಗದಿಂದ ಬಿಡಲ್ಪಡದೆ ಇರುವಂಥಾದ್ದು. ಆದರೂ ಈ ಜ್ಞಾನವು ವಿಶೇಷವಾಗಿ ಶ್ರಮಪಟ್ಟೇ ತಿಳಿಯತಕ್ಕದ್ದಾಗಿರುವುದೋ ? ಎಂದರೇ ! ಲೋಕದಲ್ಲಿ ರತ್ನಪರೀಕ್ಷೆಯನ್ನು ತಿಳಿದಿರುವವನಿಂದ ಸುಲಭವಾಗಿ ರತ್ನಪರೀಕ್ಷಾಕ್ರಮವನ್ನು ಹೇಗೆ ಗ್ರಹಿಸಬಹುದೋ ಆರೀತಿಯಾಗಿ ಗುರೂಪದೇಶಾದಿಗಳಿಂದ ಬ್ರಹ್ಮಜ್ಞಾನವನ್ನು ಹೊಂದುವ ಮಾರ್ಗವೂ ಸುಲಭವಾದದ್ದೆಂತಲೇ ತಿಳಿಯಬೇಕು. ಆದರೆ ಲೋಕದಲ್ಲಿ ಅವರವರ ಪ್ರಯಾಸಾನುಗುಣವಾಗಿ ಫಲವಿರುವುದರಿಂದ ( ಅಲ್ಪಸುಖವೂ ಉಂಟಾಗುವುದರಿಂದ) ಬ್ರಹ್ಮಜ್ಞಾನವು ಸುಲಭವಾಗಿದ್ದರೆ ಫಲವೂ ಶೀಘ್ರವಾಗಿಯೇ ನಾಶಹೊಂದುವಂತಾದ್ದಾಗುವುದೋ ? ಎಂದರೆ ಕರ್ಮಗಳಿಗೆ ಫಲದೊಡನೆ ಕ್ಷಯ ಉಂಟಾಗುವಂತೆ ಇದಕ್ಕೆ ಯಾವಕಾಲದಲ್ಲಿಯೂ ಕ್ಷಯವಿಲ್ಲವು. ಆದುದರಿಂದ ಇಂತಹ ಉತ್ತಮೋತ್ತಮವಾದ ಬ್ರಹ್ಮಜ್ಞಾನವನ್ನು ಶ್ರದ್ಧೆಯೊಡನೆ ಗ್ರಹಿಸೆಂದರ್ಜುನನಿಗೆ ಶ್ರೀಕೃಷ್ಣ ಪರಮಾತ್ಮನು ಬ್ರಹ್ಮಜ್ಞಾನ ಸ್ವರೂಪೋಪದೇಶವಂ ಮಾಡುತ್ತಾನೆ. ॥೨॥

(ರಾ॥ ಭಾ॥) ಮುಂದೇ ಹೇಳುವಂತಾ ಭಕ್ತಿರೂಪೋಪಾಸನವೆಂಬ ಜ್ಞಾನವು ಸಮಸ್ತ ವಿದ್ಯೆಗಳಿಗೂ ರಾಜಾ ಎನ್ನಲ್ಪಡುವುದು, ( ಅಥವಾ) ವಿಸ್ತೀರ್ಣಗಾಧ ಮನಸ್ಕರಾದ ರಾಜರುಗಳಿಗೆ ಯೋಗ್ಯವಾದ ವಿದ್ಯೆಯು. ಅಂಥಾ ರಾಜರುಗಳಿಗೆ ಗುಹ್ಯವಾದದ್ದು ರಾಜಗುಹ್ಯವೆನ್ನ

ಲ್ಪಡುವುದು. ನನ್ನನ್ನು ಹೊಂದುವುದಕ್ಕೆ ವಿರೋಧಿಗಳಾದ ಸಮಸ್ತ ಕಲ್ಮಷಗಳನ್ನೂ ಹೋಗಲಾಡಿಸುವಂಥಾದ್ದು. ಪ್ರತ್ಯಕ್ಷ ಭೂತವಾದ ವಿಷಯವನ್ನುಳ್ಳದ್ದು, ಭಕ್ತಿರೂಪವಾದ ಉಪಾಸನದಿಂದ ಉಪಾಸಿಸಲ್ಪಡುವ ನಾನು ಉಪಾಸನ ಸಮಯದಲ್ಲಿಯೇ ಉಪಾಸಕನಿಗೆ ಪ್ರತ್ಯಕ್ಷನಾಗಿರುವೆನೆಂದು ಭಾವವು. ಆ ಪ್ರಕಾರವಾಗಿದ್ದರೂ ಧರ್ಮವನ್ನು ಬಿಡದೇ ಇರುವಂಥಾದ್ದು. ಭಕ್ತಿಯು ಸ್ವರೂಪವೇ ಅತ್ಯರ್ಥ ಪ್ರಿಯವಾಗಿದ್ದರೂ ನನ್ನನ್ನಾವಾಗಲೇ ಪ್ರತ್ಯಕ್ಷನನ್ನಾಗಿ ಮಾಡುವಂತಾದ್ದಾಗಿದ್ದರೂ ನಿರತಿಶಯನಿಶ್ರೇಯಸ ಸ್ವರೂಪವೂ ಆತ್ಯಂತಿಕವೂ ಆದ ನನ್ನ ಪ್ರಾಪ್ತಿಗೆ ಸಾಧನವಾಗಿಯೂ, ಇರುವುದರಿಂದ ಸುಖದಿಂದ ಅನುಷ್ಠಿಸಲ್ಪಡತಕ್ಕದ್ದಾಗಿಯೂ ಇರುವುದು. ಮತ್ತು ನನ್ನ ಪ್ರಾಪ್ತಿಯೆಂಬ ಮೋಕ್ಷವನ್ನು ಸಾಧಿಸಿಕೊಟ್ಟರೂ ಸ್ವಯಂ ನಶಿಸುವಂಥಾದ್ದಲ್ಲವು. ಈ ರೀತಿಯಾಗಿ ನನ್ನನ್ನುಪಾಸನ ಮಾಡುವಂತವನಿಗೆ ಗುಣವಿಗ್ರಹವಿಭೂತಿಗಳೊಡನೆ ಪುನರಾವೃತ್ತಿ ಪ್ರಸಂಗವಿಲ್ಲದೇ ನಾನು ನನ್ನನ್ನು ಕೊಟ್ಟದ್ದರೂ ಇವನಿಗೆ ನಾನು ಒಂದು ಕಿಂಚತ್ಕಾರವನ್ನಾದರೂ ಮಾಡಲಿಲ್ಲವೆಂದು ನಾನು ನೆನಸಿರುವೆನೆಂದು ಭಾವವು. ॥೨॥

(ಗೀ॥ ವಿ॥) ರಾಜವಿದ್ಯಾ- ವಿದ್ಯೆಗಳ ಮಧ್ಯದಲ್ಲಿ ಪ್ರಧಾನವಿದ್ಯೆಯು, ರಾಜಗುಹ್ಯಂ- ಗೋಪ್ಯಗಳ ಮಧ್ಯೇ ಪ್ರಧಾನಗೋಪ್ಯವು, ಪವಿತ್ರಂ- ಅತ್ಯಂತ ಪವಿತ್ರತಾಪಾದಕವು. ಪ್ರತ್ಯಕ್ಷಾವಗಮಂ-ಸರ್ವೇಂದ್ರಿಯಗಳಲ್ಲಿ ಸ್ಥಿತನಾದ ಪರಮಾತ್ಮನ ಅಪರೋಕ್ಷಜ್ಞಾನಕ್ಕೆ ಸಾಧನವಾದಂಥಾದ್ದು. ಧರ್ಮ್ಯಂ- ಸರ್ವಜಗದ್ಧಾರಕನಾದ ಪರಮಾತ್ಮನ ವಿಷಯವಾದಂಥಾದ್ದು. ... ... ॥೨॥

ಶ್ಲೋ॥ ಅಶ್ರದ್ದಧಾನಾಃಪುರುಷಾಧರ್ಮಸ್ಯಾಸ್ಯಪರಂತಪ|
ಅಪ್ರಾಪ್ಯಮಾಂನಿವರ್ತಂತೆಮೃತ್ಯುಸಂಸಾರವರ್ತ್ಮನಿ॥೩॥

ಪ॥ ಅಶ್ರದ್ದಧಾನಾಃ- ಪುರುಷಾಃ- ಧರ್ಮಸ್ಯ- ಅಸ್ಯ- ಪರಂತಪ । ಅಪ್ರಾಪ್ಯ-ಮಾಂ- ನಿವರ್ತಂತೆ- ಮೃತ್ಯುಸಂಸಾರವರ್ತ್ಮನಿ॥

ಅ॥ ಹೇಪರಂತಪ – ಎಲೈ ಶತ್ರುಸಂತಾಪಕನಾದ ಅರ್ಜುನನೇ! ಅಸ್ಯ ಧರ್ಮಸ್ಯ – (ಶಂ) ಈ ಆತ್ಮಜ್ಞಾನ ಸ್ವರೂಪವೇನು, ಅದರಫಲವೇನು, ಈ ವಿಷಯದಲ್ಲಿಯೂ, (ರಾ) ಈ ಉಪಾಸನವೆಂಬ ಧರ್ಮದಲ್ಲಿ, (ಗೀ॥ ವಿ॥) ಈ ಜ್ಞಾನ ಲಕ್ಷಣವಾದ ಧರ್ಮದಲ್ಲಿ,

ಅಶ್ರದ್ದಧಾನಾಃ- (ಶಂ|| ರಾ||) ವಿಶ್ವಾಸವಿಲ್ಲದಿರುವ, (ಗೀ|| ವಿ||) ಮೋಕ್ಷಕಾರಣವಾಗಿರುವು ದೆಂಬುವ ವಿಷಯದಲ್ಲಿ ಶ್ರದ್ಧಾರಹಿತರಾದ, ಪುರುಷಾಃ- ಪುರುಷರು, ಮಾಂ- ನನ್ನನ್ನು, ಅಪ್ರಾಪ್ಯ- ಹೊಂದದೆ, ಮೃತ್ಯುಸಂಸಾರ ವರ್ತ್ಮನಿ- ಮೃತ್ಯುರೂಪವಾದ ಸಂಸಾರ ಮಾರ್ಗದಲ್ಲಿ, ನಿವರ್ತಂತೆ-ತಿರಿಗಿಬರುತ್ತಾರೆ. ... ||೩||

(ಶಂ|| ಭಾ||) ಆತ್ಮಜ್ಞಾನವೆಂಬ ಧರ್ಮದಲ್ಲಿ ಶ್ರದ್ಧೆಯುಳ್ಳ ಆತ್ಮಜ್ಞಾನ ಧರ್ಮನಿಷ್ಠರಿಗೆ ಪರಮಪದ ಪ್ರಾಪ್ತಿರೂಪವಾದ ಫಲವನ್ನು ಹೇಳಿ ಆತ್ಮಜ್ಞಾನ ವಿಮುಖರಿಗುಂಟಾಗುವ ಸಂಸಾರ ಪ್ರಾಪ್ತಿಯನ್ನೀ ಶ್ಲೋಕದಿಂದುಪದೇಶಿಸುತ್ತಾನೆಂದರಿಯಬೇಕು. ಧರ್ಮಗಳಲ್ಲಿ ಶ್ರೇಷ್ಠವಾದ ಬ್ರಹ್ಮಜ್ಞಾನಸ್ವರೂಪ ವಿಷಯದಲ್ಲಿಯೂ ಅದಕ್ಕೆ ಫಲವಾದ ಬ್ರಹ್ಮಸಾಯುಜ್ಯ ವಿಷಯದಲ್ಲಿಯೂ ವಿಶ್ವಾಸವಿಲ್ಲದೆ ನಾಸ್ತಿಕರಾಗಿ ದೇಹಾತ್ಮಾಭಿಮಾನಿಗಳಾದ ಅಸುರರಂತೆ ಪಾಪಕರಗಳಾದರೂ ದೇಹಸೌಖ್ಯ ಪ್ರದಗಳಾದ ಧರ್ಮವಿರುದ್ಧ ಕೃತ್ಯಗಳನ್ನು ಮಾಡುವ ಪಾಪಾತ್ಮರು, ಬ್ರಹ್ಮಜ್ಞಾನ ಉಂಟಾದಮೇಲೆ ಬ್ರಹ್ಮತ್ವವನ್ನು ಹೊಂದುವುದಕ್ಕೆ ಸಂದೇಹವ್ಯಾವದೂ ಇಲ್ಲವೆಂಬ ಪೂರ್ಣ ವಿಶ್ವಾಸದಿಂದ ಕ್ರಮವಾಗಿ ಬ್ರಹ್ಮಜ್ಞಾನ ಸಾಧನವಾದ ಭಜನಮಾತ್ರವನ್ನಾದರೂ ಮಾಡದೆ ಪದೆಪದೆ ನರಕಪಾತರೂಪವಾಗಿಯೂ ತಿರ್ಯಗಾದಿ ಜನ್ಮಪ್ರಾಪ್ತಿ ರೂಪವಾಗಿಯೂ ಇರುವ ಮೃತ್ಯುವಿನೊಡನೆ ಕೂಡಿರುವ ಸಂಸಾರಮಾರ್ಗದಲ್ಲಿಯೇ ತಿರುಗುತಲಿರುತ್ತಾರೆ. ... ||೩||

(ರಾ||ಭಾ||) ಪರಂತಪ-ಎಲೈ ಶತ್ರುಸಂತಾಪಕನಾದ ಅರ್ಜುನನೆ, ಮೋಕ್ಷಸಾಧನವಾಗಿರುವ ಈ ಉಪಾಸನ ರೂಪವಾದ ಧರ್ಮವಿಷಯದಲ್ಲಿ ವಿಶ್ವಾಸಪೂರ್ವಕತ್ವರಾಹಿತ್ಯರಾದ ಪುರುಷರು ನನ್ನನ್ನು ಹೊಂದದೆ ಮೃತ್ಯುರೂಪವಾದ ಸಂಸಾರಮಾರ್ಗದಲ್ಲಿ ಪರಿಭ್ರಮಿಸುವರು. ಸುಲಭವಾಗಿಯೂ ಸ್ವಯಂಸುಖರೂಪವಾಗಿಯೂ ಇರುವ ಭಕ್ತಿಎಂಬ ಸಾಧನವಿರುವಲ್ಲಿ ನಿರತಿಶಯಾನಂದ ರೂಪನಾಗಿಯೂ ಪ್ರಾಪ್ಯನಾಗಿಯೂ ಇರುವ ನಾನು ಇವರ ವಿಶ್ವಾಸವನ್ನೆದುರು ನೋಡುತ್ತಲಿದ್ದರೂ ಈ ಸಾಧ್ಯ ಸಾಧನಗಳಲ್ಲಿ ವಿಶ್ವಾಸವಿಲ್ಲದೇ ಇರುವುದರಿಂದ ಈ ಬದ್ಧ ಚೇತನರು ಸಂಸಾರವೆಂಬ ನರಕಗರ್ತ (ಹಳ್ಳ) ದಲ್ಲಿ ಪತಕ್ಕೆ ಬೀಳುತ್ತಾರೆಯೊ ತಿಳಿಯಲಿಲ್ಲವು; ಅದೇನು ಆಶ್ಚರ್ಯವು! ಎಂದು ತಾತ್ಪರ್ಯವು.

ಶ್ಲೋ॥ ಮಯಾತತಮಿದಂಸರ್ವಂ ಜಗದವ್ಯಕ್ತಮೂರ್ತಿನಾ|ಮತ್ಸ್ಥಾನಿಸರ್ವಭೂತಾನಿನಚಾಹಂತೇಷ್ವವಸ್ಥಿತಃ॥೪॥
ನಚಮತ್ಸ್ಥಾನಿಭೂತಾನಿ ಪಶ್ಯಮೇಯೋಗಮೈಶ್ವರಂ|ಭೂತಭೃನ್ನಚಭೂತಸ್ಥೋಮಮಾತ್ಮಾಭೂತಭಾವನಃ ॥ ೫ ॥

ಪ॥ ಮಯಾ - ತತಂ - ಇದಂ- ಸರ್ವಂ - ಜಗತ್ - ಅವ್ಯಕ್ತಮೂರ್ತಿನಾ । ಮತ್ಸ್ಥಾನಿ - ಸರ್ವಭೂತಾನಿ - ನ- ಚ- ಅಹಂ - ತೇಷು - ಅವಸ್ಥಿತಃ ॥ ನ- ಚ - ಮತ್ಸ್ಥಾನಿ- ಭೂತಾನಿ- ಪಶ್ಯ- ಮೇ- ಯೋಗಂ- ಐಶ್ವರಂ- । ಭೂತಭೃತ್- ನ-ಚ-ಭೂತಸ್ಥಃ- ಮಮ- ಆತ್ಮಾ - ಭೂತಭಾವನಃ ॥ ॥೪॥೫॥

ಅ॥ ಅವ್ಯಕ್ತಮೂರ್ತಿನಾ- (ಶಂ.) ಇಂದ್ರಿಯ ಗೋಚರವಲ್ಲದ ಸ್ವರೂಪವುಳ್ಳ, (ರಾ) ಅಂತರ್ಯಾಮಿಯಾಗಿರುವ, (ಶ್ರೀ) ಜಗತ್ಕಾರಣನಾಗಿರುವ, ಮಯಾ - ನನ್ನಿಂದ, ಇದಂಸರ್ವಂಜಗತ್- ಈ ಸರ್ವ ಪ್ರಪಂಚವು, ತತಂ-ವ್ಯಾಪಿಸಲ್ಪಟ್ಟಿರುವುದು. ಸರ್ವಭೂತಾನಿ - ಸರ್ವಭೂತಗಳು, (ಶ್ರೀ) ಚೇತನಾಚೇತನಾತ್ಮಕವಾದ ಸಕಲ ಪ್ರಪಂಚಗಳೂ, ಮತ್ಸ್ಥಾನಿ-ನನ್ನಲ್ಲಿರುವುವು. ನನ್ನನ್ನಾತ್ಮವಾಗಿ ಉಳ್ಳದ್ದಾಗಿರುವುವು. (ರಾ) ಅಂತರ್ಯಾಮಿಯಾದ ನನ್ನ ಅಧೀನವಾದ ಸ್ಥಿತಿಯುಳ್ಳದ್ದಾಗಿರುವುದು. (ಗೀ॥ ವಿ॥) ನನ್ನ ಆಧಾರದಮೇಲೆ ನಿಲ್ಲುವಂತವುಗಳಾಗಿರುವುವು. ಅಹಂತೇಷುನಚಾವಸ್ಥಿತಃ - (ಶಂ॥ ಶ್ರೀ) ನಾನು ಅವುಗಳಲ್ಲಿ ಸೇರಿರುವವನಲ್ಲವು. ಹೇಗೆಂದರೆ; ಆಕಾಶದಂತೆ ನಾನು ಅವುಗಳಿಗೆ ಅಧೀನವಾದ ಸ್ಥಿತಿಯುಳ್ಳವನಲ್ಲವು, ಎಂದರೆ ನನ್ನ ಸ್ಥಿತಿ ಅವುಗಳಾಧಾರ ವಲ್ಲವೆಂದರ್ಥವು. (ಮ॥ ಗೀ॥ ವಿ) ನೀರಿಗೆ ಭೂಮಿಯು ಆಧಾರವಾಗಿರುವಂತೆ ನನ್ನಸ್ಥಿತಿಗೆ ಆಧಾರಾಂತರಾಪೇಕ್ಷೆಯು ಇಲ್ಲವೆಂದು ತಾತ್ಪರ್ಯವು. ಭೂತಾನಿಮತ್ಸ್ಥಾನಿನಚ- ಬ್ರಹ್ಮಾದಿ ಸ್ಥಾವರಾಂತವಾದ ಭೂತಗಳು, (ರಾ) ಜಲವು ಭೂಮಿಯಲ್ಲಿಂಟಿರುವಂತೆ ನನ್ನಲ್ಲಿಂಟಿರುವುದಿಲ್ಲವು, ಐಶ್ವರಂಯೋಗಂ- (ಶಂ) ಅದ್ಭುತವಾದ ಶಕ್ತಿಯನ್ನು, (ಶ್ರೀ) ಅಘಟಿತಘಟನಾಚಾತುರ್ಯವೆಂಬ ಯೋಗಮಾಯಾ ವೈಭವವನ್ನು, ಅಥವಾ (ಶ್ರೀ॥ ರಾ॥) ಅಸಾಧಾರಣವಾದ ಬೇರೊಂದು ಕಡೆಯಲ್ಲಿ ಇಲ್ಲದ ಯೋಗವನ್ನು, ಪಶ್ಯ- ನೋಡು, ಮಮಆತ್ಮಾ- (ಶಂ)ನನ್ನ ಸ್ವರೂಪವು, (ರಾ) ನನ್ನ ಸಂಕಲ್ಪವು, (ಗೀ॥ ವಿ॥) ನನ್ನ ದೇಹವು, ಭೂತಭೃತ್-ಭೂತಗಳನ್ನು ಧರಿಸುವಂತಾದ್ದಾಗಿಯು, ಭೂತಭಾವನಃ - ಭೂತಗಳನ್ನುಂಟುಮಾಡುವಂತಾದ್ದಾಗಿಯೂ, (ಅಥವಾ) ಭೂತಗಳನ್ನು ರಕ್ಷಣೆ ಮಾಡುವಂತಾದ್ದಾಗಿಯೂ ಇದ್ದರೂ (ರಾ) ಭೂತಗಳನ್ನು ಧರಿಸುವುದೂ ನಿಯಮನಮಾಡುವುದೂ ಆದರೂ, ಭೂತಸ್ಥೋನಚ- ಭೂತಗಳಲ್ಲಿರುವಂತಾದ್ದಲ್ಲವು. ॥೪॥೫॥

(ಶಂ॥ ಭಾ॥) ಹಿಂದಿನ ಶ್ಲೋಕಗಳಲ್ಲಿ ಹೇಳಲ್ಪಟ್ಟಪ್ರಕಾರದಿಂದ ಇಂತಹ ಮಹಾತ್ಮ್ಯ ಉಳ್ಳದ್ದೆಂಬದಾಗಿ ಬ್ರಹ್ಮಜ್ಞಾನ ವಿಶೇಷ

ವನ್ನು ತಿಳಿಯಪಡಿಸಿ "ಅರ್ಜುನನಿಗೆ ಅಂತಹ ಬ್ರಹ್ಮಜ್ಞಾನಪ್ರಕಾರ ವನ್ನು ತಿಳಿದುಕೊಳ್ಳಬೇಕೆಂಬ ಶ್ರದ್ಧೆಯನ್ನುಂಟುಮಾಡಿ,, ತಾನುಪದೇಶಿಸಬೇಕಾದ ಅಂಶಗಳನ್ನುಪದೇಶಿಸಲಾರಂಭಿಸುತ್ತಾನೆಂದರಿಯಬೇಕು. ಇಂದ್ರಿಯಗಳಿಗ ಗೋಚರವಾದ ಬ್ರಹ್ಮವು ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ ತಂತುಗಳಲ್ಲಿ ವಸ್ತ್ರಗಳಂತೆ ವ್ಯಾಪಿಸಿರುವುದು. ಬ್ರಂಹಾದಿಸ್ತಂಬ ಪರ್ಯಂತಗಳಾದ ಸಮಸ್ತ ಚರಾಚರಗಳೂ ಜಲದಲ್ಲಿ ತರಂಗಗಳಂತೆ ಬ್ರಹ್ಮದಲ್ಲಿನುವುವು. ಲೋಕದಲ್ಲಿ ಯಾವ ಜಡವಸ್ತುವೂ ಚೇತನವಾದ ಆತ್ಮವನ್ನಾಶ್ರಯಿಸದೆ ಪ್ರವೃತ್ತಿಸಲಾರ ದಾದುದರಿಂದ ಇವೆಲ್ಲವೂ ಆತ್ಮನಾದ ನನ್ನಲ್ಲಿ ಅಧ್ಯಸ್ತಗಳಾಗಿ ಆಭಾಸಿಸುತಲಿರುವುವು ಆಭೂತಗಳಿಗೆ ನಾನು ಆತ್ಮನೆಂಬುವುದರಿಂದ ನಾನು ಭೂತಗಳಲ್ಲಿರುವೆನೆಂದು ಅವಿವೇಕಿಗಳು ತಿಳಿಯುತ್ತಾರೆ. ಆರೀತಿಯಾಗಿತಿಳಿಯಬಾರದು. ಏತಕ್ಕೆಂದರೆ, ನಾನು ಮೂರ್ತವಸ್ತುಗಳಂತೆ (ಇಂದ್ರಿಯ ವಿಷಯಗಳಾದ ದ್ರವ್ಯಗಳಂತೆ) ಮತ್ತೊಂದು ವಸ್ತುವಿನೊಡನೆ ಸೇರಿರುವಂತವನಲ್ಲವಾದುದರಿಂದ ಅವುಗಳಲ್ಲಿ ನಾನಿರುವೆನೆಂ ದಂಗೀಕರಿಸುವುದುಯುಕ್ತವಲ್ಲವು. ಆದುದರಿಂದಲೇ ಆಕಾಶಕ್ಕೂ ನಾನು ಅನ್ತರ್ಯಾಮಿಯೆನ್ನಲ್ಪಡುವೆನು. ನಾನು ಇತರ ವಸ್ತುಗಳೊಡನೆ ಸಂಬಂಧಶೂನ್ಯನಾಗಿರುವುದರಿಂದ ಬ್ರಹ್ಮಾದಿ ಭೂತಗಳು ನನ್ನಲ್ಲಿರುವಂತೆ ತೋರುವುದು ಮಾತ್ರವಲ್ಲದೆ ವಾಸ್ತವವಾಗಿ ನನ್ನಲ್ಲಿರುವುವೆಂದು ಹೇಳಲಿಕ್ಕಾಸ್ಪದವಿಲ್ಲವು. ಇವೆಲ್ಲವೂ ಈರೀತಿಯಾಗಿದ್ದರೂ ನನ್ನ ಆಶ್ಚರ್ಯಕರವಾದ ಮಹಾತ್ಮ್ಯವನ್ನು ನೋಡಿದೆಯೊ ? ಹೇಗೆಂದರೆ "ಅಸಂಗೋನಹಿಸಜ್ಜತೆ,, ಎಂಬೀ ಶ್ರುತಿಪ್ರಕಾರವಾಗಿ ಭೂತಗಳೊಡನೆ ಸಂಬಂಧವಿಲ್ಲದೇನೆ ಭೂತಗಳನ್ನು ಭರಣಮಾಡುವಂತವನೂ (ಅಥವಾ) ವೃದ್ಧಿಪಡಿಸತಕ್ಕವನೂ ಆಗಿರುವೆನು. (ಬ್ರಹ್ಮವಸ್ತುವೇ ಪ್ರಪಂಚಾಧ್ಯಾಸಕ್ಕೆ ಮೂಲವೆಂದಭಿಪ್ರಾಯವು.) ಲೋಕದಲ್ಲಿ ಅಜ್ಞಾನಿಗಳು ದೇಹವನ್ನು ನಾನೆ ಎನ್ನುತ ನನ್ನ ಆತ್ಮವೆಂದು ಹೇಳುವಂತೆ ಲೋಕ ವ್ಯವಹಾರಾನುಸಾರವಾಗಿ ತಿಳಿಯಪಡಿಸಿದರೆ ಅಜ್ಞಾನಿಗಳಿಗೆ ಸುಲಭವಾಗಿಬೋಧವಾಗುವುದೆಂಬೀ ಉದ್ದೇಶ್ಯದಿಂದ ನನ್ನ ಆತ್ಮವೆಂಬದಾಗಿ ಶ್ರೀಕೃಷ್ಣನು ಹೇಳಿದನೆಂದು ತಿಳಿಯಬರುತ್ತದೆ. ॥೪-೫॥

(ರಾ॥ಭಾ॥)ಎಲೈ ಅರ್ಜುನನೇ ಕೇಳಯ್ಯಾ ಅಚಿಂತ್ಯವಾದನನ್ನ ಮಹಾತ್ಮ್ಯವನ್ನು. ಚೇತನಾಚೇತನಾತ್ಮಕವಾದ ಈಪ್ರಪಂಚವು ಬಹಿಃ ಪ್ರಕಟವಾಗದ ಸ್ವರೂಪವುಳ್ಳ ಅಂತರ್ಯಾಮಿಯಾದ ನನ್ನಿಂದ (ಶೇಷಿಯಾಗಿರುವುದರಿಂದ ಧರಿಸುವುದಕ್ಕಾಗಿಯೂ ನಿಯಮಿಸುವುದಕ್ಕಾಗಿಯೂ) ವ್ಯಾಪಿಸಲ್ಪಟ್ಟಿರುವುದು. ಆರೀತಿಯಾಗಿ ನನ್ನಿಂದ ವ್ಯಾಪ್ತವಾಗಿರುವುದರಿಂದ ಸರ್ವ ಭೂತಗಳೂ ಅನ್ತರ್ಯಾಮಿಯಾದ ನನ್ನಲ್ಲಿರುವುವು. ಅವುಗಳಸ್ಥಿತಿ ಪ್ರವೃತ್ತಿಗಳು ನನ್ನ ಅಧೀನಗಳಾಗಿರುವುವೆಂದು ಭಾವವು. ನಾನೂಎಂದರೆ ಈಭೂತಗಳಲ್ಲಿರುವಂತವನಲ್ಲವು. ನನ್ನಸ್ಥಿತಿಯು ಅವುಗಳ ಅಧೀನವಲ್ಲವು, ನನ್ನ ಪ್ರವೃತ್ತಿಯೂ ಅವುಗಳಿಗಧೀನವಾದದ್ದಲ್ಲವು. ಆಭೂತಗಳೂ ಘಟದಲ್ಲಿ ನೀರಿನಂತೆ ನನ್ನಲ್ಲಿರುವುದಿಲ್ಲವು. ಮತ್ತೆ ಹೇಗೆಂದರೆ! ನನ್ನ ಸಂಕಲ್ಪಮಾತ್ರದಿಂದ ಅವುಗಳ ಸ್ವರೂಪವೂ ಅವುಗಳ ಕಾಲಾಂತರಾನುವೃತ್ತಿರೂಪವಾದ ಸ್ಥಿತಿಯೂ ಪ್ರವೃತ್ತಿಯೂ ಉಂಟಾಗುವುವು. ಅಸಾಧಾರಣವಾಗಿಯೂ ಈಶ್ವರ ಭಾವ ಪ್ರಯುಕ್ತವಾಗಿಯೂ ಇರುವ ನನ್ನ ಸಾಮರ್ಥ್ಯವನ್ನುನೋಡು, ಸರ್ವಭೂತಗಳನ್ನೂ ನಾನು ಭರಿಸುತ್ತೇನೆ, ಆದರೆ ನಾನು ಅವುಗಳಲ್ಲಿರುವುದಿಲ್ಲವು. ಅವುಗಳಿಂದ ನನಗೆ ಯಾವದೊಂದು ಉಪಕಾರವೂ ಇಲ್ಲವು. ನನ್ನ ಮನೋಮಯವಾದ ಸಂಕಲ್ಪವೇ ಸರ್ವಭೂತಗಳಿಗೂ ಉತ್ಪಾದಕವಾಗಿರುವುದು-ಸರ್ವಭೂತಗಳನ್ನು ನಿಯಮಿಸುವುದೂ ಸರ್ವಭೂತಗಳನ್ನು ಧರಿಸುವುದೂ ಆನನ್ನಸಂಕಲ್ಪವೆ. ನೋಡಯ್ಯಾ ನನ್ನ ಅಚಿಂತ್ಯ ಸಾಮರ್ಥ್ಯವನ್ನೆಂದು ತಾತ್ಪರ್ಯವು. ೪॥೫॥

ಶ್ಲೋ॥ ಯಥಾಕಾಶಸ್ಥಿತೋನಿತ್ಯಂ ವಾಯುಸ್ಸರ್ವತ್ರಗೋಮಹಾನ್ । ತಥಾಸರ್ವಾಣಿಭೂತಾನಿ ಮತ್ಸ್ಥಾನೀತ್ಯುಪಧಾರಯ ॥ ... ॥೬॥

ಪ॥ ಯಥಾ- ಆಕಾಶೇ- ಸ್ಥಿತಃ- ನಿತ್ಯಂ- ವಾಯುಃ- ಸರ್ವತ್ರಗಃ- ಮಹಾನ್ । ತಥಾ- ಸರ್ವಾಣಿ- ಭೂತಾನಿ- ಮತ್ಸ್ಥಾನಿ- ಇತಿ- ಉಪಧಾರಯ॥

ಅ॥ ಸರ್ವತ್ರಗಃ- ಸರ್ವತ್ರ ಸಂಚರಿಸುವಂತಾದ್ದಾಗಿರುವ, ಮಹಾನ್- ದೊಡ್ಡದಾದ, ವಾಯುಃ- ವಾಯುವು, ನಿತ್ಯಂ- ಯಾವಾಗಲೂ, ಯಥಾ- ಹೇಗಾದರೆ, ಆಕಾಶೇಸ್ಥಿತಃ- ನಿರಾಲಂಬವಾದ ಆಕಾಶದಲ್ಲಿರುವುದೊ, ತಥಾ- ಆಪ್ರಕಾರವೆ, ಸರ್ವಾಣಿಭೂತಾನಿ- ಸಮಸ್ತಭೂತಗಳು, ಮತ್ಸ್ಥಾನೀತಿ- ನನ್ನಲ್ಲಿರುವುವೆಂದು, ಉಪಧಾರಯ- ತಿಳಿದುಕೊಳ್ಳು॥೬॥

(ಶಂ॥ ಭಾ॥) ಈಪೂರ್ರ್ವೋಕ್ತವಾದ ಅರ್ಥವನ್ನು ಸದೃಷ್ಟಾನ್ತವಾಗಿ ಹೇಳುವೆನುಕೇಳು. ಸರ್ವಪ್ರದೇಶಗಳಲ್ಲಿ ಸಂಚರಿಸುವಂತಾದ್ದಾಗಿರುವ ಮಹತ್ತಾದ ವಾಯುವು ಆಕಾಶದಲ್ಲಂಟದೇನೆ ಆಕಾಶದಲ್ಲಿರುವಂತೆ ಸಕಲ ಪದಾರ್ಥಗಳೂ ಆಕಾಶದಂತೆ ಸರ್ವವ್ಯಾಪಿಯಾದ ನನ್ನಲ್ಲಿ ನನ್ನೊಡನೆ ಸಂಗವಿಲ್ಲದೇನೆ ಇರುವುದೆಂದು ತಿಳಿದು ಕೊಳ್ಳೆಂದುತಾತ್ಪರ್ಯವು. ... ... ॥೬॥

(ರಾ॥ ಭಾ॥) ನಿರಾಧಾರವಾದ ಆಕಾಶದಲ್ಲಿ ಮಹತ್ತಾದ ವಾಯುವು ಇದ್ದುಕೊಂಡು ಸರ್ವತ್ರ ಬೀಸುತಲಿರುದಂ ನೋಡಿದರೆ ಆ ವಾಯುವಿನ ಸ್ಥಿತಿಯು ನನ್ನ ಅಧೀನವೆಂದು ಅವಶ್ಯವಾಗಿ ಅಂಗೀಕರಿಸಬೇಕಾಗಿರುವುದಲ್ಲವೆ ? ಅದರಂತೆ ಸರ್ವಭೂತಗಳೂ ಅವುಗಳಿಂದ ಕಾಣಲ್ಪಡದ ನನ್ನಲ್ಲಿ ಸ್ಥಿತಿಯುಳ್ಳದ್ದಾಗಿರುವುವು. ನನ್ನಿಂದಲೆ ಧರಿಸಲ್ಪಟ್ಟಿರುವುವೆಂದರಿಯಬೇಕು. ಈ ಪ್ರಕಾರವೇ ವೈದಿಕರೂ " ಮೇಘೋದಯಸ್ಸಾಗರಸನ್ನಿವೃತ್ತಿರಿಂದೋರ್ವ್ವಿಭಾಗಸ್ಸ್ಫುರಿತಾನಿವಾಯೋಃ । ವಿದ್ಯುದ್ವಿಭಂಗೋಗತಿರುಷ್ಣರಶ್ಮೇರ್ವಿಷ್ಣೋರ್ವ್ವಿಚಿತ್ರಾಃ ಪ್ರಭವಂತಿಮಾಯಾಃ ,, ಎಂಬುವುದಾಗಿ ಹೇಳಿದರು. ಶ್ರುತಿಯೂ ಈ ಅರ್ಥವನ್ನೇ ಹೇಳುತ್ತದೆ. ॥೬॥

(ಗೀ॥ ವಿ॥) ಭಗವಂತನು ಸರ್ವಾಧಾರನಾಗಿದ್ದರೂ ಧಾರ್ಯಗಳಾದ ಪ್ರಾಣಿಗಳ ಧರ್ಮಗಳು ಆಧಾರಭೂತನಾದ ಪರಮಾತ್ಮನಿಗಿಲ್ಲವು, ತನ್ನ ಧರ್ಮಸಂಬಂಧವು ಅವುಗಳಿಗೂ ಇಲ್ಲವು, ಎಂಬೀ ಅರ್ಥದಲ್ಲಿ ದೃಷ್ಟಾಂತವುಹೇಳಲ್ಪಡುವುದು. ಶೈತ್ಯ ಸೌರಭಾದಿಗಳನ್ನು ವಾಯುವು ಗ್ರಹಿಸಿದರೂ ಅವು ವಾಯು ಸಂಬದ್ಧವಾದ ಜಲಾದ್ಯವಯವಗತವಾಗಿರುವುವಲ್ಲದೆ ವಾಯುಗತವಲ್ಲವು. ಅದರಂತೆ ಸಮಸ್ತಭೂತಗಳೂ ಅನ್ಯೋನ್ಯ ಧರ್ಮಸಂಕ್ರಾಂತಿ ಶೂನ್ಯವಾಗಿಯೇ ಇರುವುವೆಂದು ತಿಳಿಯಬೇಕು. ॥೬॥

ಶ್ಲೋ॥ ಸರ್ವಭೂತಾನಿಕೌಂತೇಯ ಪ್ರಕೃತಿಂಯಾಂತಿ ಮಾಮಿಕಾಂ । ಕಲ್ಪಕ್ಷಯೇ ಪುನಸ್ತಾನಿ ಕಲ್ಪಾದೌವಿ ಸೃಜಾಮ್ಯಹಂ । ॥೭॥

ಪ॥ ಸರ್ವಭೂತಾನಿ- ಕೌಂತೇಯ - ಪ್ರಕೃತಿಂ - ಯಾಂತಿ- ಮಾಮಿಕಾಂ । ಕಲ್ಪಕ್ಷ ಯೇ - ಪುನಃ- ತಾನಿ- ಕಲ್ಪಾದೌ - ವಿಸೃಜಾಮಿ- ಅಹಂ ॥

(ಅ॥ ರಾ॥ ಭಾ॥) ಜಗತ್ತಿನಸ್ಥಿತಿ ಪ್ರವೃತ್ತಿಗಳು ಸಕಲೇತರ ನಿರಪೇಕ್ಷನಾದ ಪರಮಾತ್ಮನ ಸಂಕಲ್ಪಾಧೀನವೆಂಬದಾಗಿಹೇಳಿ ಮುಂದೆ ತನ್ನ ಸಂಕಲ್ಪದಿಂದಲೇ ಜಗತ್ತಿನ ಸೃಷ್ಟಿಲಯಗಳೂ ಆಗುವುದೆಂಬ ಅರ್ಥವನ್ನು ಹೇಳುತ್ತಾರೆ. ಕೌಂತೇಯ - ಎಲೈ ಕುಂತೀಪುತ್ರನಾದ ಅರ್ಜುನನೇ! ಸರ್ವಭೂತಾನಿ- ಸ್ಥಾವರ ಜಂಗಮಾತ್ಮಕವಾಗಿರುವ ಸರ್ವಭೂತಗಳೂ, ಕಲ್ಪಕ್ಷಯೇಕಲ್ಪಾದೌ ಎಂಬೀ ಎರಡು ಸ್ಥಲಗಳಲ್ಲಿಯೂ ಇರುವ ಕಲ್ಪಶಬ್ದಗಳು ಕ್ರಮವಾಗಿ ಚತುರ್ಮುಖನ ಕಡೆಯ ದಿನವಾದ ಚರಮಕಲ್ಪ ಪರವಾಗಿಯೂ ಮುಂದೆ ಬರುವ ಚತುರ್ಮುಖನ ಪ್ರಥಮದಿನ ಭೂತಪ್ರಥಮಕಲ್ಪಪರವಾಗಿಯೂ ಇರುವುದು. ಕಲ್ಪಕ್ಷಯೇ- ಚತುರ್ಮುಖನ ಆಯುರವಸಾನ ದಿನವಾದ ಕಲ್ಪಕ್ಷಯದಲ್ಲಿ, ಮಾಮಿಕಾಂ- ನನಗೆ ಶರೀರವಾಗಿರುವ, ಪ್ರಕೃತಿಂ - ಮೂಲಪ್ರಕೃತಿಯನ್ನು, “ ಅಕ್ಷರಂತಮಸಿಲೀಯತೆ ,, ಎಂಬುವ ರೀತ್ಯಾತಮಶ್ಶಬ್ದದಿಂದ ಹೇಳಲ್ಪಟ್ಟಿರುವ ನಾಮರೂಪ ವಿಭಾಗರಹಿತವಾದ ಮೂಲ ಪ್ರಕೃತಿಯನ್ನೆಂದರ್ಥವು. ಯಾಂತಿ- ನನ್ನ ಸಂಕಲ್ಪದಿಂದ ಮೃಣ್ಮಯವಾದ ಘಟವು ತನಗೆ ಲಯಸ್ಥಾನವಾದ ಮಣ್ಣನ್ನು ಹೊಂದುವ ರೀತಿಯಾಗಿ ಹೊಂದುವುವು. ತಾನಿ- ಆಭೂತಗಳನ್ನು, ಕಲ್ಪಾದೌ- ಮುಂದೇಬರುವ ಚತುರ್ಮುಖನ ಮೊದಲನೆ ದಿನವಾದ ಪ್ರಥಮಕಲ್ಪದ ಆದಿಭಾಗದಲ್ಲಿ, ಪುನಃ- ತಿರಿಗಿಯೂ, ಅಹಂ-ನಾನೆ, ವಿಸೃಜಾಮಿ- ಸೃಷ್ಟಿಸುತ್ತೇನೆ. ಈ ಅರ್ಥವನ್ನೇ ಮನುವು “ ಆಸೀದಿದಂತಮೋಭೂತಂ- ಸೋಭಿಧ್ಯಾಯ ಶರೀರಾತ್ಸ್ವಾತ್,, ಇತ್ಯಾದಿಗಳಿಂದ ಹೇಳಿರುತ್ತಾರೆ. ಶ್ರುತಿಯೂಹೇಳುತ್ತದೆ. ... ... ... ॥೭॥

(ಗೀ॥ ವಿ॥) ಮಾಮಿಕಾಂ- ನನ್ನ ಅಧೀನವಾದ, ಪ್ರಕೃತಿಂ-ತ್ರಿಗುಣಾತ್ಮಕವಾದ ಪ್ರಕೃತಿಯನ್ನು, ವಿಸೃಜಾಮಿ- ನಾನಾವಿಧವಾಗಿ ಸೃಷ್ಟಿಸುವೆನು. ... ... ॥೭॥

(ಶಂ॥ ಭಾ॥) ಆಕಾಶದಲ್ಲಿ ವಾಯುವಿನಸ್ಥಿತಿಯಂತೆ ಆಕಾಶಾದಿ ಭೂತಗಳು ಸ್ಥಿತಿಕಾಲದಲ್ಲಿ ಪರಮೇಶ್ವರನಲ್ಲಿದ್ದರೆ ಪ್ರಲಯಕಾಲದಲ್ಲಿ ಪರಮೇಶ್ವರ ಭಿನ್ನವಾದ ಯಾವದರಲ್ಲಿರುವುದೆಂಬ ಅರ್ಜುನನ ಶಂಕೆಯನ್ನು ತಾನೇ ಚಿಂತಿಸಿ ಆದರಿಂದ ಸಮಾಧಾನವನ್ನು ಹೇಳುತ್ತಾನೆಂದರಿಯಬೇಕು. ಬ್ರಹ್ಮಪ್ರಳಯ ಸಮಯದಲ್ಲಿ ಬ್ರಹ್ಮಾದಿಸ್ತಂಬ ಪರ್ಯಂತಗಳಾದ ಸಮಸ್ತಭೂತಗಳೂ ಪರಬ್ರಹ್ಮಾಧೀನವಾಗಿಯೂ ತ್ರಿಗುಣಾತ್ಮಕವಾಗಿಯೂ ಇರುವ ನಿಕೃಷ್ಟವಾದ ಪ್ರಕೃತಿಯಲ್ಲಿ ಲೀನವಾಗಿರುವುವು. ಪುನಶ್ಚ ಬ್ರಹ್ಮಕಲ್ಪಾರಂಭ ಸಮಯದಲ್ಲಿ ಯಥಾಪೂರ್ವ

ವಾಗಿ ನಾನುವಮಾಯಾದ್ವಾರಾ ಅವುಗಳನ್ನು ಸೃಷ್ಟಿಮಾಡುವೆನು॥೭॥

ಶ್ಲೋ॥ ಪ್ರಕೃತಿಂಸ್ವಾಮವಷ್ಟಭ್ಯ ವಿಸೃಜಾಮಿಪುನಃಪುನಃ । ಭೂತಗ್ರಾಮಮಿಮಂಕೃತ್ಸ್ನ ಮವಶಂಪ್ರಕೃತೇರ್ವಶಾತ್॥ ... ... ॥೮॥

ಪ॥ ಪ್ರಕೃತಿಂ- ಸ್ವಾಂ- ಅವಷ್ಟಭ್ಯ- ವಿಸೃಜಾಮಿ- ಪುನಃ- ಪುನಃ । ಭೂತಗ್ರಾಮಂ- ಇಮಂ- ಕೃತ್ಸ್ನಂ- ಅವಶಂ- ಪ್ರಕೃತೇಃ- ವಶಾತ್॥

ಅ॥ ಸ್ವಾಂ- ನನ್ನದಾದ, ಪ್ರಕೃತಿಂ-ಪ್ರಕೃತಿಯನ್ನು, ಅವಷ್ಟಭ್ಯ- ಆಶ್ರಯಿಸಿ, ಅವಶಂ- ಪ್ರಾಚೀನಕರ್ಮಾಧೀನವಾದ, ಕೃತ್ಸ್ನಮಿಮಂ ಭೂತಗ್ರಾಮಂ - ಸಮಸ್ತವಾದಈಭೂತ ಸಮೂಹವನ್ನು, ಪುನಃಪುನಃ-ಆಗಾಗ್ಯೆ, ಪ್ರಕೃತೇರ್ವಶಾತ್- ಪ್ರಾಚೀನಸ್ವಭಾವವನ್ನನುಸರಿಸಿ, ವಿಸೃಜಾಮಿ- ಸೃಷ್ಟಿಸುವೆನು. ... ॥೮॥

(ಶಂ॥) ಅವಶಂ- ಅವಿದ್ಯೆಯೇ ಮೊದಲಾದ ದೋಷಗಳಿಗೆ ವಶಪಟ್ಟಿರುವುದರಿಂದ ಅಸ್ವತಂತ್ರವಾದ. ... ॥೮॥

(ಮ॥ ಭಾ॥) ಅವಷ್ಟಭ್ಯ- ಪ್ರಕೃತಿಯನ್ನಾಶ್ರಯಿಸಿ, ಪ್ರಕೃತಿಯನ್ನಾಶ್ರಯಿಸದೇನೆ ನಾನು ಸೃಷ್ಟಿಮಾಡುವುದಕ್ಕೆ ಸಮರ್ಥನಾಗಿದ್ದರೂ ದೃಢವಾಗಿರುವ ಒಬ್ಬನು ಲೀಲಾಮಾತ್ರಕ್ಕಾಗಿ ಕೈಯ್ಯಲ್ಲಿ ಕೋಲನ್ನು ಧರಿಸುವಂತೆ ಲೀಲಾರ್ಥವಾಗಿ ಪ್ರಕೃತಿಯನ್ನಾಶ್ರಯಿಸಿ ಸೃಷ್ಟಿಸುವೆನು. (ಗೀ॥ ವಿ॥) ಪ್ರಕೃತಿಮವಷ್ಟಭ್ಯ- ಉಪಾದಾನ ಕಾರಣವನ್ನಾಗಿ ಪ್ರಕೃತಿಯನ್ನಾಶ್ರಯಿಸಿ, ಅವಶಂ- ಪ್ರಕೃತಿಗೇಸ್ವಾಧೀನವಾಗಿರುವುದರಿಂದ ಪರಾಧೀನವಾಗಿರುವ, (ಅಥವಾ) ಅ - ವಿಷ್ಣುವಿಗೆ, ವಶಂ- ಸ್ವಾಧೀನವಾಗಿರುವ. ... ॥೮॥

(ರಾ॥ ಭಾ॥) ನನ್ನದಾಗಿರುವ ತ್ರಿಗುಣದ್ರವ್ಯವನ್ನು (ಪ್ರಕೃತಿಯನ್ನು) ಪ್ರಕೃತಿ ಮಹದಹಂಕಾರ ಶಬ್ದತನ್ಮಾತ್ರ ಸ್ಪರ್ಶತನ್ಮಾತ್ರ ರೂಪತನ್ಮಾತ್ರ ರಸತನ್ಮಾತ್ರ ಗಂಧತನ್ಮಾತ್ರಗಳೆಂಬೀ ಎಂಟುಪದಾರ್ಥಗಳಾಗಿ ಪರಿಣಾಮವಂ ಹೊಂದಿಸಿ ಮೋಹಕವಾಗಿಯೂ ತ್ರಿಗುಣಾತ್ಮಕವಾಗಿಯೂ ಇರುವ ನನ್ನ ಮೂಲಪ್ರಕೃತಿಯ ಪಾರವಶ್ಯದಿಂದ ಅಸ್ವತಂತ್ರವಾಗಿರುವ ದೇವತಿರ್ಯಙ್ಮನುಷ್ಯಸ್ಥಾವರ ರೂಪವಾದ ಈಚತುರ್ವಿಧ ಭೂತವರ್ಗವನ್ನು ಪ್ರತಿಸೃಷ್ಟಿ ಕಾಲಗಳಲ್ಲಿಯೂ ಸೃಷ್ಟಿಸುವೆನು. ... ... ॥೮॥

ಶ್ಲೋ ॥ ನಚಮಾಂತಾನಿಕರ್ಮಾಣಿ ನಿಬಧ್ನಂತಿಧನಂಜಯ।
ಉದಾಸೀನವದಾಸೀನಮಸಕ್ತಂತೇಷುಕರ್ಮಸು ॥ ೯॥

ಪ॥ ನ- ಚ- ಮಾಂ- ತಾನಿ- ಕರ್ಮಾಣಿ - ನಿಬಧ್ನಂತಿ - ಧನಂಜಯ । ಉದಾಸೀನವ ತ್- ಆಸೀನಂ- ಅಸಕ್ತಂ- ತೇಷು- ಕರ್ಮಸು॥

ಅ॥ ಹೇಧನಂಜಯ- ಎಲೈ ಅರ್ಜುನನೆ, ತಾನಿಕರ್ಮಾಣಿ- ಆಸೃಷ್ಟ್ಯಾದಿಕರ್ಮಗಳು, ತೇಷುಕರ್ಮಸು- ಆಕರ್ಮಗಳಲ್ಲಿ, ಅಸಕ್ತಂ- (ಶಂ) ಬಂಧಹೇತು-ಭೂತವಾದಕರ್ಮಫಲದಲ್ಲಿ ಅಪೇಕ್ಷೆಯೂ ಕರ್ತೃತ್ವಾಭಿಮಾನವೂ ಇಲ್ಲದೇಯಿರುವ, ಉದಾಸೀನವ ದಾಸೀನಂಚ- ಸಂಬಂಧವಿಲ್ಲದವನಂತೆಯೂ ಇರುವ, (ಗೀ॥ ವಿ॥) ಕರ್ಮಗಳನ್ನು ಮಾಡಿದರೂ ಕರ್ಮಗಳ ನ್ನು ಮಾಡದವನಿಗೆ ಹೇಗಾದರೆ ಫಲವಿಲ್ಲವೋ ಆಪ್ರಕಾರ ನನಿಗೂ ಫಲವಿಲ್ಲವು, ಅದುದ ರಿಂದ ಮಾಡದವನಂತೆ ಇರುವ, ಮಾಂ- ನನ್ನನ್ನು, ನನಿಬಧ್ನಂತಿ-ಬಂಧಿಸಲಾರವು. ॥೯॥

(ಶಂ॥ ಭಾ॥) ಆರೀತಿಯಾಗಿ ಪರಮಾತ್ಮನಾದ ನೀನೆ ಸಮಸ್ತಭೂ ತಗಳ ಸೃಷ್ಟಿಸ್ಥಿತಿಲಯಗಳಿಗೆ ಕಾರಣನಾಗಿದ್ದರೆ ಭೂತಗಳನ್ನು ವಿಷ ಮವಾಗಿ ಸೃಷ್ಟಿಸುವಂತವನಿಗೆ ಅಂತಹ ವೈಷಮ್ಯಕ್ಕೆ ಕಾರಣಗಳಾದ ಧರ್ಮಾಧರ್ಮಗಳೊಡನೆ ಸಂಬಂಧವುಂಟೋ? ಎಂದರೆ ಆದಕ್ಕೆ ಪ್ರತ್ಯು ತ್ತರವಾಗಿ ಎಲೈ ಅರ್ಜುನನೆ! ಭೂತಗಳ ವೈಷಮ್ಯಕ್ಕೆಕಾರಣಗಳಾದ ಕರ್ಮಗಳು ಬೇರೊಬ್ಬರ ವಿಷಯವಾದ ಪ್ರಸಕ್ತಿಯು ನಡೆಯುತಲಿರು ವಲ್ಲಿ ಅದರ ಸಂಬಂಧ ವಿಲ್ಲದವನು ಹೇಗಾದರೆ ನಿಶ್ಚಿಂತನಾಗಿರುವನೋ ಆಪ್ರಕಾರ ವಿರುವಂತವನಾಗಿಯೂ ನಾನು ಮಾಡುತ್ತೇನೆಂಬ ಫಲಾ ಪೇಕ್ಷಾಯುಕ್ತವಾದ ಅಭಿಮಾನವಿಲ್ಲದವನಾಗಿಯೂ ಇರುವ ಪರಮಾ ತ್ಮನನ್ನು ಬಂಧಿಸಲಾರವು. ಆದುದರಿಂದಲೇ ಕರ್ತೃತ್ವಾದ್ಯಭಿಮಾ ನವೂ ಫಲಾಪೇಕ್ಷೆಯೂ ಇಲ್ಲದಿರುವ ಯಾವನೂ ಕರ್ಮಬದ್ಧನಾಗಲಾ ರನು. ಒಂದುವೇಳೆ ಆಶಾಭಿಮಾನ ಯುಕ್ತನಾಗಿದ್ದರೆ ತಪ್ಪದೆ ಕರ್ಮಬ ದ್ಧನಾಗುವನು. ... ... ॥೯॥

(ರಾ॥ಭಾ॥) ಈರೀತಿಯಾಗಿ ಜಗತ್ತನ್ನುಸೃಷ್ಟಿಸುವ ಪಕ್ಷದಲ್ಲಿಒಬ್ಬ ನನ್ನುಸುಖಿಯಾಗಿಯೂ ಒಬ್ಬನನ್ನು ದುಃಖಿಯಾಗಿಯೂವಿಷಮವಾಗಿ ಸೃಷ್ಟಿಮಾಡುವುದರಿಂದ ವಿಷಮವಾಗಿರುವ ಸೃಷ್ಟ್ಯಾದಿಕರ್ಮಗಳನ್ನು ಮಾಡಿದರೆ ವೈಷಮ್ಯ ನೈರ್ಘೃಣ್ಯದೋಷಗಳು ನಿನ್ನನ್ನು ಬಂಧಿಸಲಾರ ವೊಎಂದರೆ ಅದಕ್ಕೆ ಸಮಾಧಾನವನ್ನುಪದೇಶಿಸುತ್ತಾನೆ. ವಿಷಮವಾದ

ಸೃಷ್ಟ್ಯಾದಿಕಾರ್ಯಗಳಂ ನಾನು ಮಾಡುವುದರಿಂದ ನನಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಬರಲಾರವು. ಜೀವಾತ್ಮರ ಪೂರ್ವಾ ಪೂರ್ವಕರ್ಮಗಳೇ ದೇವತ್ವ ಮನುಷ್ಯತ್ವಾದಿ ವೈಷಮ್ಯ ಹೇತುಗಳಾಗಿ ರುವುದರಿಂದ ನನಗೆ ಆದೋಷಗಳ ಸಂಬಂಧವಿಲ್ಲವೆಂದು ಭಾವವು. ನಾನೂ ಆ ಸೃಷ್ಟಿವೈಷಮ್ಯದಲ್ಲಿ ಆಸಕ್ತಿಶೂನ್ಯನಾಗಿಯೇ ಇರುವೆನು. ಇದನ್ನೇ ಸೂತ್ರಕಾರರೂ "ವೈಷಮ್ಯನೈರ್ಘೃಣ್ಯೇನ ಸಾಪೇಕ್ಷತ್ವಾತ್-ನಕರ್ಮಾವಿಭಾಗಾದಿತಿಚೇನ್ನಾನಾದಿತ್ವಾತ್" ಎಂಬದಾಗಿ ಹೇಳಿರುತ್ತಾರೆ. ... ... ‖೯‖

ಶ್ಲೋ ‖ ಮಯಾಧ್ಯಕ್ಷೇಣಪ್ರಕೃತಿಸ್ಸೂಯತೇಸಚರಾಚರಂ|ಹೇತುನಾನೇನಕೌಂತೇಯಜಗದ್ಧಿಪರಿವರ್ತತೇ‖೧೦‖

ಪ| ಮಯಾ- ಅಧ್ಯಕ್ಷೇಣ- ಪ್ರಕೃತಿಃ- ಸೂಯತೇ- ಸಚರಾಚರಂ | ಹೇತುನಾ- ಅನೇನ- ಕೌಂತೇಯ- ಜಗತ್- ಹಿ- ಪರಿವರ್ತತೇ ‖

(ಅ‖ ರಾ‖ ಭಾ‖) ಪ್ರಕೃತಿಃ - ನಮಗೆ ಶರೀರಭೂತವಾದ ಮೂಲಪ್ರಕೃತಿಯು, ಅಧ್ಯಕ್ಷೇಣಮಯಾ- ಅಧಿಷ್ಠಾತಾ ಆಗಿಯೂ ಸತ್ಯಸಂಕಲ್ಪನಾಗಿಯೂ ಇರುವ ನನ್ನಿಂದ,(ಆಯಾಯಾಕ್ಷೇತ್ರಜ್ಞರ ಕರ್ಮಾನುಗುಣ್ಯದಿಂದ ಪ್ರೇರಿತವಾಗಿ) ಸಚರಾಚರಂ-ಚರಗಳಾದ ದೇವತಿರ್ಯಙ್ಮನುಷ್ಯರೊಡನೆಯೂ, ಅಚರಗಳಾದ ವೃಕ್ಷಲತಾದಿ ಸ್ಥಾವರಗಳೊಡನೆಯೂ ಕೂಡಿರುವ ಜಗತ್ತನ್ನು, ಸೂಯತೇ- ಉಂಟುಮಾಡುತ್ತದೆ. ಕೌಂತೇಯ- ಎಲೈ ಅರ್ಜನನೆ | ಅನೇನ ಹೇತುನಾ- ಕ್ಷೇತ್ರಜ್ಞರ ಕರ್ಮಾನುಗುಣವಾಗಿ ನಾವುಮಾಡುವಪ್ರೇರಣೆಯೆಂಬ ಕಾರಣದಿಂದ, ಜಗತ್- ಈಜಗತ್ತು, ವಿಪರಿವರ್ತತೇ- ಆಗಾಗ್ಯೆ ಉತ್ಪತ್ತಿಸ್ಥಿತಿಲಯಗಳನ್ನು ಹೊಂದುತ್ತದೆ. ಆದುದರಿಂದ ವಸುದೇವಪುತ್ರನಾದ ನನ್ನಸ್ವಾಮ್ಯವನ್ನೂ ಸತ್ಯಸಂಕಲ್ಪತ್ವವನ್ನೂ ನೈರ್ಘೃಣ್ಯಾದಿ ದೋಷರಾಹಿತ್ಯವನ್ನೂ ಹಾಗೆಯೇ ನಮ್ಮ ಐಶ್ವರ ಸಾಮರ್ಥ್ಯವನ್ನೂ ನೋಡೆಂದು ತಾತ್ಪರ್ಯವು. ಈ ಅರ್ಥವನ್ನೇ ಶ್ರುತಿಯೂ ಹೇಳುತ್ತದೆ. ... ... ... ‖೧೦‖

(ಶಂ‖ ಭಾ‖) ಎಲೈಕೃಷ್ಣನೆ ಭೂತ ಸಮೂಹವನ್ನು ಸೃಷ್ಟಿಸುತ್ತೇನೆಂತಲೂ ಉದಾಸೀನನಂತೆ ಇರುವೆನೆಂತಲೂ ನೀನು ಹೇಳುವವಾಕ್ಯಗಳು ಪರಸ್ಪರ ವಿರುದ್ಧಗಳಾಗಿರುವುವಲ್ಲವೆ? ಎಂಬ ಅರ್ಜುನನ ಶಂಕೆಯನ್ನು ತಾನೆ ಚಿಂತಿಸಿ ಸಮಾಧಾನವನ್ನು ಹೇಳುತ್ತಾನೆ ಶ್ರೀಕೃಷ್ಣನೆಂದರಿಯಬೇಕು. ಎಲೈ ಅರ್ಜುನನೆ! ಜ್ಞಾನಮಾತ್ರ ಸ್ವರೂಪನಾಗಿಯೂ ಭಾವವಿಕಾರಗಳಿಲ್ಲದವನಾಗಿಯೂ ಇರುವ ಆತ್ಮನಾದ

ನಾನು ಸಾಕ್ಷಿಮಾತ್ರನಾಗಿರುವೆನು. ತ್ರಿಗುಣಾತ್ಮಿಕವಾಗಿಯೂ ಅವಿದ್ಯೆ ಎನ್ನಲ್ಪಡುವುದಾಗಿಯೂ ಇರುವ ನನ್ನ ಮಾಯೆಯು ಚರಾಚರಾತ್ಮಕವಾದ ಪ್ರಪಂಚವನ್ನು ನನ್ನ ಸನ್ನಿಧಾನ ವಿಶೇಷವನ್ನವಲಂಬಿಸಿ ಸೃಷ್ಟಿಸುತ್ತದೆ. ಆದುದರಿಂದ ನಾನು ಉದಾಸೀನನಾಗಿರುವೆನೆಂತಲೂ ನನ್ನ ಮಾಯೆಯು ಸೃಷ್ಟಿಸುವುದರಿಂದ ನಾನೆ ಸೃಷ್ಟಿಸುತ್ತೇನೆಂತಲೂ ಹೇಳಲು ಬಾಧೆಯಿಲ್ಲವು. ಪರಮಾತ್ಮನು ಸಾಕ್ಷಿ ಎಂಬುವುದಕ್ಕೆ "ಏಕೋದೇವಃ" ಎಂಬ ಬ್ರಹ್ಮೋಪನಿಷಚ್ಛ್ರುತಿ ಪ್ರಮಾಣವೂ ಇರುವುದು. ನಾನಿದನ್ನನುಭವಿಸುವೆನು, ನೋಡುವೆನು ಕೇಳುವೆನು, ಸುಖಿಯಾಗಿರುವೆನು, ದುಃಖಿಸುವೆನು, ಒಂದು ಪ್ರಯೋಜನವನ್ನುದ್ದೇಶಿಸಿ ಈ ಕಾರ್ಯವಂ ಮಾಡುವೆನು, ಇದನ್ನು ತಿಳಿದುಕೊಳ್ಳುವೆನು, ಎಂಬದಾಗಿ ಸರ್ವಾವಸ್ಥೆಯಲ್ಲಿಯೂ ಜ್ಞಾನಸಹಾಯದಿಂದಲೇ ಪ್ರಪಂಚದಲ್ಲಿ ಸರ್ವವ್ಯಾಪಾರಗಳೂ ನಡೆಯುವುವಲ್ಲದೆ ? ಸರ್ವಾನುಭವಗಳಿಗೂ ಮೂಲಭೂತನೂ ಕೇವಲ ಜ್ಞಾನಸ್ವರೂಪನೂ ಆಗಿರುವ ನಾನು ಸಾಕ್ಷಿಯಾಗಿರುವುದರಿಂದಲೆ ಇಂತಹ ಪ್ರವೃತ್ತಿಗಳೆಲ್ಲವೂ ಸತ್ಯವಾಗುವುದು. "ದೃಶ್ಯಪ್ರಪಂಚದ ಸರ್ವಪ್ರವೃತ್ತಿಗಳಿಗೂ ಕಾರಣನಾಗಿಯೂ ಸಾಕ್ಷಿಭೂತನಾಗಿಯೂ ಇರುವ ಪರಮಾತ್ಮನು ಶ್ರೇಷ್ಠವಾದ ಹೃದಯಾಕಾಶದಲ್ಲಿರುವನು" ಎಂಬೀ ಅರ್ಥ ಪ್ರತಿಪಾದಕವಾದ ಶ್ರುತಿಯೂ ಇದಕ್ಕೆ ಪ್ರಮಾಣವಾಗಿರುವುದು.

ಆದರೆ "ನಿರ್ವಿಕಾರಿಯಾದ ಪರಮಾತ್ಮನಿಗೆ ಈ ಸೃಷ್ಟಿಯಿಂದೇನು ಪ್ರಯೋಜನವು? ಪರಮಾತ್ಮನು ಪರಮಾರ್ಥವಾಗಿ ಭೋಗಸಂಬಂಧಶೂನ್ಯನಾಗಿಯೂ ಸಾಕ್ಷಿಭೂತಚೈತನ್ಯಮಾತ್ರ ಸ್ವರೂಪನಾಗಿಯೂ ಇರುವುದರಿಂದ ಈ ಸೃಷ್ಟ್ಯಾದಿ ವ್ಯಾಪಾರವು ಭೋಗಾರ್ಥವೆನ್ನಲು ಆಗುವುದಿಲ್ಲವು. ಮತ್ತೊಂದು ಚೇತನ ವಸ್ತುವಿಲ್ಲ ವಾದುದರಿಂದಲೂ ಈಶ್ವರನು ಒಬ್ಬನೇ ಆಗಿರುವುದರಿಂದಲೂ ಅಚೇತನಕ್ಕೆ ಭೋಕ್ತೃತ್ವವು ಉಂಟಾಗಲಾರದಾದುದರಿಂದಲೂ ಅನ್ಯರಿಗಾಗಿ ಸೃಷ್ಟ್ಯಾದಿಗಳಂ ಮಾಡುತ್ತಾನೆಂತಲೂ ಹೇಳಲವಕಾಶವಿಲ್ಲವು. ಮೋಕ್ಷವಿರೋಧಿಯಾಗಿರುವುದರಿಂದ ಮೋಕ್ಷಕ್ಕಾಗಿ ಎಂತಲೂ ಹೇಳಕೂಡದು? ಎಂದರೆ ಇಂತಹ ಪ್ರಶ್ನ ಪ್ರತಿವಚನಗಳೇ ಅನುಪಪನ್ನಗಳೆಂದರಿಯಬೇಕು. ಪರ

ಮಾತ್ಮನ ಮಾಯೆಯಿಂದ ಈಪ್ರಪಂಚವೆಲ್ಲವೂ ಸೃಷ್ಟಿಸಲ್ಪಡುತ್ತ ದಾದುದರಿಂದ ಇದೆಲ್ಲವೂ ಮಾಯಾಸ್ವಭಾವವೆಂತಲೇ ತಿಳಿಯಬೇಕು. ಪರಮಾತ್ಮಸ್ವರೂಪವು ಸಾಮಾನ್ಯವಾಗಿ ತಿಳಿಯಲಶಕ್ಯವೆನ್ನುವುದಂ "ಈಪ್ರಪಂಚಕ್ಕೆ ಅಧಿಷ್ಠಾನವಾದದ್ದು ಯಾವದೋ, ಯಾವದರಿಂದ ಇವೆಲ್ಲವೂ ಸೃಷ್ಟಿಸಲ್ಪಟ್ಟಿತೋ? ಯಾರುಬಲ್ಲರು, ಯಾರುತಾನೆ ಹೇಳುವರು,, ಎಂಬೀಅರ್ಥವಂ ಪ್ರತಿಪಾದಿಸುವ ಶ್ರುತಿಯೂ ಹೇಳುವುದು. ಮತ್ತು ಇದೇಅರ್ಥದಲ್ಲಿ ಶ್ರೀಕೃಷ್ಣನೂ "ಅಜ್ಞಾನೇನಾವೃತಂಜ್ಞಾನಂ ತೇನಮುಹ್ಯಂತಿ ಜಂತವಃ,, (೫॥ ೧೫॥)ಎಂಬದಾಗಿಸೃಷ್ಟಿಯು ಮಾಯಾಧೀನವೆಂದು ಹೇಳಿರುವನು. ॥೯॥

(ಗೀ॥ ವಿ॥) ಅಧ್ಯಕ್ಷೇಣಮಯಾಪ್ರಕೃತಿ ಸ್ಸೂಯತೇ ಸಚರಾಚರಂ- ಮುಖ್ಯಕರ್ತ್ರುಆದ ನನ್ನಿಂದ ಪ್ರೇರಿತವಾಗಿ ನನಿಗಧೀನವಾಗಿರುವ ಪ್ರಕೃತಿಯು, (ಅಥವಾ) (ಪುರುಷನಾದ) ಅಧಿಪತಿಯಾಗಿರುವ ನನ್ನಿಂದ (ಸ್ತ್ರೀಯಾದ) ಪ್ರಕೃತಿಯು ಚರಾಚರ ಪ್ರಪಂಚವನ್ನು ಪ್ರಸವಿಸುತ್ತದೆ. ... ... ॥೧೦॥

ಶ್ಲೋ॥ ಅವಜಾನಂತಿಮಾಂಮೂಢಾ ಮಾನುಷೀಂತನು
ಮಾಶ್ರಿತಂ । ಪರಂಭಾವಮಜಾನಂತೋ ಮಮಭೂತಮ
ಹೇಶ್ವರಂ ... ॥೧೧

ಪ॥ ಅವಜಾನಂತಿ- ಮಾಂ- ಮೂಢಾಃ- ಮಾನುಷೀಂ- ತನುಂ- ಆಶ್ರಿತಂ । ಪರಂ- ಭಾವಂ- ಅಜಾನಂತಃ- ಮಮ- ಭೂತಮಹೇಶ್ವರಂ॥

(ಅ॥ ರಾ॥ ಭಾ॥) ಭೂತಮಹೇಶ್ವರಂ- ನಿಖಿಲಭೂತಗಳಿಗೂ ಈಶ್ವರತ್ವವನ್ನು ನಮ್ಮ ಅನುಗ್ರಹದಿಂದ ಹೊಂದಿರುವ ಬ್ರಹ್ಮರುದ್ರೇಂದ್ರಾದಿಗಳಿಗೆ ನಿಯಂತಾವಾಗಿಯೂ, ಮಾನುಷೀಂತನುಮಾಶ್ರಿತಂ - ಸರ್ವಜ್ಞನಾಗಿಯೂ ಸತ್ಯಸಂಕಲ್ಪನಾಗಿಯೂ ನಿಖಿಲ ಜಗದೇಕ ಕಾರಣಭೂತನಾಗಿಯೂ ಇದ್ದರೂ ಪರಮದಯಾಳುವಾಗಿರುವುದರಿಂದ ಎಲ್ಲರಿಂದಲೂ ತಾನಾಶ್ರಯಿಸಲ್ಪಟ್ಟು ಆಶ್ರಿತರಾದ ಅವರನ್ನು ಉಜ್ಜೀವನಮಾಡಿಸುವುದಕ್ಕಾಗಿ ಮನುಷ್ಯಾಕೃತಿಯನ್ನು ಧರಿಸಿರುವ, ಮಾಂ- ನನ್ನನ್ನು, ಮೂಢಾಃ- ತಮ್ಮಗಳ ಪಾಪಕರ್ಮಗಳಿಂದ ಮೋಹವನ್ನು ಹೊಂದಿರುವ ಜನಗಳು, ಮಮ- ನನ್ನ, ಪರಂಭಾವಂ- ಭೂತಮಹೇಶ್ವರನಾಗಿದ್ದರೂ ಅಪಾರಕಾರುಣ್ಯಸೌಶೀಲ್ಯ ಸೌಲಭ್ಯವಾತ್ಸಲ್ಯಾದಿಗಳಿಂದ ಮನುಷ್ಯಾಕೃತಿ ಶರೀರ ಸಮಾಶ್ರಯಣ ರೂಪ ಉತ್ತಮಸ್ವಭಾವವನ್ನು, ಅಜಾನಂತಃ- ತಿಳಿ

ಯದವರಾಗಿ, ಅವಜಾನಂತಿ- ಪ್ರಾಕೃತ ಮನುಷ್ಯತುಲ್ಯತ್ವೇನ ನೆನೆಯುತಾ ತಿರಸ್ಕರಿಸುತ್ತಾರೆ. ... ||೧೦||

(ಶಂ|| ಭಾ||) ಉತ್ತಮವಾಗಿಯೂ ಆಕಾಶತುಲ್ಯವಾಗಿಯೂ ಆಕಾಶಕ್ಕೂ ಅಂತರ್ಯಾಮಿಯಾಗಿಯೂ ಇರುವ ಪರಮಾತ್ಮ ತತ್ವವನ್ನು ತಿಳಿದುಕೊಳ್ಳದಅವಿವೇಕಿಗಳು ಸಮಸ್ತ ಭೂತಗಳಿಗೂ ನಿಯಾಮಕನಾಗಿಯೂ ನಿತ್ಯಶುದ್ಧ ಮುಕ್ತ ಸ್ವಭಾವನಾಗಿಯೂಇರುವ ಪರಮಾತ್ಮನು ಸರ್ವ ಭೂತಾಂತರಾತ್ಮನಾಗಿದ್ದರೂ ಭಕ್ತ ಜನಾನುಗ್ರಹಾರ್ಥವಾಗಿ ಚರ್ಮ ಚಕ್ಷುಸ್ಸುಗಳಿಗೂ ಗೋಚರನಾಗುವಂತೆ ಅವತರಿಸಿ ಮನುಷ್ಯದೇಹದಿಂದ ವ್ಯವಹರಿಸಲ್ಪಡುವ ಪರಮಾತ್ಮನಾದ ನನ್ನನ್ನು ತಮ್ಮಗಳಿಗಿರುವ ಕರ್ಮಕೃತವಾದ ಶರೀರವುಳ್ಳವನಂತೆ ತಿಳಿದು ವ್ಯರ್ಥವಾಗಿಕೆಟ್ಟುಹೋಗುತ್ತಾರೆಂದು ತಾತ್ಪರ್ಯವು. ... ||೧೧||

(ಮ|| ಗೀ|| ವಿ||) ಆದರೆ ಪರಮಾತ್ಮನಾದ ನಾನು ಸೃಷ್ಟ್ಯಾದಿಗಳಿಗೆಕರ್ತಾ ಆಗಿದ್ದರೆ ಅಂತಹ ನಿನ್ನನ್ನು ಕೆಲವರು ತಿರಸ್ಕರಿಸುವುದಕ್ಕೇನುಕಾರಣವು? ಅಂಥಾವರಿಗೆ ಯೇತಕ್ಕೆ ಅನರ್ಥಗಳು ಪ್ರಾಪ್ತವಾಗುವುದಿಲ್ಲವು? ಎಂದರೆ ಕೆಲವರು ಪರಮಾತ್ಮನಲ್ಲವಜ್ಞೆಯಂ ಮಾಡುವುದಕ್ಕೆ ಕಾರಣವನ್ನೀ ಶ್ಲೋಕದಿಂದಲೂ ಅಂತವರಿಗೆ ಪ್ರಾಪ್ತವಾಗುವ ಅನರ್ಥಗಳಂ ಮುಂದಿನಶ್ಲೋಕದಲ್ಲಿಯೂ ಹೇಳುತ್ತಾನೆಂದರಿಯಬೇಕು. ಮಮ- ನನ್ನ, ಭೂತಮಹೇಶ್ವರಂ- ಭೂತ- ಸರ್ವಕಾಲಗಳಲ್ಲಿರುವ, ಮಹ- ಸರ್ವದೇಶ ವ್ಯಾಪ್ತವಾಗಿರುವ, ಈಶ್ವರಂ - ಸರ್ವಗುಣಗಳಿಂದ ಪೂರ್ಣನಾದ, ಪರಂ- ಉತ್ತಮವಾದ, ಭಾವಂ- ಯಥಾರ್ಥವಾದ ಸ್ವರೂಪವನ್ನು, ಅಜಾನಂತಃ- ತಿಳಿಯದೇಇರುವ, ಮೂಢಾಃ- ಮೂರ್ಖರು; ಮಾನುಷೀಂತನುಂ- ಮನುಷ್ಯಶರೀರಕ್ಕೆ ಸದೃಶವಾಗಿತೋರುವ ಶರೀರವನ್ನು, ಆಶ್ರಿತಂ - ಆಶ್ರಯಿಸಿರುವ, ಮಾಂ-ನನ್ನನ್ನು, ಅವಜಾನಂತಿ- ವಿಪರೀತವಾಗಿ ತಿಳಿಯುತ್ತಾರೆ. ಅವಜ್ಞಾರೂಪವಾದ ವಿಪರೀತ ಜ್ಞಾನವ್ಯಾವದೆಂದರೆ! ಲಕ್ಷ್ಮೀ ಬ್ರಹ್ಮ ರುದ್ರಾದಿಗಳಲ್ಲಿ ಸಾಮ್ಯಜ್ಞಾನವೂ ಇವರಿಗೂ ಪರಮಾತ್ಮನಿಗೂ ಭೇದವಿಲ್ಲವೆಂಬ ಜ್ಞಾನವೂ ನಿತ್ಯ ನಿರ್ದೋಷಮಾದ ಪರಮಾತ್ಮನ ರೂಪದಲ್ಲಿ ದೋಷವಿ

ರುತ್ತದೆಂಬ ಜ್ಞಾನವೂ ಪರಮಾತ್ಮಸ್ವರೂಪದಲ್ಲಿ ಅಪೂರ್ಣತ್ವಜ್ಞಾನವೂ ಪರಮಾತ್ಮನ ಅವತಾರಗಳಲ್ಲಿ ಅವತಾರವಲ್ಲವೆಂಬ ಜ್ಞಾನವೂ ಪರಮಾತ್ಮಾವತಾರವಲ್ಲದವರಲ್ಲಿ ಪರಮಾತ್ಮಾವತಾರ ರೂಪವೆಂಬ ಜ್ಞಾನವೂ ಪರಮಾತ್ಮನನ್ನು ವಜ್ಞ್ಞಮಾಡುವ ವಿಪರೀತ ಜ್ಞಾನವೆಂದರಿಯಬೇಕು. ಇದಕ್ಕೆ "ಬ್ರಹ್ಮರುದ್ರರಮಾದೀನಾಂ ಸಾಮ್ಯದೃಷ್ಟಿರನನ್ಯತಾ। ಪ್ರಾದುರ್ಭಾವಸ್ಯ ತಸ್ಯಾಪಿ ದೋಷದೃಷ್ಟಿರಪೂರ್ಣತಾ॥ ಧರ್ಮದೇಹಾವತಾರಾದೇರ್ಭೇದದೃಷ್ಟಿಶ್ಚ ಸಂಕರಃ । ಅವತಾರೇಪಿ ವಿಜ್ಞೇಯಮವಜ್ಞಾನಂ ಜನಾರ್ದನೇ" ಎಂಬ ಸಮ್ಮತಿಯಂ ತಿಳಿಯಬೇಕು. ॥೧೧॥

ಶ್ಲೋ॥ ಮೋಘಾಶಾ ಮೋಘಕರ್ಮಾಣೋ ಮೋಘಜ್ಞಾನಾ ವಿಚೇತಸಃ । ರಾಕ್ಷಸೀಮಾಸುರೀಂ ಚೈವ ಪ್ರಕೃತಿಂ ಮೋಹಿನೀಂ ಶ್ರಿತಾಃ ॥ ... ॥೧೨॥

ಪ॥ ಮೋಘಾಶಾಃ- ಮೋಘಕರ್ಮಾಣಃ- ಮೋಘಜ್ಞಾನಾಃ- ವಿಚೇತಸಃ । ರಾಕ್ಷಸೀಂ-ಆಸುರೀಂ- ಚ- ಏವ- ಪ್ರಕೃತಿಂ- ಮೋಹಿನೀಂ-ಶ್ರಿತಾಃ ॥

(ಅ॥ ರಾ॥ ಭಾ॥) ಮೋಹಿನೀಂ- ಸರ್ವೇಶ್ವರನಾಗಿದ್ದರೂ ಪರಮಕಾರುಣಿಕತೆಯಿಂದ ಮನುಷ್ಯಶರೀರವನ್ನಾಶ್ರಯಿಸಿರುವ ನನ್ನ ಧರ್ಮವನ್ನು ಅವರಿಗೆ ತಿಳಿಯದಂತೆ ಮರೆಮಾಡಿ ವಿಪರೀತಜ್ಞಾನವನ್ನುಂಟುಮಾಡುವ, ರಾಕ್ಷಸೀಮಾಸುರೀಂಚ ಪ್ರಕೃತಿಂಶ್ರಿತಾಃ-ತಮೋಗುಣ ಪ್ರಧಾನರಾದ ರಾಕ್ಷಸರ ಸಂಬಂಧಿಯಾಗಿಯೂ ರಜಸ್ತಮೋಗುಣ ಪ್ರಧಾನರಾದ ಅಸುರರ ಸಂಬಂಧಿಯಾಗಿಯೂ ಇರುವ ಸ್ವಭಾವವಂ ಹೊಂದಿರುವ ಪ್ರಾಕೃತಜನರು, ಮೋಘಾಶಾಃ- ನಿಷ್ಫಲವಾದ ಅಪೇಕ್ಷಿತ ಫಲಗಳುಳ್ಳವರು. ಮೋಘಕರ್ಮಾಣಃ- ನಿಷ್ಫಲಗಳಾದ ಕಾರ್ಯಾರಂಭಗಳುಳ್ಳವರು. ಮೋಘಜ್ಞಾನಾಃ- ನನಿಗೆ ಶರೀರಗಳಾಗಿರುವ ಸಮಸ್ತ ವಸ್ತುಗಳನ್ನೂ ವಿಪರೀತವಾಗಿ ನೆನೆಸುವುದರಿಂದ ನಿಷ್ಫಲಜ್ಞಾನಮುಳ್ಳವರು. ವಿಚೇತಸಃ- ಹಾಗೆಯೆ ಸರ್ವ ವಿಷಯಗಳಲ್ಲಿಯೂ ಯಥಾರ್ಥಜ್ಞಾನವಿಲ್ಲದವರು. ಆದುದರಿಂದ ಅವರಮೇಲೆ ತಪ್ಪಿತವಿಲ್ಲವು. ಅವರಸ್ವಭಾವವೇ ಅಂತಾದ್ದೆಂದು ತಾತ್ಪರ್ಯವು. ॥೧೨॥

(ಶಂ॥ ಭಾ॥) ಇಂತವರು ಹೇಗೆ ಕೆಟ್ಟುಹೋಗುವರೊ ಅದಂ ಹೇಳುವೆನುಕೇಳು. ಸ್ವರ್ಗಾದಿ ಲೋಕಗಳಿಗೆ ಹೋಗಿ ರಂಭಾದಿ ದಿವ್ಯಾಪ್ಸರಃಪರಿರಂಭಣಾದಿ ಸುಖಗಳನ್ನು ಹೊಂದಬೇಕೆಂಬ ಮಹತ್ತಾದ ವ್ಯರ್ಥವಾಗಿರುವ ಆಶಾವಿಶೇಷ ಮುಳ್ಳವರಾಗಿಯೂ, ಭಗವದರ್ಪಿತಗಳಾಗದೇ ಇರುವುದರಿಂದ ನಿಷ್ಫಲವೆನ್ನಲ್ಪಡುವ ಅಗ್ನಿಹೋತ್ರಾ

ದಿಕರ್ಮಗಳನ್ನೆ ರಾತ್ರಿ ಹಗಲೂ ಮಾಡಿದರೂ ತನ್ಮಗಳಿಗಾತ್ಮಭೂತ ನಾದ ಪರಮಾತ್ಮನನ್ನ ವಜ್ಞೆಮಾಡುವುದರಿಂದ ವ್ಯರ್ಥಗಳಾದ ಕರ್ಮ ಗಳುಳ್ಳವರಾಗಿಯೂ, (ಶ್ರೀ) (ತನ್ನಿಂದ ಪ್ರವರ್ತಿಸಲ್ಪಟ್ಟ ಶಾಸ್ತ್ರಜ್ಞಾ ನಗಳನ್ನು ಕುಯುಕ್ತಿವಾದಗಳಿಂದ ವ್ಯರ್ಥವನ್ನಾಗಿ ಮಾಡಿಕೊಳ್ಳು ತ್ತಾರಾದುದರಿಂದ) ವ್ಯರ್ಥವಾದ ಜ್ಞಾನವುಳ್ಳವರಾಗಿಯೂ, ಇರುವ ವಿವೇಕಶೂನ್ಯರು ಮೋಹಕರವಾದ (ಇವನನ್ನು ಛೇದಿಸು- ಇವನಂಭ ಕ್ಷಿಸು- ಪಾನಮಾಡು- ಅನ್ಯರ ಸ್ವತ್ತುಗಳನ್ನಪಹರಿಸು, ಎಂಬಿವೇ ಮೊ ದಲಾದ) ವಾಕ್ಯಗಳನ್ನಾಡುತ ದೇಹಾತ್ಮ ಭ್ರಮವುಳ್ಳವರಾಗಿ ಪರಹಿಂ ಸೆಯೇ ಮೊದಲಾದ ಕ್ರೂರಕೃತ್ಯಗಳಂ ಮಾಡುತಲಿರುವರು. ಇಂತ ವರು ಈಶಾವಸ್ಯೋಪ ನಿಷತ್ತಿನಲ್ಲಿ ಹೇಳಿರುವ ಪ್ರಕಾರವಾಗಿ ಸೂರ್ಯ ಪ್ರಕಾಶವಿಲ್ಲದ ಅಂಧಂತಮಸ್ಸುಳ್ಳ ಲೋಕಗಳನ್ನು ಹೊಂದುವರೆಂದ ರಿಯಬೇಕು. ... ... ॥೧೨॥

(ಶ್ರೀ) ಮೋಘಾಶಾಃ- ಅನ್ಯದೇವತೆಗಳನ್ನಾಶ್ರಯಿಸಿದರೆ ತ್ವರಿತ ವಾಗಿ ಫಲಸಿದ್ಧಿಯಾಗುವುದೆಂಬ ವೃಥಾ ದುರಾಶೆಯುಳ್ಳವರಾಗಿಯೂ, ಮೋಘಕರ್ಮಾಣಃ- ವೃಥಾ ದುರಾಶೆಯಿಂದ ಮಾಡುವ ಕರ್ಮಾನುಷ್ಠಾ ನವು ನನ್ನ ಆರಾಧನ ರೂಪವಾಗಲಾರದಾದುದರಿಂದ ವ್ಯರ್ಥವಾದ ಕ ರ್ಮಗಳುಳ್ಳವರಾಗಿಯೂ, ಮೋಘಜ್ಞಾನಾಃ - ತನ್ನಿಂದ ಅಭ್ಯಸಿಸಲ್ಪಟ್ಟ ಶಾಸ್ತ್ರಾದಿ ಜ್ಞಾನಗಳನ್ನು ಕುಯುಕ್ತಿವಾದಗಳಿಂದ ವ್ಯರ್ಥಪಡಿಸಿಕೊ ಳ್ಳುವಂತವರಾಗಿಯೂ, ವಿಚೇತಸಃ- (ಶ್ರೀ॥ ಗೀ॥ ವಿ॥) ದುರ್ಮಾರ್ಗಪ್ರ ವೃತ್ತವಾದ ಮನಸ್ಸುಳ್ಳವರಾಗಿಯೂ ಇರುವ ಅವಿವೇಕರು, ಮೊ ಹಿನೀಂ- ಬುದ್ಧಿಯನ್ನುನಾಶಪಡಿಸುವ, ರಾಕ್ಷಸೀಂಪ್ರಕೃತಿಂ- ಅನ್ಯ ರಿಗೆ ಉಪದ್ರವವನ್ನುಮಾಡುವ ತಾಮಸ ಸ್ವಭಾವವೇನು, ಅಸುರೀಂಪ್ರ ಕೃತಿಂಚ- ಅಧಿಕವಾದ ಅಪೇಕ್ಷೆಯು, ಅಹಂಕಾರವು, ಕೋಪವು,ಇದೆ ಮೊದಲಾದ ರಾಜಸ ಸ್ವಭಾವೇನು, ಇವುಗಳನ್ನು, ಶ್ರಿತಾಃ- ಆಶ್ರಯಿ ಸಿದವರಾಗಿ ನನ್ನನ್ನವಮತಿ ಮಾಡುತ್ತಾರೆ. ॥೧೨॥

(ಮ॥ ಗೀ॥ ವಿ॥) ಮೋಘಾಶಾಃ - ತಾಸುಮಾಡುವಕರ್ಮವೇ ತ ನಿಗೆ ಫಲವನ್ನು ಕೊಡುತ್ತದೆಂಬ ವ್ಯರ್ಥವಾದ ಆಶೆಯುಳ್ಳವರು.॥೧೭।

ಶ್ಲೋ॥ ಮಹಾತ್ಮಾನಸ್ತು ಮಾಂ ಪಾರ್ಥ ದೈವೀಂ ಪ್ರಕೃತಿಮಾಶ್ರಿತಾಃ । ಭಜಂತ್ಯನನ್ಯಮನಸೋ ಜ್ಞಾತ್ವಾ ಭೂತಾದಿಮವ್ಯಯಂ ॥ ... ... ॥೧೩॥

ಪ॥ ಮಹಾತ್ಮಾನಃ - ತು- ಮಾಂ- ಪಾರ್ಥ-ದೈವೀಂ- ಪ್ರಕೃತಿಂ- ಆಶ್ರಿತಾಃ | ಭಜಂತಿ - ಅನನ್ಯ ಮನಸಃ- ಜ್ಞಾತ್ವಾ- ಭೂತಾದಿಂ- ಅವ್ಯಯಂ ||

(ಅ॥ ರಾ॥ ಭಾ॥) ಹೇಪಾರ್ಥ- ಎಲೈ ಅರ್ಜುನನೆ, ದೈವೀಂಪ್ರಕೃತಿಮಾಶ್ರಿತಾಃ- ಅನೇಕ ಜನ್ಮಾರ್ಜಿತ ಪುಣ್ಯಸಂಚಯಗಳಿಂದ ನನ್ನನ್ನು ಶರಣಹೊಂದಿ ಹೋಗಲಾಡಿಸಿಕೊಂಡಿರುವ ಸಮಸ್ತ ಪಾಪಸಂಬಂಧಮುಳ್ಳ ಸತ್ವೋತ್ತರರಾದ ದೇವತೆಗಳ ಸ್ವಭಾವವಂ ಹೊಂದಿರುವ, ಮಹಾತ್ಮಾನಸ್ತು- ನನ್ನ ವಿಷಯವಾದ ಭಕ್ತಿಗೆ ಉಚಿತವಾದ ನಿರ್ಮಲವಾಗಿರುವ ಮನಸ್ಸುಳ್ಳವರು,ಅವ್ಯಯಂಭೂತಾದಿಂಮಾಂಜ್ಞಾತ್ವಾ-ಅಚೇತನವಸ್ತುಗತವಾದ ವಿಕಾರವೂ ಚೇತನವಸ್ತುಗತವಾದ ಸ್ವಭಾವವಿಕಾರವೂ ಇಲ್ಲದೆ ವಾಕ್ಕಿಗೂ ಮನಸ್ಸಿಗೂ ಗೋಚರವಾಗದ ನಾಮಕರ್ಮಸ್ವರೂಪದೊಡನೆ ಕೂಡಿ ನಿಖಿಲಜಗದೇಕ ಕಾರಣಭೂತರಾಗಿರುವ ಸಾರ್ವಜ್ಞಾದಿ ಕಲ್ಯಾಣ ಗುಣನಿಧಿಯಾದ ಪರಮ ಪುರುಷನೇ ಪರಮಕಾರಣಿಕತೆಯಿಂದ ಸಾಧುಪರಿತ್ರಾಣಕ್ಕಾಗಿ ಶ್ರೀವಸುದೇವ ಪುತ್ರನಾಗಿ ಅವತಾರವಂಮಾಡಿರುತ್ತಾನೆಂದು ತಿಳಿದುಕೊಂಡಿರುವಂತವರಾಗಿ, ಅನನ್ಯಮನಸಃ-ನನ್ನನ್ನೇ ಅತಿಪ್ರಿಯವಸ್ತುವನ್ನಾಗಿ ಪ್ರಳ್ಳವರಾದುದರಿಂದ ನನ್ನ ಭಕ್ತಿಯಂ ಬಿಟ್ಟರೆ ಮನಸ್ಸನ್ನೂ ಆತ್ಮವನ್ನೂ ಬಾಹ್ಯಕರಣಗಳನ್ನೂ ಧರಿಸಲು ಶಕ್ತರಾಗದೇ ಇರುವಂತವರಾಗಿಯೂ ನನ್ನ ಭಜನವನ್ನೇ ನಿರತಿಶಯ ಪ್ರಯೋಜನವಾಗಿ ಪ್ರಳ್ಳವರಾಗಿಯೂ, ಭಜಂತೆ-ಉಪಾಸನಮಾಡುತ್ತಾರೆ ||೧೩||

(ಶಂ॥ ಭಾ॥) ಯಾವಾದರೆ ಶ್ರದ್ಧಾಳುಗಳಾಗಿ ಭಗವದ್ಭಕ್ತಿ ಲಕ್ಷಣವಾದ ಮೋಕ್ಷಮಾರ್ಗದಲ್ಲಿ ಪ್ರವೃತ್ತರಾಗಿರುವರೋ ಅಂತವರನ್ನು ಕುರಿತು ಹೇಳುವೆನು. ಗುರೂಪದೇಶದಲ್ಲಿ ವಿಶ್ವಾಸ ಉಳ್ಳವರಾಗಿ ಭಗವದ್ಭಜನವೆಂಬ ಮೋಕ್ಷಮಾರ್ಗದಲ್ಲಿ ಪ್ರವರ್ತಿಸಿರುವ ಮಹಾನುಭಾವರು ಶಮದಮದಯಾಶ್ರದ್ಧಾದಿಯೊಡನೆ ಕೂಡಿರುವ ಸ್ವಭಾವ ಉಳ್ಳವರಾಗಿಯೂ ಅನ್ಯವಿಷಯವಾದ ಪ್ರವೃತ್ತಿಯಿಲ್ಲದೆ ನಿಶ್ಚಲವಾದಮನಸ್ಸುಳ್ಳವರಾಗಿಯೂ ಆಯಾತ ಗುರೂಪದಿಷ್ಟಶಾಸ್ತ್ರಾರ್ಥಶ್ರವಣ ಮನನಾದಿಗಳದೆಸೆಯಿಂದ ಆಕಾಶಾದಿ ಭೂತಗಳಿಗೂ ಪ್ರಾಣಿಗಳಿಗೂ ಮೂಲಕಾರಣನಾಗಿಯೂ, ನಿತ್ಯನಾಗಿಯೂ ಇರುವ ನನ್ನನ್ನು ತಿಳಿದು ಸೇವಿಸುವರು. ||೧೩||

(ಗೀ॥ ವಿ॥) ದೈವೀಂಪ್ರಕೃತಿಮಾಶ್ರಿತಾಃ-ಮುಕ್ತಿಯೋಗ್ಯವಾದ

ಉತ್ತಮಸ್ವಭಾವವನ್ನು ಆಶ್ರಯಿಸಿದವರು. ಪರಮಾತ್ಮನುದ್ವೇಷಿಯಾ ಗಿರುವುದರಿಂದಲೆ ಹೀಗೆ ವಿವರಿಸಿರುವಂತೆ ಮೂಢಜನರು ಅವಜ್ಞೆಯಂ ಮಾಡುತ್ತಾರೆಂದರೆ॥ಅದಕ್ಕುತ್ತರವಾಗಿ ಪರಮಾತ್ಮನುದ್ವೇಷಿಯಾಗಿದ್ದರೆ ಮುಕ್ತಿಯೋಗ್ಯವಾದಉತ್ತಮಸ್ವಭಾವವುಳ್ಳವರುಕೂಡಾಪರಮಾತ್ಮನಂ ದ್ವೇಷಿಸುವರು. ಆರೀತಿಯಾಗಿ ದ್ವೇಷಿಸುವುದಿಲ್ಲ ವಾದುದರಿಂದಪರ ಮಾತ್ಮನು ದ್ವೇಷಿ ಯಲ್ಲವೆಂಬ ಅಭಿಪ್ರಾಯವನ್ನು ಈ ಶ್ಲೋಕದಿಂ ದವ್ಯಕ್ತ ಪಡಿಸಿರುತ್ತಾ ನೆಂದರಿಯಬೇಕು. ॥೧೩॥

ಶ್ಲೋ॥ ಸತತಂಕೀರ್ತಯಂತೋಮಾಂಯತಂತಶ್ಚದೃಢವ್ರತಾಃ।ನಮಸ್ಯಂತಶ್ಚಮಾಂಭಕ್ತ್ಯಾನಿತ್ಯಯುಕ್ತಾ ಉಪಾಸತೇ ॥ ... ... ॥೧೪॥

ಪ॥ ಸತತಂ- ಕೀರ್ತಯಂತಃ- ಮಾಂ - ಯತಂತಃ - ಚ - ದೃಢವ್ರತಾಃ । ನಮಸ್ಯಂತಃ- ಚ - ಮಾಂ- ಭಕ್ತ್ಯಾ- ನಿತ್ಯಯುಕ್ತಾಃ- ಉಪಾಸತೇ ॥

(ಅ॥ ಶಂ॥ ಭಾ॥) ಪೂರ್ವಶ್ಲೋಕದಲ್ಲಿ ಪ್ರಕೃತರಾದವರು ಹೇಗೆ ನನ್ನನ್ನು ಸೇವಿಸುತ್ತಾರೆಂದರೆ ಅದಕ್ಕುತ್ತರವು. ಯತಂತಃ - ಇಂದ್ರಿಯನಿಗ್ರಹವು, ಶಮವು, ದಮವು, ದಯಾ, ಅಹಿಂಸಾ, ಇದೇ ಮೊದಲಾದ ಧರ್ಮಗಳಲ್ಲಿ ಪ್ರವರ್ತಿಸುತ ಶ್ರದ್ಧಾಪೂರ್ವಕವಾಗಿ ಬ್ರಹ್ಮಜ್ಞಾನವನ್ನು ಹೊಂದುವುದಕ್ಕೆ ಪ್ರಯತ್ನಿಸುವಂತವರಾಗಿಯೂ, ಸತತಂ- ಸರ್ವಕಾಲದಲ್ಲಿಯೂ, ಮಾಂ - ಬ್ರಹ್ಮಸ್ವರೂಪನಾದ ನನ್ನನ್ನು, ಕೀರ್ತಯಂತಶ್ಚ- ವೇದಾಂತ ಶ್ರವಣ ಪ್ರಣವ ಜಪಾದಿ ರೂಪವಾದ ಕೀರ್ತನವಂ ಮಾಡುವಂತವರಾಗಿಯೂ, ದೃಢವ್ರತಾಃ- ಸ್ಥಿರವಾದ ಬ್ರಹ್ಮಚರ್ಯಾದಿ ವ್ರತಮುಳ್ಳವರಾಗಿಯೂ, ಭಕ್ತ್ಯಾ - ಭಕ್ತಿಯಿಂದ, ನಿತ್ಯಯುಕ್ತಾಃ- ಸದಾಏಕಾಗ್ರಚಿತ್ತ ಮುಳ್ಳವರಾಗಿಯೂ, ಮಾಂ- ಹೃದಯದಲ್ಲಿರುವ ನನ್ನನ್ನು, ನಮಸ್ಯಂತಶ್ಚ - ಹೃದಯದಿಂದ ನಮ್ರರಾಗಿ ನಮಸ್ಕರಿಸುವಂತವರಾಗಿಯೂ ಆಗುತ, ಉಪಾಸತೆ-ಸೇವನ ಮಾಡುತ್ತಾರೆ. ॥೧೪॥

(ರಾ॥ ಭಾ॥)ಅತ್ಯಂತವಾಗಿ ನನ್ನಲ್ಲಿರುವ ಪ್ರೀತಿ ವಿಶೇಷದಿಂದನಮ್ಮ ನಾಮ ಕೀರ್ತನಾದಿಗಳಂ ಬಿಟ್ಟರೆ ಸ್ವಲ್ಪವೂ ಆತ್ಮ ಧಾರಣವಂಮಾಡಲಾರರಾದುದರಿಂದ ನಮ್ಮಗಳ ಗುಣ ವಿಶೇಷಗಳಿಗೆ ವಾಚಕಗಳಾದ ನಮ್ಮ ನಾಮಗಳನ್ನು ಸ್ಮರಿಸಿ ರೋಮಾಂಚಯುಕ್ತವಾದಸರ್ವಾಂಗವುಳ್ಳವರಾಗಿ ಆನಂದಾತಿಶಯದಿಂದ ಗದ್ಗದಕಂಠರಾಗಿಯೂನಾರಾಯಣಕೃಷ್ಣ ವಾಸುದೇವಎಂಬಿದೇ ಮೊದಲಾದ ನಮ್ಮ ನಾಮಗಳನ್ನೇ ಸದಾ ಉಚ್ಚರಿಸುವಂತವರಾಗಿಯೂ ಆರೀತಿಯಾಗಿಯೇನಮ್ಮ ಆರಾಧನಾದಿಕ್ಕೆಂ

ಕರ್ಯಗಳಲ್ಲಿ ಪ್ರಯತ್ನ ವುಳ್ಳವರಾಗಿಯೂ ಅಂತಹತಿರಾಧನಕ್ಕೆ ಉಕಾಪ ರಕಗಳಾದ ಗೃಹನಿರ್ಮಾಣವೇನು, ಪುಷ್ಪತುಲಸೀಭರಿತಗಳಾದ ವನಗಳ ನ್ನಭಿವೃದ್ಧಿಪಡಿಸುವುದೇನು, ಅದೇಮೊದಲಾದಕೈಂಕರ್ಯಗಳಲ್ಲಿಅಚಂಚಲ ವಾದಸಂಕಲ್ಪ ಮುಳ್ಳವರಾಗಿಯೂ ಭಕ್ತ್ಯತಿಶಯದಿಂದನಮ್ರಭಾವವಂ ಪೊಂದಿರುವ ಮನೊಬುದ್ಧ್ಯಭಿಮಾನಗಳೊಡನೆ ಯರಡುಕಾಲುಗಳು, ಯರಡುಕೈಗಳು, ಶಿರಸ್ಸು, ಎಂಬೀಅಷ್ಟಾಂಗಗಳಿಂದ ಧೂಳು ಕೆಸರು ಮೊದಲಾದವುಗಳಿಂದ ಜುಗುಪ್ಸಿತ ವಾಗಿರುವಧರಾತಲದಲ್ಲಿದಂಡವ ತ್ಪ್ರಣಾಮಗಳಂಮಾಡು ವಂತವರಾಗಿಯೂನಿತ್ಯಯೋಗವನ್ನಪೇಕ್ಷಿಸುವಂತ ವರಾಗಿಯೂ ಎಂದರೆ ಆತ್ಮದಾಸ್ಯವ್ಯವಸಾಯ ಮುಳ್ಳವರಾಗಿಯೂ ನನ್ನನ್ನು ಉಪಾಸನಮಾಡುತ್ತಾರೆ. ॥೧೪॥

(ಗೀ॥ವಿ॥)ಯತಂತಃ- (ಮ)ಈಶ್ವರನ ನಿಜಸ್ವರೂಪವನ್ನರಿಯಲು ಪ್ರಯತ್ನವುಳ್ಳ, (ಗೀ॥ ವಿ॥) ನನ್ನ ಆರಾಧನಾದಿಗಳಲ್ಲಿ ಪ್ರಯತ್ನವುಳ್ಳ, ಕೀರ್ತಯಂತಃ- ಕೃಷ್ಣೇತ್ಯಾದಿ ನಾಮಸಂಕೀರ್ತನ ಪರರಾಗಿರುವ, ದೃಢವ್ರತಾಃ-ಉಪವಾಸಾದಿ ದೃಢವ್ರತಮುಳ್ಳ, ನಿತ್ಯಯುಕ್ತಾಃ-ಯಾ ವಾಗಲೂ ನನ್ನಲ್ಲಿಡಲ್ಪಟ್ಟ ಮನಸ್ಸುಳ್ಳವರು, ನನ್ನನ್ನುಪಾಸನಮಾಡು ತ್ತಾರೆ. ... ... ... ॥೧೪॥

ಶ್ಲೋ॥ ಜ್ಞಾನಯಜ್ಞೇನಚಾಪ್ಯನ್ಯೇಯಜಂತೋಮಾ
ಮುಪಾಸತೇ । ಏಕತ್ವೇನಪೃಥಕ್ತ್ವೇನಬಹುಧಾವಿಶ್ವ
ತೋಮುಖಂ ॥ ॥೧೫॥

ಪ॥ ಜ್ಞಾನಯಜ್ಞೇನ-ಚ-ಅಪಿ- ಅನ್ಯೇ-ಯಜಂತಃ-ಮಾಂ-ಉಪಾಸತೇ। ಏಕತ್ವೇ ನ-ಪೃಥಕ್ತ್ವೇನ-ಬಹುಧಾ-ವಿಶ್ವತೋಮುಖಂ ॥

ಅ॥ ಅನ್ಯೇಪಿ - ಮತ್ತೆಕೆಲವರು, ವಿಶ್ವತೋಮುಖಂ - (ಶಂ) ವಿಶ್ವರೂಪಿಯಾದ, ಮಾಂ - ನನ್ನನ್ನು, ಜ್ಞಾನಯಜ್ಞೇನ- ಜ್ಞಾನವೆಂಬ ಯಜ್ಞದಿಂದ, (ಶಂ) ಭಗವದ್ವಿಷ ಯಜ್ಞಾನವೆಂಬ ಯಜ್ಞದಿಂದ, (ಶ್ರೀ) ಸಮಸ್ತವೂ ಬ್ರಹ್ಮಸ್ವರೂಪವೆಂಬಜ್ಞಾನಯಜ್ಞ ದಿಂದ, ಯಜಂತಃ- ಪೂಜಿಸುತ; ಏಕತ್ವೇನ- (ಶಂ) ಪರಮಾತ್ಮನೊಬ್ಬನೆ ಎಂಬಪರಮಾ ರ್ಥದರ್ಶನದಿಂದಲೂ,(ಮ॥ಸೂ)ತಾನೆಬ್ರಹ್ಮವು, ಬ್ರಹ್ಮವೇತಾನೆಂಬಅದ್ವೈತಭಾವನೆಯಿಂ ದಲೂ, ಪೃಥಕ್ತ್ವೇನಚ (ಶಂ) ಒಬ್ಬನಾದ ವಿಷ್ಣುವೇ ಸೂರ್ಯ ಚಂದ್ರಾದಿ ದೇವತಾರೂಪಿ ಯಾಗಿರುತ್ತಾನೆಂಬ ಭಾವನೆಯಿಂದಲೂ,(ಶ್ರೀ)ನಾನೀಶ್ವರನದಾಸನೆಂಬ ಭಾವನೆಯಿಂದಲೂ,

ಬಹುಧಾ = ಅನೇಕಪ್ರಕಾರವಾಗಿ, (ಶ್ರೀ) ಬ್ರಹ್ಮರುದ್ರಾದಿರೂಪಗಳಾಗಿ, ಉಪಾಸತೆ -ಉಪಾಸನೆಮಾಡುತ್ತಾರೆ. ... ... .... ||೧೫||

(ರಾ|| ಭಾ||) ಅನ್ಯೇ-ಕೆಲವು ಉತ್ತಮಾಧಿಕಾರಿಗಳು, ಜ್ಞಾನಯಜ್ಞೇನಚಾಪಿ-ಹಿಂದೇಹೇಳಿರುವ ಸಂಕೀರ್ತನಾದಿಗಳೊಡನೆ ಕೂಡ ಉತ್ತರಾರ್ಧದಲ್ಲಿ ವಿವರಿಸಿರುವ ಜ್ಞಾನವೆಂಬ ಯಜ್ಞದಿಂದಲೂ, ಯಜಂತಃ-ಆರಾಧಿಸುವಂತವರಾಗಿ,ಮಾಮುಪಾಸತೇ-ನನ್ನನ್ನು ಉಪಾಸನಮಾಡುತ್ತಾರೆ. ಎಂತಹ ಜ್ಞಾನಯಜ್ಞದಿಂದುಪಾಸನೆ ಮಾಡುತ್ತಾರೆಂದರೆ! ಬಹುಧಾಪೃಥಕ್ತ್ವೇನ ವಿಶ್ವತೋಮುಖಂಮಾಂ ಏಕತ್ವೇನ - ದೇವತ್ವ ಸಹಸ್ರಾಕ್ಷತ್ವ ತಿರ್ಯಕ್ತ್ವಗೋತ್ತ್ವ ಮನುಷ್ಯತ್ವಬ್ರಾಹ್ಮಣತ್ವ ಸ್ಥಾವರತ್ವ ವೃಕ್ಷತ್ವಾದ್ಯ ಸಂಖ್ಯೇಯ ಪ್ರಕಾರ ಭೇದದಿಂದ ಜಗಚ್ಛರೀರಿಯಾಗಿರುವ ನಮ್ಮನ್ನು ಸರ್ವವಸ್ತುಗಳಿಗೂ ಶರೀರಿಯಾಗಿರುವ ಪರಮಾತ್ಮನೊಬ್ಬನೇ ಎಂಬ ಅನುಸಂಧಾನದೊಡನೆ ಉಪಾಸನ ಮಾಡುತ್ತಾರೆ. ಪರಮ ಪುರುಷನು, ಸೃಷ್ಟಿಕಾಲಕ್ಕೆ ಪೂರ್ವದಲ್ಲಿ ಸೂಕ್ಷ್ಮವಾಗಿರುವ ನಾಮರೂಪಗಳಿಲ್ಲದ ಚೇತನಾ ಚೇತನಗಳನ್ನು ಶರೀರವಾಗಿ ಧರಿಸಿಕೊಂಡಿದ್ದು ಒಂದು ಕಾಲವಿಶೇಷದಲ್ಲಿ ಅನೇಕ ವಿಧಗಳಾದ ನಾಮರೂಪಗಳೊಡನೆ ಕೂಡಿರುವ ಸ್ಥೂಲವಾದ ಚೇತನಾ ಚೇತನಗಳನ್ನು ಶರೀರವಾಗಿ ಧರಿಸುವೆನೆಂಬದಾಗಿ ಸಂಕಲ್ಪಿಸಿ ದೇವಾದಿ ವೈಚಿತ್ರ್ಯಮುಳ್ಳ ಪ್ರಪಂಚವನ್ನು ಶರೀರವಾಗಿ ಧರಿಸಿರುವನೆಂದು ಉಪಾಸನ ಮಾಡುತ್ತಾರೆಂದರ್ಥವು. ... ||೧೫||

(ಮ|| ಗೀ|| ಏ) ಏಕತ್ವೇನ-ಸರ್ವತ್ರಪರಿಪೂರ್ಣನಾಗಿರುವ ನಾರಾಯಣನೊಬ್ಬನೇ ಎಂಬದಾಗಿ ಕೆಲವರೂ, ಪೃಥಕ್ತ್ವೇನ-ಆ ನಾರಾಯಣನು ಸಕಲ ವಸ್ತುಗಳಿಗಿಂತಲೂ ವಿಲಕ್ಷಣನೆಂಬದಾಗಿ ಕೆಲವರೂ, ಬಹುಧಾ-ಆ ನಾರಾಯಣನು ಅನೇಕ ರೂಪಗಳುಳ್ಳವನೆಂಬದಾಗಿ ಕೆಲವರೂ, ಉಪಾಸನ ಮಾಡುತ್ತಾರೆಂದರ್ಥವು. ... ||೧೫||

ಶ್ಲೋ|| ಅಹಂಕ್ರತುರಹಂಯಜ್ಞಸ್ಸ್ವಧಾಹಮಹಮೌ
ಷಧಂ | ಮಂತ್ರೋಹಮಹಮೇವಾಜ್ಯಮಹಮಗ್ನಿರ
ಹಂಹುತಂ || ||೧೬||

ಪ॥ ಅಹಂ-ಕ್ರತುಃ-ಅಹಂ-ಯಜ್ಞಃ-ಸ್ವಧಾ-ಅಹಂ-ಅಹಂ-ಔಷಧಂ । ಮಂತ್ರಃ-ಅಹಂ-ಅಹಂ-ಏವ-ಆಜ್ಯಂ-ಅಹಂ-ಅಗ್ನಿಃ-ಅಹಂ-ಹುತಂ ॥

(ಅ॥ ರಾ॥ ಭಾ॥) ತಾನಾರೀತಿಯಾಗಿ ಜಗಚ್ಛರೀರಿಯಾಗಿರುವ ಪ್ರಕಾರವನ್ನು ಪೂರ್ವದಂತೆ (ಸಪ್ತಮಾಧ್ಯಾಯದಲ್ಲಿ ಹೇಳಿರುವಂತೆ) ಸಾಮಾನಾಧಿಕರಣ್ಯ ನಿರ್ದೇಶದಿಂದ ತೋರಿಸುತ್ತಾನೆ. ಕ್ರತುರಹಂ-ಜ್ಯೋತಿಷ್ಟೋಮಾದಿಯಾದ ಯಾಗವೂ ನಾನೆ ನನಿಗಾರಾಧನ ರೂಪವಾಗಿದ್ದುಕೊಂಡು ಶೇಷಭೂತವಾಗಿರುವುದು ಜ್ಯೋತಿಷ್ಟೋಮಾದಿಯಾಗಗಳು. ಯಜ್ಞಃ ಅಹಂ-ಪಂಚಮಹಾ ಯಜ್ಞಾದಿ ರೂಪವಾದ ಮಹಾ ಯಜ್ಞವೂ ನಾನೆ, ನನಿಗೆ ಶೇಷಭೂತವಾಗಿಯೇ ಇರುವುದು. ಸ್ವಧಾ ಅಹಂ-ಪಿತೃಗಣಗಳಿಗೆ ಪುಷ್ಟಿಪ್ರದವಾದ ಸ್ವಧಾಶಬ್ದವೂ ನಾನೆ, ಔಷಧಮಹಂ-ರಸಾಯನಾದಿ ರೂಪವಾದ ಔಷಧವೂ ನಾನೆ, ನನಿಗೆ ಶರೀರ ಭೂತವೆ. ಮಂತ್ರಃ ಅಹಂ-ಅನುಷ್ಠೇಯಾರ್ಥ ಪ್ರಕಾಶಕವಾದ ವೇದಮಂತ್ರವೂ ನಾನೆ, ದ್ರವ್ಯದೇವತಾದಿ ಶರೀರಕನಾದ ನನ್ನನ್ನೇ ಪ್ರತಿಪಾದಿಸುವುದು ಮಂತ್ರಭಾಗವು. ಆಜ್ಯಮಹಮೇವ-ಆಯಾದೇವತೆಗಳನ್ನುದ್ದೇಶಿಸಿ ಮಾಡುವ ಹೋಮಗಳಿಗೆ ಕರಣ (ಸಾಧನ) ದ್ರವ್ಯವಾದ ಆಜ್ಯವೂ (ತುಪ್ಪ) ನಾನೆ, ನನಿಗೆ ಶರೀರವೇ ಎಂದರ್ಥವು. ಅಗ್ನಿಃ ಅಹಂ-ಗಾರ್ಹಪತ್ಯಾದಿ ರೂಪವಾದ ಅಗ್ನಿಯೂ ನಾನೆ, ನನಿಗೆ ಶರೀರವೆ. ಹುತಮಹಂ-ಹೋಮಕ್ರಿಯೆಯೂ ನಾನೆ, ನನಿಗೆ ಶೇಷಭೂತವೆ ಎಂದರ್ಥವು. .... ... ॥೧೬॥

(ಶಂ॥ ಭಾ॥) ಪರಮಾತ್ಮನು ಬಹುಪ್ರಕಾರಗಳಿಂದ ಉಪಾಸನ ಮಾಡಲ್ಪಟ್ಟರೆ ಭಗವದೇಕವಿಷಯವಾದ ಉಪಾಸನವು ಸಿದ್ಧಿಸುವುದಿಲ್ಲವು ? ಎಂಬ ಅರ್ಜುನನ ಶಂಕಾ ಸಮಾಧಾನಾರ್ಥವಾಗಿ ಪರಮಾತ್ಮನು ಸರ್ವಾತ್ಮಕನಾಗಿರುವುದರಿಂದ ಪ್ರಕಾರ ಭೇದವನ್ನವಲಂಬಿಸಿ ಉಪಾಸನ ಮಾಡಿದರೂ ಅದು ಭಗವದೇಕ ವಿಷಯವಾಗಿಯೇ ಆರುವುದಕ್ಕೆ ಸಂದೇಹವಿಲ್ಲವೆನ್ನುತ್ತಾನೆ. ಇಲ್ಲಿ ಕ್ರತು ಶಬ್ದಕ್ಕೂ ಯಜ್ಞಶಬ್ದಕ್ಕೂ ಪೌನರುಕ್ತ್ಯವಂ ಶಂಕಿಸದೆ ಕ್ರತುಶಬ್ದಕ್ಕೆ ವೇದೋಕ್ತವಾದ ಅಗ್ನಿಷ್ಟೋಮಾದಿ ಕ್ರತುಗಳರ್ಥವೆಂತಲೂ ಯಜ್ಞಶಬ್ದಕ್ಕೆ ಸ್ಮೃತಿಪ್ರಸಿದ್ಧಗಳಾದ ಪಂಚಮಹಾ ಯಜ್ಞಗಳರ್ಥವೆಂತಲೂ ತಿಳಿಯಬೇಕು. ಅಗ್ನಿಷ್ಟೋಮಾದಿ ಶ್ರೌತಕರ್ಮಗಳೂ ಪಂಚಮಹಾಯಜ್ಞಾದಿಸ್ಮಾರ್ತಕರ್ಮಗಳೂ, ಪಿತೃದೇವತೆಗಳನ್ನುದ್ದೇಶಿಸಿ ಮಾಡಲ್ಪಡುವ ಶ್ರಾದ್ಧಾದಿ ಕರ್ಮಗಳೂ, ಸರ್ವಪ್ರಾಣಿಸಾಧಾರಣಾನ್ನವಾದ ಸಮಸ್ತಧಾನ್ಯಾದಿಗಳೂ, ಸರ್ವಮಂತ್ರಗಳೂ, ದೇವತೆಗಳನ್ನುದ್ದೇಶಿಸಿ ಹೋಮಮಾಡುವುದಕ್ಕೆ ಮುಖ್ಯದ್ರವ್ಯವಾದ ಆಜ್ಯವೂ, ಆ ಪ್ರಕಾರವಾಗಿ ಹೋಮವಂಮಾಡು

ವುದಕ್ಕೆ ಆಧಾರವಾದ ಆಹವನೀಯಾದ್ಯಗ್ನಿಗಳೂ, ಆ ಪ್ರಕಾರವಾಗಿ ಹೋಮವಂ ಮಾಡುವಿಕೆಯೂ ಎಂಬೀಸರ್ವವೂ ನನ್ನ ಸ್ವರೂಪವೇ ಆಗಿರುವುದು. ನಾನು ವಿಶ್ವರೂಪನಾದುದರಿಂದ ಈ ಸಮಸ್ತ ಧ್ಯಾನವೂ ನನ್ನ ಧ್ಯಾನವೆಂತಲೇ ಹೇಳಲ್ಪಡುವುದು. ಔಷಧ ಶಬ್ದಕ್ಕೆ ಸರ್ವ ಪ್ರಾಣಿಗಳಿಂದಲೂ ಯಾವದು ತಿನ್ನಲ್ಪಡುವುದೋ ಅದೇ ಅರ್ಥವು. (ಅಥವಾ) ಸ್ವಧಾ ಎಂಬದಾಗಿ ಸರ್ವಪ್ರಾಣಿ ಸಾಧಾರಣವಾದ ಅನ್ನವನ್ನೂ ಔಷಧಂ ಎಂಬದಾಗಿ ವ್ಯಾಧ್ಯುಪಶಮನಾರ್ಥವಾಗಿ ಕೊಡತಕ್ಕ ವಸ್ತುವನ್ನೂ ಹೇಳಬಹುದು. ... ... ॥೧೬॥

(ಗೀ ॥ ವಿ ॥) ಮುಖ್ಯದೇವತೆಯನ್ನುಉದ್ದೇಶಿಸಿ ಮಾಡಲ್ಪಟ್ಟ ಕ್ರತ್ವಾದಿಗಳೆಲ್ಲವೂ ನಾನೆ ಎಂದು ಹೇಳಿರುವುದಕ್ಕೆ ಅರ್ಥವೇನೆಂದರೆ! ಅವುಗಳಿಗೆ ನಾನು ನಿಯಾಮಕನಾಗಿಯೂ ಆ ಹವಿರಾದಿದಿಗಳನ್ನು ಭುಜಿಸುವಂತವನಾಗಿಯೂ ಇರುವುದರಿಂದ ಅವುಗಳು ನಾನೆ ಎಂಬ ಅಭೇದವ್ಯಪದೇಶವು ಔಪಚಾರಿಕವಾಗಿರುವುದು. (ಅಥವಾ) ಅಹಂಕ್ರತುಃ- (ಮ) ನಾನು ಯಜ್ಞಸ್ವರೂಪನಾದವನು, ಯಜ್ಞಃ- ಸರ್ವಜ್ಞನಾದವನು, ಸ್ವಧಾ - ನನ್ನನ್ನು ನಾನೇ ಧರಿಸುವಂತವನು, ಔಷಧಂ- ಔಷ - ಸಂಸಾರಸಂತಪ್ತರಿಗೆ, ಧಂ - ಆಶ್ರಯನಾದವನು, ಮಂತ್ರಃ - ಮಂ- ತಿಳಿದವರಿಗೆ, ತ್ರಃ- ರಕ್ಷಕನು, ಆಜ್ಯಂ - ಸಮೀಚೀನನಾದ ದೊಡ್ಡವನು, ಅಗ್ನಿಃ- ಅಗ- ಸ್ವತೋಗಮನಾದಿಗಳಲ್ಲಿ ಸಮರ್ಥವಲ್ಲದೇ ಇರುವ ಜಗತ್ತಿಗೆ, ನೀಃ- ಪ್ರೇರಕನು, ಹುತಂ_ಹವಿರಾದಿ ದ್ರವ್ಯವನ್ನು ಸ್ವೀಕರಿಸುವುದಕ್ಕಾಗಿ ಯಜ್ಞದಲ್ಲಿ ಆಹ್ವಾನ ಮಾಡಲ್ಪಡುವಂತವನು. ... ... ॥೧೬॥

ಶ್ಲೋ ॥ ಪಿತಾಹಮಸ್ಯಜಗತೋ ಮಾತಾಧಾತಾ ಪಿತಾ
ಮಹಃ । ವೇದ್ಯಂಪವಿತ್ರ ಮೊಙ್ಕಾರ ಋಕ್ಸಾಮಯಜು
ರೇವಚ ॥ ... ... ॥೧೭॥

ಪ॥ ಪಿತಾ- ಅಹಂ-ಅಸ್ಯ- ಜಗತಃ- ಮಾತಾ- ಧಾತಾ- ಪಿತಾಮಹಃ । ವೇದ್ಯಂ-ಪವಿತ್ರಂ- ಓಂಕಾರಃ- ಋಕ್- ಸಾಮ- ಯಜುಃ- ಏವ- ಚ ॥

ಅ॥ ಅಸ್ಯಜಗತಃ- ಈ ಪ್ರಪಂಚಕ್ಕೆ, ಪಿತಾ- ತಂದೆಯೂ, ಮಾತಾ-ತಾಯಿಯೂ, (ಗೀ॥ ವಿ) ತಿಳಿಯುವಂತವನು. ಪಿತಾಮಹಃ- ತಾತನು, (ಗೀ॥ ವಿ) ಪೂಜ್ಯನು, ಧಾತಾ-

ಧರಿಸುವಂತವನು, (ಶಂ॥ ಶ್ರೀ॥) ರಕ್ಷಕನು, ವೇದ್ಯಂ- ತಿಳಿಯತಕ್ಕವನಾಗಿರುವಂತವನು, (ರಾ) ವೇದವೇದ್ಯನಾಗಿರುವಂತವನು. ಪವಿತ್ರಂ- ಪರಿಶುದ್ಧನಾದವನು, ಓಂಕಾರಃ - ಪ್ರಣವಸ್ವರೂಪನು, ಋಕ್ಸಾಮಯಜುರೇವಚ- ಋಕ್ಸಾಮ ಯಜುರ್ವೇದಗಳೂ, ಅಹಂ-ನಾನೆ, (ಗೀ॥ ವಿ) ಋಕ್ಸಾಮಯಜುಃ ಎಂಬ ಪದಗಳಿಂದ ಹೇಳಲ್ಪಡುವಂತವನು ನಾನೇ. ॥೧೭॥

(ರಾ॥ ಭಾ॥) ಸ್ಥಾವರ ಜಂಗಮಾತ್ಮಕವಾದ ಈ ಜಗತ್ತಿಗೆ ಬೀಜಪ್ರದನಾದ ಪಿತನು ನಾನೆ. (ಅಂತಹ ಬೀಜಪ್ರದನಾದ ತಂದೆಯು ನನಿಗೆ ಶರೀರ ಭೂತನಾಗಿಯೇ ಆಗಿರುವನು) ಆ ಪ್ರಕಾರವೇ ಗರ್ಭಧಾರಣಾದಿಗಳಿಂದ ಮಹೋಪಕಾರಿಯಾದ ತಾಯಿಯೂ ನಾನೆ. ( ತಾಯಿಯು ನನಿಗೆ ಶರೀರಭೂತೆಯಾಗಿಯೇ ಗರ್ಭಧಾರಣಾದಿಗಳನ್ನು ಮಾಡುತ್ತಾಳೆಂದರ್ಥವು.) ಧಾತಾ ಅಹಂ ಎಂಬುವದರಿಂದ ಮಾತಾಪಿತೃಗಳಿಗಿಂತಲೂ ವ್ಯತಿರಿಕ್ತವಾಗಿರುವ ಉತ್ಪತ್ತಿ ಪ್ರಯೋಜಕ ಚೇತನ ವಿಶೇಷವು ಹೇಳಲ್ಪಡುವುದು. (ಅಂತಹ ಚೇತನ ವಿಶೇಷವೂ ನನಿಗೆ ಶರೀರಭೂತವೆಂದರ್ಥವು) ಜಗತ್ಸೃಷ್ಟಿಕರ್ತನಾದ ಚತುರ್ಮುಖ ಬ್ರಹ್ಮನೂ ನಾನೆ. (ನನಿಗೆ ಶರೀರಭೂತನಾಗಿಯೇ ಚತುರ್ಮುಖನೂ ವ್ಯಷ್ಟಿಸೃಷ್ಟಿಯನ್ನು ಮಾಡುತ್ತಾನೆಂದರ್ಥವು.) ವೇದವೇದ್ಯವಾಗಿಯೂ ಪಾವನವಾಗಿಯೂ ಇರುವ ವಸ್ತುವೂ ನಾನೆ. ವೇದಕ್ಕೆ ಬೀಜವಾದ ಪ್ರಣವಾಕ್ಷರವೂ ನಾನೆ. ( ನನಿಗೆ ಪ್ರತಿಪಾದಕವೆಂದರ್ಥವು.) ಆ ಪ್ರಕಾರವೇ ಋಕ್ಸಾಮಯಜುರಾತ್ಮಕವಾದವೇದವೂ ನಾನೆ. (ಅವೆಲ್ಲವೂ ನನಿಗೆ ಪ್ರತಿಪಾದಕಗಳೆಂದರಿಯಬೇಕು.) ॥೧೭॥

(ಮ॥ ಗೀ॥ ವಿ) ಮೇಲೆ ಬರೆದಿರುವಂತೆ ಒಂದರ್ಥವು ಹೇಳಲ್ಪಟ್ಟು ಪ್ರಕಾರಾಂತರದಿಂದಲೂ, ವ್ಯಾಖ್ಯಾನ ಮಾಡಲ್ಪಟ್ಟಿರುವುದು. ( ಮೊದಲನೇ ವ್ಯಾಖ್ಯಾನವಾತಾ - ಜಗತ್ತಿಗೆ ತಾಯಿಯಾದ ಲಕ್ಷ್ಮೀದೇವಿಯು ನನ್ನ ಅಧೀನಳು.) ಅಥವಾ- ಪಿತಾ- ರಕ್ಷಕನು, ಮಾತಾ-ತಿಳಿದಂತವನು. ಪಿತಾಮಹಃ- ಜಗತ್ತಿಗೆ ತಂದೆಯಾದ ಬ್ರಹ್ಮದೇವರಿಗೆ ಪೂಜ್ಯನಾದವನು, ವೇದ್ಯಂ - ಜ್ಞಾನಿಗಳಿಂದ ತಿಳಿಯಲಿಕ್ಕೆ ಯೋಗ್ಯನಾದವನು, ಪವಿತ್ರಂ- ಪರಮ ಪವಿತ್ರನಾದವನು, ಓಂಕಾರಃ-ಪ್ರಣವಾಕ್ಷರ ವಾಚ್ಯನಾದವನು, ಋಕ್- ಪೂಜ್ಯನು, ಸಾಮ - ಸರ್ವರುಗಳಲ್ಲಿಯೂ ಸಮನಾಗಿ ಇರುವಂತವನು, ಯಜುಃ - ಆರಾಧಿಸಲಿಕ್ಕೆ ಯೋಗ್ಯನು. ... ... ... ॥೧೭॥

ಶ್ಲೋ॥ ಗತಿರ್ಭರ್ತಾಪ್ರಭುಸ್ಸಾಕ್ಷೀ ನಿವಾಸಶ್ಶರಣಂಸುಹೃತ್ | ಪ್ರಭವಪ್ರಲಯಸ್ಸ್ಥಾನಂ ನಿದಾನಂ ಬೀಜಮವ್ಯಯಂ ॥ ... ... ॥೧೮॥

ಪ॥ ಗತಿಃ- ಭರ್ತಾ- ಪ್ರಭುಃ- ಸಾಕ್ಷೀ- ನಿವಾಸಃ- ಶರಣಂ- ಸುಹೃತ್ | ಪ್ರಭವಃ- ಪ್ರಳಯಃ- ಸ್ಥಾನಂ- (ರಾ) ಪ್ರಭವಪ್ರಲಯಸ್ಥಾನಂ- ನಿಧಾನಂ- ಬೀಜಂ- ಅವ್ಯಯಂ॥

ಅ॥ ಗತಿಃ- (ಶಂ॥ ಶ್ರೀ॥) ಕರ್ಮಫಲವು, (ಗೀ॥ ವಿ॥) ಮುಮುಕ್ಷುಗಳಿಂದರಿಯಲ್ಪಡತಕ್ಕವನು, ಭರ್ತಾ- ಪೋಷಕನು, ಪ್ರಭುಃ- ನಿಯಾಮಕನು, (ಶಂ) ಸ್ವಾಮಿಯು, ಸಾಕ್ಷೀ- ಸಾಕ್ಷಿಭೂತನು, (ಶಂ॥ಶ್ರೀ) ಮಾಡತಕ್ಕದ್ದನ್ನೂ ಮಾಡದೆಬಿಟ್ಟಿರುವುದನ್ನೂ ನೋಡುವಂತವನು. ನಿವಾಸಃ - ವಾಸಸ್ಥಾನವು, ( ಶಂ॥ ರಾ ) ಪ್ರಾಣಿಗಳ ಗಾವಾಸಸ್ಥಾನವು, ( ಗೀ॥ ವಿ ) ಆಶ್ರಯವು, ಶರಣಂ - ( ಶಂ ) ದುಃಖವನ್ನು ಹೋಗಲಾಡಿಸುವಂತವನು, (ಮ) ಆಶ್ರಯಭೂತನು, (ಗೀ॥ ವಿ) ಸಂಸಾರ ಭಯದಿಂದ ರಕ್ಷಿಸುವಂತವನು. ಸುಹೃತ್- (ಶಂ॥ ಗೀ॥ ವಿ) ಪ್ರತಿಪ್ರಯೋಜನವನ್ನಪೇಕ್ಷಿಸದೆ ಉಪಕಾರವನ್ನು ಮಾಡುವಂತವನೂ ಪ್ರಭವಃ - ಸೃಷ್ಟಿಕರ್ತನೂ, ಸ್ಥಾನಂ - ಸ್ಥಿತಿಕರ್ತನೂ, ಪ್ರಳಯಃ - ಪ್ರಲಯಕರ್ತನೂ, ನಿಧಾನಂ- ಲಯಸ್ಥಾನವೂ, (ಶಂ) ಕಾಲಾಂತರದಲ್ಲುಪಯೋಗಿಸುವ ವಸ್ತುವಾದುದರಿಂದ ನಿಕ್ಷೇಪವೂ, (ಮ॥ ಗೀ॥ ವಿ॥) ನಿಧಾನಂ- ಪ್ರಲಯ ಕಾಲದಲ್ಲಿ ಸರ್ವಕ್ಕೂ ವಾಸಸ್ಥಾನವೂ, ಅವ್ಯಯಂಬೀಜಂ -(ರಾ॥ ಗೀ॥ ವಿ) ನಾಶರಹಿತವಾದಕಾರಣವೂ, (ಶಂ) ಸಂಸಾರವೆಂಬ ವೃಕ್ಷಕ್ಕೆ ಬೀಜವೂ, ಅಹಮೇವ-ನಾನೆ. ... ॥೧೮॥

( ರಾ॥ ಭಾ॥ ) ಗತಿರಹಂ - ಹೊಂದತಕ್ಕ ಸ್ಥಾನವೂ ನಾನೆ. (ನನಿಗೆ ಶರೀರವೆ) ಭರ್ತಾಅಹಂ - ಧರಿಸುವಂತವನೂ ನಾನೆ, ( ಇಲ್ಲಿ ಧಾರಕತ್ವವು ಸಾಕ್ಷಾತ್ತಾಗಿಯೂ, ದಿಗ್ಗಜಾನಂತ ಕುಲಾಚಲಾದಿ ದ್ವಾರಕವಾಗಿಯೂ, ಇರುವುದೆಂದು ಗ್ರಹಿಸಬೇಕು) ಪ್ರಭುರಹಂ - ಶಿಕ್ಷಿಸುವಂತವನೂ ನಾನೆ, ( ಈ ಶಿಕ್ಷಕತ್ವವೂ ಸಾಕ್ಷಾತ್ತಾಗಿಯೂ ಮನ್ವಾದಿ ದ್ವಾರಕವಾಗಿಯೂ ಇರುವುದು) ಸಾಕ್ಷೀಅಹಂ - ಸರ್ವಪ್ರಾಣಿಗಳು ಮಾಡುವ ಪುಣ್ಯಾಪುಣ್ಯಗಳಿಗೆ ಸಾಕ್ಷಾದ್ದ್ರಷ್ಟಾ ಆಗಿರುವಂತವನೂ ನಾನೆ. ನಿವಾಸಅಹಂ - ಸರ್ವಪ್ರಾಣಿಗಳಿಗೂ ಶ್ರಮಪರಿಹಾರ ಹೇತುವಾದ ವಾಸಸ್ಥಾನವೂನಾನೆ. (ವಾಸಸ್ಥಾನವೂ ನನಿಗೆ ಶರೀರವೆ) ಶರಣಮಹಂ-ಇಷ್ಟಪ್ರಾಪ್ತಿಗಾಗಿಯೂ ಅನಿಷ್ಟ ಪರಿಹಾರಕ್ಕಾಗಿಯೂ ಆಶ್ರಯಿಸಲ್ಪಡತಕ್ಕ ಚೇತನನೂ ನಾನೆ. ನನಿಗೆ ಶರೀರವೆ. ಈ ರಕ್ಷಕತ್ವವು ಸಾಕ್ಷಾತ್ತಾಗಿಯೂ ಉಂಟು. ಸುಹೃದಹಂ - ಸರ್ವಪ್ರಾಣಿಗ

ಳಿಗೂ ಹಿತಚಿಂತಕನೂ ನಾನೆ, ಪ್ರಭವ ಪ್ರಲಯಸ್ಥಾನಂ- ಯಾವಯಾವ ವಸ್ತುಗಳಿಗೆ ಯಾವದು ಉತ್ಪತ್ತಿಸ್ಥಾನವೊ ಲಯಸ್ಥಾನವೊ ಆಯಾವಸ್ತುವು ನಾನೆ, (ಅದು ನನಗೆ ಶರೀರವೆ) ನಿಧಾನಮುಹಂ- ನಿಧೀಯತ ಇತಿ ನಿಧಾನಂ, ಎಂಬುವುದಾಗಿ ನಿಧಾನಶಬ್ದವು ಉತ್ಪಾದ್ಯೋಪಸಂಹಾರ್ಯಗಳಂ ತೋರಿಸುವುದು. ಉತ್ಪಾದ್ಯೋಪಸಂಹಾರ್ಯಗಳು ನಾನೆ. ನನಗೆ ಶರೀರವೆ ಉತ್ಪಾದ್ಯವೆಂದರೆ ಸೃಷ್ಟಿಸಲಿಕ್ಕೆ ಯೋಗ್ಯವಾದದ್ದು, ಉಪಸಂಹಾರ್ಯವೆಂದರೆ ಸಂಹಾರಯೋಗ್ಯವಾದದ್ದೆಂದು ತಿಳಿಯಬೇಕು. ಅವ್ಯಯಂ- ನಾಶರಹಿತವಾಗಿರುವ, ಬೀಜಂ- ಆಯಾವಸ್ತುಗಳಿಗೆ ಕಾರಣವೂ, ಅಹಂ- ನಾನೆ, ಆಯಾವಸ್ತುಗಳಿಗೆ ಕಾರಣವಾದ ವಸ್ತುವು ನನಗೆ ಶರೀರವೇ ಎಂದರ್ಥವು॥ ॥೧೮॥

ಶ್ಲೋ॥ ತಪಾಮ್ಯಹಮಹಂವರ್ಷಂನಿಗೃಹ್ಣಾಮ್ಯುತ್ಸೃಜಾಮಿಚ । ಅಮೃತಂಚೈವಮೃತ್ಯುಶ್ಚ ಸದಸಚ್ಚಾಹಮರ್ಜುನ॥ ... ... ॥೧೯॥

ಪ॥ ತಪಾಮಿ- ಅಹಂ- ಅಹಂ- ವರ್ಷಂ- ನಿಗೃಹ್ಣಾಮಿ- ಉತ್ಸೃಜಾಮಿ- ಚ। ಅಮೃತಂ- ಚ- ಏವ- ಮೃತ್ಯುಃ- ಚ-ಸತ್- ಅಸತ್- ಚ- ಅಹಂ- ಅರ್ಜುನ॥

(ಅ॥ ಗೀ॥ ವಿ॥) ಅಹಂ- ನಾನು, ತಪಾಮಿ- ಗ್ರೀಷ್ಮಕಾಲದಲ್ಲಿ ಸೂರ್ಯಾಂತರ್ಗತನಾಗಿ ತಪಿಸುತ್ತೇನೆ. ವರ್ಷಂ- ವೃಷ್ಟಿಯನ್ನು, ನಿಗೃಹ್ಣಾಮಿ- ಒಂದುಕಾಲದಲ್ಲಿ ಆಕರ್ಷಿಸುತ್ತೇನೆ, ಉತ್ಸೃಜಾಮಿಚ - ಬಿಡುವೆನು. ಹೇ ಅರ್ಜುನ- ಎಲೈ ಅರ್ಜುನನೆ, ಅಮೃತಂಚ- ಜೀವನವೂ, ಅಹಮೇವ- ನಾನೆ,ನನ್ನ ಅಧೀನವೆ. ಮೃತ್ಯುಶ್ಚ-ಮರಣವೂ, ಅಹಂ- ನನ್ನ ಅಧೀನವೆ, (ಅಥವಾ) ಮೃತ್ಯುವೆನಿಸಿ ಪ್ರಲಯ ವ್ಯತಿರಿಕ್ತಕಾಲದಲ್ಲಿ ಸಂಹಾರವನ್ನು ಮಾಡುವಂತವನು. ಸದಸತ್- ಕಾರ್ಯವೂ ಕಾರಣವೂ, ಅಹಂ - ನನ್ನ ಅಧೀನವು. (ಅಥವಾ) ಸತ್- ಸದ್ಗುಣಪರಿಪೂರ್ಣನೂ, ಅಸತ್- ತನಗೆ ಸಮವಾದಗುಣಪೂರ್ಣನಾಗಿರುವ ವಸ್ತುಶೂನ್ಯನೂ. ... ... ॥೧೯॥

(ಶಂ॥ ಭಾ॥) ಎಲೈ ಅರ್ಜುನನೆ, ನಾನು ಸೂರ್ಯರೂಪಿಯಾಗಿರುವಂತವನಾಗಿ ಕಠಿನವಾದ ನನ್ನ ಕೆಲವು ಕಿರಣಗಳಿಂದ ತಾಪಿಸುವೆನು. ನಾನು ಸೂರ್ಯರೂಪಿಯಾಗಿಯೇ ಇರುವಂತವನಾಗಿ ಕೆಲವುಕಿರಣಗಳಿಂದ ವರ್ಷಾಕಾಲವಾದ ನಾಲ್ಕುಮಾಸಗಳಲ್ಲಿ ಮಳೆಯನ್ನುಂಟುಮಾಡುವೆನು.

ನಾನು ಸೂರ್ಯರೂಪಿಯಾಗಿಯೇ ಯೆಂಟುಮಾಸಗಳು ನನ್ನಕೆಲವುಕಿರಣಗಳಿಂದ ವರ್ಷನಿರೋಧವನ್ನೂ ಮಾಡುವೆನು. ಋತುಭೇದದಿಂದ ಒಬ್ಬನಿಗೇನೆ ಮಳೆಯನ್ನುಂಟುಮಾಡುವುದೂ ನಿರೋಧಿಸುವುದೂ ವಿರುದ್ಧವಲ್ಲವೆಂದಭಿಪ್ರಾಯವು. ದೇವತೆಗಳಿಗಮೃತವೂ ಮನುಷ್ಯಾದಿಗಳಿಗೆ ಅವರವರ ಕರ್ಮಾನುಸಾರವಾಗಿ ನಿರ್ಣೀತಗಳಾದ ಕಾಲಗಳಲ್ಲಿಮೃತಿಯಂಹೊಂದಿಸುವ ಮೃತ್ಯುದೇವತೆಯೂ ಸದಸಚ್ಛಬ್ದವಾಚ್ಯಗಳಾದಸ್ಥೂಲ ಸೂಕ್ಷ್ಮ ವಸ್ತುವೂ ನಾನೆ. ಯಾವಕಾರಣದ ಸಂಬಂಧಿತ್ವೇನ ಯಾವಕಾರ್ಯ ಮುಂಟಾಗುವುದೋ ಅದು ಸತ್ತೆನ್ನಲ್ಪಡುವುದು. ಕಾರಣ ಸಂಬಂಧದಿಂದ ಅನಭಿವ್ಯಕ್ತವಾಗಿಯೂ ಅನಭಿ ವ್ಯಕ್ತವಾದ ನಾಮರೂಪವುಳ್ಳದ್ದಾಗಿಯೂ ಇರುವ ಕಾರಣವೇ ಅಸತ್ತೆನ್ನಲ್ಪಡುವುದು. ಆದರೆ ಕಾರಣ ಸಂಬಂಧದಿಂದ ಅಭಿವ್ಯಕ್ತನಾಗದ ಪರಮಾತ್ಮನೂ ಅಸತ್ತೇ ಆಗುವನೋ? ಎಂದರೆ ಆರೀತಿಯಾಗಿಹೇಳಕೂಡದು. ಭಗವಂತನಿಗೆ ಅತ್ಯಂತಾ ಸತ್ತ್ವವನ್ನಂಗೀಕರಿಸಿದರೆ ಕಾರ್ಯಕಾರಣಕಲ್ಪನವು ನಿರಧಿಷ್ಠಾನವಾಗುತಾ ನಿಲ್ಲಲಾರ ದೆಂದರಿಯಬೇಕು. ಆದರೆ ಯಥಾಶ್ರುತವಾಗಿ ಕಾರ್ಯಕಾರಣಗಳಿಗೆ ಸತ್ತ್ವಾಸತ್ತ್ವವನ್ನಂಗೀಕರಿಸಬಹುದೋ? ಎಂದರೆ ಕಾರ್ಯಕ್ಕೆ ಅತ್ಯಂತಿಕವಾದ ಸತ್ವವೂ ಕಾರಣಕ್ಕೆ ಆತ್ಯಂತಿಕವಾದ ಅಸತ್ತ್ವವೂ ಇಲ್ಲವೆಂತಲೇ ತಿಳಿಯಬೇಕು. ಆದುದರಿಂದ ಪೂರ್ವೋಕ್ತವಾದ ಜ್ಞಾನಯಜ್ಞಗಳಿಂದ ಭಗವಂತನಲ್ಲಿ ಇಡಲ್ಪಟ್ಟಬುದ್ಧಿಯುಳ್ಳವರಿಗೆ ಸದ್ಯೋಮುಕ್ತಿಯಾದರೂ ಕ್ರಮಮುಕ್ತಿಯಾದರೂ ಫಲತ್ವೇನ ಪ್ರಾಪ್ತವಾಗುವುದೆಂದರಿಯಬೇಕು. ॥೧೯॥

(ಶಂ॥ ಆ॥) ಆದಿತ್ಯರೂಪನಾದ ನಾನು ವಸಂತಗ್ರೀಷ್ಮರ್ತುಗಳಲ್ಲಿ ಜಗತ್ತಿಗೆ ತಾಪಕ್ರಿಯೆಯನ್ನು ಮಾಡುವೆನು. ಕಾರ್ತಿಕಾದಿ ಎಂಟು ಮಾಸಗಳಲ್ಲಿ ಮಳೆಯಿಲ್ಲದಂತೆ ಮಾಡುವೆನು. (ವೃಷ್ಟಿಯನ್ನು ನಿಗ್ರಹಿಸುವೆನು.) ವರ್ಷರ್ತುವಿಗೆ ಆರಂಭವಾದ ಮೇಲೆನಾಲ್ಕು ಮಾಸಗಳಲ್ಲಿ ಮಳೆಯನ್ನು ಹೊಯ್ಯುವಂತೆ ಮಾಡುವೆನು. ಉತ್ಸೃಜಾಮಿಚ ಎಂಬುವಸ್ಥಲದಲ್ಲಿರುವ ಚಕಾರದಿಂದ ಅತಿವೃಷ್ಟ್ಯನಾವೃಷ್ಟಿಗಳಿಂದ ಸುಭಿಕ್ಷದುರ್ಭಿಕ್ಷವನ್ನೂ ಮಾಡುವೆನೆಂಬೀ ಅರ್ಥವೇರ್ಪಡುವುದು. ಯಾವ ಅಮೃತಪಾನದಿಂದ ದೇವತೆಗಳು ಮೃತಿಯನ್ನು ಹೊಂದುವುದಿಲ್ಲವೊ

ಅಂತಹ ಅಮೃತವೂ ನಾನೆ.ಯಾವದರಿಂದ ಮರ್ತ್ಯರು ಮೃತಿಯನ್ನು ಹೊಂದುತ್ತಾರೊ ಅಂತಹ ಮೃತ್ಯುವೂ ನಾನೆ. ಸದಸಚ್ಚಾಹಮರ್ಜುನ-ಯಾವ ಕಾರಣದಿಂದ ಈ ಪದಾರ್ಥವಿದೆ ಎಂಬದಾಗಿ ನಾಮದಿಂದಲೂ ರೂಪದಿಂದಲೂ ನಿರ್ದೇಶಿಸಲ್ಪಡುವುದೊ ಅಂತಹ ವ್ಯಕ್ತವಾದ ನಾಮರೂಪವುಳ್ಳ ಕಾರ್ಯವು ಸತ್ ಎನ್ನಲ್ಪಡುವುದು. ಕಾರಣವಾಗಿರುವ ನಾಮರೂಪ ರಹಿತವಾದ ಅವ್ಯಕ್ತವು ಅಸತ್ ಎನ್ನಲ್ಪಡುವುದು. ಸತ್ತೂ ಅಸತ್ತೂ ಎಂಬೀಯೆರಡೂ ನಾನೆ. ಚಕಾರದಿಂದ ಆ ವ್ಯಕ್ತಾವ್ಯಕ್ತ ಶಬ್ದವಾಚ್ಯಗಳಾದ ಸದಸತ್ತುಗಳೆಂಬೀ ಎರಡಕ್ಕೂ ನಿಷೇಧವು ಮಾಡಲ್ಪಟ್ಟ ಮೇಲೆ ಅಂಥಾನಿಷೇಧಕ್ಕೆ ಅವಧಿಯಾಗಿರುವಂತಾದ್ದಾಗಿಯೂ ಕಾರ್ಯಕಾರಣ ಭಾವವಿಕಲವಾಗಿಯೂ ನಿರ್ವಿಷಯವೂ ನಿರ್ವಿಶೇಷವೂ ಆಗಿರುವ ಯಾವ ಪರತರವಾದ ವಸ್ತುವುಂಟೋ ಅದೂ ನಾನೇ ಎಂಬೀ ಅರ್ಥವು ಸೂಚಿತವಾಗುವುದು.

ಇದರಿಂದ ಕ್ರತುಯಜ್ಞಾದಿ ಸದಸದಂತವಾದ ಸರ್ವವಸ್ತುವೂ ಬ್ರಹ್ಮಸ್ವರೂಪ ಮಾದುದರಿಂದ ಮೋಕ್ಷಾಪೇಕ್ಷಿಗಳಿಂದ ಬ್ರಹ್ಮಬುದ್ಧಿಯಿಂದ ಯಾವ ಯಾವ ವಸ್ತುವು ಉಪಾಸನೆ ಮಾಡಲ್ಪಡುವುದೊ ಆಯಾ ವಸ್ತುರೂಪವಾಗಿ ಬ್ರಹ್ಮವು ಉಪಾಸ್ಯವಾಗಿರುವುದರಿಂದ ಮುಮುಕ್ಷುವಾದವನಿಗೆ ಚಿತ್ತಶುದ್ಧಿಯೂ ಕ್ರಮವಾಗಿ ಮೋಕ್ಷಸಿದ್ಧಿಯೂ ಆಗುವುದೆಂದು ಸೂಚಿತವಾಗಿರುವುದು. ಆದರೆ ಬ್ರಹ್ಮವಲ್ಲದ ವಸ್ತುವಿನಲ್ಲಿ ಬ್ರಹ್ಮಬುದ್ಧಿಯನ್ನಿಟ್ಟು ಮಾಡುವ ಉಪಾಸನವು ಹೇಗೆ ತಾನೆ ಫಲಪ್ರದವಾಗುವುದು? ಬ್ರಹ್ಮವು ಕಣ್ಣುಗಳಿಗೆ ಗೋಚರವಾಗಿ ಹೇಗೆ ತಾನೇ ಆಗುತ್ತದೆ ? ಎಂದರೆ ಈ ವಿಷಯದಲ್ಲಿ ಪೂರ್ವಪಕ್ಷಿಯನ್ನು ಕುರಿತೇ ಕೇಳಬೇಕಾಗಿದೆ. ದೃಶ್ಯವೆನ್ನುವ ಯಾವದಾದರೊಂದು ವಸ್ತುವು ಇದೆಯೆ ? ಅಥವಾ ಇಲ್ಲವೆ ? ಇಲ್ಲವೆಂಬುವ ದ್ವಿತೀಯ ಪಕ್ಷಪರಿಗ್ರಹವಂಮಾಡಿದರೆ (ದೃಶ್ಯವಾದದ್ದು ಯಾವದೂ ಇಲ್ಲವೆನ್ನುವದಾದರೆ) ಸರ್ವವ್ಯವಹಾರಗಳಿಗೂ ಲೋಪವು ಬರುವುದು. ದೃಶ್ಯವಾದ ವಸ್ತುವು ಇದೆ ? ಎನ್ನುವ ಪಕ್ಷದಲ್ಲಿ ಅಂತಹ ದೃಶ್ಯವಸ್ತುವು ಸದ್ರೂಪವಾಗಿದೆಯೆ ? ಅಥವಾ ಅಸದ್ರೂಪವಾಗಿದೆಯೆ ? ಎಂಬದಾಗಿ ವಿಭಾಗಿಸಿ ಕೇಳಬೇಕಾಗಿರುವುದು. ದೃಶ್ಯವಾದ ವಸ್ತುವು ಸದ್ರೂಪವಾಗಿರುತ್ತದೆಂಬ

ದಾಗಿ ಹೇಳುವ ಪಕ್ಷದಲ್ಲಿ ಇಲ್ಲದೇ ಇರುವ ಶಶವಿಷಾಣ ತುಲ್ಯವಾದ ಅಸದ್ವಸ್ತುವಿಗೆ ಅಸ್ತೀತಿ (ಇದೇ ಎಂಬದಾಗಿರುವ) ನಿರ್ದೇಶವೇ ಸಂಭವಿಸುವುದಿಲ್ಲವಾದುದರಿಂದ ದೃಶ್ಯವಸ್ತುವು ಅಸದ್ರೂಪವಾಗಿರುವುದೆನ್ನಲೂ ಆಗಲಾರದು. ದೃಶ್ಯವಸ್ತುವು ಸದ್ರೂಪವಾಗಿರುವುದೆಂದರೆ ಆಪ್ರಕಾರವಾಗಿ ಹೇಳುವ ಪಕ್ಷದಲ್ಲಿ ಬ್ರಹ್ಮಾತಿರಿಕ್ತವಾದದ್ದಕ್ಕೆ ಸತ್ವಾಭಾವವು ಸಿದ್ಧವಾಗಿರುವುದರಿಂದ ಸಮಸ್ತವೂ ಬ್ರಹ್ಮವೇ ಆಗುವುದು.

ಆದರೇ ಸಮಸ್ತವೂ ಬ್ರಹ್ಮವಾಗುವ ಪಕ್ಷದಲ್ಲಿ ಘಟಪಟಾದಿಗಳೂ ಬ್ರಹ್ಮವೇ ಆಗಿರುವುದರಿಂದ ಘಟಾದಿ ನಾಶದಲ್ಲಿ ಬ್ರಹ್ಮಕ್ಕೂ ನಾಶಪ್ರಸಂಗವು ಪ್ರಾಪ್ತವಾಗಲಾರದೋ ? ಎಂದರೆ ನಾಶವು ಭ್ರಮದಿಂದ ಕಲ್ಪಿತವಾದವ್ಯಾಪ್ಯವಸ್ತುವಿಷಯವಾಗಿರುವುದರಿಂದ ಬ್ರಹ್ಮಕ್ಕೆನಾಶಪ್ರಸಂಗವು ಪ್ರಾಪ್ತವಾಗಲಾರದು. ಹೇಗಾದರೆ ದಂಡಾದಿಗಳಿಂದ ಕಲ್ಪಿತವಾದ ಕಂಬುಗ್ರೀವಾದ್ಯಾಕಾರವುಳ್ಳ ವ್ಯಾಪ್ಯಾಂಶವಾದ ಘಟಕ್ಕೆನೆ ನಾಶವು ಪ್ರಾಪ್ತವಾಗಿ ವ್ಯಾಪಕಾಂಶವಾದ ಮೃತ್ತಿಗೆ ಹೇಗಾದರೆ ನಾಶವು ಪ್ರಾಪ್ತವಾಗಲಾರದೊ ಅದರಂತೆ ಭ್ರಮಕಲ್ಪಿತ ನಾಮರೂಪಾದಿಯುಕ್ತವಾದ ವ್ಯಾಪ್ಯವಸ್ತುವಿಗೆ ನಾಶಪ್ರಸಂಗವಲ್ಲದೆ ವ್ಯಾಪಕಾಂಶವಾದ ಸತ್ತಿಗೆ ನಾಶಪ್ರಸಂಗ ವಿಲ್ಲವೆಂದರಿಯಬೇಕು. ವ್ಯಾಪಕಾಂಶವಾದ ಸತ್ತಿಗೆನಾಶವಂ ಅಂಗೀಕರಿಸುವ ಪಕ್ಷದಲ್ಲಿ ದೃಶ್ಯಾಭಾವಕ್ಕೆ ಭಾನವೆ ತೋರುವಿಕೆಯೆ) ಇಲ್ಲವೆಂಬುವ ಪ್ರಸಂಗ ಉಂಟಾಗುವುದರಿಂದ ವ್ಯಾಪಕಾಂಶವಾದ ಸತ್ತಿಗೆ ನಾಶವಿಲ್ಲವು. (ಎಂದರೆ ದೃಶ್ಯವಾದ ಘಟಾದಿಕವು ಭೂತಲದಲ್ಲಿಲ್ಲವೆಂಬ ಭಾನವು ಸದ್ವಸ್ತುವಿಗೇನೆ ಉಂಟಾಗಬೇಕಾಗಿರುವುದಲ್ಲದೆ ಬೇರೆ ವ್ಯಾಪ್ಯವಸ್ತುವಿಗುಂಟಾಗಲಾರದು. ವ್ಯಾಪಕವಾದ ಸದ್ವಸ್ತುವಿಗೆ ನಾಶವನ್ನಂಗೀಕರಿಸಿದರೆ "ಭೂತಲೆ ಘಟೋನಾಸ್ತಿ" ಇತ್ಯಾಕಾರಕವಾದ ಭಾನವೇ ಇಲ್ಲವಾಗುವುದೆಂದು ತಿಳಿಯಬೇಕು.) ಆದುದರಿಂದ ಸರ್ವಂ ಬ್ರಹ್ಮವೆಂತಲೇ ಸಿದ್ಧವಾಗಿರುವುದು.

ಆದುದರಿಂದ ತನಿಗಿಷ್ಟವಾದ ವಸ್ತುವಿನಲ್ಲಿ ಬ್ರಹ್ಮಬುದ್ಧಿಯಿಂದ ಮಾಡುವ ಉಪಾಸವು ಫಲಕ್ಕಾಗಿಯೇ ಆಗುವುದು. ಫಲಸಿದ್ಧಿಯು ಭಾವನಾನುರೂಪ ವಾಗಿರುವುದರಿಂದ ಈ ಪ್ರಕಾರ ವಾಗುವುದೆಂದರಿಯಬೇಕು. ... ... ... ... ||೧೯||

(ರಾ॥ ಭಾ॥) ಅಗ್ನ್ಯಾದಿತ್ಯಾದಿ ಶರೀರಿಯಾಗಿ ನಾನೇ ತಪಿಸುವೆನು. ಗ್ರೀಷ್ಮಾದಿಕಾಲಗಳಲ್ಲಿ ನಾನೇ ವರ್ಷವನ್ನು ನಿಲ್ಲಿಸುವೆನು. ವರ್ಷಾದಿಕಾಲದಲ್ಲಿ ನಾನೇ ವರ್ಷವನ್ನುಂಟುಮಾಡುವೆನು. ಯಾವವಸ್ತುವಿನಿಂದ ಲೋಕವು ಜೀವಿಸುವುದೋ ಯಾವ ವಸ್ತುವಿನಿಂದಲೋಕವು ಮೃತಿಯುಂ ಹೊಂದುವುದೋ ಅಂತಹ ಜೀವನ ಹೇತುವಾದ ಅಮೃತವೂ ಮರಣ ಹೇತುವಾದ ಮೃತ್ಯುವೂ ನಾನೆ. (ಅವು ನನಿಗೆ ಶರೀರವೆ) ಇಲ್ಲಿ ವಿಶೇಷವಾಗಿ ಹೇಳುವುದರಿಂದ ಯೇನು. ಈಗಿರುವವಸ್ತುವೂ ಅತೀತವಾಗಿಯೂ ಬರತಕ್ಕದ್ದಾಗಿಯೂ ಇರುವ ಕಾಲತ್ರಯವರ್ತಿಯಾದ ಸಮಸ್ತ ಚೇತನಾಚೇತನ ವಸ್ತುಜಾತವೂ ನಾನೆ, ಅವೆಲ್ಲವೂ ನನಿಗೆ ಶರೀರವೆ. ಈಪ್ರಕಾರವಾಗಿ ಸರ್ವಾವಸ್ಥಾವಸ್ಥಿತ ಸಕಲಚೇತನಾಚೇತನ ವಸ್ತು ಶರೀರಿಯಾಗಿ ನಾನೇಇರುವೆನು. ಈರೀತಿಯಾಗಿ ಬಹುಪ್ರಕಾರವಾದ ಪೃಥಕ್ತ್ವದಿಂದ ವಿಭಕ್ತವಾಗಿರುವ ನಾಮರೂಪಗಳುಳ್ಳ ಸಕಲ ಜಗತ್ತನ್ನೂ ನಾನು ಶರೀರವಾಗಿ ಉಳ್ಳವನಾಗಿರುವುದರಿಂದ ಅವುಗಳನ್ನು ಪ್ರಕಾರವಾಗಿ ವುಳ್ಳವನಾಗಿ ನಾನೊಬ್ಬನೆ ಇರುವೆನೆಂದು ಏಕತ್ವ ಜ್ಞಾನದೊಡನೆ ಜ್ಞಾನಿಗಳು ನನ್ನನ್ನು ಉಪಾಸನೆಮಾಡುತ್ತಾರೆಂದು ಜ್ಞಾನಿಗಳ ನಡತೆಯನ್ನುಪದೇಶಿಸಿದನೆಂದರಿಯಬೇಕು ॥೧೯॥

ಶ್ಲೋ॥ ತ್ರೈವಿದ್ಯಾಮಾಂಸೋಮಪಾಃಪೂತಪಾಪಾಯ
ಜ್ಞೈರಿಷ್ಟ್ವಾಸ್ವರ್ಗತಿಂಪ್ರಾರ್ಥಯಂತೇ। ತೇಪುಣ್ಯ
ಮಾಸಾದ್ಯಸುರೇಂದ್ರಲೋಕ ಮಶ್ನಂತಿದಿವ್ಯಾನ್ದಿವಿದೇ
ವಭೋಗಾನ್ ॥ ... ... ॥೨೦॥

ಪ॥ ತ್ರೈವಿದ್ಯಾಃ-ಮಾಂ-ಸೋಮಪಾಃ-ಪೂತಪಾಪಾಃ-ಯಜ್ಞೈಃ-ಇಷ್ಟ್ವಾ-ಸ್ವರ್ಗತಿಂ-ಪ್ರಾರ್ಥಯಂತೇ।ತೇ-ಪುಣ್ಯಂ-ಆಸಾದ್ಯ-ಸುರೇಂದ್ರಲೋಕಂ-ಅಶ್ನಂತಿ-ದಿವ್ಯಾನ್-ದಿವಿ-ದೇವಭೋಗಾನ್ ॥

ಅ॥ ತ್ರೈವಿದ್ಯಾಃ-ಋಗ್ಯಜುಸ್ಸಾಮವೆಂಬ ಮೂರುವೇದಗಳನ್ನರಿತವರು, ಯಜ್ಞೈಃ-ಯಜ್ಞಗಳಿಂದ, ಮಾಮಿಷ್ಟ್ವಾ-ನನ್ನನ್ನಾರಾಧಿಸಿ, ಸೋಮಪಾಃ - ಸೋಮಪಾನವನ್ನು ಮಾಡಿದವರಾಗಿಯೂ, ಪೂತಪಾಪಾಃ-ಪಾಪರಹಿತರಾಗಿಯೂ, ಸ್ವರ್ಗತಿಂ-ಸ್ವರ್ಗಲೋಕವನ್ನು, ಪ್ರಾರ್ಥಯಂತೇ-ಪ್ರಾರ್ಥಿಸುತ್ತಾರೆ. ತೇ-ಅವರು, ಪುಣ್ಯಂ-(ಕಂ। ಗ। ಪ) ಪುಣ್ಯಮಯವಾ

ಗಿರುವ, (ರಾ) ದುಃಖಸಂಬಂಧವಿಲ್ಲದಿರುವ, ಸುರೇಂದ್ರಲೋಕಂ – ದೇವೇಂದ್ರನಲೋಕ ವಾದ ಸ್ವರ್ಗವನ್ನು, ಆಸಾದ್ಯ – ಹೊಂದಿ, ದಿವಿ-ಸ್ವರ್ಗದಲ್ಲಿ ದೇವಭೋಗಾನ್-ದೇವತೆಗಳ ಸುಖಗಳನ್ನು, ಅಶ್ನಂತಿ-ಅನುಭವಿಸುತ್ತಾರೆ. ... ... ||೨೦||

(ಶಂ|| ಭಾ||) ಭಗವದ್ಭಕ್ತರಾಗಿದ್ದರೂ ನಿಷ್ಕಾಮರಿಗೆನೆ ಮುಕ್ತಿ ಯುಂಟಾಗುವುದೆಂದು ತೋರಿಸುವುದಕ್ಕಾಗಿ ಸಕಾಮರಾದ ಪುರುಷರಿ ಗುಂಟಾಗುವಸಂಸಾರ ಪ್ರಕಾರವನ್ನು ತೋರಿಸುತ್ತಾನೆಂದರಿಯಬೇಕು. ಕಾಮುಕಾಮಿಗಳಾಗಿಯೂ ಅಜ್ಞರಾಗಿಯೂ ಇರುವ ಯಾರಾದರೆ ಸ್ವ ರ್ಗಾದ್ಯನುಭವದಲ್ಲಪೇಕ್ಷೆಯುಳ್ಳವರಾಗಿ ಋಗ್ಯಜುಸ್ಸಾಮವೆಂಬ ವೇದ ಗಳಲ್ಲಿ ಹೇಳಿರುವ ಯಜ್ಞಗಳಿಂದ ವಸು ಆದಿತ್ಯರುದ್ರದೇವತಾರೂಪನಾ ಗಿರುವ ನನ್ನನ್ನು ಪೂಜಿಸಿ ಅಂತಹ ಪುಣ್ಯಫಲವಾದ ಶತಕ್ರತು ಸ್ಥಾ ನವಾದ ಸ್ವರ್ಗವಂ ಹೊಂದಿ ಅನುಭವಿಸಬೇಕಾಗಿ ಬಂದಿರುವಸ್ವರ್ಗೀಯ ವಾದಭೋಗವನ್ನಭನುವಿಸುವರು. ... ... ||೨೦||

(ಶ್ರೀ) ಮೂರುವೇದಗಳನ್ನು ಅಧ್ಯಯನವಂ ಮಾಡುವವರು ಅ ಥವಾ ಅದರ ಅರ್ಥವಿಚಾರವಂ ಮಾಡುವಂತವರು ತ್ರೈವಿದ್ಯರೆನ್ನಲ್ಪಡು ವರು. ಆವೇದಗಳಲ್ಲಿ ಹೇಳಿರುವ ಪ್ರಕಾರವಾಗಿ ಯಜ್ಞಾದಿಗಳನ್ನನುಷ್ಠಿ ಸುವಂತವರು ದೇವತಾ ಸ್ವರೂಪಿಯಾಗಿ ನಾನಿರುವೆ ನೆಂಬುವುದಂ ತಿಳಿ ಯದೆ ಪೂಜಿಸುತ್ತಾರೆಂದು ಭಾವವು. ... ... ||೨೦||

(ಗೀ|| ವಿ||) " ಅಹಂಕ್ರತುಃ ,, ಎಂಬ ಶ್ಲೋಕದಲ್ಲಿರುವ ಕ್ರ ತ್ವಾದಿ ಶಬ್ದಗಳಿಂದ ಜ್ಯೋತಿಷ್ಟೋಮಾದಿ ಯಾಗಭೋಕ್ತೃತ್ವವು ಪರಮಾತ್ಮನಿಗೆ ಹೇಳಲ್ಪಟ್ಟಿತು. ಆದರೆ ಅದು ಯುಕ್ತವಲ್ಲವು. ಭಾಗವತ ರಿಂದ ಮಾಡಲ್ಪಡುವಯಾಗಕ್ಕೂ ತ್ರೈವಿದ್ಯರಿಂದ ಮಾಡಲ್ಪಡುವಯಾ ಗಗಳಿಗೂ ಪರಮಾತ್ಮನೇ ಭೋಕ್ತಾ ಆದರೆ ಭಾಗವತರಿಗೂತ್ರೈವಿದ್ಯರಿ ಗೂಸಮವಾದ ಫಲವು ಪ್ರಾಪ್ತವಾಗಬೇಕಾಗಿರುವುದು. ಆರೀತಿಯಾಗಿ ಪ್ರಾಪ್ತವಾಗುವುದಿಲ್ಲವಾದುದರಿಂದಜ್ಯೋತಿಷ್ಟೋಮಾದಿಯಾಗಭೋಕ್ತೃ ತ್ವವು ಪರಮಾತ್ಮನಿಗುಂಟೆಂದು ಹೇಳಿರುವುದು ಯುಕ್ತವಲ್ಲವೆಂಬೀಶಂ ಕಾಸಮಾಧಾನಾರ್ಥವಾಗಿ ಭಾಗವತರಿಂದಅನುಷ್ಠಿಸಲ್ಪಡುವ ಭಗವದ್ಭ ಜನಕ್ಕೆ ತ್ರೈವಿದ್ಯರಿಂದ ಮಾಡಲ್ಪಡುವ ಯಜ್ಞಫಲಕ್ಕಿಂತಲೂ ಅತಿಶ ಯಿತವಾದ ಫಲವು ಪ್ರಾಪ್ತವಾಗುವುದೆಂದಿದುಮೊದಲು ಮೂರುಶ್ಲೋ

ಕಗಳಿಂದ ಹೇಳುತ್ತಾನೆ. ಮೂರುವೇದಗಳನ್ನು ತಿಳಿದವರು ವಿಷ್ಣುಸ ರ್ವೋತ್ತಮನೆಂಬ ಜ್ಞಾನವುಳ್ಳವರಾದರೂ ವೇದದಲ್ಲಿ ಮುಖತಃಪ್ರತೀ ಯಮಾನವಾಗಿರುವ ಸ್ವರ್ಗಾದಿ ಫಲೋದ್ದೇಶ್ಯದಿಂದ ಅನ್ಯದೇವತೆಗಳ ನ್ನು ಪೂಜಿಸಬೇಕೆಂದು ತಿಳಿದನುಷ್ಠಿಸಿದರೂ ಕಡೆಯಲ್ಲಿ ವಿಷ್ಣುವಾದ ನನಿಗೆ ಸಮರ್ಪಣವಂ ಮಾಡುತ್ತಾರೆ. ಅಂತವರುಗಳು ಸ್ವರ್ಗಾದ್ಯರ್ಥ ವಾಗಿನನ್ನನ್ನು ಪ್ರಾರ್ಥಿಸುತ್ತಾರೆಂದರಿಯಬೇಕು. ॥೨೦॥

ಶ್ಲೋ॥ ತೇತಂಭುಕ್ತ್ವಾಸ್ವರ್ಗಲೋಕಂ ವಿಶಾಲಂಕ್ಷೀಣೆ
ಪುಣ್ಯೇಮರ್ತ್ಯಲೋಕಂವಿಶಂತಿ । ಏವಂತ್ರಯೀಧರ್ಮಮ
ನುಪ್ರಪನ್ನಾಗತಾಗತಂಕಾಮಕಾಮಾಲಭಂತೇ ॥ ೨೧ ॥

ಪ॥ ತೇ- ತಂ- ಭುಕ್ತ್ವಾ- ಸ್ವರ್ಗಲೋಕಂ- ವಿಶಾಲಂ- ಕ್ಷೀಣೆ- ಪುಣ್ಯೇ- ಮರ್ತ್ಯ ಲೋಕಂ- ವಿಶಂತಿ । ಏವಂ- ತ್ರಯೀಧರ್ಮಂ- ಅನುಪ್ರಪನ್ನಾಃ- ಗತಾಗತಂ- ಕಾಮ ಕಾಮಾಃ- ಲಭಂತೇ।

ಅ॥ ತೇ- ಅವರು, ವಿಶಾಲಂ- ವಿಸ್ತಾರವಾದ, ತಂಸ್ವರ್ಗಲೋಕಂಭುಕ್ತ್ವಾ- ಆ ಸ್ವರ್ಗಲೋಕವನ್ನನುಭವಿಸಿ, ಪುಣ್ಯೇಕ್ಷೀಣೇಸತಿ-ಪುಣ್ಯವು ಕ್ಷಯಿಸಿಹೋದಮೇಲೆ, ಮರ್ತ್ಯ ಲೋಕಂ- ಮಾನವಲೋಕವನ್ನು, ವಿಶಂತಿ- ಪ್ರವೇಶಿಸುತ್ತಾರೆ. ಏವಂ- ಈಪ್ರಕಾರ ವಾಗಿ, ತ್ರಯೀಧರ್ಮಂ- ವೇದೋಕ್ತವಾದ ಧರ್ಮವನ್ನು, (ಅಂ ವೈದಿಕ ಕರ್ಮಮಾತ್ರ ವನ್ನು), ಅನುಪ್ರಪನ್ನಾಃ-ಅನುಷ್ಠಿಸುವಂತವರಾದ, ಕಾಮಕಾಮಾಃ-ವಿಷಯೇಚ್ಛಾಯು ಕ್ತರು, ಗತಾಗತಂ- ಹೋಗಿಬರುವುದನ್ನು, ಲಭಂತೇ- ಹೊಂದುತ್ತಾರೆ. ॥೨೧॥

(ರಾ॥ ಭಾ॥) ಈರೀತಿಯಾಗಿ ಭಗವದನುಭವವಂ ಮಾಡುವು ದೆ ಪರಮಭೋಗವೆಂದು ನೆನೆಸಿರುವ ಮಹಾತ್ಮರಾದ ಜ್ಞಾನಿಗಳ ವೃತ್ತ ವನ್ನುಹೇಳಿ ಅವರ ವಿಶೇಷವನ್ನು ಮತ್ತೂ ವಿಸ್ತಾರವಾಗಿ ತೋರಿಸು ವುದಕ್ಕಾಗಿ ಅಜ್ಞಾನಿಗಳಾಗಿಯೂ ಕಾಮ ಪರತಂತ್ರರಾಗಿಯೂ ಇರುವ ಸಂಸಾರಿಗಳ ನಡತೆಯನ್ನು ಹೇಳುತ್ತಾರೆ. ಋಗ್ಯಜುಸ್ಸಾಮಗಳೆಂಬ ಮೂರುವಿದ್ಯೆಗಳಲ್ಲಿಯೇ ನಿಷ್ಠೆಯುಳ್ಳವರಾಗಿಯೂ ಕೇವಲ ಕರ್ಮಪ್ರತಿ ಪಾದಕ ವೇದಭಾಗಮಾತ್ರದಲ್ಲಿಯೆ ನಿಷ್ಠೆಯುಳ್ಳವರಾಗಿಯೂ ವೇದಾಂ ತನಿಷ್ಠಾರಹಿತರಾಗಿಯೂ ಇರುವವರು ಕೇವಲೇಂದ್ರಾದಿ ಯಾಗಶಿಷ್ಟ ವಾದ ಸೋಮರಸವನ್ನು ಪಾನಮಾಡಿ ಅದರಿಂದ ಸ್ವರ್ಗಾದಿ ಲೋಕ ಪ್ರಾಪ್ತಿಗೆ ವಿರೋಧಿಯಾದ ಪಾಪದ್ವಂಶಯಿಂದ ನಿವೃತ್ತರಾಗಿ ಕೇವಲೇಂ

ದ್ರಾದಿಗಳನ್ನೇ ದೇವತೆಯಾಗಿ ಉಳ್ಳದ್ದೆಂಬ ಭ್ರಮದಿಂದ ಅನುಸಂಧಿಸಲ್ಪಡುವ ಯಾಗಗಳಿಂದ ವಸ್ತುವೃತ್ತ್ಯಾ ಆಯಾ ಇಂದ್ರಾದಿ ದೇವತಾ ಶರೀರಕನಾದ ನನ್ನನ್ನಾರಾಧಿಸಿಯೂ, ಅಂತಹ ಇಂದ್ರಾದಿದೇವತಾ ಶರೀರಕನಾದ ನನ್ನನ್ನು ತಿಳಿಯದೆ ತನ್ಮ್ಮಗಳಿಂದ ಮಾಡಲ್ಪಡುವ ಯಾಗ ಕರ್ಮಗಳಿಗೆ ಫಲ ಭೂತವಾಗಿ ಸ್ವರ್ಗ ಪ್ರಾಪ್ತಿಯನ್ನಪೇಕ್ಷಿಸುತ್ತಾರೆ. ಅಂತಹ ಕರ್ಮಿಗಳು ದುಃಖಸಂಬಂಧವಿಲ್ಲದಿರುವ ದೇವೇಂದ್ರನ ಸ್ವರ್ಲೋಕವನ್ನು ಹೊಂದಿ ಅಲ್ಲಿ ಮಾನುಷಭೋಗಕ್ಕಿಂತಲೂ ಅತಿಶಯಿತಗಳಾದ ದೇವತೆಗಳನುಭವಿಸುವ ಭೋಗಗಳನ್ನು ಅನುಭವಿಸುವರು. ॥೨೦॥

(ರಾ॥ಭಾ॥) ಮತ್ತು ಆ ಪುಣ್ಯಕರ್ಮಗಳು ವಿಸ್ತೀರ್ಣವಾಗಿರುವ ಸುಖರೂಪವಾದ ಆ ಸ್ವರ್ಗಲೋಕವನ್ನು ಅನುಭವಿಸಿ ಅಂತಹ ಸ್ವರ್ಗಪ್ರಾಪ್ತಿಗೆ ಸಾಧನವಾದ ಪುಣ್ಯವು ಕ್ಷೀಣವಾದಮೇಲೆ ಪುನಶ್ಚ ಮನುಷ್ಯ ಲೋಕವನ್ನು ಪ್ರವೇಶಿಸುತ್ತಾರೆ, ಈ ಪ್ರಕಾರವಾಗಿ ವೇದಾಂತಜ್ಞಾನಶೂನ್ಯರಾದ ಸ್ವರ್ಗಾದಿ ಲೋಕಾಪೇಕ್ಷಿಗಳಾಗಿರುವ ಅಧಿಕಾರಿಗಳು ತತ್ತತ್ಫಲಾರ್ಥವಾಗಿ ವೇದೋಕ್ತ ಕೇವಲ ಯಾಗಾದಿಗಳನ್ನು ಅನುಷ್ಠಿಸಿ ಆಗಾಗ್ಯೆ ಗಮನಾಗಮನ ಕಷ್ಟಗಳನ್ನನುಭವಿಸುವರು. (ಮಹಾತ್ಮರಾದ ಜ್ಞಾನಿಗಳಿಗಿಂತಹ ಕಷ್ಟಗಳಿಲ್ಲವೆಂದು ತಾತ್ಪರ್ಯವು.)॥೨೧॥

ಶ್ಲೋ॥ ಅನನ್ಯಾಶ್ಚಿಂತಯಂತೋ ಮಾಂ ಯೇ ಜನಾಃ ಪರ್ಯುಪಾಸತೇ । ತೇಷಾಂ ನಿತ್ಯಾಭಿಯುಕ್ತಾನಾಂ ಯೋಗಕ್ಷೇಮಂ ವಹಾಮ್ಯಹಂ ॥ ... ॥೨೨॥

ಪ॥ ಅನನ್ಯಾಃ-ಚಿಂತಯಂತಃ- ಮಾಂ-ಯೇ-ಜನಾಃ-ಪರಿ-ಉಪಾಸತೇ । ತೇಷಾಂ-ನಿತ್ಯಾಭಿಯುಕ್ತಾನಾಂ-ಯೋಗಕ್ಷೇಮಂ-ವಹಾಮಿ-ಅಹಂ।

(ಅ॥ ರಾ॥ ಭಾ॥) ಇನ್ನು ಮುಂದೆ ಮಹಾತ್ಮರು ನಿರತಿಶಯ ಪ್ರಿಯರೂಪವಾದ ನನ್ನ ಚಿಂತನವನ್ನು ಮಾಡಿ ಅನವಧಿಕಾತಿಶಯಾನಂದ ರೂಪನಾದ ನನ್ನನ್ನು ಹೊಂದಿ ಪುನರಾವೃತ್ತಿ ಇಲ್ಲದೆ ಸುಖಿಸುತ್ತಾರೆಂಬ ವಿಶೇಷವನ್ನು ತೋರಿಸುತ್ತಾರೆ. ಅನನ್ಯಾಃ- ನನ್ನನ್ನು ಕ್ಷಣಮಾತ್ರವಾದರೂ ಚಿಂತಿಸದೆ ಹೋದರೆ ಆತ್ಮವು ಶಿಥಿಲವಾಗುವುದರಿಂದ ನನ್ನ ಚಿಂತನವನ್ನೇ ಪರಮ ಪ್ರಯೋಜನವನ್ನಾಗಿ ಭಾವಿಸುವಂತವರಾಗಿ, ಮಾಂ-ನನ್ನನ್ನು, ಚಿಂತಯಂತಃ-ಚಿಂತಿಸುತಲಿರುವ, ಯೇ ಜನಾಃ-ಯಾವ ಜನಗಳು, ಪರ್ಯುಪಾಸತೇ-

ಸರ್ವಕಲ್ಯಾಣ ಗುಣಗಳೊಡನೆಯೂ ಸರ್ವವಿಭೂತಿಗಳೊಡನೆಯೂ, ಅನ್ಯೋನ್ಯವಾಗಿ ಉಪಾಸನೆಮಾಡುವರೊ, ನಿತ್ಯಾಭಿಯುಕ್ತಾನಾಂತೇಷಾಂ= ನನ್ನೊಡನೆ ನಿತ್ಯಯೋಗವನ್ನಪೇಕ್ಷಿಸುವ ಆಭಕ್ತರಿಗೆ, ಅಹಂ- ನಾನು, ಯೋಗಕ್ಷೇಮಂ- ನನ್ನಪ್ರಾಪ್ತಿಯೆಂಬಯೊಗವನ್ನೂ ಅದಕ್ಕೆ ಪುನರಾವೃತ್ತಿ ಇಲ್ಲದಿರುವಿಕೆಯೆಂಬ ಕ್ಷೇಮವನ್ನೂ, ವಹಾಮಿ- ಸಂಪಾದಿಸಿಕೊಡುವೆನು.

(ಶಂ॥ ಭಾ॥) ಫಲಾಭಿಸಂಧಿರಹಿತರಾಗಿ ನಿನ್ನನ್ನೇ ಆರಾಧಿಸುವಂತ ನಿಷ್ಕಾಮರಾದ ಸಮೀಚೀನ ಜ್ಞಾನವುಳ್ಳವರ ಯೋಗಕ್ಷೇಮವು ಹೇಗೆ ನಡೆಸಲ್ಪಡುವುದೋ ಅದಂ ಹೇಳಬೇಕೆಂಬ ಅರ್ಜುನನಪ್ರಶ್ನಾರ್ಥವನ್ನು ತಾನಾಗಿ ಚಿಂತಿಸಿ ಪ್ರತ್ಯುತ್ತರವನ್ನು ಶ್ರೀಕೃಷ್ಣನುಪದೇಶಿಸುತ್ತಾನೆಂದರಿಯಬೇಕು. ಅನನ್ಯಾಃ- ಭೇದಬುದ್ಧಿ ಇಲ್ಲದೆ ಎಂದರೆ ನಾನು ಬೇರೆ, ತಾವು ಬೇರೆ ಎಂಬದಾಗಿ ನೆನೆಯದೆ ಪರದೇವತೆಯಾದ ನಾರಾಯಣನೆ ತಮ್ಮ ಆತ್ಮವೆಂದು ತಿಳಿದವರಾಗಿ, ಮಾಂ- ನನ್ನನ್ನು, ಚಿಂತಯಂತಃ- ಧ್ಯಾನಿಸುತಲಿರುವ, ಯೇಜನಾಃ- ಯಾವ ಸನ್ಯಾಸಿಗಳು, ಪರ್ಯುಪಾಸತೆ- ಸ್ವಲ್ಪವೂ ವಿರಾಮವಿಲ್ಲದೆ ಉಪಾಸನೆಮಾಡುತ್ತಾರೊ, ನಿತ್ಯಾಭಿಯುಕ್ತಾನಾಂತೇಷಾಂ- ಸರ್ವಕಾಲದಲ್ಲಿಯೂ ಸ್ವಸ್ವರೂಪಾನುಭವದಲ್ಲಿಯೆ ನಿಷ್ಠೆಯುಳ್ಳ ಅಂತವರ, ಯೋಗಕ್ಷೇಮಂ- ಹೊಂದುವುದಕ್ಕೆ ಅಶಕ್ಯವಾದದ್ದನ್ನು ಹೊಂದುವಿಕೆಯೆಂಬ ಯೋಗವನ್ನೂ ಹೊಂದಿರುವುದನ್ನುರಕ್ಷಿಸಿಕೊಳ್ಳುವಿಕೆ ಎಂಬ ಕ್ಷೇಮವನ್ನೂ, ಅಹಂವಹಾಮಿ- ನಾನು ನಿರ್ವಹಿಸುವೆನು. ಪರಮಾತ್ಮನು ಪರಮಾರ್ಥದರ್ಶಿಗಳ ಯೋಗಕ್ಷೇಮವನ್ನು ಏತಕ್ಕೆ ವಹಿಸುತ್ತಾನೆಂದರೆಯಾವಕಾರಣದಿಂದ ಜ್ಞಾನಿಯಾದವನು ಪರಮಾತ್ಮನಿಗೆ ಆತ್ಮನೆಂತಲೇ ಭಗವಂತನ ಅಭಿಪ್ರಾಯವಿರುವುದೊ, ಯಾವಕಾರಣದಿಂದ ಪರಮಾತ್ಮನಿಗೆ ಜ್ಞಾನಿಯು ಪ್ರಿಯನಾಗಿರುವನೊ ಆಕಾರಣದಿಂದಲೇ ಅಂತವರ ಯೋಗಕ್ಷೇಮವನ್ನು ಪರಮಾತ್ಮನು ನಿರ್ವಹಿಸುವನೆಂದರಿಯಬೇಕು. ಆದರೆ ಅನ್ಯದೇವತಾಭಕ್ತರ ಯೋಗಕ್ಷೇಮಗಳನ್ನು ಕೂಡ ಆಯಾಯ ದೇವತೆಗಳಮೂಲಕವಾಗಿ ಪರಮಾತ್ಮನೆ ನಿರ್ವಹಿಸುತ್ತಾನೆ, ಆದರೂ ಜ್ಞಾನಿಗಳ ವಿಷಯದಲ್ಲಿ ವಿಶೇಷವುಂಟು. ಹೇಗೆಂದರೆ! ಇತರ ದೇವತಾಭಕ್ತರು ತಮ್ಮಗಳಿಗಾಗಿ ಯೋಗಕ್ಷೇಮಗಳನ್ನು ನಿರ್ವಹಿಸಿಕೊಳ್ಳು

ಪ್ರಯತ್ನಪಡುವರು. (ಬ್ರಹ್ಮ ವ್ಯತಿರಿಕ್ತವು ಮಿಥ್ಯೆ ಯೆಂಬ ನಿಶ್ಚಯದೊಡನೆ) ಅನನ್ಯದರ್ಶಿಗಳಾಗಿ ಬ್ರಹ್ಮನಿಷ್ಠೆಯಂ ಮಾಡುವಂತವರು ಸ್ವಾರ್ಥವಾಗಿ ಯೋಗಕ್ಷೇಮಗಳನ್ನಪೇಕ್ಷಿಸದೆ ಜೀವಿತದಲ್ಲಿಯೂ ಮರಣದಲ್ಲಿಯೂ ಸ್ವವಿಷಯವಾಗಿ ವಿಷಯಗಳನ್ನಪೇಕ್ಷಿಸದೆ ಕೇವಲವಾಗಿ ಭಗವಂತನೆ ಶರಣನೆಂದಿರುವರು. ಆದುದರಿಂದ ಅಂತವರ ಯೋಗಕ್ಷೇಮವನ್ನು ಪರಮಾತ್ಮನೆ ನಿರ್ವಹಿಸುತ್ತಾನೆಂದುತಾತ್ಪರ್ಯವು॥೨೨॥

(ಗೀ॥ ೯॥ )ತ್ರೈವಿದ್ಯರಿಗುಂಟಾಗುವ ಫಲವನ್ನು ಹೇಳಿ ಭಾಗವತರಿಗುಂಟಾಗುವ ಫಲವನ್ನು ಹೇಳುತ್ತಾನೆ. ಅನನ್ಯಾಃ- ನನಿಗಿಂತಲೂ ಭಿನ್ನವಾದ ವಿಷಯವನ್ನು ಚಿಂತಿಸದೆಯಿರುವ, ಯೇಜನಾಃ- ಯಾವ ಭಕ್ತಜನರು, ಮಾಂ- ನನ್ನನ್ನು, ಚಿಂತಯಂತಸ್ಸಂತಃ - ಧ್ಯಾನಿಸುವಂತವರಾಗಿ, ಪರ್ಯುಪಾಸತೆ- ಸವಿಾಚೀನವಾಗಿ ನನ್ನಗುಣಗಳಂತಿಳಿದು ಭಕ್ತ್ಯುದ್ರೇಕದಿಂದ ಸೇವಿಸುತ್ತಾರೊ, ನಿತ್ಯಾಭಿ ಯುಕ್ತಾನಾಂ - ನಿತ್ಯ- ನಿರಂತರವು, ಅಭಿ- ಸರ್ವದೇಶದಲ್ಲಿ ಶರೀರೇಂದ್ರಿಯ ಮನಸ್ಸುಗಳಿಂದಲೂ, ಯುಕ್ತಾನಾಂ- ಪರಮಾತ್ಮನ ಸೇವೆಯಲ್ಲಿ ಉದ್ಯುಕ್ತರಾದ, ತೇಷಾಂ- ಅವರುಗಳಿಗೆ, ಯೋಗಕ್ಷೇಮಂ- ಅಪುನರಾವೃತ್ತಿರೂಪವಾದ ಮೋಕ್ಷವನ್ನು, ವಹಾಮಿ- ಸಂಪಾದಿಸುವೆನು. ಪರಮಾತ್ಮನಿಗೆ ಸರ್ವಯಜ್ಞ ಭೋಕ್ತೃತ್ವವಿದ್ದರೂ ಭಗವದ್ಭಜನರೂಪವಾದ ಉಪಾಯಭೇದದಿಂದ ತ್ರೈವಿದ್ಯಭಾಗವತರಿಗೆ ಫಲಭೇದ ವಿರುವುದಂ ಸೂಚನೆಮಾಡುವುದಕ್ಕಾಗಿ ಈಶ್ಲೋಕದಲ್ಲಿ ಅನನ್ಯಾಃ, ಇತ್ಯಾದಿ ವಿಶೇಷಣಗಳಂ ಹೇಳಿರುವಂತೆ ತಿಳಿಯಬೇಕು. “ ಯೊಯೊಯಾಂ ಯಾಂತನುಂ,, (೭ ॥ ೨೧ ॥ ) ಇತ್ಯಾದಿ ಶ್ಲೋಕದಲ್ಲಿ ತ್ರೈವಿದ್ಯರಿಗೆ ಅನ್ಯದೇವತಾಯಾಜಿತ್ವವು ಹೇಳಲ್ಪಟ್ಟಿತು. ಅದಕ್ಕೆ ವಿರುದ್ಧವಾಗಿ ಭಾಗವತರಿಗೆ ಅನನ್ಯಾಃ ಎಂಬ ವಿಶೇಷಣವು ಉಪಾತ್ತವಾಯಿತು. “ನತುಮಾವ-ಭಿಜಾನಂತಿ,, (೯॥ ೨೪॥) ಎಂಬ ಶ್ಲೋಕದಿಂದ ತ್ರೈವಿದ್ಯರಿಗೆ ಅತಿಶಯಿತವಾದ ಭಕ್ತಿ ಜ್ಞಾನಾಭಾವವು ಹೇಳಲ್ಪಟ್ಟಿತು. ತತ್ವಜ್ಞಾನವಿಲ್ಲದವರಿಗೆ ಭಕ್ತ್ಯಭಾವವು ಸಿದ್ಧವೆಂದರ್ಥವು. ಇಲ್ಲಿ ಭಾಗವತರಿಗೆ ಭಕ್ತ್ಯುದ್ರೇಕ ಸೂಚನಾರ್ಥವಾಗಿ ‘ಪ

ರ್ಬ್ಯಪಾಸತೆ, ಎಂಬ ವಿಶೇಷಣವು ಪ್ರಯುಕ್ತವಾಯಿತು. "ಸ್ವರ್ಗತಿಂ ಪ್ರಾರ್ಥಯಂತೆ- ಕಾಮಕಾಮಾಲಭಂತೆ,, (೯||೨೦||೨೧||) ಇತ್ಯಾದಿಗಳಿಂದ ತ್ರೈವಿದ್ಯರಿಗೆ ಸ್ವರ್ಗಾದಿ ಫಲಗಳಲ್ಲಪೇಕ್ಷೆಯು ಹೇಳಲ್ಪಟ್ಟಿತು. ಭಾಗವತರೋ ಅಂತಹ ಫಲವನ್ನಪೇಕ್ಷಿಸದೆ ನನ್ನನ್ನೇ ಚಿಂತಿಸುತ್ತಾರೆಂಬ ವಿಶೇಷವು ಸ್ವೀಕೃತವಾಗಿರುವುದು, ಇದರಿಂದ ಭಾಗವತರಿಗೆ ಫಲಾಪೇಕ್ಷಾ ಎಂಬ ಕಾಮನಾಭಾವವು ಹೇಳಲ್ಪಟ್ಟಿತು. "ಮಾಮಿಷ್ಟ್ವಾ- ಮಾಮೇವಯಜಂತಿ,, ಇತ್ಯಾದಿಗಳಿಂದ ತ್ರೈವಿದ್ಯರುಮಾಡುವ ಕರ್ಮಗಳಿಗೆ ಕಡೆಯಲ್ಲಿ ಭಗವತ್ಸಮರ್ಪಣವು ಹೇಳಲ್ಪಟ್ಟಿತು. ಭಾಗವತರ ವಿಷಯದಲ್ಲಿ ಅದಕ್ಕೆ ವಿರುದ್ಧವಾಗಿ ನಿತ್ಯಾಭಿಯುಕ್ತಾನಾಂ, ಎಂಬ ವಿಶೇಷಣವು ಹೇಳಲ್ಪಟ್ಟಿತು. ಈ ವಿಶೇಷಣದಿಂದ ಸದಾ ಭಗವತ್ಸ್ವರೂಪದಿಂದ ಭಗವದುದ್ದೇಶ್ಯವಾಗಿಯೆ ಭಾಗವತರು ಭಗವತ್ಸೇವೆಯಂ ಮಾಡುವರೆಂದು ಸೂಚಿತವಾಯಿತು. ಆದುದರಿಂದ ಈಇಬ್ಬರಿಗೂ ವೈಷ್ಣವತ್ವವೂ ಭಗವದ್ಭೋಗ್ಯವಾದ ಕರ್ಮವುಳ್ಳವಿಕೆಯೂ ಸಿದ್ಧವಾಗಿದ್ದರೂ ಫಲಹೇತುವಾದ ಉಪಾಯ ಭೇದದಿಂದ ಫಲಭೇದ ವುಂಟಾಗುವುದೆಂದರಿಯಬೇಕು.||೨೨||

ಶ್ಲೋ||ಯೇಽಪ್ಯನ್ಯದೇವತಾಭಕ್ತಾಯಜಂತೇಶ್ರದ್ಧಯಾ
ನ್ವಿತಾಃ| ತೇಪಿಮಾಮೇವಕೌಂತೇಯಯಜಂತ್ಯವಿಧಿಪೂ
ರ್ವಕಂ || ... ... ... ||೨೩||

ಪ|| ಯೇ-ಅಪಿ-ಅನ್ಯದೇವತಾಃ-ಭಕ್ತಾಃ-ಯಜಂತೇ-ಶ್ರದ್ಧಯಾ-ಅನ್ವಿತಾಃ ತೇ-ಅಪಿ-ಮಾಂ-ಏವ-ಕೌಂತೇಯ-ಯಜಂತಿ-ಅವಿಧಿಪೂರ್ವಕಂ ||

ಅ|| ಹೇಕೌಂತೇಯ-ಎಲೈ ಅರ್ಜುನನೆ, ಯೇಪಿಭಕ್ತಾಃ-ಯಾವ ಭಕ್ತರು, ಶ್ರದ್ಧಯಾನ್ವಿತಾಃ-ವಿಶ್ವಾಸಯುಕ್ತರಾಗಿ, ಅನ್ಯದೇವತಾಃ-ದೇವತಾಂತರಗಳನ್ನು, ಯಜಂತೆ-ಆರಾಧಿಸುತ್ತಾರೊ, ತೇಪಿ-ಅವರೂ,ಅವಿಧಿ ಪೂರ್ವಕಂ-ಕ್ರಮವಾದ ಮಾರ್ಗವಂಬಿಟ್ಟು, ಮಾಮೇವ ಯಜಂತಿ-ನನ್ನನ್ನೇ ಆರಾಧಿಸುತ್ತಾರೆ. .... ||೨೩||

(ಶಂ|| ಭಾ||) ಇತರ ದೇವತೆಗಳೆಲ್ಲವೂ ಪರಮಾತ್ಮನಾದ ನಿನ್ನ ಸ್ವರೂಪರಾಗಿಯೇ ಆಗಿರುವುದರಿಂದ ಅಂತಹ ದೇವತಾಂತರಗಳನ್ನು ಭಜಿಸುವಂತವರು ನಿನ್ನನ್ನು ಭಜಿಸುವಂತರೇ ಅಲ್ಲವೆ ? ಎಂದರೆ ಸತ್ಯವೇ; ಅವರೂ ಅನ್ಯದೇವತೆಗಳಲ್ಲಿ ಪ್ರೇಮಯುಳ್ಳವರಾಗಿ ವಿಶ್ವಾಸದಿಂ

ದ ದೇವತಾಂತರಾರಾಧನವಂ ಮಾಡುವಂತವರೂ ಅಜ್ಞಾನದಿಂದ ನನ್ನೆ ನ್ನೇ ಆರಾಧಿಸುವಂತವರಾಗುವರು. ... ॥೨೩॥

(ರಾ॥ ಭಾ॥) ಇಂದ್ರಾದಿಗಳಾದ ದೇವತಾಂತರಗಳಲ್ಲಿ ಭಕ್ತಿಯ ನ್ನುಮಾಡಿ ಅವರನ್ನಾರಾಧಿಸುವಂತವರೂ (ವಾಸ್ತವವಾಗಿ ಆ ದೇವತಾಂ ತರಗಳು ನನಿಗೆ ಶರೀರವಾಗಿರುವುದರಿಂದ) ನನ್ನನ್ನೇ ಆರಾಧಿಸುತ್ತಾ ರೆ: ಆದರೆ ಕ್ರಮವಂ ಬಿಟ್ಟು ಆರಾಧಿಸುತ್ತಾರೆ, ಎಂದರೆ ಇಂದ್ರಾದಿ ದೇವತೆಗಳನ್ನು ಕರ್ಮದಿಂದಾರಾಧಿಸಬೇಕಾದ ಕ್ರಮವು ವೇದಾಂತದಲ್ಲಿ ಹೇಗೆ ಹೇಳಲ್ಪಟ್ಟಿರುವುದೊ ಆರೀತಿಯಾಗಿ ಆರಾಧಿಸುವುದಿಲ್ಲವೆಂದರ್ಥ ವು. ಇಲ್ಲಿ ವೇದಾಂತವಾಕ್ಯ ತಾತ್ಪರ್ಯವ್ಯಾವದೆಂದರೆ ! ಅಗ್ನಿಹೋತ್ರ ವೇ ಮೊದಲಾದ ಕರ್ಮಗಳು ಇಂದ್ರಾದಿಗಳಿಗೆ ಅಂತರಾತ್ಮನಾದ ಪರ ಮಾತ್ಮನನ್ನುದ್ದೇಶಿಸಿ ಅನುಷ್ಠಿಸಲ್ಪಟ್ಟರೇನೆ ಆಇಂದ್ರಾದಿಗಳಂ ಕು ರಿತು ಮಾಡಲ್ಪಟ್ಟದ್ದಾಗುವುದೆಂಬುವುದೆ. ಸರ್ವದೇವತಾ ಶರೀರಿಯಾಗಿ ರುವುದರಿಂದ ಆಯಾ ದೇವತಾ ಶಬ್ದಗಳಿಗೆ ಪರಮಾತ್ಮನು ವಾಚ್ಯನಾ ಗಿರುವನು. ಆದುದರಿಂದೆ ಸರ್ವ ಯಜ್ಞಗಳಿಗೂ ಆ ಪರಮಾತ್ಮನೆ ಸಾ ಕ್ಷಾದಾರಾಧ್ಯ ನೆಂಬದಾಗಿ ಹೇಳುವ ವೇದಾಂತವಾಕ್ಯ ತಾತ್ಪರ್ಯವನ್ನ ನುಸರಿಸದೇ ಆರಾಧಿಸುತ್ತಾರೆಂದರ್ಥವು. ... ... ॥೨೩॥

ಶ್ಲೋ॥ ಅಹಂಹಿಸರ್ವಯಜ್ಞಾನಾಂಭೋಕ್ತಾಚಪ್ರಭು
ರೇವಚ। ನತುಮಾಮಭಿಜಾನಂತಿತತ್ತ್ವೇನಾತಶ್ಚ್ಯವಂ
ತಿ ತೇ॥ ... ... ॥೨೪॥

ಪ॥ ಅಹಂ-ಹಿ-ಸರ್ವ ಯಜ್ಞಾನಾಂ-ಭೋಕ್ತಾ-ಚ-ಪ್ರಭುಃ-ಏವ-ಚ | ನ-ತು-ಮಾಂ-ಅಭಿಜಾನಂತಿ-ತತ್ತ್ವೇನ-ಅತಃ-ಚ್ಯವಂತಿ-ತೆ ||

ಅ॥ ಸರ್ವಯಜ್ಞಾನಾಂ ಭೋಕ್ತಾಚ-ಸಕಲ ಯಜ್ಞಗಳನ್ನು ಭುಜಿಸುವಂತವ ನೂ, ಪ್ರಭುಶ್ಚ-ಫಲವನ್ನು ಕೊಡುವಂತವನೂ, ಅಹಮೇವಹಿ-ನಾನೇಯಲ್ಲವೆ. ಮಾಂ-ನನ್ನನ್ನು, ತತ್ತ್ವೇನ ನಾಭಿಜಾನಂತಿ-ಯಥಾವತ್ತಾಗಿ ತಿಳಿಯಲಾರರು. ಅತಸ್ತುತೇಚ್ಯ ವಂತಿ-ಆದುದರಿಂದಲ್ಲವೆ ಅವರು ಜಾರು ವಂತವರಾಗುತ್ತಾರೆ. ... ॥೨೪॥

(ರಾ ॥ ಭಾ॥ ) ಆದುದರಿಂದ ತ್ರೈವಿದ್ಯರು " ಕರ್ಮಗಳೆಲ್ಲವೂ ಇಂದ್ರಾದಿಗಳಿಗಂತ ರಾತ್ಮನಾದ ಪರಮ ಪುರುಷನಿಗೆ ಆರಾಧನ ರೂಪ

ಗಳಾಗಿರುವವು. ಆರಾಧ್ಯನಾಗಿರುವಂತವನೂ ಆ ಪರಪುರುಷನೆ,, ಎಂ ಬುವುದಾಗಿ ಅರಿಯಲಾರರು. ಆದುದರಿಂದ ಅವರು ವಿತವಾದ ಫಲಕ್ಕೆ ಭಾಗಿಗಳಾಗಿ ಜಾರುವಂತಾ ಸ್ವಭಾವ ಮುಳ್ಳವರಾಗುತ್ತಾರೆನ್ನುತ್ತಾರೆ. ಸರ್ವಯಜ್ಞಾನಾಂ-ಸಮಸ್ತ ಯಜ್ಞಗಳಿಗೂ,ಭೋಕ್ತಾಚ-ಹೋಮಮಾ ಡಲ್ಪಟ್ಟ ಚರುಪುರೊಡಾಶ ಪಶ್ವಾದಿಹವ್ಯವನ್ನು ಭುಜಿಸುವಂತವನೂ, ಪ್ರಭುಶ್ಚ - ಫಲಪ್ರದನೂ, ಅಹಮೇವ ಹಿ -ನಾನೇ ಯಲ್ಲವೆ,ತು-ಮತ್ತೇನೆಂದರೆ ! ತೇ-ಆ ವೇದಾಂತ ವ್ಯುತ್ಪತ್ತಿ ಶೂನ್ಯರಾದ ಕರ್ಮಿಗಳು, ಮಾಂ-ನನ್ನನ್ನು, ತತ್ವೇನ-ಯಥಾ ವಸ್ಥಿತ ಸ್ವರೂಪದೊಡನೆ, ನಾಭಿಜಾನಂತಿ- ತಿಳಿಯುವುದಿಲ್ಲವು. ಅತಃ-ಆದುದರಿಂದ, ಚ್ಯವಂತಿ-ಜಾರುವಂತಹ ಸ್ವಭಾವ ಮುಳ್ಳವರಾಗುತ್ತಾರೆ. ಅಲ್ಪಾಸ್ಥಿರ ಫಲಭಾಗಿಗಳಾಗಿ ಕರ್ಮಕ್ಷಯ ಮೂಲಕವಾದ ಭೋಗನಿವೃತ್ತಿಯಿಂದ ಪುನಶ್ಚ ಈ ಕರ್ಮಭೂಮಿಯಲ್ಲಿಯೇ ಬಂದು ಸೇರುತ್ತಾರೆಂದು ಭಾವವು. ॥೨೪॥

(ಗೀ॥ ವಿ॥) ತ್ರೈವಿದ್ಯರಿಂದ ಅನುಷ್ಠಿಸಲ್ಪಡುವ ಯಾಗಾದಿ ಕರ್ಮಗಳಿಗೆ ಪರಮಾತ್ಮನ ಭೋಕ್ತಾಆದರೆ ಅಂತಾತ್ರೈವಿದ್ಯರಿಂದ ಮಾಡಲ್ಪಡುವ ಯಾಗಾದಿಗಳಿಗೆ ಅವಿಧಿ ಪೂರ್ವಕತ್ವವು ಹೇಗೆ ? ಎಂದರೆ ಅದಕ್ಕೆ ಸಮಾಧಾನವನ್ನು ಈ ಶ್ಲೋಕದಿಂದ ಹೇಳುತ್ತಾನೆ. ಸರ್ವ ಯಜ್ಞಗಳಿಗೆ ಆಯಾ ದೇವತಾಂತರ್ಯಾಮಿ ರೂಪದಿಂದ ನಾನೆಭೋಕ್ತಾ ಆಗಿರುವೆನು. ಆ ಪ್ರಕಾರವಾಗಿ ಫಲಪ್ರದನೂ ನಾನೇ ಯಲ್ಲವೆ. ಈ ಪ್ರಕಾರವಾಗಿರುವ ನನ್ನನ್ನು ಸರ್ವೋತ್ತಮತ್ವದಿಂದ ತಿಳಿದಂತವರಾದರೂ ಬ್ರಹ್ಮರುದ್ರಾದಿ ದೇವತೆಗಳಿಗೆ ಪರಮಾತ್ಮ ಸೇವಕತ್ವಾದಿ ರೂಪಯಾಥಾರ್ಥ್ಯವನ್ನು ಆತ್ರೈವಿದ್ಯರು ಚೆನ್ನಾಗಿ ತಿಳಿಯಲಾರರು. ಆದುದರಿಂದ ಪುನರಾವೃತ್ತಿಯನ್ನು ಹೊಂದುತ್ತಾರೆ. ಸರ್ವಯಜ್ಞಗಳಿಗೂ ಪರಮಾತ್ಮನೇ ಭೋಕ್ತಾ ಆದರೂ ಯಾವ ಭಾಗವತರು ಸಮೀಚೀನವಾಗಿ ಪರಮಾತ್ಮನ ಸ್ವರೂಪವನ್ನು ತಿಳಿದು ಪೂಜಿಸುತ್ತಾರೋ, ಅವರೆ ವಿಧಿಪೂರ್ವಕವಾಗಿ ಯಾಗವಂ ಮಾಡಿದವರಾಗುತ್ತಾರೆ. ಅಂತವರಿಗೇನೇ ಮೋಕ್ಷಪ್ರಾಪ್ತಿಯೂ ಆಗುವುದು. ಪರಮಾತ್ಮ ಸ್ವರೂಪವಂ ತಿಳಿಯದೆ ಯಾವತ್ರೈವಿದ್ಯರು ಯಜಿಸುತ್ತಾರೆಯೊ ಅವರು ಅವಿ

ಧಿಪೂರ್ವಕವಾಗಿ ಮಾಡುತ್ತಾರಾದುದರಿಂದ ಅದಕ್ಕೆ ಫಲತ್ವೇನ ಪುನ ರಾವೃತ್ತಿಯನ್ನು ಹೊಂದುತ್ತಾರೆಂದು ಭಾವವು. ॥೨೪॥

ಶ್ಲೋ॥ ಯಾಂತಿದೇವವ್ರತಾದೇವಾನ್ಪಿತೄನ್ಯಾಂ
ತಿಪಿತೃವ್ರತಾಃ। ಭೂತಾನಿಯಾಂತಿಭೂತೇಜ್ಯಾಯಾಂ
ತಿಮದ್ಯಾಜಿನೋಽಪಿಮಾಂ॥ ... ॥೨೫॥

ಪ॥ ಯಾಂತಿ-ದೇವವ್ರತಾಃ-ದೇವಾನ್- ಪಿತೄನ್-ಯಾಂತಿ - ಪಿತೃವ್ರತಾಃ। ಭೂತಾನಿ-ಯಾಂತಿ-ಭೂತೇಜ್ಯಾಃ-ಯಾಂತಿ-ಮದ್ಯಾಜಿನಃ-ಅಪಿ-ಮಾಂ ॥

ಅ॥ ದೇವವ್ರತಾಃ-ದೇವತೋದ್ದೇಶ್ಯದಿಂದವ್ರತಾನುಷ್ಠಾನಗಳಂ ಮಾಡತಕ್ಕವರು, ದೇವಾನ್ಯಾಂತಿ - ದೇವತೆಗಳನ್ನು ಹೊಂದುತ್ತಾರೆ. ಪಿತೄನ್ಯಾಂತಿ ಪಿತೃವ್ರತಾಃ-ಪಿತೃಗಳನ್ನುದ್ದೇಶಿಸಿ ವ್ರತಾನುಷ್ಠಾನಗಳಂ ಮಾಡತಕ್ಕವರು ಪಿತೃದೇವತೆಗಳನ್ನು ಹೊಂದುತ್ತಾರೆ. ಭೂತೇಜ್ಯಾಭೂತಾನಿ ಯಾಂತಿ-ವಿನಾಯಕಾದಿ ಭೂತಗಳನ್ನಾರಾಧಿಸುವಂತವರು ಭೂತಗಳನ್ನು ಹೊಂದುವರು. ಮದ್ಯಾಜಿನೋಪಿ- ನನ್ನನ್ನುಪೂಜಿವಂತವರೂ, (೪೧) ನನ್ನನ್ನಾರಾಧಿಸುವಂತಾ ವೈಷ್ಣವರೂ, ಮಾಂ-ನನ್ನನ್ನು, (ಶ್ರೀ) ನಾಶರಹಿತವಾಗಿರುವ ಪರಮಾತ್ಮ ಸ್ವರೂಪನಾದ ನಾರಾಯಣನಾದ ನನ್ನನ್ನು, ಯಾಂತಿ-ಹೊಂದುತ್ತಾರೆ. ... ... ... ॥೨೫॥

(ರಾ॥ ಭಾ॥) ಅಹೊ ಇದೇನು ಆಶ್ಚರ್ಯವು! ಎಲ್ಲರು ಕರ್ಮವಂ ಮಾಡುತಲಿರುವಲ್ಲಿಯೂ ಅದರಲ್ಲಿರುವ ಸಂಕಲ್ಪ ಮಾತ್ರಭೇದದಿಂದ ಕೆಲವರು ಅಲ್ಪಫಲವಂ ಹೊಂದಿ ಜಾರಿಬೀಳುವಂಥಾ ಸ್ವಭಾವವುಳ್ಳವರಾಗುತ್ತಾರೆ, ಕೆಲವರು ಅನವಧಿಕಾತಿಶಯಾನಂದನಾದ ಪರಮಪುರುಷನ ಪ್ರಾಪ್ತಿರೂಪ ಮೋಕ್ಷಫಲ ಭಾಗಿಗಳಾಗಿ ಪುನರಾವೃತ್ತಿ ಶೂನ್ಯರಾಗಿಯೂ ಆಗುತ್ತಾರೆ ನ್ನುತ್ತಾನೆ. ಈ ಶ್ಲೋಕದಲ್ಲಿರುವ ವ್ರತಶಬ್ದವು ಸಂಕಲ್ಪವಾಚಿಯಾಗಿರುವುದು. ದೇವವ್ರತಾಃ- ದರ್ಶಪೂರ್ಣಮಾಸಾದಿ ಕರ್ಮಗಳಿಂದ ಇಂದ್ರಾದಿಗಳ ನ್ನಾರಾಧಿಸುವೆವೆಂಬದಾಗಿ ಇಂದ್ರಾದಿ ದೇವಯಜನ ಸಂಕಲ್ಪವುಳ್ಳವರು, ದೇವಾನ್ಯಾಂತಿ-ಇಂದ್ರಾದಿ ದೇವತೆಗಳನ್ನು ಹೊಂದುತ್ತಾರೆ, ಪಿತೃವ್ರತಾಃ ಪಿತೄನ್ಯಾಂತಿ-ಪಿತೃ ಯಜ್ಞಾದಿಗಳಿಂದ ಪಿತೃದೇವತೆಗಳ ನ್ನಾರಾಧಿಸುವೆವೆಂಬ ಪಿತೃಯಜನ ಸಂಕಲ್ಪವುಳ್ಳವರು ಪಿತೃದೇವತೆಗಳನ್ನುಹೊಂದುತ್ತಾರೆ,ಭೂ

ತೇಜ್ಯಾಭೂತಾನಿಯಾಂತಿ- ಯಕ್ಷ-ಕ್ಷಃಪಿಶಾಚಾದಿ ಭೂತಗಳನ್ನಾರಾಧಿಸುವೆವೆಂಬ ಭೂತಯಜನ ಸಂಕಲ್ಪವುಳ್ಳವರು ಯಕ್ಷರಕ್ಷಃಪಿಶಾಚಾದಿಗಳನ್ನು ಹೊಂದುತ್ತಾರೆ. ಮದ್ಯಾಜಿನೋಪಿ- ಆಯಜ್ಞಗಳಿಂದಲೆ ದೇವಪಿತೃ ಭೂತಶರೀರಕನಾದ ಪರಮಾತ್ಮನಾಗಿರುವ ಭಗವಂತನಾದ ವಾಸುದೇವನನ್ನು ಆರಾಧಿಸುವೆವೆಂಬದಾಗಿ ಸಂಕಲ್ಪಿಸಿ ಆರೀತಿಯಾಗಿ ದೇವತಾ ಶರೀರಕನಾದ ನನ್ನನ್ನು ಯಾರಾದರೆ ಆರಾಧಿಸುತ್ತಾರೊ, ಅವರು, ಮಾಂಯಾಂತಿ- ನಮ್ಮನ್ನು ಹೊಂದುತ್ತಾರೆ. ದೇವಯಾಜಿಗಳು ದೇವತೆಗಳನ್ನು ಹೊಂದಿ ಅವರೊಡನೆ ಪರಿಮಿತ ಭೋಗಗಳನ್ನನುಭವಿಸಿ ಆ ದೇವತೆಗಳ ವಿನಾಶಕಾಲದಲ್ಲಿ ಅವರೊಡನೆ ಕೂಡ ತಾವುಗಳು ನಶಿಸಿ ಹೋಗುತ್ತಾರೆ. ನಮ್ಮನ್ನಾರಾಧಿಸುವಂತವರೊ ಎಂದರೆ ಸರ್ವಜ್ಞನಾಗಿಯೂ ಸತ್ಯಸಂಕಲ್ಪನಾಗಿಯೂ ಅನವಧಿಕಾತಿಶಯಾಸಂಖ್ಯೇಯ ಕಲ್ಯಾಣಗುಣ ಗಣ ಮಹೋದಧಿ ಯಾಗಿಯೂ ಅನವಧಿಕಾತಿಶಯಾನಂದ ರಾಗಿಯೂ, ಇರುವ ನಮ್ಮನ್ನು ಹೊಂದಿ ಪುನರಾವೃತ್ತಿಯಂಹೊಂದುವುದಿಲ್ಲವೆಂದು ಭಾವವು. ... ॥೨೫॥

ಶ್ಲೋ॥ ಪತ್ರಂಪುಷ್ಪಂಫಲಂತೋಯಂಯೋಮೇಭಕ್ತ್ಯಾ
ಪ್ರಯಚ್ಛತಿ । ತದಹಂಭಕ್ತ್ಯುಪಹೃತಮಶ್ನಾಮಿಪ್ರ
ಯತಾತ್ಮನಃ ॥ * ॥೨೬॥

ಪ॥ ಪತ್ರಂ- ಪುಷ್ಪಂ- ಫಲಂ- ತೋಯಂ- ಯಃ- ಮೇ - ಭಕ್ತ್ಯಾ-ಪ್ರಯಚ್ಛತಿ। ತತ್- ಅಹಂ- ಭಕ್ತ್ಯುಪಹೃತಂ- ಅಶ್ನಾಮಿ- ಪ್ರಯತಾತ್ಮನಃ॥

ಅ॥ ಯಃ- ಯಾವನು, ಮೇ- ನನಿಗೋಸ್ಕರ, ಭಕ್ತ್ಯಾ - ಭಕ್ತಿಯಿಂದ, ಪತ್ರಂ- ತುಲಸೀಮೊದಲಾದ ಪತ್ರವನ್ನಾದರೂ, ಪುಷ್ಪವನ್ನಾದರೂ, ಫಲಂ-ಫಲವನ್ನಾದರೂ, ತೋಯಂ- ನೀರನ್ನಾದರೂ, ಪ್ರಯಚ್ಛತಿ- ಕೊಡುತ್ತಾನೆಯೊ, ಪ್ರಯತಾತ್ಮನಃ- ಶುದ್ಧಮನಸ್ಕನಾದ ಆಭಕ್ತನ, ಭಕ್ತ್ಯುಪಹೃತಂ- ಭಕ್ತಿಯಿಂದ ನಮಗೆ ಕೊಡಲ್ಪಟ್ಟ, ತತ್- ಅದನ್ನು, (ಆಪತ್ರಪುಷ್ಪಾದಿಗಳನ್ನು) ಅಹಂ - ನಾನು, ಅಶ್ನಾಮಿ - ಸ್ವೀಕರಿಸುವೆನು. ... ... ॥೨೬॥

(ರಾ॥ ಭಾ) ನಮ್ಮನ್ನಾರಾಧಿಸುವಂತವರಿಗೆ ಇದೂ ಒಂದು ವಿಶೇಷವಿರುವುದು ಎನ್ನುತ್ತಾನೆ. ಯಾವನಾದರೆ ಸರ್ವ ಸುಲಭವಾದ ತುಲಸೀದಳವನ್ನಾದರೂ ಪುಷ್ಪವನ್ನಾದರೂ ಫಲವನ್ನಾದರೂ ಪತ್ರ

ಪ್ರೂತವಾಗಿರುವ ನಿರ್ಮಲವಾದ ತೀರ್ಥೋದಕವನ್ನಾದರೂ ನನಿಗೋಸ್ಕರ ಅತ್ಯರ್ಥವುತ್ಪ್ರಿಯತೆಯಿಂದ (ಅಪತ್ರಾದಿ ಸಮರ್ಪಣವಂ ಮಾಡದಿದ್ದರೆ ಆತ್ಮವು ಶಿಥಿಲೀಭಾವವನ್ನು ಹೊಂದುವುದರಿಂದ) ಆಪತ್ರಾದಿ ಸಮರ್ಪಣವನ್ನೆ ಪ್ರಯೋಜನವಾಗಿ ಉಳ್ಳವನಾಗುತ ಸಮರ್ಪಣಮಾಡುತ್ತಾನೆಯೊ ಆ ಪತ್ರಾದಿ ಸಮರ್ಪಣವನ್ನೇ ಸ್ವಯಂ ಪ್ರಯೋಜನವಾಗಿ ಮಾಡುವಿಕೆಯೆಂಬ ಶುದ್ಧವಾದ ಮನಸ್ಸುಳ್ಳವನ ಅಂತಹ ನಿರತಿಶಯಭಕ್ತಿಯಿಂದ ಸಮರ್ಪಿತವಾಗಿರುವ ಆಪತ್ರಾದಿಕವನ್ನು ಸರ್ವೇಶ್ವರನಾಗಿಯೂ ನಿಖಿಲ ಜಗದುತ್ಪತ್ತ್ಯಾದಿಗಳನ್ನೆ ಲೀಲೆಯಾಗಿ ವುಳ್ಳವನಾಗಿಯೂ ಅವಾಪ್ತ ಸಮಸ್ತ ಕಾಮನಾಗಿಯೂ ಸತ್ಯ ಸಂಕಲ್ಪನಾಗಿಯೂಅನವಧಿಕಾತಿ ಶಯಾಸಂಖ್ಯೇಯ ಕಲ್ಯಾಣಗುಣಗಣನಾಗಿಯೂ ಸ್ವಾಭಾವಿಕಾ ನವಧಿಕಾತಿ ಶಯಾನಂದ ಸ್ವಭಾವದಲ್ಲಿರುವ ನಾನು ಮನೋರಥಕ್ಕೆ ಸುದೂರವಾಗಿರುವ ಪ್ರಿಯವಾದ ವಸ್ತುವನ್ನು ಹೊಂದಿದವನಂತೆ ಸ್ವೀಕರಿಸುತ್ತೇನೆ. ಈಅರ್ಥವು ಮೋಕ್ಷಧರ್ಮಪರ್ವದಲ್ಲಿಯೂ "ಯಾಃಕ್ರಿಯಾಸ್ಸಂಪ್ರಯುಕ್ತಾಸ್ಸ್ಯುರೇಕಾಂತಗತಬುದ್ಧಿಭಿಃ । ತಾಸ್ಸರ್ವಾಶ್ಶಿರಸಾದೇವಃ ಪ್ರತಿಗೃಹ್ಣಾತಿವೈಸ್ವಯಂ„ಎಂಬದಾಗಿ ಹೇಳಲ್ಪಟ್ಟಿರುತ್ತದೆ. ... ... ॥೨೬॥

ಶ್ಲೋ॥ ಯತ್ಕರೋಷಿಯದಶ್ನಾಸಿಯಜ್ಜುಹೋಷಿದದಾಸಿ
ಯತ್ । ಯತ್ತಪಸ್ಯಸಿಕೌಂತೇಯತತ್ಕುರುಷ್ವಮದ
ರ್ಪಣಂ ॥ ... ... ॥೨೭॥

ಪ॥ ಯತ್- ಕರೋಷಿ- ಯತ್- ಅಶ್ನಾಸಿ - ಯತ್ - ಜುಹೋಷಿ- ದದಾಸಿ- ಯತ್ । ಯತ್- ತಪಸ್ಯಸಿ- ಕೌಂತೇಯ- ತತ್- ಕುರುಷ್ವ- ಮದರ್ಪಣಂ॥

ಅ॥ ಹೇಕೌಂತೇಯ- ಎಲೈ ಕುಂತೀಪುತ್ರನಾದ ಅರ್ಜುನನೆ, ಯತ್ - ಯಾವದನ್ನು, ಕರೋಷಿ- ಮಾಡುತ್ತೀಯೊ, ಯತ್- ಯಾವದನ್ನು, ಅಶ್ನಾಸಿ- ತಿನ್ನುತ್ತೀಯೊ, ಯತ್- ಯಾವದನ್ನು, ಜುಹೋಷಿ- ಹೋಮಮಾಡುತ್ತೀಯೊ, ಯತ್- ಯಾವದನ್ನು, ದದಾಸಿ- ದಾನಮಾಡುತ್ತೀಯೊ, ಯತ್ತಪಸ್ಯಸಿ- ಯಾವತಪಸ್ಸನ್ನು ಮಾಡುತ್ತೀಯೊ, ತತ್ ಅದನ್ನು, ಮದರ್ಪಣಂಕುರುಷ್ವ- ನನಿಗರ್ಪಣವಂ ಮಾಡು॥೨೭॥

(ರಾ॥ ಭಾ॥) ಜ್ಞಾನಿಗಳಾದ ಮಹಾತ್ಮರ ವಾಙ್ಮನಸೊ ಗೋಚರವಾದ ಈವಿಶೇಷವು ಯಾವಕಾರಣದಿಂದಈರೀತಿಯಾಗಿರುವುದೋ ಆದುದ

ರಿಂದ ನೀನು ಜ್ಞಾನಿಯಾಗಿ ಪೂರ್ವೋಕ್ತ ಲಕ್ಷಣವಾದ ಭಕ್ತಿ ಭರ ದಿಂದಆತ್ಮಾತ್ಮೀಯಗಳನ್ನು ನಮ್ಮಲ್ಲಿ ಸಮರ್ಪಿಸಿಸರ್ವಕಾಲದಲ್ಲಿಯೂ ಕೀರ್ತನಾರ್ಚನ ಪ್ರಣಾಮಾದಿಕವನ್ನು ಮಾಡುವಂತವನಾಗಿ ಲೌಕಿ ಕವಾಗಿಯೂ ವೈದಿಕವಾದ ನಿತ್ಯ ನೈಮಿತ್ತಿಕ ರೂಪವಾಗಿಯೂ ಇ ರುವ ಕರ್ಮಗಳನ್ನು ಈರೀತಿಯಾಗಿ ಮಾಡೆಂದುಉಪದೇಶಿಸುತ್ತಾನೆ. ದೇಹಯಾತ್ರಾರ್ಥವಾಗಿ ಯಾವ ಲೌಕಿಕ ಕರ್ಮಗಳನ್ನು ಮಾಡು ತ್ತೀಯೊ, ದೇಹಧಾರಣಾರ್ಥವಾಗಿ ಯಾವದನ್ನು ಭುಜಿಸುತ್ತೀಯೊ, ವೈದಿಕವಾದ ಅಗ್ನಿಹೋತ್ರಾದಿ ಯಾಗಿರುವ ಯಾವಔಪಾಸನಾದಿ ಕರ್ಮವನ್ನು ಮಾಡುತ್ತೀಯೊ, ಸತ್ಪಾತ್ರದಲ್ಲಿ ಯಾವದಾನವನ್ನು ಮಾಡುತ್ತೀಯೊ, ಅನಶನಾದಿ ರೂಪವಾದ ಯಾವತಪಸ್ಸನ್ನುಮಾಡು ತ್ತೀಯೊ, ಎಲೈ ಅರ್ಜುನನೆ ಆಸಮಸ್ತವನ್ನೂ ನನ್ನಲ್ಲಿ ಸಮರ್ಪಣ ಮುಳ್ಳದ್ದನ್ನಾಗಿಮಾಡು. ಯಾಗ ದಾನಾದಿಗಳಲ್ಲಿ ಆರಾಧ್ಯತ್ವೇನತೋ ರುತಲಿರುವ ದೇವತೆಗಳೂ ಕರ್ತಾವಾಗಿಯೂ ಭೋಕ್ತಾವಾಗಿಯೂಇ ರುವ ನೀನೂ ನನಿಗೆ ಶೇಷಭೂತರಾಗಿರುವುದರಿಂದಲೂ, ನನ್ನ ಸಂಕ ಲ್ಪಾಧೀನಗಳಾದ 'ಸ್ವರೂಪವನ್ನೂ ಅದರ ಕಾಲಾನ್ತರಾನು ವೃತ್ತಿರೂ ಪವಾದ ಸ್ಥಿತಿಯನ್ನೂ ಪ್ರವೃತ್ತಿ ನಿವೃತ್ತಿ ರೂಪಗಳಾದ ಸರ್ವವ್ಯಾ ಪಾರಗಳನ್ನೂ, ಉಳ್ಳವರಾದುದರಿಂದಲೂ, ಪರಮ ಶೇಷಿಯಾಗಿಯೂ ಪರಮಕರ್ತಾಆಗಿಯೂ ಇರುವ ನಮ್ಮಲ್ಲಿ; ಕರ್ತಾಆಗಿಯೂ ಭೋಕ್ತಾ ಆಗಿಯೂ ಆರಾಧಕರಾಗಿಯೂ ಇರುವ ನಿಮ್ಮನ್ನೂ ಆರಾಧ್ಯವಾದ ದೇವತಾವರ್ಗವನ್ನೂ ಆರಾಧನವಾದ ಕ್ರಿಯಾಕಲಾಪವನ್ನೂ ಸಮ ರ್ಪಣೆಮಾಡುವಂತವನಾಗು. ನೀನು ನಮಗೆ ನಿತ್ಯ ಪರತಂತ್ರನಾಗಿ ನ ಮ್ಮಗಳ ಶೇಷತ್ವೈಕರಸವಾಗಿರುವಿಕೆಯನ್ನೂ ಆರಾಧ್ಯರಾದ ದೇವತೆ ಗಳೂ ನಮಗೆ ನಿತ್ಯ ಪರತಂತ್ರರಾಗಿ ಶೇಷಭೂತರಾಗಿರುವಿಕೆಯನ್ನೂ ಸಮಸ್ತ ಕರ್ಮಗಳೂ ನಮ್ಮಗಳಿಗೆ ಆರಾಧನವಾಗಿರುವಿಕೆ ಯನ್ನೂ ಅತ್ಯರ್ಥ ಪ್ರೀತಿಯುಕ್ತನಾಗಿ ಅನುಸಂಧಿಸೆಂದು ಭಾವವು. ॥೨೭॥

ಶ್ಲೋ॥ ಶುಭಾಶುಭಫಲೈರೇವಂ ಮೋಕ್ಷ್ಯಸೇ ಕರ್ಮಬಂಧ

ನ್ಯೈಃ । ಸನ್ನ್ಯಾಸಯೋಗಯುಕ್ತಾತ್ಮಾವಿಮುಕ್ತೋಮಾ
ಮುಪೈಷ್ಯಸಿ ॥ ... ... ... ॥೨೮॥

ಪ॥ ಶುಭಾಶುಭಫಲೈಃ-ಏವಂ-ಮೋಕ್ಷ್ಯಸೆ-ಕರ್ಮಬಂಧನೈಃ । ಸನ್ನ್ಯಾಸಯೋಗಯು ಕ್ತಾತ್ಮಾ-ವಿಮುಕ್ತಃ-ಮಾಂ-ಉಪೈಷ್ಯಸಿ ॥

ಅ॥ ಶುಭಾಶುಭಫಲೈಃ-ಶುಭಾಶುಭ ಫಲಗಳಿಗೆ ಹೇತುವಾದ, ಕರ್ಮಬಂಧನೈಃ-ಕರ್ಮಬಂ ಧಗಳಿಂದ, ಏವಂ-ಈ ಪ್ರಕಾರವಾಗಿ, ಸನ್ನ್ಯಾಸ ಯೋಗ ಯುಕ್ತಾತ್ಮಾ-ಸಮಸ್ತವನ್ನೂ ಭಗವತ್ಸಮರ್ಪಣ ಮಾಡುವುದೆಂಬ ಸನ್ನ್ಯಾಸಾನುಸಂಧಾನದೊಡನೆ ಕೂಡಿದ ಮನಸ್ಸುಳ್ಳ ವನಾಗಿ, ಮೋಕ್ಷ್ಯಸೇ-ಬಿಡಲ್ಪಡುತ್ತೀ, ವಿಮುಕ್ತಃ-ಆರೀತಿಯಾಗಿ ಬಿಡಲ್ಪಟ್ಟ ನೀನು,ಮಾ ಮುಪೈಷ್ಯಸಿ-ನನ್ನನ್ನು ಹೊಂದುತ್ತೀ, (ಶಂ) ಜೀವನ್ಮುಕ್ತನಾಗಿದ್ದುಕೊಂಡು ದೇಹಪಾ ತಾನಂತರದಲ್ಲಿ ನನ್ನ ಸ್ವರೂಪಸಾಗುತ್ತೀ. ... ... ॥೨೮॥

(ರಾ॥ ಭಾ॥) ಈ ಪ್ರಕಾರವಾಗಿ ಸನ್ಯಾಸವೆಂಬ ಅನುಸಂಧಾನದೊ ಡನೆ ಕೂಡಿದ ಮನಸುಳ್ಳವನಾಗಿ ನಿನ್ನ ಸ್ವರೂಪವನ್ನು ಮಚ್ಛೇಷತ್ವ ಮನ್ನಿಯಾನ್ಯತ್ಯೈಕ ರಸವಾಗಿಯೂ ಸರ್ವ ಕರ್ಮಗಳನ್ನೂ ನಮ್ಮಆ ರಾಧನವನ್ನಾಗಿಯೂ ಅನುಸಂಧಿಸುವಂತವನಾಗಿ ಲೌಕಿಕ ವೈದಿಕ ಕ ರ್ಮಗಳನ್ನು ಮಾಡುತಲಿರುವ ನೀನು ಸುಖದುಃಖ ಫಲಗಳಾಗಿರುವ ಅ ನಂತಗಳಾದ ಪ್ರಾಚೀನಗಳಾಗಿರುವ ಕರ್ಮಗಳೆಂಬ ಬಂಧನಗಳಿಂದ ಬಿಡಲ್ಪಡುತ್ತಿ ಆಪ್ರಕಾರವಾಗಿ ಕರ್ಮಬಂಧಗಳಿಂದ ಬಿಡಲ್ಪಟ್ಟಮೇಲೆ ನ ಮ್ಮನ್ನು ಹೊಂದುತ್ತೀ. ... ... ... ॥೨೮॥

ಶ್ಲೋ॥ ಸಮೋಽಹಂಸರ್ವಭೂತೇಷುನಮೇದ್ವೇಷ್ಯೋ
ಸ್ತಿನಪ್ರಿಯಃ ।ಯೇಭಜಂತಿತುಮಾಂಭಕ್ತ್ಯಾಮಯಿತೇ
ತೇಷುಚಾಪ್ಯಹಂ ॥ ... ... ॥೨೯॥

ಪ॥ ಸಮಃ-ಅಹಂ-ಸರ್ವಭೂತೇಷು-ನ-ಮೇ-ದ್ವೇಷ್ಯಃ- ಅಸ್ತಿ-ನ-ಪ್ರಿಯಃ ।ಯೇ- ಭಜಂತಿ-ತು-ಮಾಂ-ಭಕ್ತ್ಯಾ-ಮಯಿ-ತೇ-ತೇಷು-ಚ-ಅಪಿ-ಅಹಂ ॥

ಅ॥ ಅಹಂ-ನಾನು, ಸರ್ವಭೂತೇಷು-ಸಕಲ ಪ್ರಾಣಿಗಳಲ್ಲಿಯೂ, ಸಮಃ-ಸಮವಾ ಗಿರುವೆನು. ಮೇ-ನನಿಗೆ, ದ್ವೇಷ್ಯಃ-ಶತ್ರುವು, ನ-ಇಲ್ಲವು,ಪ್ರಿಯಶ್ಚ-ಪ್ರಿಯನಾದವನೂ, ನ-ಇಲ್ಲವು. ಯೇತು-ಯಾರಾದರೆ, ಮಾಂ-ನನ್ನನ್ನು, ಭಕ್ತ್ಯಾ-ಭಕ್ತಿಯಿಂದ, ಭಜಂತಿ-ಭಜ ನೆಮಾಡುತ್ತಾರೊ, ತೇ-ಅವರು, ಮಯಿ-ನನ್ನಲ್ಲಿ, (ವರ್ತಂತೆ-ಇರುತ್ತಾರೆ) ಅಹಮಪಿ- ನಾನೂ, ತೇಷು (ವರ್ತೇ) ಅವರಲ್ಲಿರುವೆನು. ... ... ॥೨೯॥

(ಶಂ॥ ಭಾ॥ ಶ್ರೀ) ಸರ್ವಪ್ರಾಣಿಗಳಿಗೂ ಸಮವಾಗಿರುವ ಪರಮಾತ್ಮನು ತನ್ನ ಭಕ್ತರಿಗೆ ಮಾತ್ರವೇ ಅನುಗ್ರಹ ಮಾಡುವುದಾದರೆ ಭಗವಂತನು ಕೂಡ ರಾಗದ್ವೇಷವುಳ್ಳವನಾಗುತ್ತಾನೆಯೊ ? ಎಂಬ ಶಂಕಾಸಮಾಧಾನಾರ್ಥವಾಗಿ ಈ ಶ್ಲೋಕವು ಪ್ರವೃತ್ತವಾಯಿತು. ನಾನು ಸಮಸ್ತಭೂತಗಳಲ್ಲಿಯೂ ಸಮಬುದ್ಧಿಯುಳ್ಳವನಲ್ಲದೆ ಒಬ್ಬನಲ್ಲಿ ದ್ವೇಷವೂ ಒಬ್ಬನಲ್ಲಿ ಪ್ರೇಮೆಯೂ ನನಗಿಲ್ಲವು. ಹೇಗಾದರೆ ಅಗ್ನಿಯು ಸಮೀಪವರ್ತಿಗಳಾದವರ ಶೀತವನ್ನು ಪರಿಹರಿಸುವುದೋ ದೂರಸ್ಥರಿಗೆ ಶೀತವನ್ನು ಹೋಗಲಾಡಿಸಲಾರದೊ ಅದರಂತೆ ನಾನೂ ಭಕ್ತರನ್ನನುಗ್ರಹಿಸುವೆನೆಂತಲೂ ಇತರರನ್ನುಪೇಕ್ಷೆ ಮಾಡುವೆನೆಂತಲೂ ತಿಳಿಯಬೇಕು. ಆದುದರಿಂದ ಯಾರಾದರೆ ವರ್ಣಾಶ್ರಮಾದಿ ಧರ್ಮಗಳಿಂದ ನನ್ನನ್ನು ಭಜನ ಮಾಡುತ್ತಾರೊ ಅಚಿಂತ್ಯಮಾಹಾತ್ಮ್ಯವುಳ್ಳ ಆ ಭಜನದಿಂದಲೆ ಅಂತವರು ಶುದ್ಧವಾದ ಬುದ್ಧಿಯುಳ್ಳವರಾಗಿ ನನ್ನ ಸಮೀಪದಲ್ಲಿರುವರು. (ನನ್ನ ಅಭಿವ್ಯಕ್ತಿಯುಂಟಾಗುವುದಕ್ಕೆ ಯೋಗ್ಯವಾದ ಮನಸ್ಸುಳ್ಳವರಾಗುವರೆಂದರ್ಥವು.) ಅವರ ಸಮೀಪದಲ್ಲಿ ನಾನೂ ಇರುವೆನು. ಎಂದರೆ ಅವರುಗಳನ್ನನುಗ್ರಹಿಸುತಲಿರುವೆನೆಂದರ್ಥವು. ಇದರಿಂದ ಇತರರಲ್ಲಿ ನನಗೆ ದ್ವೇಷವೂ ಇಲ್ಲವೆಂದರಿಯಬೇಕು. ॥೨೯॥

(ರಾ॥ ಭಾ॥) ಸರ್ವಭೂತೇಷು-ದೇವತಿರ್ಯಙ್ಮನುಷ್ಯಸ್ಥಾವರ ರೂಪಗಳಾಗಿಯೂ, ಜಾತಿಯಿಂದಲೂ, ಆಕಾರದಿಂದಲೂ, ಸ್ವಭಾವದಿಂದಲೂ, ಜ್ಞಾನದಿಂದಲೂ, ಅತ್ಯಂತವಾಗಿ ಉತ್ಕೃಷ್ಟಾಪಕೃಷ್ಟಗಳಾಗಿರುವ ಸರ್ವ ಪ್ರಾಣಿಗಳಲ್ಲಿಯೂ, ಸಮೋಹಂ-ಸಮಾಶ್ರಯಣೀಯನಾಗಲೂ ಸಮಾನನಾಗಿಯೇ ಇರುವೆನು. ಮೇ-ನನಗೆ, ದ್ವೇಷ್ಯೋನಾಸ್ತಿ-ಜಾತ್ಯಾದಿಗಳಿಂದನಿಕೃಷ್ಟನೆಂಬದಾಗಿ ನಮ್ಮನ್ನಾಶ್ರಯಿಸುವಂತವನು ನನಗೆ ದ್ವೇಷ್ಯನೂ ಇಲ್ಲವು. ಪ್ರಿಯೊನ ಜಾತ್ಯಾದಿಗಳಿಂದ ಅತ್ಯಂತೋತ್ಕೃಷ್ಟನೆಂಬದಾಗಿ ನಮ್ಮನ್ನಾಶ್ರಯಿಸತಕ್ಕವನು ಅಂತಹ ಜಾತ್ಯಾದಿ ವಿಶೇಷವಂ ಕಂಡು ನಮ್ಮಿಂದ ಪ್ರಿಯ ಪಡತಕ್ಕವನೂ ಇಲ್ಲವು. ಮತ್ತೇನೆಂದರೆ ! ಮಾಂ ಭಕ್ತ್ಯಾಯೇ ಭಜಂತಿ-ನನ್ನನ್ನು ಅತ್ಯರ್ಥವಾದ ಪ್ರಿಯತೆ(ಪ್ರೀತಿ)ಯಿಂದ ನಮ್ಮ ಭಕ್ತಿಯಂಬಿಟ್ಟು ಆತ್ಮಧಾರಣಪಂಪಾ

ಡಲಾರನಾದುದರಿಂದ ನಮ್ಮ ಭಕ್ತಿಯೆ ಪ್ರಯೋಜನವಾಗಿ ಯಾರಾದರೆ ಭಜಿಸುತ್ತಾರೊ ಅವರು ಜಾತ್ಯಾದಿಗಳಿಂದ ಉತ್ಕೃಷ್ಟರಾಗಿದ್ದರೂ ಅಪ ಕೃಷ್ಟ (ನೀಚ) ರಾಗಿದ್ದರೂ ಸಮವಯಸ್ಕರಾದ ಮಿತ್ರರಂತೆ ಸಮಾ ನಭೋಗ ವುಳ್ಳವರಾಗಿ ನಮ್ಮಲ್ಲಿಯೆ ವರ್ತಿಸುತಲಿರುವರು. ನಾನೂ ಅತ್ಯಂತೋತ್ಕೃಷ್ಟರಲ್ಲಿರುವಂತೆ ಅವರಲ್ಲಿರುವೆನು. ॥೨೯॥

(ಮ॥ ಗೀ॥ ವಿ॥) ಅವರವರುಗಳ ಭಕ್ತಿ ದ್ವೇಷಗಳಿಗೆ ತಕ್ಕಂತೆ ಫಲಪ್ರದನಾಗಿರುವುದರಿಂದ ನಾನು ಪಕ್ಷಪಾತಿ ಯಲ್ಲವು. ಅವರು ನ ನ್ನಲ್ಲಿರುವ ರೆಂದರೆ ಅವರು ನನ್ನ ಅಧೀನರಾಗಿರುತ್ತಾರೆಂದರ್ಥವು. ನಾನು ಅವರಲ್ಲಿರುವೆ ನೆಂದರೆ ಅವರುಗಳಿಗೆ ಇಷ್ಟನಾಗಿಯೂ ಪ್ರಿ ಯನಾಗಿಯೂ ನಾನಿರುವೆ ನೆಂದರ್ಥವು. ಅಥವಾ ಅಧೀನನಾಗಿಯೇ ಇರುವೆನೆಂದರಿಯಬೇಕು. ... ॥೨೯॥

ಶ್ಲೋ॥ ಅಪಿಚೇತ್ಸುದುರಾಚಾರೊ ಭಜತೇಮಾಮನನ್ಯ ಭಾಕ್ | ಸಾಧುರೇವಸಮಂತವ್ಯ ಸ್ಸಮ್ಯಗ್ವ್ಯವಹಿತೋ ಹಿಸಃ ॥ ... ॥೩೦॥

ಪ॥ ಅಪಿ- ಚೇತ್- ಸುದುರಾಚಾರಃ- ಭಜತೇ- ಮಾಂ- ಅನನ್ಯಭಾಕ್ । ಸಾಧುಃ- ಏವ- ಸಃ- ಮಂತವ್ಯಃ- ಸಮ್ಯಕ್- ವ್ಯವಹಿತಃ- ಹಿ- ಸಃ॥

ಅ॥ ಸುದುರಾಚಾರೋಪಿ- ಅತ್ಯಂತ ದುರಾಚಾರವುಳ್ಳವನಾದರು. ಅನನ್ಯಭಾಕ್- ದೇವತಾಂತರ ಭಕ್ತಿಶೂನ್ಯನಾಗಿ, ಮಾಂ- ನನ್ನನ್ನು, (ಶ್ರೀ) ನಾರಾಯಣನಾದನ ನ್ನನ್ನು, ಭಜತೇ ಚೇತ್- ಭಜನವಾಡುವಂತವನಾದರೆ, ಸಃ- ಅವನು, ಸಮ್ಯಕ್- ಸ ಮೀಚೀನವಾದ (ಶ್ರೀ)ಈಶ್ವರ ಭಜನದಿಂದಲೆ ನಾನುಕೃತಾರ್ಥ ನಾಗಬೇಕೆಂಬ ನಿಶ್ಚಯ ವುಳ್ಳವನಾದ, ವ್ಯವಹಿತೋಹಿ- ಮನೋನಿಶ್ಚಯವುಳ್ಳವನಾಗಿರುವನಲ್ಲವೆ. (ಶಂ) ಸಾ ಧುವಾದ ನಿಶ್ಚಯವುಳ್ಳವನು, ಸಃ- ಅವನು, ಸಾಧುರೇವ ಮಂತವ್ಯಃ (ಶಂ) ಸಾಧುವಾದ ವೃತ್ತವುಳ್ಳವನೆಂತಲೇ ಭಾವಿಸತಕ್ಕವನಾಗುತ್ತಾನೆ (ರಾ)ವೈಷ್ಣವಾಗ್ರೇಸರ ನೆಂತ ಲೇ ಭಾವಿಸತಕ್ಕವನು. (ಗೀ॥ ವಿ॥) ಸಜ್ಜನನೆಂತಲೇ ಭಾವಿಸಲ್ಪಡತಕ್ಕವನು. ॥೩೦॥

(ರಾ॥ಭಾ॥) ಆದರಲ್ಲಿಯೂ ವಿಶೇಷಗಳನ್ನು ಕೇಳು. ಆಯಾ ಜಾತಿ ವಿಶೇಷಗಳಲ್ಲಿಹುಟ್ಟಿದವರಿಗೆ ಯಾವ ಯಾವ ಸಮಾಚಾರಗಳು ಉಪಾದೇ ಯ ಗಳಾಗಿಯೂ ಪರಿಹರಣೀಯಗಳಾಗಿಯೂ ಇರುವುವೊ ಅವುಗಳಲ್ಲಿ

ತಪ್ಪಿತಸ್ಥನಾಗಿದ್ದರೂ ನನ್ನನ್ನು ಪಾ್ರಪ್ಯಾಂತರ ಶೂನ್ಯನಾಗಿ (ಎಂದರೆ ಭಜನಮಾತ್ರ ಪ್ರಯೋಜನವುಳ್ಳವನಾಗಿ) ಭಜನ ಮಾಡುವಂತವನಾದರೆ ಅಂತವನು ವೈಷ್ಣವಾಗ್ರೇಸರನೆಂತಲೇ ಬಹುಮಾನಮಾಡಲಿಕ್ಕೆ ಅರ್ಹನಾಗಿರುವನು. ಅದು ಹೇಗೆಂದರೆ? ಅಂತವನು ಸಮೀಚೀನವಾದ ವ್ಯವಸಾಯ ಮುಳ್ಳವನಾದುದರಿಂದಲ್ಲವೆ ಈರೀತಿಯಾಗಿ ಭಾವಿಸಲ್ಪಡತಕ್ಕವನಾಗುತ್ತಾನೆ. (ನಿಖಿಲ ಜಗದೇಕಕಾರಣನಾಗಿರುವ ಪರಬ್ರಹ್ಮಭೂತನಾದ ಪುರುಷೋತ್ತಮನಾಗಿರುವ ಭಗವನ್ನಾರಾಯಣನೆ ಸರ್ವಶೇಷಿಯಾದುದರಿಂದ ನನಿಗೆ ಸ್ವಾಮಿಯಾಗಿಯೂ, ನನಿಗೆ ಪತಿಯಾಗಿಯೂ ನನಿಗೆ ಗುರುವಾಗಿಯೂ ನನಿಗೆ ಹಿತವನ್ನಿಚ್ಛಿಸುವ ಸುಹೃತ್ತಾಗಿಯೂ ನನಿಗೆ ಭೋಗ್ಯವಾದ ವಸ್ತುವಾಗಿಯೂ ಇರುವನೆಂಬ ವ್ಯವಸಾಯ ಮುಳ್ಳವನೆಂದರ್ಥವು) ಇಂತಹ ವ್ಯವಸಾಯವು ಸರ್ವರಿಗೂ ಪ್ರಾಪ್ತವಾಗುವಂತಾದ್ದಲ್ಲವಷ್ಟೆ? ಅಂತಹ ವ್ಯವಸಾಯವೂ ಅದರ ಕಾರ್ಯವಾದ ಸ್ವಯಂಪ್ರಯೋಜನಭಕ್ತಿಯೂ ಈ ಅಧಿಕಾರಿಗೆ ಇರುವುದರಿಂದ ಅವನು ಬಹುಮಂತವ್ಯನಾಗಿಯೇ ಆಗಿರುವನು. ಅಂತಹ ವ್ಯವಸಾಯವೂ ಅದರ ಕಾರ್ಯವಾದ ಅನನ್ಯ ಭಕ್ತಿಯೂ ಅಂತವನಿಗೇನೆ ಇರುವುದರಿಂದ ಸ್ವಲ್ಪವಾದ ವ್ಯತಿಕ್ರಮ ವಿರುವುದರಿಂದಲೆ ಅಂತವನು ಅನಾದರಣೀಯನಲ್ಲವೆಂದು ಭಾವವು. ... ... ॥೩೦॥

(ಮ॥ ಗೀ॥ ವಿ॥) ಸದಾಚಾರವುಳ್ಳ ಚಂದ್ರಸೂರ್ಯಾದಿ ದೇವತೆಗಳ ಅಂಶಭೂತರಾದ ಋಷಿಮೊದಲಾದವರು ದೈವಾಧೀನವಾಗಿ ಅಧಿಕಪುಣ್ಯಗಳನ್ನು ಹೋಗಲಾಡಿಸುವಂತಾ ದುರಾಚಾರವುಳ್ಳವರಾದರೂ ದೇವತಾಂತರ ಭಜನ ಶೂನ್ಯರಾಗಿ ನನ್ನನ್ನೇ ಅಂತವರು ಭಜನ ಮಾಡುವಂತವರಾದರೆ ಅವರೇ ಶ್ರೇಷ್ಠರಾಗಿರುವರು. ಭಗವತ್ತತ್ವ ನಿಶ್ಚಯವುಳ್ಳವರಾದುದರಿಂದ ಎಂದರ್ಥವು. ... ... ॥೩೦॥

ಶ್ಲೋ॥ ॥ ಕ್ಷಿಪ್ರಂಭವತಿಧರ್ಮಾತ್ಮಾಶಶ್ವಚ್ಛಾಂತಿಂನಿಗಚ್ಛತಿ।ಕೌಂತೇಯಪ್ರತಿಜಾನೀಹಿನಮೇಭಕ್ತಃಪ್ರಣಶ್ಯತಿ॥೩೧॥

ಪ॥ ಕ್ಷಿಪ್ರಂ-ಭವತಿ-ಧರ್ಮಾತ್ಮಾ-ಶಶ್ವತ್-ಶಾಂತಿಂ-ನಿಗಚ್ಛತಿ।ಕೌಂತೇಯ-ಪ್ರತಿಜಾನೀಹಿ-ನ ಮೇ-ಭಕ್ತಃ-ಪ್ರಣಶ್ಯತಿ॥

ಅ|| ಸಃ-ಅವನು, ಕ್ಷಿಪ್ರಂ-ಶೀಘ್ರವಾಗಿ, ಧರ್ಮಾತ್ಮಾ-ಧರ್ಮದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ, ಭವತಿ-ಆಗುತ್ತಾನೆ. ಶಶ್ವತ್-ಸ್ಥಿರವಾದ, ಶಾಂತಿಂ-ನಿವೃತ್ತಿಯನ್ನು, ನಿಗಚ್ಛತಿ-ಹೊಂದುತ್ತಾನೆ. ಹೇ ಕೌಂತೇಯ-ಎಲೈ ಕುಂತೀ ಪುತ್ರನಾದ ಅರ್ಜುನನೇ! ಮೇ -ನನ್ನ, ಭಕ್ತಃ-ಭಕ್ತನು, ನಪ್ರಣಶ್ಯತಿ-ಕೆಟ್ಟು ಹೋಗಲಾರನು. ಇತಿ-ಎಂಬದಾಗಿ, ಪ್ರತಿಜಾನೀಹಿ-ಪ್ರತಿಜ್ಞೆಯಂ ಮಾಡು. ... ... ||೩೧||

(ಗೀ|| ವಿ||) ಶಶ್ವಚ್ಛಾಂತಿಂನಿಗಚ್ಛತಿ-ಶಾಶ್ವತವಾದ ಮೋಕ್ಷವನ್ನು ಹೊಂದುತ್ತಾನೆ. ನಪ್ರಣಶ್ಯತಿ-ನರಕಪಾತಾದಿ ರೂಪವಾಗಿರುವ ಅನರ್ಥವಂ ಹೊಂದುವುದಿಲ್ಲವು. ಈ ಶ್ಲೋಕ ಪ್ರತಿಪಾದ್ಯನಾದ ಭಕ್ತನು ದೇವಾಂಶ ಮುಳ್ಳವನೆಂದರಿಯಬೇಕು. ... ||೩೧||

(ಶಂ||) ಪ್ರತಿಜಾನೀಹಿ-ನಿಶ್ಚಯವಾದ ಪ್ರತಿಜ್ಞೆಯಂ ಮಾಡು. (ಶ್ರೀ) ವಾವದೂಕರ ಸಭಾ ಮಧ್ಯದಲ್ಲಿ ಜಯಭೇರಿಯಂ ಹೊಡೆಯುತಾ ಕೈಯನ್ನು ಮೇಲಕ್ಕೆ ಯತ್ತಿಕೊಂಡು ದುರಾಚಾರ ವುಳ್ಳವನಾದರೂ ಭಗವನ್ನಾರಾಯಣನಾದ ಶ್ರೀಕೃಷ್ಣಭಕ್ತನು ಕೆಟ್ಟುಹೋಗಲಾರನೆಂಬದಾಗಿ ಪ್ರತಿಜ್ಞೆಯಂಮಾಡು ||೩೧||

(ರಾ|| ಭಾ||) ಈಪ್ರಕಾರವಾದರೆ "ನಾವಿರತೋದುಶ್ಚರಿತಾತ್,, ಇತ್ಯಾದಿ ಶ್ರುತಿಯಿಂದ ನಿಷಿದ್ಧಾಚಾರ ವ್ಯತಿಕ್ರಮವು ಅಂತಾ ಭಗವದ್ಭಕ್ತಿ ಪ್ರವಾಹವಂ ನಿರೋಧಿಸಲಾರದೋ? ಎಂದರೆ ಅದಕ್ಕುತ್ತರವಂ ಹೇಳುತ್ತಾರೆ. ಕ್ಷಿಪ್ರಂಧರ್ಮಾತ್ಮಾಭವತಿ- ಅಂತಾ ಅಧಿಕಾರಿಯು ಅನನ್ಯ ಪ್ರಯೋಜನವಾಗಿ ಅನುಷ್ಠಿಸುವ ಭಕ್ತಿಯಿಂದ ಹೋಗಲಾಡಿಸಿಕೊಂಡ ಪಾಪ ತನ್ಮೂಲ ರಜಸ್ತಮೋ ಗುಣಮುಳ್ಳವನಾಗಿರುವುದರಿಂದ ಸ್ವಲ್ಪಕಾಲದಲ್ಲಿಯೆ ಉತ್ತಮಧರ್ಮವಾದ ಸಪರಿಕರವಾಗಿರುವ ಭಕ್ತಿಯಲ್ಲಿ ಆಸಕ್ತವಾದ ಮನಸ್ಸುಳ್ಳವನಾಗುವನು,ಶಶ್ವಚ್ಛಾಂತಿಂನಿಗಚ್ಛತಿ-ನನ್ನಪ್ರಾಪ್ತಿಗೆ ವಿರೋಧಿಯಾದ ದುರಾಚಾರ ನಿವೃತ್ತಿಯನ್ನು ಪುನರಾವೃತ್ತಿಪ್ರಸಂಗರಹಿತವಾಗಿ ಹೊಂದುತ್ತಾನೆ, ಕೌಂತೇಯ- ಎಲೈಅರ್ಜುನನೆ, ಮೆ ಭಕ್ತೋನ ಪ್ರಣಶ್ಯತಿ- ನನ್ನ ಭಕ್ತಿಯನ್ನುಪಕ್ರಮಿಸಿದವನು ದುರಾಚಾರ ಪರನಾಗಿದ್ದರೂ ನಶಿಸಿಹೋಗುವುದಿಲ್ಲವು, ವುತ್ತೇನೆಂದರೆ? ನನ್ನ ಭಕ್ತಿಮಾಹಾತ್ಮ್ಯದಿಂದ ಸರ್ವವಿರೋಧಿ ವರ್ಗಗಳನ್ನು

ನಾಶವಡಿಸಿಕೊಂಡು ಸ್ವಲ್ಪಕಾಲದಲ್ಲಿಯೇ ಪರಿಪೂರ್ಣ ಭಕ್ತಿನಿಷ್ಠನಾಗುವನೆಂದು, ಪ್ರತಿಜಾನೀಹಿ- ಈವಿಷಯದಲ್ಲಿ ಪ್ರತಿಜ್ಞೆಯಂಮಾಡು. ||೩೧||

ಶ್ಲೋ || ಮಾಂಹಿಪಾರ್ಥವ್ಯಪಾಶ್ರಿತ್ಯಯೇಽಪಿಸ್ಯುಃಪಾಪ
ಯೋನಯಃ | ಸ್ತ್ರಿಯೋವೈಶ್ಯಾಸ್ತಥಾಶೂದ್ರಾಸ್ತೇ
ಽಪಿಯಾಂತಿಪರಾಂಗತಿಂ || ||೩೨||

ಪ|| ಮಾಂ- ಹಿ-ಪಾರ್ಥ-ವ್ಯಪಾಶ್ರಿತ್ಯ- ಯೇ- ಅಪಿ - ಸ್ಯುಃ - ಪಾಪಯೋನಯಃ| ಸ್ತ್ರಿಯಃ-ವೈಶ್ಯಾಃ-ತಥಾ-ಶೂದ್ರಾಃ-ತೇ-ಅಪಿ-ಯಾಂತಿ-ಪರಾಂ-ಗತಿಂ ||

ಅ|| ಹೇಪಾರ್ಥ-ಎಲೈ ಅರ್ಜುನನೇ ! ಪಾಪಯೋನಯೋಯೇಸ್ಯುಃ-ಪಾಪಯೋನಿಗಳಲ್ಲಿ ಹುಟ್ಟಿರುವವರು ಯಾರೊ, ತೇ- ಅಂತವರಾದ, ಸ್ತ್ರಿಯೊ ವೈಶ್ಯಾಸ್ತಥಾ ಶೂದ್ರಾಅಪಿ- ಸ್ತ್ರೀಯರು ವೈಶ್ಯರೂ ಹಾಗೆಯೇ ಶೂದ್ರರೂ ಎಂಬೀರೀತಿಯಾಗಿರುವಂತವರಾದ, ತೇಪಿ-ಅವರೂ ಕೂಡ, ಮಾಂವ್ಯಪಾಶ್ರಿತ್ಯ-ನನ್ನನ್ನು ವಿಶೇಷವಾಗಿ ಆಶ್ರಯಿಸಿ, ಪರಾಂಗತಿಂ ಯಾಂತಿ-ಉತ್ತಮ ಗತಿಯನ್ನು ಹೊಂದುತ್ತಾರೆ. ... ... ||೩೨||

(ಶ್ರೀ) ವೇದಾಧ್ಯಯನ ವಿಲ್ಲದ ಸ್ತ್ರೀಶೂದ್ರರಿಗೂ ಪೈರು ಮೊದಲಾದವುಗಳಿಂದ ಜೀವಿಸುವ ವೈಶ್ಯರಿಗೂ ಭಗವದ್ಭಕ್ತಿಯಿಂದ ಮುಕ್ತಿಯುಂಟಾಗುವುದು. (ಆ|| ೧||) ಭಕ್ತ್ಯಧಿಕಾರದಲ್ಲಿ ಜಾತಿನಿಯಮ ವಿಲ್ಲವೆಂದು ಸೂಚಿತವಾಯಿತು. ... ... ||೩೨||

ಶ್ಲೋ || ಕಿಂಪುನರ್ಬ್ರಾಹ್ಮಣಾಃಪುಣ್ಯಾಭಕ್ತಾರಾಜರ್ಷ
ಯಸ್ತಥಾ|ಅನಿತ್ಯಮಸುಖಂಲೋಕಮಿಮಂಪ್ರಾಪ್ಯಭಜ
ಸ್ವಮಾಂ || ... ||೩೩||

ಪ|| ಕಿಂ-ಪುನಃ- ಬ್ರಾಹ್ಮಣಾಃ- ಪುಣ್ಯಾಃ - ಭಕ್ತಾಃ-ರಾಜರ್ಷಯಃ- ತಥಾ |ಅನಿತ್ಯಂ- ಅಸುಖಂ- ಲೋಕಂ- ಇಮಂ- ಪ್ರಾಪ್ಯ- ಭಜಸ್ವ- ಮಾಂ ||

ಅ|| ಪುಣ್ಯಾಃ- ಪುಣ್ಯವಂತರಾಗಿಯೂ, ಶಂ|| ರಾ|| ಪುಣ್ಯಜನ್ಮವುಳ್ಳವರಾಗಿಯೂ, ಭಕ್ತಾಃ- ಭಗವದ್ಭಕ್ತರಾಗಿಯೂ, ಬ್ರಾಹ್ಮಣಾಃ-ಬ್ರಾಹ್ಮಣರೂ, ತಥಾ- ಹಾಗೆಯೆ, ರಾಜರ್ಷಯಃ- ರಾಜರ್ಷಿಗಳೂ, ಕಿಂಪುನಃ- ಸದ್ಗತಿಯನ್ನು ಭಕ್ತಿಯಿಂದ ಹೊಂದುವವಿಷಯದಲ್ಲಿ ಹೇಳಬೇಕಾದದ್ದೇನಿರುವುದು. ಅನಿತ್ಯಮಸುಖಮಿಮಂಲೋಕಂಪ್ರಾಪ್ಯ ವಸ್ತುವಾದನಸ್ಸ್ವಂ ನಿತ್ಯವಲ್ಲದ್ದಾಗಿಯೂ ಸುಖಹೀನವಾಗಿಯೂ ಇರುವ ಈಲೋಕವನ್ನು

ಹೊಂದಿರುವ ನೀನು, ಮಾಂಭಜಸ್ವ-ನನ್ನನ್ನು ಭಜನೆಮಾಡು,(ಶಂ) ಇಮಂಲೋಕಂ- ಈ ಮನುಷ್ಯ ಲೋಕವನ್ನು, ಎಂದರೆ ಪುರುಷಾರ್ಥ ಸಾಧನವಾದ ದುರ್ಲಭವಾಗಿರುವ ಈ ಮನುಷ್ಯ ಜನ್ಮವನ್ನು ಹೊಂದಿರುವ ನೀನು ಎಂದು ಭಾವವು. ||೩೩||

(ಶಂ॥ಭಾ॥) ಪಾಪಜನ್ಮವುಳ್ಳವರಾಗಿಯೂ ಪಾಪಾಚಾರರಾಗಿಯೂ ಇರುವಂತಹವರು ನಿನ್ನಲ್ಲಿಭಕ್ತಿಯಂಮಾಡಿ ಪರಗತಿಯನ್ನು ಹೊಂದುವಂತವರಾದರೆ ಉತ್ತಮಜಾತಿ ಪವಿತ್ರವಾದ ಸನ್ಯಾಸಾದಿಕವಾದ ಸದಾಚಾರದಿಂದ ಏನು ಪ್ರಯೋಜನವು; ಎಂಬ ಶಂಕಾ ಸಮಾಧಾನಾರ್ಥವಾಗಿ ನೀಚ ಜನ್ಮವುಳ್ಳವರೆ ಭಗವದ್ಭಕ್ತಿಯಿಂದ ಪರಗತಿಯನ್ನು ಹೊಂದುವಂತವರಾದರೆ ಬ್ರಾಹ್ಮಣರೂ ರಾಜರ್ಷಿಗಳೂ ಆದಶ್ರೇಷ್ಠ ಜನ್ಮ ವುಳ್ಳವರು ಸದ್ಗತಿಯನ್ನು ಹೊಂದುವರೆಂಬ ವಿಷಯದಲ್ಲಿಹೇಳತಕ್ಕದ್ದೇನಿರುವುದೆಂಬೀ ವಿಷಯದಲ್ಲಿ ಕೈಮುತಿಕನ್ಯಾಯಪ್ರದರ್ಶನವಂ ಮಾಡಿರುವುದಾಗಿ ತಿಳಿಯಬೇಕು. ||೩೩||

(ರಾ॥ ಭಾ॥) ಸ್ತ್ರೀಯರು ವೈಶ್ಯರು ಶೂದ್ರರೆಂಬಿದೇ ಮೊದಲಾದ ಪಾಪಜನ್ಮವುಳ್ಳವರು ಯಾರೆ ಆಗಲಿ ನಮ್ಮನಾಶ್ರಯಿಸಿದವರಾದರೆ ಉತ್ತಮಗತಿಯನ್ನು ಹೊಂದುತ್ತಾರೆ. ಹೀಗಿರುವಲ್ಲಿ ಬ್ರಾಹ್ಮಣರೂ ರಾಜರ್ಷಿಗಳೂ ಆದ ಪುಣ್ಯಜನ್ಮವುಳ್ಳವರು ಭಕ್ತಿಮಾಡಿದವರಾದರೆ ಸದ್ಗತಿಯಂ ಹೊಂದುವ ವಿಷಯದಲ್ಲಿ ಕೇಳತಕ್ಕದ್ದೇನಿರುವುದು. ಆದುದರಿಂದ ಎಲೈ ಅರ್ಜುನನೆ! ಅಶಾಶ್ವತವಾಗಿಯು ತಾಪತ್ರಯದಿಂದ ಮುಚ್ಚಲ್ಪಟ್ಟಿರುವುದರಿಂದ ಅಸುಖವಾಗಿಯೂ ಇರುವ ಈಲೋಕವನ್ನು ಹೊಂದಿರುವ ನೀನೂ ರಾಜರ್ಷಿಯಾಗಿರುವುದರಿಂದ ನನ್ನನ್ನುಭಜನೆಮಾಡುತಲಿರುವಂತವನಾಗು. ||೩೨||೩೩||

(ಗೀ॥ ವಿ॥) ಅಸ್ವಾಭಾವಿಕಸ್ತ್ರೀ ಶೂದ್ರಾದಿಗಳಿಗೂ ನನ್ನಭಕ್ತಿಯಿಂದ ಮೋಕ್ಷಪ್ರಾಪ್ತಿಯಾಗುವುದರಿಂದ ಸ್ವಾಭಾವಿಕ ಸ್ತ್ರೀಶೂದ್ರಾದಿಗಳಿಗೆ ಮೋಕ್ಷಪ್ರಾಪ್ತಿ ಯುಂಟಾಗುವ ವಿಷಯದಲ್ಲಿ ಹೇಳಬೇಕಾದದ್ದೇನಿರುವುದೆಂದು ಶ್ರೀಕೃಷ್ಣನು ಒಂದುವರೆ ಶ್ಲೋಕದಿಂದುಪದೇಶಿಸುತ್ತಾನೆ. ಹೇಪಾರ್ಥ- ಎಲೈ ಅರ್ಜುನನೆ! ಯೇಪಿಪಾಪಯೊ

ನಯಃ-(ಇಲ್ಲಿ ಪಾಪಪದದಿಂದ ಪುಣ್ಯವೂ ಉಪಲಕ್ಷಣವಾಗಿರುವುದು) ಯಾರಾದರೆ ಪಾಪಪುಣ್ಯಗಳೇ ತಮ್ಮಗಳ ಹುಟ್ಟುವಿಕೆಗೆಕಾರಣವಾಗಿ ವುಳ್ಳವರಾಗಿರುತ್ತಾರೊ,ಅಂಥಾ; ಸ್ತ್ರೀಯಃ-ಸ್ತ್ರೀಯರೂ, ವೈಶ್ಯಾಃ-ವೈಶ್ಯರೂ, ತಥಾ-ಹಾಗೆಯೆ, ಶೂದ್ರಾಃ-ಶೂದ್ರರೂ, ಪುಣ್ಯಾಃ-ಸುಕೃತಿಗಳಾದ, ಭಕ್ತಾಃ-ನನ್ನ ಭಕ್ತರಾಗಿರುವ, ಬ್ರಾಹ್ಮಣಾಃ-ಬ್ರಾಹ್ಮಣರೂ, (ತಥಾ ಹಾಗೆಯೇ,) ರಾಜರ್ಷಯಃ-ಸುಕೃತಿಗಳಾದ ನನ್ನ ಭಕ್ತರಾಗಿರುವ ರಾಜರ್ಷಿಗಳೂ, (ಇದರಿಂದ ಸ್ವಾಭಾವಿಕ ಪುರುಷರಿಗೆ ಸ್ತ್ರೀತ್ವವೂ ಸ್ವಾಭಾವಿಕ ಬ್ರಾಹ್ಮಣರಿಗೆ ಕ್ಷತ್ರಿಯ ಜನ್ಮವೂ,ಸ್ವಾಭಾವಿಕ ಬ್ರಾಹ್ಮಣ ಕ್ಷತ್ರಿಯರಿಗೆ ವೈಶ್ಯಜನ್ಮವೂ, ಸ್ವಾಭಾವಿಕ ಬ್ರಾಹ್ಮಣ ಕ್ಷತ್ರಿಯ ವೈಶ್ಯರಿಗೆ ಶೂದ್ರಜನ್ಮವೂ ಪಾಪದಿಂದ ಬರುವುದೆಂತಲೂ, ಸ್ವಾಭಾವಿಕ ಶೂದ್ರರಿಗೆ ವೈಶ್ಯಜನ್ಮವೂ, ಸ್ವಾಭಾವಿಕ ಶೂದ್ರವೈಶ್ಯರಿಗೆ ಕ್ಷತ್ರಿಯ ಜನ್ಮವೂ ಸ್ವಾಭಾವಿಕ ಶೂದ್ರವೈಶ್ಯಕ್ಷತ್ರಿಯರಿಗೆ ಬ್ರಾಹ್ಮಣ ಜನ್ಮವೂ ಪುಣ್ಯದಿಂದ ಬರುವುದೆಂತಲೂ, ಸ್ವಭಾವದಿಂದ ರಾಜರ್ಷಿಗಳಲ್ಲದೆ ಇರುವಂತವರಿಗೆ ಪುಣ್ಯದಿಂದ ರಾಜರ್ಷಿಜನ್ಮವು ಬರುವುದೆಂತಲೂ ಸೂಚಿತವಾಯಿತು. ಈ ರೀತಿಯಾಗಿ ಸ್ವಭಾವದಿಂದ ನೀಚಜಾತೀಯರಿಗೆ ಪುಣ್ಯಾತಿಶಯದಿಂದ ಶ್ರೇಷ್ಠವರ್ಣದಲ್ಲಿ ಜನ್ಮವೂ ಪುಣ್ಯಾತಿಶಯದಿಂದ ರಾಜರ್ಷಿಜನ್ಮವೂ ಉತ್ತಮವರ್ಣದವರಿಗೆ ಪಾಪದಿಂದ ನೀಚಜನ್ಮವೂ ಬರುವುದೆಂದರಿಯಬೇಕು.ಈ ಪ್ರಕಾರವಾಗಿ ಪಾಪ ಪುಣ್ಯನಿಮಿತ್ತದಿಂದ ಸ್ತ್ರೀವೈಶ್ಯಾದಿ ಜನ್ಮವಂ ಹೊಂದಿರುವ ಅಸ್ವಾಭಾವಿಕಸ್ತ್ರೀಶೂದ್ರಾದಿಗಳು,ತೇಪಿ-ಅಂತವರೂ, ಮಾಂವ್ಯಪಾಶ್ರಿತ್ಯ-ಭಕ್ತಿಪೂರ್ವಕವಾಗಿನನ್ನನ್ನಾಶ್ರಯಿಸಿ,ಪರಾಂಗತಿಂ ಯಾಂತಿ-ಶ್ರೇಷ್ಠಗತಿಯಾದ ಮೋಕ್ಷವನ್ನು ಹೊಂದುತ್ತಾರೆ.ಹಿ-ನಿಶ್ಚಯವು.ಕಿಂಪುನಃ-ಈಪದಕ್ಕಿಂತಲೂ ಮುಂದೆ(ಸ್ವಾಭಾವಿಕಾಃ)ಎಂಬ ಪದವಂ ಸೇರಿಸಿಕೊಳ್ಳಬೇಕು. ಈ ಪದವು ಸ್ತ್ರಿಯೋವೈಶ್ಯಾಃ ಇತ್ಯಾದಿ ಪದಗಳಿಗೆ ವಿಶೇಷಣವಾಗಿರುವುದು. ಸ್ವಾಭಾವಿಕಾಃ-ಪುಣ್ಯಪಾಪನಿಮಿತ್ತವಿಲ್ಲದೆ ಸ್ವಾಭಾವಿಕರಾದ, ಸ್ತ್ರೀಯಃ-ಸ್ತ್ರೀಯರೂ, ವೈಶ್ಯಾಃ-ಸ್ವಾಭಾವಿಕರಾದ ವೈಶ್ಯರೂ, ತಥಾ-ಹಾಗೆಯೇ, ಶೂದ್ರಾಃ-ಸ್ವಾಭಾವಿಕ ಶೂದ್ರರೂ, ಬ್ರಾಹ್ಮಣಾಃ-ಸ್ವಾಭಾವಿಕ ಬ್ರಾಹ್ಮಣರೂ, ತಥಾ-

ಹಾಗೆಯೇ, ರಾಜರ್ಷಯಃ-ಸ್ವಾಭಾವಿಕ ರಾಜರ್ಷಿಗಳೂ, ಕಿಂಪುನಃ-ಭಕ್ತಿ ಪೂರ್ವಕವಾದ ಸೇವೆಯಿಂದ ನನ್ನನ್ನಾಶ್ರಯಿಸಿ ಮೋಕ್ಷವಂ ಹೊಂದುತ್ತಾರೆಂಬದಾಗಿ ಹೇಳತಕ್ಕದ್ದೇನಿರುವುದು. ಇಲ್ಲಿ ಕೆಲವರು "ಪಾಪಯೋನಿಗಳಾದ ಸ್ತ್ರೀಶೂದ್ರಾದಿಗಳಿಗೇನೆ ಮೋಕ್ಷ ವುಂಟಾಗುವ ಸಂದರ್ಭದಲ್ಲಿ ಪುಣ್ಯಯೋನಿಗಳಾದ ಬ್ರಾಹ್ಮಣಾದಿಗಳಿಗೆ ಮೋಕ್ಷಪ್ರಾಪ್ತಿಯಾಗುವ ವಿಷಯದಲ್ಲಿ ಹೇಳಬೇಕಾದದ್ದೇನು ,, ಎಂಬದಾಗಿ ವ್ಯಾಖ್ಯಾನ ಮಾಡಿರುತ್ತಾರೆ. ಅದು ಅಯುಕ್ತವಾಗಿರುವುದು. ಹೇಗೆಂದರೆ ! "ಸತ್ವಾಧಿಕಃಪುಲ್ಕಸೋಪಿ ಯಸ್ತುಭಾಗವತಸ್ಸದಾ,, ಎಂಬಿದೇ ಮೊದಲಾದ ವಾಕ್ಯಗಳಿಂದ ಹರಿಭಕ್ತರು ನೀಚವರ್ಣದವರಾದರೂ ಪುಣ್ಯವಂತರೆಂತಲೇ ಹೇಳಲ್ಪಡುತ್ತಾರೆ. ಆದುದರಿಂದ ಹರಿಭಕ್ತರಲ್ಲಿ ಬ್ರಾಹ್ಮಣರೂ, ರಾಜರ್ಷಿಗಳೂ, ಪುಣ್ಯವುಳ್ಳವರಾಗಿರುವರು, ಸ್ತ್ರೀಶೂದ್ರಾದಿಗಳು ಪಾಪಯೋನಿಗಳಾಗಿರುವರು, ಎಂಬೀವಿಭಾಗವನ್ನು ಮಾಡುವುದು ಯುಕ್ತವಲ್ಲವಾದುದರಿಂದ ನಾವು ಮಾಡಿರುವ ವ್ಯಾಖ್ಯಾನವೇ ಯುಕ್ತವಾಗಿರುವುದು. ನಮ್ಮ ವ್ಯಾಖ್ಯಾನಕ್ಕೆ " ಪಾಪಾದಿಕಾರಿತಾ ಶ್ಚೈವ ಪುಂಸಾಂಸ್ವಾಭಾವಿಕಾ ಅಪಿ। ವಿಪ್ರತ್ವಾದ್ಯಾಸ್ತತ್ರ ಪುಣ್ಯಾಸ್ಸ್ವಭಾವ್ಯಾಸ್ತತ್ರ ಮುಕ್ತಿಗಾಃ ॥ ಯಾಂತಿಸ್ತ್ರೀತ್ವಂಪುಮಾಂಸೊಪಿಪಾಪತಃಕಾಮತೋಪಿವಾ । ನಸ್ತ್ರೀಯೊಯಾಂತಿಪುಂಸ್ತ್ವಂತು ಸ್ವಭಾವಾದೇವಯಾಸ್ಸ್ತ್ರಿಯಃ ॥ ಸರ್ವೇಷಾಮಪಿ ಜೀವಾನಾಮಂತೆ ದೆಹೊಯಥಾನಿಜಃ । ಮುಕ್ತೌತು ನಿಜಭಾವಸ್ಸ್ಯಾತ್ಕರ್ಮಭೋಗಾತ್ತತೋಪಿಚ ॥ ಎಂಬೀ ಪ್ರಮಾಣಗಳು ಗೀತಾ ತಾತ್ಪರ್ಯದಲ್ಲಿ ಶ್ರೀಮದಾಚಾರ್ಯರಿಂದ ಭವಿಷ್ಯತ್ಪರ್ವೊದ್ಧೃತವಾಗಿರುವುದು. ॥೩೦॥

ಆದುದರಿಂಡ ನನ್ನ ಭಜನವನ್ನು ಭಕ್ತಿಯಿಂದ ಮಾಡೆಂದುಪದೇಶಿಸುತ್ತಾನೆ. (ಅತಃ-ನನ್ನ ಭಕ್ತಿಯೇ ಮೋಕ್ಷಸಾಧನವಾಗಿರುವುದರಿಂದ,) ಅನಿತ್ಯಂ-ನಿತ್ಯವಲ್ಲದೆಯೂ, ಅಸುಖಂ-ದುಃಖಮಿಶ್ರವಾಗಿರುವುದರಿಂದ ಕ್ಷುದ್ರವಾಗಿಯೂ, ಇರುವ; ವಿಷಯ ಸುಖವು ಮುಖ್ಯಸುಖವಲ್ಲವಾದುದರಿಂದಸುಖರಹಿತವಾದಈ ಶರೀರವನ್ನು ಹೊಂದಿನನ್ನನ್ನು ಭಜಿಸು. ಈದೇಹವು ಅನಿತ್ಯ ಮಾದುದರಿಂದ ವಿಲಂಬವಂ ಮಾಡದೆ (ಈದೇಹವು ಮುಖ್ಯ ಸುಖರಹಿತವಾಗಿರುವುದರಿಂದ ಕ್ಷುದ್ರವಾದ ವಿ

ಷೆಯು ಸುಟಾರ್ಥವಾಗಿ ಮಾಡುವ ಪ್ರಯತ್ನವಂ ಬಿಟ್ಟು) ನನ್ನನ್ನು ಭಜಿಸೆಂದು ಭಾವವು. ... ... ॥೩೩॥

ಶ್ಲೋ॥ ಮನ್ಮನಾಭವಮದ್ಭಕ್ತೋಮದ್ಯಾಜೀಮಾಂನಮ ಸ್ಕುರು । ಮಾಮೇವೈಷ್ಯಸಿಯುಕ್ತ್ವೈವಮಾತ್ಮಾನಂ ಮತ್ಪರಾಯಣಃ ॥ ... ... ॥೩೪॥

ಓಂತತ್ಸತ್ ಇತಿ ಶ್ರೀಭಗವದ್ಗೀತಾಸೂಪನಿಷತ್ಸು ಬ್ರಹ್ಮ ವಿದ್ಯಾಯಾಂ ಯೋಗಶಾಸ್ತ್ರೇ ಶ್ರೀಕೃಷ್ಣಾರ್ಜುನ ಸಂವಾದೇರಾಜವಿದ್ಯಾರಾಜಗುಹ್ಯಯೋ ಗೋನಾಮನವಮೋಧ್ಯಾಯಃ

---

ಪ॥ ಮನ್ಮನಾಃ- ಭವ- ಮದ್ಭಕ್ತಃ - ಮದ್ಯಾಜೀ - ಮಾಂ - ನಮಸ್ಕುರು । ಮಾಂ- ಏವ- ಏಷ್ಯಸಿ- ಯುಕ್ತ್ವಾ- ಏವಂ- ಆತ್ಮಾನಂ-ಮತ್ಪರಾಯಣಃ ॥

ಅ॥ ಮನ್ಮನಾಃ- ನನ್ನಲ್ಲಿಡಲ್ಪಟ್ಟ ಮನಸ್ಸುಳ್ಳವನಾಗಿಯೂ, ಮದ್ಭಕ್ತಃ-ನನ್ನ ಭಕ್ತನಾಗಿಯೂ, ಮದ್ಯಾಜೀ- ನನ್ನನ್ನಾರಾಧಿಸುವಂತವನಾಗಿಯೂ, ಭವ - ಆಗು, ಮಾಂನಮಸ್ಕುರು - ನನ್ನನ್ನು ನಮಸ್ಕರಿಸುವಂತವನಾಗು. ಏವಂ- ಈರೀತಿಯಾಗಿ, ಮತ್ಪರಾಯಣಃ- ನಾನೆ ಶ್ರೇಷ್ಠವಾದಗತಿ ಎಂಬಿರುವಂತವನಾಗಿ, ಆತ್ಮಾನಂಮಯಿ ಯುಕ್ತ್ವಾ- ನನ್ನಲ್ಲಿ ಮನಸ್ಸನ್ನಿಟ್ಟು,ಮಾಮೇವೈಷ್ಯಸಿ-ನನ್ನನ್ನೇ ಹೊಂದುತ್ತೀ॥೩೪॥

(ಶಂ॥ ಭಾ॥) ಏವಂ- ಈರೀತಿಯಾಗಿ, ಮತ್ಪರಾಯಣಃ- ನನ್ನನ್ನು ಶರಣಹೊಂದಿದವನಾಗಿ, ಯುಕ್ತ್ವಾ- ಚಿತ್ತವನ್ನು ನಿಲ್ಲುವಂತೆ ಮಾಡಿ, ಆತ್ಮಾನಂ ಮಾಮೇವ - ಆತ್ಮನಾದ ನನ್ನನ್ನೇ, ಏಷ್ಯಸಿ- ಹೊಂದುತ್ತೀ. ॥೩೪॥

(ರಾ॥ ಭಾ॥) ಭಕ್ತಿಸ್ವರೂಪವನ್ನು ಪೇಳುತ್ತಾರೆ. ಮನ್ಮನಾ ಭವ- ಸರ್ವೇಶ್ವರನಾಗಿಯೂ ಅಖಿಲಹೇಯ ಪ್ರತ್ಯನೀಕ ಕಲ್ಯಾಣೈ ಕತಾನನಾಗಿಯೂ, ಸರ್ವಜ್ಞನಾಗಿಯೂ, ಸತ್ಯಸಂಕಲ್ಪನಾಗಿಯೂ, ಸಮಸ್ತ ಜಗದೇಕ ಕಾರಣನಾಗಿಯೂ, ಪರಬ್ರಹ್ಮ ಭೂತನಾಗಿಯೂ, ಪುರುಷೋತ್ತಮನಾಗಿಯೂ, ಪುಂಡರೀಕ ದಳಾಮಲಾಯತಾಕ್ಷನಾಗಿ ಯೂ ಸ್ವಚ್ಛನೀಲ ಜೀಮೂತ ಸಂಕಾಶನಾಗಿಯೂ ಏಕಕಾಲದಲ್ಲಿ ಸ

ಹಸ್ರ ಸೂರ್ಯೋದಯವಾದರೆ ಎಂಥಾ ಕಾಂತಿಯುಂಟಾಗಿರುವದೋ ಅದಕ್ಕೆ ಸಮಾನವಾದ ತೇಜಸ್ಸುಳ್ಳವನಾಗಿಯೂ ಲಾವಣ್ಯಾಮೃತಮಹೋದಧಿಯಾಗಿಯೂ,ಆಜಾನು ಲಂಬಿಗಳಾಗಿಯೂ,ಉದಾರವಾಗಿಯೂ,ಪೀವರ(ಬಲತಿರುವುದಾಗಿಯೂ)ವಾಗಿಯೂ ಇರುವ ನಾಲ್ಕು ತೋಳುಗಳುಳ್ಳವನಾಗಿಯೂ,ಅತ್ಯುಜ್ವಲ ದಿವ್ಯ ಪೀತಾಂಬರಧಾರಿಯಾಗಿಯೂ,ನಿರ್ಮಲವಾದ ಕಿರೀಟಹಾರ ಕೇಯೂರ ಕಟಕಾದಿ ದಿವ್ಯ ಭೂಷಣಗಳಿಂ ದೊಪ್ಪಿರುವಂತವನಾಗಿಯೂ ಅಪಾರ ಕಾರುಣ್ಯ ಸೌಶೀಲ್ಯ ಸೌಂದರ್ಯ ಮಾಧುರ್ಯ ಗಾಂಭೀರ್ಯೌದಾರ್ಯ ವಾತ್ಸಲ್ಯ ಜಲಧಿಯಾಗಿಯೂ ಆಶ್ರಿತನ ಜಾತಿವೃತ್ತಾದಿಗಳನ್ನಾಲೋಚಿಸದೆ ಸರ್ವರಿಗೂ ಶರಣ್ಯನಾಗಿಯೂ, ಸರ್ವಸ್ವಾಮಿಯಾಗಿಯೂ ಇರುವ ನನ್ನಲ್ಲಿ ತೈಲಧಾರೆಯಂತೆ ವಿಚ್ಛೇದ ರಹಿತವಾಗಿ ಪ್ರವೇಶಿಸಿರುವ ಮನಸ್ಸುಳ್ಳವನಾಗಿರು, ಮದ್ಭಕ್ತೋಭವ - ಅತ್ಯರ್ಥ ಮತ್ಪ್ರಿಯತೆಯೊಡನೆ ಕೂಡಿ ನನ್ನಲ್ಲಿಡಲ್ಪಟ್ಟ ಮನಸ್ಸುಳ್ಳವನಾಗು, (ಮತ್ತೂ ವಿಶೇಷಿಸುತ್ತಾರೆ.) ಮದ್ಯಾಜೀಭವ- ಅನವಧಿಕಾತಿಶಯಪ್ರಿಯವಾದ ನಮ್ಮ ಅನುಭವದಿಂದ ಪ್ರೇರಿತನಾಗಿ ಔಪಚಾರಿಕ ಸಾಂಸ್ಪರ್ಶಿಕ ಸಾಭ್ಯವ ಹಾರಿಕ ಸಾಂದೃಷ್ಟಿಕಾದಿ ಸಕಲ ಭೋಗ ಸಮರ್ಪಣರೂಪವಾದ ನಮ್ಮ ಸಮಾರಾಧನದಲ್ಲಿ ಪ್ರಯತ್ನ ಮುಳ್ಳವನಾಗಿರು, ಇಲ್ಲಿಯ ಜನವೆಂದರೆ ಪರಿಪೂರ್ಣವಾದ ಶೇಷವೃತ್ತಿಯಲ್ಲವೆ; ಕೈಂಕರ್ಯವೆಂದರ್ಥವು. ಮಾಂನಮಸ್ಕುರು- ಅನವಧಿಕಾತಿಶಯವಾದ ನಮ್ಮ ಅನುಭವದಿಂದ ಅತ್ಯಂತ ಪ್ರಿಯವಾದ ಅಶೇಷ ಶೇಷವೃತ್ತಿ (ಕೈಂಕರ್ಯದಲ್ಲಿ)ಯಲ್ಲಿ ಪ್ರವರ್ತಿಸಿ ಅದರಿಂದಲೂ ತೃಪ್ತಿಯಂಹೊಂದದೆ ನಿಮ್ಮ ಆತ್ಮವನ್ನು ನಮ್ಮಲ್ಲಿ ಮನೋಬುದ್ಧ್ಯಭಿಮಾನಗಳೊಡನೆ ನಮ್ರೀಭಾವವಂ ಮಾಡುವಂತಹ ವ್ಯವಸಾಯವಂ ಮಾಡು, ಮತ್ಪರಾಯಣಃ- ಅಷ್ಟು ಮಾತ್ರವಲ್ಲದೆ ನಮ್ಮನ್ನು ಬಿಟ್ಟಿದ್ದರೆ ಆತ್ಮಧಾರಣವಂಮಾಡಲಾರದೆ ನಾನೆ ಗತಿಯೆಂಬದಾಗಿ ನನ್ನನ್ನೇ ಆಶ್ರಯಿಸಿರುವ ನೀನು,ಏವಮಾತ್ಮಾನಂಯುಕ್ತ್ವಾ- ನಿರ್ಮಲವಾದ ಮನಸ್ಸನ್ನು ಮೊದಲು ಧ್ಯಾನದಲ್ಲಿಯೂ ಅನಂತರದಲ್ಲಿ ಪ್ರತ್ಯಕ್ಷ ತುಲ್ಯವಾದ ಅನುಭವದಲ್ಲಿಯೂ ಅನಂತರದಲ್ಲಿ ಅಂತಹ ಅನುಭವದಿಂದ ಪ್ರೇರಿತನಾಗಿ ಔಪಚಾರಿಕಾದಿ ಭೋಗ ಸಮರ್ಪಣದಲ್ಲಿಯೂ ಅನಂತರದಲ್ಲಿ ಅತ್ಯಂತ ಪ್ರಹ್ವೀಭಾವ(ನ

ಮ್ಯಃಾಗಿರುವಿಕೆ. ಎಂದರೆ ಮನೋಬುದ್ಧ್ಯಭಿಮಾನಗಳೊಡನೆ ಜಗ್ಗಿರುವಿಕೆ) ವ್ಯವಸಾಯದಲ್ಲಿಯೂ ಉದ್ಯೋಗಿಸುವಂತೆಮಾಡಿ, ಮಾಮೇವೈಷ್ಯಸಿ- ಸಕಲ ವಿಭೂತಿ ಗುಣಗಣಗಳೊಡನೆ ನನ್ನನ್ನೇಹೊಂದುತ್ತೀ. (ಇದರಿಂದ ಲೌಕಿಕಗಳಾದ ಶರೀರ ಧಾರಣಾರ್ಥವಾದ ವ್ಯಾಪಾರಗಳನ್ನೂ ವೈದಿಕಗಳಾದ ನಿತ್ಯ ನೈಮಿತ್ತಿಕ ಕರ್ಮಗಳನ್ನೂ ನನ್ನ ಪ್ರೀತಿಗೋಸ್ಕರವಾಗಿ ನಮ್ಮ ಶೇಷತ್ವದಲ್ಲಿ ರಾಸಿಕ್ಯಮುಳ್ಳ ಹೃದಯರಾಗಿ ನಮ್ಮಿಂದಲೇ ಪ್ರೇರಿತನಾಗಿ ಮಾಡುವೆವೆಂಬ ಭಾವನೆಯಿಂದ ಅನುಷ್ಠಿಸಿಕೊಂಡು ನಾವು ಸಂಕೀರ್ತನ ಯತನ ನಮಸ್ಕಾರಾದಿಗಳನ್ನು ನಮ್ಮ ಪ್ರೀತಿಯಿಂದ ಮಾಡುವಂತವನಾಗಿ ಸಮಸ್ತ ಪ್ರಪಂಚವೂ ನಮಗೆ ನಿಯಾಮ್ಯವೆಂತಲೂ ನಮ್ಮ ಶೇಷತ್ವೈಕ ರಸವೆಂತಲೂ ಅನುಸಂಧಿಸುವಂತವನಾಗಿಯೂ ಅತ್ಯರ್ಥ ಪ್ರಿಯಗಳಾದ ನಮ್ಮ ಗುಣಗಣಗಳನ್ನನುಸಂಧಾನ ಮಾಡಿಕೊಂಡು ಅನುದಿನವೂ ನಮ್ಮ ಉಪಾಸನವನ್ನನುಷ್ಠಿಸುತಾ ಬಂದರೆ ನನ್ನನ್ನೇ ಹೊಂದುವೀ ಯೆಂದಭಿಪ್ರಾಯವು. ... ... ... ||೩೪||

(ತಾ|| ಚಂ||) ಸಾಮಾನ್ಯವಾಗಿ ಸರ್ವ ಪರವಿದ್ಯೆಗಳಲ್ಲಿ ಉಪಾಸ್ಯಮಾಗಿಯೂ ತದುಪಯುಕ್ತವಾಗಿಯೂ ಇರುವಂತೆ ಅನೇಕ ಪ್ರಮಾಣಪ್ರಸಿದ್ಧಗಳಾದ ಸ್ವರೂಪ ಗುಣಾದಿಗಳು ಮನ್ಮನಾಭವ, ಎಂಬೀಪದದಲ್ಲಿರುವ ಅಸ್ಮಚ್ಛಬ್ದದಿಂದ ವಿವಕ್ಷಿತವಾಗಿರುವುದೆಂ ದರಿಯಬೇಕು. ಈ ಭಾಷ್ಯದಲ್ಲಿರುವ ಸರ್ವೇಶ್ವರೇಶ್ವರ ಶಬ್ದದಿಂದ" ತಮೀಶ್ವರಾಣಾಂ ಪರಮಂಮಹೇಶ್ವರಂ- ನತಸ್ಯೇಶೇಕಶ್ಚನ,,ಇತ್ಯಾದಿ ಶ್ರುತ್ಯರ್ಥವುಹೇಳಲ್ಪಟ್ಟಿತು. ಪರಮಾತ್ಮನು ಸರ್ವೇಶ್ವರೇಶ್ವರನಾಗದೆ ಅಸಮರ್ಥನಾಗಿದ್ದರೆ ಅಂತಹ ಅಸಮರ್ಥನಿಂದ ಯಾವಪ್ರಯೋಜನವೂ ಇಲ್ಲವೆಂತಲೂ ಬ್ರಹ್ಮಾಂಡಕ್ಕೆ ಈಶ್ವರರಾಗದಬ್ರಹ್ಮೇಶಾನಾದಿ ದೇವತೆಗಳು ಮೋಕ್ಷಪ್ರದಾನದಲ್ಲಿ ಅಸಮರ್ಥರೆಂತಲೂ ಈರ್ವೇಶ್ವರೇಶ್ವರಶಬ್ದದಿಂದಸೂಚಿತವಾಯಿತೆಂದರಿಯಬೇಕು. ಹೇಯಸಾಪ್ಪದನಾಗಿಯೂ ನಿರ್ಗುಣನಾಗಿಯೂ ಇರುವಂತವನಿಗೆ ಭಜನೀಯತ್ವವೇ ಸಿದ್ಧವಾಗುವುದಿಲ್ಲವಾದುದರಿಂದನಿರ್ಗುಣ ಶ್ರುತಿಗಳಿಗೆ ಪರಮಾತ್ಮನಲ್ಲಿ ಹೇಯ ಗುಣಗಳಿಲ್ಲವೆಂತಲೂ ಸಗುಣಶ್ರುತಿಗಳಿಗೆ ಸರ್ವಜ್ಞತ್ವ ಸತ್ಯ ಸಂಕಲ್ಪತ್ವಾದಿಕ

ಲ್ಯಾಣ ಗುಣಗಳನೇಕ ಗಳಿರುವುವೆಂತಲೂ ಮಾಡಿರುವ ವಿಷಯವ್ಯವ
ಸ್ಥೆಯಿಂದ ಉಭಯಲಿಂಗತ್ವವನ್ನು (ಅಖಿಲಹೇಯಪ್ರತ್ಯಾನೀಕಕಲ್ಯಾ
ಣೈಕತಾನಶಬ್ದದಿಂದ) ತೋರಿಸುತ್ತಾರೆಂದರಿಯಬೇಕು. ಲಾವಣ್ಯವೆಂ
ದರೆ ಕಣ್ಣುಗಳಿಗೆ ಆನಂದ ಜನಕವಾದ ತೇಜೋವಿಶೇಷವು. ಈಲಾವ
ಣ್ಯದಿಂದ ಪರಮಾತ್ಮನಲ್ಲಿ ಅನುಕೂಲ ಭೋಗತ್ವ ಆಕರ್ಷ ಕತ್ವಾದಿಗ
ಳು ಹೇಳಲ್ಪಡುವುವೆಂತಲೂ ಇಂತಹಅರ್ಥವು“ಲೋಚನೈರನುಜಗ್ಮು
ಸ್ತೇತಮಾದ್ರೃಷ್ಟಿಪಥಾತ್ಪುನಃ।ಮನೋಭಿರನುಜಗ್ಮುಶ್ಚಕೃಷ್ಣಂಪ್ರೀ
ತಿಸಮನ್ವಿತಾಃ॥ಅತೃಪ್ತಮನಸಸ್ತ್ವೇವಂತೇಷಾಂಕೇಶವದರ್ಶನೆ। ಕ್ಷಿಪ್ರ
ಮನ್ತರ್ಧಧೇಶೌರಿಶ್ಚಕ್ಷುಷಾಂಪ್ರಿಯದರ್ಶನಃ ॥ಅಮೃತಸ್ಯೇವನಾತೃಪ್ಯ
ನ್ಪ್ರೇಕ್ಷಮಾಣಾಜನಾರ್ದನಂ।ನಹಿತಸ್ಮಾನ್ನನಃಕಶ್ಚಿಚ್ಚಕ್ಷುಷೀಮಾನ
ರೋತ್ತಮಾತ್।ನರಶ್ಶಕ್ನೋತ್ಯಪಾಕ್ರಷ್ಟುಮತಿಕ್ರಾಮತಿರಾಘವೆ ॥ ರಾ
ಮಂಮೇನುಗತಾದೃಷ್ಟಿಃ,, ಇತ್ಯಾದಿ ಪ್ರಮಾಣಗಳಲ್ಲಿ ಪ್ರಸಿದ್ಧವಾಗಿ
ರುವು ದೆಂತಲೂತಿಳಿಯಬೇಕು. ಮತ್ತು ‘ಮದ್ಯಾಜೀ, ಎಂಬಯಜನಶ
ಬ್ದಕ್ಕೆಪ್ರಸಿದ್ಧ ಯಜ್ಞಾದಿಗಳರ್ಥವಲ್ಲವೆಂತಲೂ ಸಾಕ್ಷಾದ್ಭಗವದಾರಾಧ
ನರೂಪಕೈಂಕರ್ಯವೇಅರ್ಥವೆಂತಲೂತಿಳಿಯಬೇಕು.“ಪತ್ರಂಪುಷ್ಪಂ,,
ಇತ್ಯಾದಿ ಶ್ಲೋಕಗಳಲ್ಲಿಯೂ ಈ ಆರಾಧನವೇ ಪ್ರಸ್ತುತವಾಗಿರು
ವುದು. ಆದುದರಿಂದ “ಯಜದೇವಪೂಜಾಯಾಂ,, ಇತ್ಯಾದಿ ರೀತಿ
ಯಾಗಿಯೆ ಪಠಿತವಾಗಿರುವುದರಿಂದಲೂ ಇದಕ್ಕೆ ದರ್ಶ ಪೂರ್ಣಮಾ
ಸಾದಿ ಕರ್ಮಪರವಾಗಿ ಅರ್ಥವರ್ಣನ ಮಾಡಕೂಡದು. ಔಪಚಾರಿಕಗಳು
ನೀರಾಂಜನಾದಿಗಳು. ಪುಷ್ಪಮಾಲಾ ಚಂದನಾದಿಗಳು ಸಾಂಸ್ಪರ್ಶಿಕ
ಗಳು. ದೀಪಾದ್ಯುಪಚಾರ ಪ್ರದಾನವು ಸಾಂದೃಷ್ಟಿಕಗಳು. ಅಭ್ಯವ
ಹಾರಿಕಾದಿಕಗಳು ಭಗವನ್ನಿವೇದನ ಯೋಗ್ಯವಾದ ಪದಾರ್ಥ ಸಮರ್ಪ
ಣಾದ್ಯುಪಚಾರಗಳೆಂತಲೂತಿಳಿಯಬೇಕು.(ಮತ್ತುಈರೀತಿಯಾಗಿ ಶ್ರೀ
ಗೀತಾಭಾಷ್ಯಾರ್ಥಗಳನ್ನು ಶ್ರೀಮತ್ತಾತ್ಪರ್ಯ ಚಂದ್ರಿಕೆಯಲ್ಲಿ ವಿಶದ
ವಾಗಿ ತಿಳಿಯಬಹುದು. ಗ್ರಂಥ ವಿಸ್ತಾರ ಭಯದಿಂದ ಸಂಗ್ರಹವಾಗಿ
ಪ್ರದರ್ಶನವಮಾಡಿದೆ. ॥೩೪॥

(ಶ್ರೀ) ನಿಜಮೈಶ್ವರ್ಯ ಮಾಶ್ಚರ್ಯಂ ಭಕ್ತೇರದ್ಭುತವೈಭವಂ।ನ
ವಮೇರಾಜಗುಹ್ಯಾಖ್ಯೆ ಕೃಪಯಾಪ್ರೋಚವ್ಯತಃ ॥ರಾಜಗುಹ್ಯಾಪೊ

ಗವೆಂಬ ಈ ದಶಮಾಧ್ಯಾಯದಲ್ಲಿ ಶ್ರೀಕೃಷ್ಣನು ಆಶ್ಚರ್ಯಕರವಾದ ತನ್ನ ಐಶ್ವರ್ಯವನ್ನೂ ಅದ್ಭುತವಾದ ತನ್ನ ಭಕ್ತಿಯ ವೈಭವವನ್ನೂ ಪರಮ ಕೃಪಾಳುವಾಗಿ ಉಪದೇಶಿಸಿದನೆಂದರಿಯಬೇಕು. ||೩೪||

## ಅದ್ವೈತ ಸಿದ್ಧಾಂತಿಗಳ ಅಧ್ಯಾಯ ಸಂಗ್ರಹ ಶ್ಲೋಕವು.

ಪ|| ವಿಶ್ವಾಭಾಸಃಕಿಲಾಸೌಮದಧಿಕರಣಕಸ್ಸ್ವೈನ್ಮದಜ್ಞಾನಕಾರ್ಯಂಯನ್ಮಿಥ್ಯಾತದ್ಧಿಸತ್ತಾತ್ಯಾಶ್ರಯಮಿತಿನಿಯಮೊನ್ಯೈವಮಿಥ್ಯಾಶ್ರಿತಂಸತ್|ಸತ್ಯೇಸತ್ಯಂ ಭ್ರಮಾಂತೇನಭಜತಿಸಹಸಾ ವಸ್ಥಿತಂಮಯ್ಯಸಂಗೇತತ್ಸ್ವಪರ್ಶ್ಯಾಕದಾಚಿನ್ನ ಭವತಿನವ ಮೇಪ್ರೋಕ್ತಮೇತದ್ರಹಸ್ಯಂ || ... ||೯||

ಅ|| ನನಿಗೆ ಸ್ವಾಧೀನವಾದ ಮಾಯೆಯಿಂದುತ್ಪನ್ನವಾಗಿರುವ ಈ ಆಭಾಸ(ಅಸತ್ಯ) ಪ್ರಪಂಚಕ್ಕೆ (ಸತ್ಯವಾಗಿರುವಂತೆ, ತೋರುವುದು, ಆದರೂ ಪರಮಾರ್ಥವಾಗಿ ವಿಚಾರಿಸಿ ನೋಡಿದರೆ ಅಸತ್ಯ ವಾಗಿರುವುದು.) ಸತ್ಯ ಭೂತನಾದ ನಾನೇ ಆಶ್ರಯನಾಗಿರುವೆನು. ಲೋಕದಲ್ಲಿ ಶುಕ್ತಿಯಲ್ಲಿ (ಮುತ್ತಿನ ಚಿಪ್ಪಿಯಲ್ಲಿ) ಬೆಳ್ಳಿಯೆಂಬ ಭ್ರಮೆ ಉಂಟಾದ ಕಾಲದಲ್ಲಿ ಅಸತ್ಯವಾದ ಬೆಳ್ಳಿಗೆ ಸತ್ಯವಾದ ಶುಕ್ತಿಯೇ ಆಶ್ರಯವಾಗಿರುವುದರಿಂದ ಸತ್ಯವಾದ ಪದಾರ್ಥಕ್ಕೆ ಅಸತ್ಯ ವಸ್ತುವಾಶ್ರಯವಾಗಲಾರದು. ಮತ್ತೂ ಶುಕ್ತಿಯನ್ನು ನೋಡಿ ಬೆಳ್ಳಿಯೆಂಬದಾಗಿ ಭ್ರಮೆ ಪಟ್ಟವೆಂಬದಾಗಿ ತಿಳಿದುಕೊಂಡ ಕೂಡ್ಲೆ ಸತ್ಯವಾದ ಶುಕ್ತಿಯಲ್ಲಿ ಬೆಳ್ಳಿ ಇರುವುದೆಂಬ ಜ್ಞಾನಮುಂಟಾಗುವುದಕ್ಕೆ ಅವಕಾಶ ಮುಂಟಾಗಲಾರದು. ಅದರಂತೆ ಪ್ರಪಂಚವು ಮಿಥ್ಯೆಯೆಂಬ ಜ್ಞಾನ ವುಂಟಾದಮೇಲೆ ಸತ್ಯನಾದ ಪರಬ್ರಹ್ಮನಲ್ಲಿ ಅಸತ್ಯ ಪ್ರಪಂಚ ವಿಷಯವಾದ ಜ್ಞಾನವು ಹೋಗುವುದಕ್ಕೆ ಸಂದರ್ಭವೇ ಇಲ್ಲವು. ಅಸಂಗನೂ ಸ್ವಸ್ವರೂಪನು ಭವ ನಿಷ್ಠನೂ ಆಗಿರುವ ಬ್ರಹ್ಮಜ್ಞಾನಿಗೆ ಪ್ರಪಂಚ ಸಂಗ ಮೂಲವಾದ ಅವಿದ್ಯಾ ಸಂಗವ್ಯಾವದೂ ಇರಲಾರದಾದುದರಿಂದ ಅಂತವನೇ ಜೀವನ್ಮುಕ್ತನೆನ್ನಲ್ಪಡುವನೆಂಬದಾಗಿ ಶ್ರೀಕೃಷ್ಣ ಪರಮಾತ್ಮನು ಇಂತಹ ರಹಸ್ಯಾರ್ಥವನ್ನು ಈ ನವಮಾಧ್ಯಾಯದಲ್ಲುಪದೇಶಿಸಿದನೆಂದು ತಿಳಿಯಬೇಕು. ... ||೯||

## ಶ್ರೀ ಯಾಮುನಾಚಾರ್ಯರು ಅನುಗ್ರಹಿಸಿದ ನವಮಾಧ್ಯಾಯ ಸಂಗ್ರಹ ಶ್ಲೋಕವು.

ಶ್ಲೋ|| ಸ್ವಮಾಹಾತ್ಮ್ಯಂ ಮನುಷ್ಯತ್ವೇ ಪರತ್ವಂಚ ಮಹಾತ್ಮನಾಂ|ವಿಶೇಷೋ ನವಮೇ ಯೋಗೋಭಕ್ತಿರೂಪಃಪ್ರಕೀರ್ತಿತಃ||೧೩||

ತಾ|| ಮುಂದಿನ ಗಾಥೆಯಲ್ಲಿ ವಿಸ್ತರಿಸಿ ಹೇಳಲ್ಪಡುವ "ಮಯಾತತಂ,,(೯||೪)ಇತ್ಯಾದಿಯಿಂದ ಪ್ರತಿಪಾದಿಸಲ್ಪಟ್ಟ ಜಗತ್ಕಾರಣತ್ವಾದಿತ

ನ್ನ ಮಾಹಾತ್ಮ್ಯವೂ, ಮನುಷ್ಯತಿರ್ಯಗಾದಿ ಸಜಾತೀಯನಾಗಿ ತಾನು ಅವತಾರವಂ ಮಾಡಿದರೂ ಶೈಥಿಲ್ಯವಂ ಹೊಂದದೇ ಇರುವ ಪಾರಮ್ಯಾತಿಶಯವೂ, "ಮಹಾತ್ಮಾನಸ್ತು ಮಾಂ ಪಾರ್ಥ,, (೯॥೧೩॥) ಇತ್ಯಾದಿ ಪ್ರತಿಪಾದಿತವಾದ ಭಕ್ತಿಯುಳ್ಳವರ ಪ್ರೇಮಪರೀವಾಹ ವ್ಯಾಪಾರ ವಿಶೇಷಗಳೂ, ತನ್ನ ವಿಷಯವಾಗಿರುವ ಅವ್ಯಭಿಚರಿತವಾದ ಭಕ್ತಿಸ್ವರೂಪವೂ, ಈ ನವಮಾಧ್ಯಾಯದಲ್ಲಿ ಪ್ರಪಂಚಿತವಾಯಿತೆಂದರಿಯಬೇಕು. ॥೧೩॥

ಶ್ರೀಮನ್ನಿಗಮಾಂತ ಮಹಾದೇಶಿಕರಿಂದ ಅನುಗ್ರಹಿಸಲ್ಪಟ್ಟ
ಶ್ರೀಮದ್ಗೀತಾರ್ಥ ಸಂಗ್ರಹಗಾಥೆಯು.

ತನ್ಮೇನ್ಮೈಯುನ್ತನ್ಪಿರಪ್ಪಿ(ಱ್ಱ)ತ್ತುಳರಾತ್ತನಿಮ್ಮೈಯೈಯುಮ್, ಪನ್ಮೇನಿನೆಣ್ಣಿನ್ನ್ಪಾಱ್ಪಿರಿಯಾವನ್ಪರಾಶ್ಚೈಕಳುಮ್, ಪುನ್ಮೇನಿವಣ್ಣವರ್ಪಾಱ್ಪುರಿಯಾದ ತನ್ಪತ್ತಿಯೈಯುಮ್, ನನ್ಮೇನಿನಾರಣನ್ನಾನ್ನರನುಕ್ಕುನವಿನ್ನನೆ. ... ... ॥೧೦॥

ವ್ಯಾ ॥ ಸ್ವಮಾಹಾತ್ಮ್ಯಂ ಮನುಷ್ಯತ್ವೇ ಪರತ್ವಂ ಚ ಮಹಾತ್ಮನಾಂ । ವಿಶೇಷೋ ನವಮೇ ಯೋಗೋ ಭಕ್ತಿರೂಪಃ ಪ್ರಕೀರ್ತಿತಃ,, ಎಂಬುವ ಸಂಗ್ರಹ ಶ್ಲೋಕದಂತೆ ನವಮಾಧ್ಯಾಯಾರ್ಥಗಳನ್ನೊಂದು ಗಾಥೆಯಿಂದ ಸಂಗ್ರಹಿಸುತ್ತಾರೆ. ನನ್ಮೇನಿ-ಒಳ್ಳೇ ವಿಗ್ರಹವುಳ್ಳವನಾದ, "ಮನ್ಮನಾ ಭಗವದ್ಭಕ್ತಃ,, (೯॥೩೪॥) ಎಂಬುವ ಶ್ಲೋಕಭಾಷ್ಯೋಕ್ತರಿತಿ ಯಿಂದ ವಿಲಕ್ಷಣ ಲೋಚನ ವರ್ಣ ತೇಜೋಲಾವಣ್ಯ ಬಾಹು ಪೀತಾಂಬರ ಭೂಷಣ ವಿಶಿಷ್ಟವಾದ ದಿವ್ಯಮಂಗಳ ವಿಗ್ರಹ ವುಳ್ಳವನೆಂದರ್ಥವು. ನಾರಣನ್ - ನಾರಾಯಣನು, ಇಲ್ಲಿ ನಾರಾಯಣ ಶಬ್ದದಿಂದ ಪೂರ್ವೋಕ್ತ ಶ್ಲೋಕಭಾಷ್ಯಪ್ರದರ್ಶಿತ ಭಜನೀಯತ್ವೋಪಯುಕ್ತವಾದ ಸರ್ವೇಶ್ವರತ್ವಾದಿ ಕಲ್ಯಾಣಗುಣಾಶ್ರಯತ್ವವು ವಿವಕ್ಷಿತವಾಗಿರುವುದು. ಈ ವಿಶೇಷಣ ವಿಶೇಷ್ಯಗಳಿಂದ ಉಪಾಸ್ಯವಸ್ತುವಿಗೆ ವಿಗ್ರಹದಿಂದಲೂ ಗುಣದಿಂದಲೂ ಸ್ವರೂಪದಿಂದಲೂ ಅತ್ಯಂತ ಭೋಗ್ಯತ್ವವಿರುವುದರಿಂದ ಆ ನಾರಾಯಣ ವಿಷಯವಾದ ಉಪಾಸನಕ್ಕೆ ನಿರತಿಶಯ ಪ್ರೀತಿರೂಪತಾ ಪತ್ತ್ಯರ್ಹತ್ವವು ಸೂಚಿತವಾಯಿತು. ತಾನ್- ಸ್ವಯಮೇವ, (ತಾನೆ) ಬದರಿಕಾಶ್ರಮದಲ್ಲಿ ನಾರಾಯಣನಾಗಿ ಅವತರಿಸಿ ಸ್ವದೈವತ್ಯವಾದ ಮಂತ್ರವನ್ನು ತಾನೇ ಪ್ರಕಟಿಸಿರುವಂತೆ

ಇಲ್ಲಿಯೂ ಸ್ವಮಾಹಾತ್ಮ್ಯಾದಿಗಳನ್ನು ತಾನೆ ಉಪದೇಶಿಸಿದ ಪ್ರಕಾರವ
ನ್ನೂ ಎಂದು ಭಾವವು. ತನ್ - ತನ್ನ, ಮೇನ್ಮೈಯುಮ್- ಉತ್ಕ
ರ್ಷವನ್ನೂ, "ಮಯಾತತಮಿದಂಸರ್ವಂ ,, ( ೯ ॥ ೪ ॥ )ಇತ್ಯಾದಿ
ಯಿಂದ ಪ್ರತಿಪಾದಿತಗಳಾದ ಜಗತ್ಕಾರಣತ್ವ ಸರ್ವಾಧಾರತ್ವ ಅನನ್ಯಾ
ಧಾರತ್ವವೇ ಮೊದಲಾದ ಅಸಾಧಾರಣಮಹಾತ್ಮ್ಯಗಳೆನ್ನೆಂದುಭಾ
ವವು. ತನ್‌ಪಿರಪ್ಪಿಲ್- ತನ್ನ ಅವತಾರದಲ್ಲಿ, ತಳರಾ- ಶಿಥಿಲೀಭವಿಸದೆ
ಇರುವ, ತನಿಪ್ಪೆರುಮೈಯುಮ್- ಅದ್ವಿತೀಯತೆಯನ್ನೂ; ಮನುಷ್ಯತಿ
ರ್ಯಗಾದಿ ಸಜಾತೀಯನಾಗಿ ಅವತರಿಸಿದರೂ ಸ್ವಾಭಾವಿಕಾನವಧಿಕಾತಿ
ಶಯ ಪಾರಮ್ಯಾಪ್ರಚ್ಯುತಿಯನ್ನೂ ಎಂದರ್ಥವು. ಇಲ್ಲಿ "ಪಿರಪ್ಪಿಲ್,,
ಎಂಬದಾಗಿ ಅವತಾರ ಸಾಮಾನ್ಯೋಪಾದಾನದಿಂದ ಸಂಗ್ರಹಶ್ಲೋಕ
ದಲ್ಲಿ ಮನುಷ್ಯತ್ವೋಪಾದಾನವು ಅವತಾರ ಸಾಮಾನ್ಯೋಪಲಕ್ಷಣಪ
ರವೆಂಬದಾಗಿ ಸೂಚಿತವಾಯಿತು. ಪನ್‌ಮೇನಿ- ಪಲ್, ಮೇನಿ, ಎಂಬ
ದಾಗಿ ಪದಚ್ಛೇದವು. ಪಲ್ - ಅನೇಕಗಳಾದ, ಮೇನಿ - ಶರೀರಗಳ
ನ್ನು,ನಣ್ಣಿನನ್ಪಾಲ್- ಹೊಂದಿದವನ ವಿಷಯದಲ್ಲಿ, "ಜ್ಞಾನಯಜ್ಞೇ
ನಚಾಪ್ಯನ್ಯೇಯಜಂತೋ ಮಾಮುಪಾಸತೇ । ಏಕತ್ವೇನಪೃಥಕ್ತ್ವೇನ
ಬಹುಧಾವಿಶ್ವತೋಮುಖಮ್ ,, ( ೯ ॥ ೧೫ ॥ ) ಎಂಬೀ ಪ್ರಕಾರ
ವಾಗಿ ದೇವತಿರ್ಯಙ್ಮನುಷ್ಯಸ್ಥಾವರಾದಿ ವಿಚಿತ್ರ ಜಗಚ್ಛರೀರಕತ್ವೇ
ನವಿಶ್ವಪ್ರಕಾರನಾದ ತನ್ನ ವಿಷಯದಲ್ಲಿ ಎಂದರ್ಥವು. (ಇದಕ್ಕೆ
"ಅನ್ಬೈಕಳುಮ್,, ಎಂಬ ಪದದೊಡನೆ ಅನ್ವಯವು.) ಪಿರಿಯಾ-ವಿಶ್ಲೇ
ಷಿಸದೇ ಇರುವ. ಅನ್ಬರ್-ಪ್ರೇಮಯುಳ್ಳವರ, ಅನ್ಬೈಕಳುಂ - ಪ್ರೀತಿಗ
ಳನ್ನು, "ಮಹಾತ್ಮಾನಸ್ತುಮಾಂಪಾರ್ಥ ದೈವೀಂಪ್ರಕೃತಿಮಾಶ್ರಿ
ತಾಃ।ಭಜಂತ್ಯನನ್ಯಮನಸೋಜ್ಞಾತ್ವಾಭೂತಾದಿಮವ್ಯಯಂ,, (೯॥
೧೩ ॥ )ಎಂಬುವ ಶ್ಲೋಕದಲ್ಲಿ "ಅನನ್ಯಮನಸಃ,, ಎಂಬೀ ಪದ
ದಿಂದ ವಿವಕ್ಷಿತರಾದ ನಿರತಿಶಯ ಪ್ರೇಮಶಾಲಿಗಳ " ಸತತಂಕೀರ್ತ
ಯಂತೋಮಾಂ,, (೯॥೧೪॥) ಎಂಬ ಶ್ಲೋಕ ಭಾಷ್ಯದಲ್ಲಿ ಪ್ರದರ್ಶಿ
ತವಾದಭಗವತ್ಕಲ್ಯಾಣಗುಣ ವಿಶೇಷವಾಚಿಯಾದನಾಮಸ್ಮರಣೆಯ,
ಸರ್ವಾಂಗಪುಲಕೋದ್ಗಮ, ಗದ್ಗದ ಕಂಠೀಭವನ, ನಾಮವಿಶೇಷ ಕೀ
ರ್ತನ, ಭಗವದರ್ಚನ, ತದುಪಕಾರಕ ಭವನ ನಂದನ ಕರಣಾದಿ ವ್ಯ

ಧಸಂಕಲ್ಪ, ಯತನ, ಅಚಿಂತಿತ ಪಾಂಸುಕರ್ದಮ ಶರ್ಕರಾದಿ ಪ್ರದೇಶಗಳಲ್ಲಿ ಭಕ್ತಿ ಭರದಿಂದ ಬಗ್ಗಿರುವ ಶಿರಸ್ಸುಳ್ಳ ಅಷ್ಟಾಂಗ ಪ್ರಣಾಮ, ನಿತ್ಯಯೋಗ ಕಾಂಕ್ಷಾದಿ ರೂಪ ಪ್ರೇಮ ಪರೀವಾಹ ವ್ಯಾಪಾರಗಳೆನ್ನೆಂದರ್ಥವು. ಇದರಿಂದ “ಮಹಾತ್ಮನಾಂವಿಶೇಷಃ, ಎಂಬ ಸಂಗ್ರಹಶ್ಲೋಕ ಘಟ್ಟವು ವಿವೃತವಾಯಿತು. ಪುಱಮನಿ- (ಪುಲ್, ಮೇನಿ ಇತಿ ಪದಚ್ಛೇದವು) ಪುಲ್-ಅತ್ಯಲ್ಪವಾದ, ಮೇನಿ-ಶರೀರವುಳ್ಳ, ವಿಣ್ಣವರ್ಪಾಲ್- ದೇವತೆಗಳವಿಷಯದಲ್ಲಿ, ಪರಿಯಾತ-ಪ್ರವರ್ತಿಸದೇಇರುವ, ನಿತ್ಯನೈಮಿತ್ತಿಕ ಕರ್ಮಾನುಷ್ಠಾನ ಕಾಲದಲ್ಲಿ ನಶ್ವರದೇಹ ಯುಕ್ತರಾದ ಭಗವತ್ಪ್ರಕಾರ ಭೂತರಾಗಿರುವ ದೇವತಾದಿವಿಷಯದಲ್ಲಿ ಪರ್ಯವಸಾನವಾಗದೇಇರುವ, ದೇವತೆಗಳಿಗೆ ಪುಱಮನಿ, ಎಂಬ ವಿಶೇಷಣದಿಂದ ಭಕ್ತ್ಯನರ್ಹತ್ವವೂ ಫಲಿತವಾಯಿತು. ತಱ- ತನ್ನವಿಷಯವಾದ, ಪತ್ತಿಯೈಯುಂ- “ಮನ್ಮನಾಭವ,, (೯॥ ೩೪॥)ಎಂಬಶ್ಲೋಕದಲ್ಲಿ ದರ್ಶಿತವಾದ ಅವ್ಯಭಿಚರಿತ ಭಕ್ತಿಸ್ವರೂಪವನ್ನೂ ಎಂದರ್ಥವು. ನರನುಕ್ಕು- ನರಾಂಶನಾಗಿರುವ ಅರ್ಜುನನಿಗೆ,ನವಿನ್ನರ್ಱ- ಉಪದೇಶಿಸಿದನು. ನಾರಾಯಣನಾದ ಶ್ರೀಕೃಷ್ಣನು ನರನಾದ ಅರ್ಜುನನಿ ಗುಪದೇಶಿಸುವುದು ಉಚಿತವಾಗಿಯೇ ಇರುವುದೆಂದುಭಾವವು. ... ... ॥೧೦॥

ಇತಿ ಶ್ರೀಮದ್ಗೀತಾರ್ಥಸಾರೇ ನವಮಾಧ್ಯಾಯ

ಸ್ಸಮಾಪ್ತಃ.

ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.



ಶ್ರೀರಸ್ತು.

ಶ್ರೀಯೈ ಶ್ರೀರುಕ್ಮಿಣ್ಯೈನಮಃ.

## ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.

# ಶ್ರೀಮದ್ಗೀತಾರ್ಥ ಸಾರದಲ್ಲಿ ದಶಮಾಧ್ಯಾಯ ಪ್ರಾರಂಭವು.

ಶ್ರೀಭಗವಾನುವಾಚ ॥ ಭೂಯಏವಮಹಾಬಾಹೋಶೃಣುಮೇಪರಮಂವಚಃ।ಯತ್ತೇಹಂಪ್ರೀಯಮಾಣಾಯ ವಕ್ಷ್ಯಾಮಿಹಿತಕಾಮ್ಯಯಾ ॥ ... ॥೧॥

ಪ॥ ಶ್ರೀಭಗವಾನ್-ಉವಾಚ॥ ಭೂಯಃ-ಏವ-ಮಹಾಬಾಹೋ-ಶೃಣು-ಮೇ-ಪರಮಂ-ವಚಃ। ಯತ್-ತೇ-ಅಹಂ-ಪ್ರೀಯಮಾಣಾಯ-ವಕ್ಷ್ಯಾಮಿ-ಹಿತಕಾಮ್ಯಯಾ ॥

ಅ॥ ಹೇಮಹಾಬಾಹೋ-ಎಲೈ ಮಹತ್ತಾದ ಬಾಹುವುಳ್ಳ ಅರ್ಜುನನೆ, ಭೂಯಃಏವ-ಮತ್ತೂ, ಮೇ-ನನ್ನ, ಪರಮಂ-ಶ್ರೇಷ್ಠವಾದ, (ಶಂ) ಪರಮಾತ್ಮಸ್ವರೂಪ ಪ್ರಕಾಶಕವಾದ,(ರಾ)ನನ್ನ ಮಹಿಮೆಯನ್ನೇ ಅಧಿಕವಾಗಿ ತೋರಿಸುವ, ವಚಃ-ಮಾತನ್ನು, ಶೃಣು-ಕೇಳು, ಪ್ರೀಯಮಾಣಾಯ-ಪ್ರೀತಿಯನ್ನು ಮಾಡುವ, (ಶಂ) ನನ್ನ ವಾಕ್ಯಗಳನ್ನು ಕೇಳಿ ಅಮೃತ ಪಾನವಂ ಮಾಡಿದವನಂತೆ ಸಂತೋಷಿಸುವ, (ರಾ) ನನ್ನ ಮಹಿಮೆಗಳನ್ನು ಕೇಳಿ ಪ್ರೀತಿಯನ್ನು ಹೊಂದಿರುವ, (ಮ॥ ಗಿ॥ ವಿ) ನನ್ನ ವಾಕ್ಯಗಳಂ ಕೇಳಿ ಸಂತೋಷಿಸುತಲಿರುವ, ತೇ-ನಿನಗೆ, ಹಿತಕಾಮ್ಯಯಾ-ಹಿತವನ್ನು ಮಾಡಬೇಕೆಂಬ ಅಪೇಕ್ಷೆಯಿಂದ, (ರಾ) ಭಕ್ತಿಯು ಅಭಿವೃದ್ಧಿಯಾಗುವುದರಿಂದುಂಟಾದ ಫಲವನ್ನು ನೀನು ಹೊಂದಬೇಕೆಂಬ ಇಚ್ಛೆಯಿಂದ, ಅಹಂ-ನಾನು, ವಕ್ಷ್ಯಾಮಿ-ಹೇಳುವೆನು. ... ... ॥೧॥

(ಶಂ॥ ಭಾ॥) ಅಧ್ಯಾಯದ್ವಯದಲ್ಲಿ ಸಿದ್ಧವಾದ ಅರ್ಥವನ್ನು ಸಂಕ್ಷೇಪವಾಗಿ ಅನುವಾದ ಮಾಡುತ್ತಾರೆಂದರಿಯಬೇಕು. ಸಪ್ತಮಾಧ್ಯಾಯದಲ್ಲಿ ಸೋಪಾಧಿಕವಾಗಿಯೂ ನಿರುಪಾಧಿಕವಾಗಿಯೂ ಇರುವ ಭಗವತ್ತತ್ವವೂ ಸವಿಶೇಷ ನಿರ್ವಿಶೇಷ ರೂಪ ಪ್ರತಿಪತ್ತಿಗೆ ಯೋಗ್ಯವಾದ ಭಗವದ್ವಿಭೂತಿಗಳೂ ಪ್ರಕಾಶಿತವಾಯಿತು. ಈ ಅರ್ಥವೇ ನವಮಾಧ್ಯಾಯದಲ್ಲಿಯೂ ಪ್ರದರ್ಶಿತವಾಗಿರುವುದು. ಈ ಅಧ್ಯಾಯದಲ್ಲಿ ಯಾವ ಯಾವ ಪದಾರ್ಥಗಳಲ್ಲಿ ಭಗವಂತನು ( ಹ್ಯಾಗೆ ) ಧ್ಯಾನಿಸಲ್ಪಡತಕ್ಕವನೋ ಅಂತಹ ಪದಾರ್ಥಗಳು ಹೇಳತಕ್ಕದ್ದಾಗಿರುವು

ವು. ಸವಿಶೇಷಧ್ಯಾನದಲ್ಲಿಯೂ ನಿರ್ವಿಶೇಷಪ್ರತಿಪತ್ತಿಯಲ್ಲಿಯೂ ವಿಶೇಷೋಪಕಾರದಿಂದ ಭಗವತ್ತತ್ವವು ಹೇಳತಕ್ಕದ್ದಾಗಿರುವುದೆಂದರಿಯಬೇಕು. (ಇಲ್ಲಿ ಸ್ಥೂಲವ್ಯಷ್ಟಿ ಸಮಷ್ಟಿಸ್ವರೂಪವಾದ ವಿರಾಟ್ಸ್ವರೂಪವನ್ನು ವಿಶದೀಕರಿಸಲು ಹತ್ತು ಹನ್ನೊಂದನೇ ಅಧ್ಯಾಯಗಳು ಹೇಳಲ್ಪಡುವುವೆಂತಲೂ ಈ ದಶಮಾಧ್ಯಾಯದಲ್ಲಿ ವ್ಯಷ್ಟಿ ಎಂಬ ವಿಭೂತಿಯು ನಿರೂಪಿಸಲ್ಪಡುವುದೆಂತಲೂ ವಿಚಿತ್ರಶಕ್ತಿಯುಳ್ಳ ವ್ಯಷ್ಟಿವಿಭೂತಿಯೇ ವಿಶ್ವರೂಪಿಯಾದ ಪರಮಾತ್ಮನಿಗೆ ಅವಯವವಾಗಿರುವ ದೇವದೇವರ್ಷಿ ಗಂಧರ್ವ ಸಿದ್ಧಾವತಾರ ಪಕ್ಷಿಪಶುಮನುಷ್ಯೋರಗವೃಕ್ಷಾದಿ ಸ್ವರೂಪವಾಗಿರುವುದರಿಂದ ಅಪಾರವಾಗಿರುವುದೆಂತಲೂ ತಿಳಿಯಬೇಕು.) ಸವಿಶೇಷವಾಗಿಯೂ ನಿರ್ವಿಶೇಷವಾಗಿಯೂ ಇರುವ ಭಗವದ್ರೂಪವು ಪೂರ್ವವೇ ಅಲ್ಲಲ್ಲಿ ಹೇಳಲ್ಪಟ್ಟಿರುವುದರಿಂದ ಈ ಅಧ್ಯಾಯದಲ್ಲಿ ಹೇಳತಕ್ಕ ಅಂಶವ್ಯಾವದೂ ಇಲ್ಲವೆಂದು ಸಂದೇಹಿಸದೆ ಹೇಳತಕ್ಕ ಭಗವತ್ತತ್ವವು ಪೂರ್ವದಲ್ಲಿ ಹೇಳಲ್ಪಟ್ಟಿದ್ದರೂ ತಿಳಿಯಲಿಕ್ಕೆ ಅಶಕ್ಯವಾದ್ದರಿಂದ ಪುನಶ್ಚ ಶ್ರೀಕೃಷ್ಣನುಪದೇಶಿಸುತ್ತಾನೆಂದರಿಯಬೇಕು. ... ... ||೧||

(ಶ್ರೀ) ಉಕ್ತಾಸ್ಸಂಕ್ಷೇಪತಃ ಪೂರ್ವಂ ಸಪ್ತಮಾದಾವಿಭೂತಯಃ । ದಶಮೇ ತಾವಿತನ್ವಂತೇ ಸರ್ವತ್ರೇಶ್ವರಸಿದ್ಧಯೇ ॥ ಸಪ್ತಮಾದಿಗಳಾದ ಅಧ್ಯಾಯಗಳಲ್ಲಿ ಯಾವ ಭಗವದ್ವಿಭೂತಿಗಳು ಹೇಳಲ್ಪಟ್ಟಿರುವುವೊ ಆ ವಿಭೂತಿಗಳೇ ಈ ದಶಮಾಧ್ಯಾಯದಲ್ಲಿ ಸರ್ವತ್ರ ಈಶ್ವರನಿರುವನೆಂಬುವುದಂ ತೋರಿಸುವುದಕ್ಕಾಗಿ ವಿಸ್ತಾರವಾಗಿ ಹೇಳಲ್ಪಡುವುವು. ... ... ... ... ||೧||

(ರಾ॥ ಭಾ॥) ಸಪರಿಕರವಾದ ಭಕ್ತಿಯೋಗವು ಹೇಳಲ್ಪಟ್ಟಿತು. ಈಗ ಭಕ್ತಿಯುಂಟಾಗುವುದಕ್ಕಾಗಿಯೂ ಅದು ಅಭಿವೃದ್ಧಿಯಾಗುವುದಕ್ಕಾಗಿಯೂ ಪರಮಾತ್ಮನ ನಿರಂಕುಶೈಶ್ವರ್ಯಾದಿ ಕಲ್ಯಾಣ ಗುಣಗಳಿಕ್ಕೆ ಪೂರ್ತಿ ಇಲ್ಲದಿರುವಿಕೆಯನ್ನೂ, ಸಮಸ್ತ ಪ್ರಪಂಚವೂ ಅವನಿಗೆ ಶರೀರವಾಗಿರುವುದರಿಂದಸಮಸ್ತವೂ(ಭಗವದಾತ್ಮಕವಾಗಿರುವುದರಿಂದ) ಆ ಪರಮಾತ್ಮನಿಂದಲೇ ಪ್ರವರ್ತ್ಯವಾಗಿರುವ ಪ್ರಕಾರವನ್ನೂ ವಿಸ್ತರಿಸಿ ಹೇಳುತ್ತಾನೆಂದರಿಯಬೇಕು.ನನ್ನ ಮಹಿಮೆಯನ್ನು ಕೇಳಿಸಂತೋ

ಪ್ರಿಯನಾದ ನಿನಗೆ ನನ್ನ ವಿಷಯದಲ್ಲಿಭಕ್ತಿಯುಂಟಾಗಿಯೂ ಅದುಅಭಿವೃದ್ಧವಾಗುವುದಕ್ಕಾಗಿಯೂ(ಇಂತಹಹಿತವನ್ನು ನಿನಗುಂಟುಮಾಡುವುದಕ್ಕಾಗಿ) ಪುನಶ್ಚ ನನ್ನ ಮಹಾತ್ಮ್ಯ ಪ್ರಪಂಚನ ರೂಪವಾಗಿರುವ ವಾಕ್ಯಗಳನ್ನು ಹೇಳುವೆನು. ಸಾವಧಾನದಿಂದ ಕೇಳು ವಂತವನಾಗು. ''ಲೋಕದಲ್ಲಿ ಬಾಹು ಶಾಲಿಗಳಿಗೆ ಅನ್ಯರ ಉತ್ಕರ್ಷ ಕಥನವು ಅಸೂಯಾ ಪದವಾಗಿರುವುದು. ನಿನ್ನ ವಿಷಯದಲ್ಲಿಯೂ; ಶಿಶುಪಾಲಾದಿ ವ್ಯಾಕುಲವಾದ ಜಗತ್ತಿನಲ್ಲಿ ಭಾಗ್ಯವಶದಿಂದ ನಿನಗೆ ಇಂತಹ ಪ್ರೀತಿಯುಂಟಾಯಿತೆಂದು ನಾನು ತಿಳಿದಿರುವೆನೆಂದು ''ಮಹಾಬಾಹೋ-ಪ್ರೀಯಮಾಣಾಯ, ಎಂಬೀ ಪದಗಳಿಗರ್ಥವನ್ನೂ, (ಅಥವಾ) ಬಾಹು ಬಲದಿಂದ ಹೇಗಾದರೆ ಬಾಹ್ಯ ಶತ್ರುಗಳಾದ ದುರ್ಯೋಧನಾದಿಗಳಂ ಕೊಲ್ಲುವಿಯೋ ಅದರಂತೆ ಆಂತರ ಶತ್ರುಗಳಾದ ಕಾಮಾದಿಗಳನ್ನು ಜಯಿಸುತ್ತೀ,, ಎಂಬೀ ಅರ್ಥವನ್ನೂ ತಾತ್ಪರ್ಯ ಚಂದ್ರಿಕೆಯಲ್ಲಿ ಉದಾಹರಿಸುತ್ತಾರೆಂದರಿಯಬೇಕು. ... ... ॥೧॥

(ಗೀ॥ ವಿ॥) ಷಷ್ಠಾಧ್ಯಾಯದಲ್ಲಿ ಹೇಳಲ್ಪಟ್ಟ ಧ್ಯಾನವು(''ಮನ್ಮನಾಭವ,, ೯॥ ೩೪॥) ಎಂಬೀ ನವಮಾಧ್ಯಾಯಾಂತ್ಯದಲ್ಲಿ ಸ್ಮರಿಸಲ್ಪಟ್ಟಿತು. ಆಧ್ಯಾನವು ಧ್ಯೇಯವಾದ ವಸ್ತುವಿಲ್ಲದಿದ್ದರೆ ನಿರಾಶ್ರಯವಾಗುವುದರಿಂದ ಧ್ಯಾನಯೋಗ್ಯವಾದ ವಸ್ತುವನ್ನು ಹೇಳಬೇಕು. ಅದರಲ್ಲಿ ವಿಶಿಷ್ಟಾಧಿಕಾರಿಗಳಿಂದ ಧ್ಯಾನಮಾಡುವುದಕ್ಕೆ ಯೋಗ್ಯವಾದ ವಸ್ತುಗಳು ಪರಮಾತ್ಮ ವಿಭೂತಿ ರೂಪಗಳಾಗಿರುವುವು. ಆರೂಪಗಳು ಸಪ್ತಮಾಧ್ಯಾಯದಲ್ಲಿ ''ರಸೋಹಮಪ್ಸು,, (೭॥ ೮॥) ಇತ್ಯಾದಿ ಶ್ಲೋಕಗಳಿಂದ ಸಂಕ್ಷೇಪವಾಗಿ ಹೇಳಲ್ಪಟ್ಟವು. ನವಮಾಧ್ಯಾಯದಲ್ಲಿಯೂ ''ಅಹಂಕ್ರತುರಹಂಯಜ್ಞಃ,, (೯॥ ೧೬॥) ಇತ್ಯಾದಿಗಳಿಂದ ಹೇಳಲ್ಪಟ್ಟಿದ್ದರೂ ವಿಸ್ತಾರದಿಂದ ಈ ದಶಮಾಧ್ಯಾಯದಲ್ಲಿ ಹೇಳುತ್ತಾರೆಂದರಿಯಬೇಕು. ... ॥೧॥

ಶ್ಲೋ॥ ನಮೇವಿದುಸ್ಸುರಗಣಾಃ ಪ್ರಭವಂನಮಹರ್ಷಯಃ |ಅಹಮಾದಿರ್ಹಿ ದೇವಾನಾಂ ಮಹರ್ಷೀಣಾಂಚಸರ್ವಶಃ ॥ ... ... ॥೨॥

ಪ|| ನ- ಮೇ- ವಿದುಃ- ಸುರಗಣಾಃ- ಪ್ರಭವಂ- ನ- ಮಹರ್ಷಯಃ । ಅಹಂ- ಆದಿಃ- ಹಿ- ದೇವಾನಾಂ- ಮಹರ್ಷೀಣಾಂ- ಚ- ಸರ್ವಶಃ ||

ಅ|| ಮೇ- ನನ್ನ, ಪ್ರಭವಂ- ಪ್ರಭಾವವನ್ನು, (ಶಂ) ಪ್ರಭುಶಕ್ತ್ಯತಿಶಯುವನ್ನು, (ಅಥವಾ) ಉತ್ಪತ್ತಿಯನ್ನು,ಸುರಗಣಾಃ-ದೇವತಾಗಣಗಳೂ, ಮಹರ್ಷಯಃ- ಮಹರ್ಷಿಗಳೂ, ನವಿದುಃ - ತಿಳಿಯಲಾರರು. ಹಿ- ಹೇತಕ್ಕೆಂದರೆ, ಅಹಂ- ನಾನು, ದೇವಾನಾಂ- ದೇವತೆಗಳಿಗೆ, ಮಹರ್ಷೀಣಾಂಚ- ಮಹರ್ಷಿಗಳಿಗೂ, ಸರ್ವಶಃ- ಸರ್ವಪ್ರಕಾರದಿಂದಲೂ, ಆದಿಃ- ಕಾರಣನಾಗಿರುವೆನು, ... ||೨||

(ಶಂ|| ಭಾ||) ಎಲೈ ಶ್ರೀಕೃಷ್ಣನೇ? ನಿನಿಗಿಂತಲೂ ಇತರನಾದ ಮತ್ತೆ ಯಾವನಾದರೂ ನೀನು ಹೇಳುವ ಶ್ರೇಷ್ಠವಾದ ವಾಕ್ಯಗಳನ್ನು ಹೇಳುತ್ತಾನೆ, ಅದರಿಂದಲೇ ನನಿಗೆ ತತ್ವಜ್ಞಾನ ಮುಂಟಾಗುತ್ತದೆ; ಆದುದರಿಂದ ನೀನು ಹೇಳುವ ವಾಕ್ಯಗಳು ನಿರರ್ಥಕಗಳೆಂಬ ಅರ್ಜುನನ ಶಂಕೆಯನ್ನು ತಾನೆ ಚಿಂತಿಸಿ ಇಂದ್ರಾದಿ ದೇವತೆಗಳೂ ಭೃಗ್ವಾದಿ ಮುನಿಗಳೂ ನನ್ನ ಪ್ರಭಾವವನ್ನು ಸಮೀಚೀನವಾಗಿ ತಿಳಿಯಲಾರ ರಾದುದರಿಂದ ಈಗ ನಾನು ನಿನಗುಪದೇಶಿಸುವ ವಾಕ್ಯಗಳನ್ನಂತವರು ಉಪದೇಶಿಸಲಾರರೆಂದೆಣಿಸಿ ಪರಮಾತ್ಮನಾದ ನಾನೇ ಉಪದೇಶಿಸುತ್ತೇನೆಂದು ಹೇಳುತ್ತಾನೆಂದರಿಯಬೇಕು. ... ||೨||

(ರಾ|| ಭಾ||) ಯಾವಕಾರಣದಿಂದ ಬ್ರಹ್ಮ ರುದ್ರೇಂದ್ರಾದಿದೇವತೆಗಳಿಗೂ ನಾರದಾದಿ ದೇವರ್ಷಿಗಳಿಗೂ ಸರ್ವ ಪ್ರಕಾರದಿಂದಲೂ ನಾನು ಕಾರಣನಾಗಿರುವೆನೊ, ಆಕಾರಣದಿಂದ ಅತೀಂದ್ರಿಯಾರ್ಥದರ್ಶಿಗಳಾಗಿರುವ ಬ್ರಹ್ಮರುದ್ರೇಂದ್ರಾದಿ ದೇವತೆಗಳೂ ನಾರದಾದಿಮಹರ್ಷಿಗಳೂ ನಮ್ಮ ಪ್ರಭಾವವನ್ನು (ನಮ್ಮ ನಾಮಕರ್ಮ ಸ್ವರೂಪ ಸ್ವಭಾವಾದಿಗಳನ್ನು) ತಿಳಿಯಲಾರರು. ಆಬ್ರಹ್ಮ ರುದ್ರೇಂದ್ರಾದಿ ದೇವ ಮಹರ್ಷಿಗಳ ಸ್ವರೂಪಕ್ಕೂ ಜ್ಞಾನ ಶಕ್ತ್ಯಾದಿಗಳಿಗೂ ಕಾರಣ ಭೂತನಾದ ನಾನು ಅವರುಗಳ ದೇವತ್ವ ಮಹರ್ಷಿತ್ವಾದಿಗೆ ಹೇತುಭೂತಗಳಾದ ಪುಣ್ಯ ಕರ್ಮಗಳಿಗೆ ಅನುರೂಪವಾಗಿ ಆವರುಗಳಿಗೆ ಪರಿಮಿತವಾದ ಜ್ಞಾನವನ್ನು ಕೊಟ್ಟಿರುವೆನು; ಆಪ್ರಕಾರವಾಗಿ ಅವರು ಪರಿಮಿತ ಜ್ಞಾನವುಳ್ಳವರಾದುದರಿಂದ ನಮ್ಮ ಸ್ವರೂಪ ಸ್ವಭಾವಾದಿಗಳನ್ನು ಯಥಾವತ್ತಾಗಿ ತಿಳಿಯಲಾರರೆಂದು ತಾತ್ಪರ್ಯವು. ||೨||

(ಗೀ|| ವಿ||) ಮೊದಲನೇಶ್ಲೋಕದಲ್ಲಿ ಪ್ರತಿಜ್ಞೆ ಮಾಡಲ್ಪಟ್ಟ ತನ್ನ ಮಹಿಮೆಯನ್ನು ಹೇಳುತ್ತಾನೆ. ಮೆ- ನನ್ನ, ಪ್ರಭವಂ- ಸಾಮರ್ಥ್ಯವನ್ನು, ಸುರಗಣಾಃ - ದೇವತಾಗಣಗಳು, ಮಹರ್ಷಯಃ- ಭೃಗ್ವಾದಿ ಮಹರ್ಷಿಗಳೂ, (ಇದು ಗಂಧರ್ವ ಸಿದ್ಧಾದಿ ಸಮಸ್ತರಿಗೂ ಉಪಲಕ್ಷಣವಾಗಿರುವುದು) ಸಮಸ್ತರೂ ಎಂದರ್ಥವು. ನವಿದುಃ- ಅರಿಯರು, ಚೆನ್ನಾಗಿ ತಿಳಿಯಲಿಕ್ಕೆ ಶಕ್ಯವಲ್ಲವಾದ್ದರಿಂದ ಪರಮಾತ್ಮನ ಸಾಮರ್ಥ್ಯವನ್ನೂ ಆಪರ ಮಾತ್ಮಾಧೀನವಾದ ಜಗದುತ್ಪತ್ತಿಯನ್ನೂ ಅರಿಯರು. ಭಗವನ್ಮಹಿಮೆಯೆಂತೆಯೂ ಜಗದುತ್ಪತ್ತಿಯಂತೆಯೂ ಭಗವದುತ್ಪತ್ತಿಯೂ ವುಂಟೆಂತಲೇ ಎಣಿಸಿ ( ಅಸಾಧ್ಯವಾದುದರಿಂದ) ಭಗವದುತ್ಪತ್ತಿಯನ್ನು ತಿಳಿಯಲಾರರೆಂದು ಭ್ರಮಿಸಬಾರದು. ಪರಮಾತ್ಮನಿಗೆ ಉತ್ಪತ್ತಿ ಇಲ್ಲವಾದುದರಿಂದಲೇ ಅದನ್ನರಿಯಲಾರರೆಂದರ್ಥವು. ಪರಮಾತ್ಮನಾದ ತನಿಗೆ ಉತ್ಪತ್ತಿ ಇಲ್ಲದಿರುವಿಕೆಯಲ್ಲಿ ಕಾರಣವನ್ನು ಉತ್ತರಾರ್ಧದಿಂದ ತೋರಿಸುತ್ತಾನೆ. ದೇವತೆಗಳಿಗೂ ಭೃಗ್ವಾದಿ ಮಹರ್ಷಿಗಳಿಗೂ ಗಂಧರ್ವ ಸಿದ್ಧ ವಿದ್ಯಾಧರಾದಿ ಸರ್ವರಿಗೂ ಸರ್ವಪ್ರಕಾರದಿಂದ ಅವರ ಉತ್ಪತ್ತ್ಯಾದಿಗಳಿಗೆ ನಾನೇ ಕಾರಣನಾಗಿರುವೆನು. ಆದುದರಿಂದ ಅವರ ಉತ್ಪತ್ತಿಯೂ ನನ್ನ ಅಧೀನವಾಗಿರುವುದು. ಸರ್ವರ ಉತ್ಪತ್ತಿಯೂ ಪರಮಾತ್ಮಾಧೀನವಾದಮೇಲೆ ಪರಮಾತ್ಮನಿಗೆ ಉತ್ಪತ್ತ್ಯಾದಿಗಳನ್ನು ಹೇಗೆ ತಾನಶಂಕಿಸಬಹುದು? ಈಅರ್ಥವನ್ನು ಓಂ- ಅಸಂಭವಸ್ತು ಸತೋ ನುಪಪತ್ತೇಃ,, ಎಂಬಸೂತ್ರವೂ ಹೇಳುತ್ತದೆ. ... ... ||೨||

ಶ್ಲೋ|| ಯೊಮಾಮಜಮನಾದಿಂಚವೇತ್ತಿಲೊಕಮಹೇ
ಶ್ವರಂ | ಅಸಮ್ಮೂಢಸ್ಸಮರ್ತ್ಯೇಷುಸರ್ವಪಾಪೈಃಪ್ರ
ಮುಚ್ಯತೆ || ||೩||

ಪ|| ಯಃ- ಮಾಂ- ಅಜಂ- ಅನಾದಿಂ- ಚ- ವೇತ್ತಿ- ಲೋಕಮಹೇಶ್ವರಂ | ಅಸಮ್ಮೂಢಃ- ಸಃ-ಮರ್ತ್ಯೇಷು- ಸರ್ವಪಾಪೈಃ- ಪ್ರಮುಚ್ಯತೇ||

ಅ|| ಯಃ- ಯಾವನಾದರೆ, ಮಾಂ- ನನ್ನನ್ನು. ಅಜಂ- ಉತ್ಪತ್ತಿಶೂನ್ಯನನ್ನಾಗಿಯೂ, ಅನಾದಿಂಚ- ಆದಿರಹಿತನನ್ನಾಗಿಯೂ, ಲೋಕಮಹೇಶ್ವರಂ- ಲೋಕಗಳಿಗೆಲ್ಲವು ಮಹೇಶ್ವರನನ್ನಾಗಿಯೂ ವೇತ್ತಿ-ಅರಿಯುತ್ತಾನೆಯೊ, ಸಃ- ಅವನು, ಮರ್ತ್ಯೇಷು-

ಮನುಷ್ಯರಲ್ಲಿ, ಅಸಮ್ಮೂಢಃ- ಮೂಢತನವಿಲ್ಲದವನಾಗಿ, ಸರ್ವಪಾಪೈಃ- ಸಮಸ್ತಪಾಪ ಗಳಿಂದ, ಪ್ರಮುಚ್ಯತೆ- ಬಿಡಲ್ಪಡುತ್ತಾನೆ. ... ೩॥

(ರಾ॥ಭಾ॥) ಈಪ್ರಕಾರವಾಗಿ ದೇವಾಗಳಿಂದಲೂ ತಿಳಿಯಲಸಾಧ್ಯ ನಾದ ತನ್ನನ್ನು ತಿಳಿದರೆ ಇದುಭಕ್ತಿಯುಂಟಾಗುವುದಕ್ಕೆವಿರೋಧಿಯಾ ದಸರ್ವಪಾಪಗಳವಿಮೋಚನವನ್ನು ಮಾಡುವುದೆಂದುಪದೇಶಿಸುತ್ತಾನೆ. ಯಃ-ಯಾವ ಚೇತನನು,ಅಜಂ-ಉತ್ಪತ್ತಿ ಶೂನ್ಯನಾಗಿ ವಿಕಾರಿದ್ರವ್ಯ ವಾದ ಅಚಿತ್ತಿಗಿಂತಲೂ ಆಯಾ ಅಚಿತ್ತುಗಳೊಡನೆ ಸೇರಿರುವ ಸಂ ಸಾರಿ ಚೇತನನಿಗಿಂತಲೂ ವಿಲಕ್ಷಣನಾಗಿಯೂ,ಅನಾದಿಂಚ- ಕೇವಲ ವಾಗಿ ಅಜತ್ವ ಮಾತ್ರವಲ್ಲದೆ ಅನಾದಿಯಾಗಿಯೂಇರುವ, ಅನಾದ್ಯಜ ನಾಗಿರುವ ಮುಕ್ತಾತ್ಮನಿಗೂ ಮುಂಚೇ ಬದ್ಧದಶೆಯಲ್ಲಿ ಜನ್ಮವಿರುವ ಪ್ರಯುಕ್ತ ಅಜತ್ವವಿಲ್ಲವು, ಅನಂತರ ಮುಕ್ತಿದಶೆಯಲ್ಲಿ ಅಜತ್ವವು ಬಂದಿರುವುದು. ಆದುದರಿಂದ ಅಂತವನು ಅನಾದಿಯಾದ ಅಜನಲ್ಲವು. ಪರಮಾತ್ಮನಿಗೆ ಆ ಪ್ರಕಾರವಾಗಿ ದಶಾಭೇದದಿಂದ ಕರ್ಮಕೃತವಾದ ಅಚಿ ತ್ಸಂಬಂಧವೆಂಬ ಜನ್ಮವಿಲ್ಲದೇ ಇರುವುದರಿಂದ ಈ ಪರಮಾತ್ಮನು ಅನಾ ದ್ಯಜನು; ಏವಂಚ ಆದಿ ಮದಜನಾದ ಮುಕ್ತಾತ್ಮನಿಗಿಂತಲೂ ವಿಲ ಕ್ಷಣನಾಗಿಯೂ ಇರುವನೆಂದರ್ಥವು. ಮಾಂ-ಈ ಪ್ರಕಾರವಾಗಿ ಬದ್ಧ ಮುಕ್ತವಿಲಕ್ಷಣನಾಗಿಯೂ ಹೇಯ ಸಂಬಂಧಾನರ್ಹನಾದುದರಿಂದಹೇ ಯಪ್ರತ್ಯನೀಕನಾಗಿಯೂಇರುವನನ್ನನ್ನು,ಲೋಕಮಹೇಶ್ವರಂ- ಲೋ ಕೇಶ್ವರರಾದ ಬ್ರಹ್ಮರುದ್ರೇಂದ್ರಾದಿಗಳಿಗೂ ಈಶ್ವರನಾಗಿ, ಮರ್ತ್ಯೇ ಷು-ಮರಣ ಧರ್ಮವುಳ್ಳ ಬದ್ಧ ಚೇತನರಲ್ಲಿ, ಅಸಮ್ಮೂಢಃ-ನಮ್ಮನ್ನು ಇತರ ಸಜಾತೀಯತ್ವೇನನೆನೆಸುವುದು, ಸಮ್ಮೋಹವು. ಅದಿಲ್ಲದವ ನಾಗಿ, ವೇತ್ತಿ-ತಿಳಿಯುತ್ತಾನೆಯೊ, ಸಃ-ಆಸಂಸಾರಿ ಚೇತನನು, ಸರ್ವ ಪಾಪೈಃ ಪ್ರಮುಚ್ಯತೆ-ನಮ್ಮಲ್ಲಿ ಭಕ್ತಿಯುಂಟಾಗುವುದಕ್ಕೆ ವಿರೋಧಿ ಯಾದ ಸರ್ವಪಾಪಗಳಿಂದಲೂ ಬಿಡಲ್ಪಡುತ್ತಾನೆ. 'ಲೋಕದಲ್ಲಿ ಮನು ಷ್ಯರಿಗೆ ರಾಜನಾಗಿರುವಂತವನು ಇತರ ಮನುಷ್ಯರ ಸಜಾತೀಯನಾ ಗಿಯೇ ಇದ್ದರೂ ರಾಜ್ಯಾಧಿಪತ್ಯಕ್ಕೆ ಯೋಗ್ಯವಾದ ಕರ್ಮದಿಂದ ಆಧಿ ಪತ್ಯವನ್ನು ಹೊಂದಿರುವನು. ಈರೀತಿಯಾಗಿಯೇ ದೇವೇಂದ್ರನೂ, ಅಂಡಾಧಿಪತಿಯೂ ಇತರ ಸಂಸಾರಿ ಸಜಾತೀಯರಾಗಿಯೇ ಇರುವರು.

ಸಂಸಾರಿಗಳಂತೆಇವರಿಗೂಭಾವನಾತ್ರಯಾಂತರ್ಗತತ್ವವೇಇರುವುದೆಂದ ರಿಯಬೇಕು. ಇಲ್ಲಿ ಭಾವನಾತ್ರಯವ್ಯಾವದೆಂದರೆ! ಕರ್ಮಭಾವನೆಯೂ, ಬ್ರಹ್ಮಭಾವನೆಯೂ,ಈ ಉಭಯಭಾವನೆಯೂ ಸೇರಿಭಾವನಾತ್ರಯವೆ ನ್ನಲ್ಪಡುವುದು."ಯೋಬ್ರಹ್ಮಾಣಂ,,ಇತ್ಯಾದಿಶ್ರುತಿಗಳಿಂದ ಬ್ರಹ್ಮಾ ದಿಗಳಿಗೆ ಕಾರ್ಯತ್ವವೂ " ಆಬ್ರಹ್ಮಸ್ತಂಬಪರ್ಯಂತಾಜಗದಂತರ್ವ್ಯವ ಸ್ಥಿತಾಃ । ಪ್ರಾಣಿನಃಕರ್ಮಜನಿತಸಂಸಾರವಶವರ್ತಿನಃ ,, ಇತ್ಯಾದಿ ಪ್ರಮಾಣಗಳಿಂದ ಕರ್ಮವಶ್ಯತ್ವವೂ ಸ್ಫುಟವಾಗಿರುವುದು. ಈ ಪ್ರ ಕಾರವಾಗಿಯೇ ಅಣಿಮಾ ಮೊದಲಾದ ಐಶ್ವರ್ಯವನ್ನು ಹೊಂದಿರುವ ಇನ್ನೂ ಕೆಲವರೂ ಇರುವರು. ಆದರೆ ಈಲೋಕ ಮಹೇಶ್ವರನೂ ಎಂದರೆ ಕಾರ್ಯಕಾರಣವೆಂಬೀ ಅವಸ್ಥೆಗಳನ್ನು ಹೊಂದಿರುವ ಅಚೇತನ ವೇನು, ಸಂಸಾರಿಗಳು ಮುಕ್ತರು ಎಂಬೀ ಚೇತನರೇನು, ಇವರೆಲ್ಲರಿ ಗಿಂತಲೂ (ಅವಧಿಶೂನ್ಯವಾಗಿರುವ ಕಲ್ಯಾಣ ಗುಣಗಳಿಗೆ ಸ್ಥಾನವಾ ಗಿ ಆಳುವುದನ್ನೆ ಸ್ವಭಾವಉಳ್ಳವನಾಗಿ) ವಿಸಜಾತೀಯನಾಗಿರುವನು ,, ಎಂಬೀಪ್ರಕಾರವಾಗಿ ಯಾವನಾದರೆ ತಿಳಿದಿರುತ್ತಾನೆಯೋ ಅಂತವನು ಸಕಲಪಾಪಗಳಿಂದ ಬಿಡಲ್ಪಡುವನೆಂದು ತಾತ್ಪರ್ಯವು. ॥೩॥

( ಮ॥ ಗೀ॥ ವಿ ) ಅನಾದಿಂ- ಅನ- ಸಕಲಲೋಕಗಳನ್ನು ಚೇ ಷ್ಟಿಸುವಂತೆ ಮಾಡುವಂತವನು, ಆದಿಂ - ಸಕಲಲೋಕಗಳಿಗು ಕಾರ ಣನು, ( ಗೀ॥ ವಿ ) ಅಥವಾ - ಮುಖ್ಯಪ್ರಾಣನೆಂಬ ವಾಯುವಿಗೂ ಕಾರಣನು. ... ... ॥೩॥

ಶ್ಲೋ ॥ ಬುದ್ಧಿರ್ಜ್ಞಾನಮಸಮ್ಮೋಹಃಕ್ಷಮಾಸತ್ಯಂದ ಮಶ್ಶಮಃ । ಸುಖಂದುಃಖಂಭವೋಭಾವೋಭಯಂಚಾಭ ಯಮೇವಚ ॥೪॥ ಅಹಿಂಸಾಸಮತಾತುಷ್ಟಿಸ್ತಪೋದಾ ನಂಯಶೋಯಶಃ | ಭವಂತಿಭಾವಾಭೂತಾನಾಂಮತ್ತ ಏವ ಪೃಥಗ್ವಿಧಾಃ ॥ ॥೫॥

ಪ॥ ಬುದ್ಧಿಃ- ಜ್ಞಾನಂ - ಅಸಮ್ಮೋಹಃ - ಕ್ಷಮಾ - ಸತ್ಯಂ - ದಮಃ- ಶಮಃ। ಸುಖಂ- ದುಃಖಂ- ಭವಃ- ಅಭಾವಃ- ಭಯಂ- ಚ - ಅಭಯಂ - ಏವ- ಚ ॥ ಅಹಿಂ ಸಾ- ಸಮತಾ- ತುಷ್ಟಿಃ- ತಪಃ- ದಾನಂ- ಯಶಃ- ಅಯಶಃ | ಭವಂತಿ- ಭಾವಾಃ- ಭೂ ತಾನಾಂ- ಮತ್ತಃ- ಏವ- ಪೃಥಗ್ವಿಧಾಃ ॥

ಅ|| ಬುದ್ಧಿಃ- ಬುದ್ಧಿಯೂ, ಜ್ಞಾನಂ -ಜ್ಞಾನವೂ, ಅಸಮ್ಮೋಹಃ- ಭ್ರಮನಿವೃತ್ತಿಯೂ, ಕ್ಷಮಾ- ಕ್ಷಮಾಗುಣವೂ, ಸತ್ಯಂ - ಸತ್ಯವಾಕ್ಯವೂ, ದಮಃ - ಬಾಹ್ಯೇಂದ್ರಿಯಗಳ ನಿಗ್ರಹವೂ, ಶಮಃ - ಅಂತರಿಂದ್ರಿಯ ನಿಗ್ರಹವೂ, ಸುಖಂ - ಸುಖವೂ, ದುಃಖಂ- ದುಃಖವೂ, ಭವಃ - ಇರುವಿಕೆಯೂ, ಅಭವಃ- ಇಲ್ಲದಿರುವಿಕೆಯೂ, ಭಯಂಚ- ಭಯವೂ, ಅಭಯಮೇವಚ- ಭಯನಿವೃತ್ತಿಯೂ, ಅಹಿಂಸಾ - ಹಿಂಸೆ ಮಾಡದಿರೋಣವೂ, ಸಮತಾ- ಸಮಬುದ್ಧಿಯೂ, ತುಷ್ಟಿಃ - ಸಂತೋಷವೂ, ತಪಃ - ತಪಸ್ಸೂ, ದಾನಂ- ದ್ರವ್ಯಾದಿಗಳನ್ನು ಕೊಡುವಿಕೆಯೂ, ಯಶಃ-ಕೀರ್ತಿಯೂ, ಅಯಶಃ- ಅಪಕೀರ್ತಿಯೂ, ಎಂಬಿವುಗಳು, ಭೂತಾನಾಂ- ಪ್ರಾಣಿಗಳ, ಪೃಥಗ್ವಿಧಾಃ - ಬೇರೆಬೇರೆ ವಿಧಗಳಾದ, ಭಾವಾಃ - ಮನೋವೃತ್ತಿಗಳು, ಮತ್ತಏವ -(ಇವು) ನನ್ನ ದೆಸೆಯಿಂದಲೇ, ಭವಂತಿ - ಉಂಟಾಗುವುವು. ... ... || ೪ || ೫||

( ಶಂ|| ಭಾ|| ) ಭಗವಂತನಿಗೆ ಲೋಕಮಹೇಶ್ವರತ್ವ ವಿಷಯದಲ್ಲಿ ಕಾರಣಾಂತರವನ್ನೀಶ್ಲೋಕದಿಂದಲೂಹೇಳುತ್ತಾನೆಂದರಿಯಬೇಕು. ಬುದ್ಧಿಃ - ಸೂಕ್ಷ್ಮಾದ್ಯರ್ಥಗಳನ್ನು ಗ್ರಹಿಸುವ ಅಂತಃಕರಣ ಸಾಮರ್ಥ್ಯವು, ಈ ಬುದ್ಧಿಯುಳ್ಳವನನ್ನು ಲೋಕರು ಬುದ್ಧಿವಂತನೆಂದು ಹೇಳುತ್ತಾರೆ. ಜ್ಞಾನಂ- ಆತ್ಮಾದಿ ಪದಾರ್ಥಗಳ ತಿಳಿಯುವಿಕೆಯು, ಅಸಮ್ಮೋಹಃ- ತಿಳಿಯಬೇಕಾದ ವಸ್ತುಗಳನ್ನು ಸಮೀಚೀನವಾಗಿ ತಿಳಿದುಕೊಳ್ಳುವಿಕೆ ಎಂಬ ಮೋಹರಾಹಿತ್ಯವು, ಕ್ಷಮಾ- ಅವಮಾನಾದಿಗಳು ಪ್ರಾಪ್ತವಾದರೂ ಅದರಿಂದ ಮನೋವಿಕಾರವಂ ಹೊಂದದೇ ಇರುವಿಕೆಯು, ಸತ್ಯಂ - ತಾನು ಕೇಳಿಯೂ, ನೋಡಿಯೂ, ಅನುಭವಿಸಿಯೂ ಇರುವುದನ್ನು ಇತರರಿಗೆ ಸರಿಯಾಗಿ ಹೇಳುವಿಕೆಯು, ದಮಃ- ಬಾಹ್ಯೇಂದ್ರಿಯ ನಿಗ್ರಹವು, ಶಮಃ- ಅಂತಃಕರಣಜಯವು, ಸುಖವೆಂದರೇ ಆಹ್ಲಾದವು, ದುಃಖವೆಂದರೆ ಸಂತಾಪವು, ಭವಃ- ಉತ್ಪತ್ತಿಯು, ಅಭಾವಃ - ನಾಶವಾಗುವಿಕೆಯು, ಭಯಂ - ಭಯವು, ಅಭಯಂ- ಭಯವಿಲ್ಲದೇ ಇರುವಿಕೆಯು, ಅಹಿಂಸಾ- ಪ್ರಾಣಿಪೀಡೆಯನ್ನು ಮಾಡದೇಇರುವಿಕೆಯು, ಸಮತಾ- ಸಮಚಿತ್ತತ್ವವು, ತುಷ್ಟಿಃ- ಸಂತೋಷವು, ದೊರಕಿದ ಮಟ್ಟಿಗೂ ಸಾಕೆಂಬ ಅಲಂ ಬುದ್ಧಿಯನ್ನೇ ಸಂತೋಷವೆನ್ನುವರು. ತಪಃ - ಇಂದ್ರಿಯನಿಗ್ರಹ ಪೂರ್ವಕವಾಗಿ ಮಾಡುವ ಶರೀರ ಪೀಡನೆಯು, ದಾನಂ - ಶ್ರದ್ಧೆಯೊಡನೆ ತನಗಿರುವ ಶಕ್ತಿಯನ್ನು ಮೀರದೇ ದೇಶಕಾಲಾನುಗುಣವಾಗಿ ಸತ್ಪಾತ್ರದಲ್ಲಿ ದ್ರ

ವ್ಯದಾನವಂ ಮಾಡುವಿಕೆಯು, ಯಶಃ- ತಾನು ವಿವೇಕದಿಂದ ಮಾಡಿದ ಧರ್ಮದಿಂದುಂಟಾದ ಕೀರ್ತಿಯು, ಅಯಶಃ- ತಾನವಿವೇಕದಿಂದ ಮಾಡಿದ ಪಾಪಾನುಷ್ಠಾನದಿಂ ದುಂಟಾದ ಅಪಕೀರ್ತಿಯು, ಇತಿ- ಎಂಬೀ ಪ್ರಕಾರಗಳಾದ ಭೂತಾನಾಂಭಾವಾಃ - ಪ್ರಾಣಿಗಳ ಬುದ್ಧಿಯೇ ಮೊದಲಾದ ಅಪಕೀರ್ತಿಪರ್ಯಂತಗಳಾದ ಸ್ವಭಾವಗಳು, ನಾನಾವಿಧಾಭವಂತಿ- ನಾನಾವಿಧಗಳಾಗಿ (ಕರ್ಮಾನುಸಾರವಾಗಿ) ಈಶ್ವರನಾದ ನನ್ನಿಂದಲೇ ಉಂಟಾಗುವುವು. ... ... ॥೪ ॥೫॥

(ರಾ॥ ಭಾ॥) ಈ ಪ್ರಕಾರವಾಗಿ ತಮ್ಮ ಸ್ವಭಾವವನ್ನು ಚಿಂತಿಸುವುದರಿಂಥ ಭಕ್ತಿಯುಂಟಾಗುವುದಕ್ಕೆ ವಿರೋಧಿಗಳಾದ ಪಾಪಗಳು ನಾಶಹೊಂದುವುವೆಂತಲೂ, ವಿರೋಧಿ ನಿರಸನವಾದಮೇಲೆ ಅವಶ್ಯಕವಾಗಿ ಭಕ್ತಿಯುಂಟಾಗುವುದೆಂತಲೂ, ಉಪದೇಶಿಸಿ ; ತಮ್ಮ ಐಶ್ವರ್ಯವನ್ನೂ ಕಲ್ಯಾಣಗುಣಗಳ ವಿಸ್ತಾರವನ್ನೂ ಚಿಂತಿಸುವುದರಿಂದ ಆ ಭಕ್ತಿಯು ಅಭಿವೃದ್ಧವಾಗುವ ಪ್ರಕಾರವನ್ನು ಉಪದೇಶಿಸುತ್ತಾನೆ. ಬುದ್ಧಿಃ- ಮನಸ್ಸಿನ ವಸ್ತು ನಿರೂಪಣ ಸಾಮರ್ಥ್ಯವು, ಜ್ಞಾನಂ- ಚೇತನಾಚೇತನ ವಸ್ತು ವಿಶೇಷ ವಿಷಯವಾದ ನಿಶ್ಚಯವು, ಅಸಮ್ಮೋಹಃ- ಶುಕ್ತಿಕಾದಿ (ಮುತ್ತಿನ ಚಿಪ್ಪೆ ಮೊದಲಾದ) ವಸ್ತುಗಳಲ್ಲಿ ಬೆಳ್ಳಿಯೇ ಮೊದಲಾದ ಬುದ್ಧಿನಿವೃತ್ತಿಯು, ಕ್ಷಮಾ-ಮನೋವಿಕಾರವಿಲ್ಲದೇಇರುವಿಕೆಯು, ಸತ್ಯಂ- ಯಥಾವತ್ತಾಗಿ ತಾನು ನೋಡಿದವಿಷಯವಾಗಿಯೂ ಭೂತಹಿತವಾಗಿಯೂ ಇರುವ ಮಾತನ್ನೇ ಹೇಳಬೇಕೆಂಬ ಮನೋವೃತ್ತಿಯು,ದಮಃ-ಕಣ್ಣು ಮೊದಲಾದ ಬಾಹ್ಯೇಂದ್ರಿಯಗಳನ್ನು ಅನರ್ಥವಿಷಯಗಳಲ್ಲಿ ಹೋಗದಂತೆ ನಿರೋಧಿಸುವಿಕೆಯು, ಶಮಃ-ಅಂತಃಕರಣವಾದ ಮನಸ್ಸನ್ನು ವಿಷಯ ಚಿಂತೆಯಲ್ಲಿ ಪ್ರವೇಶಿಸದಂತೆ ಮಾಡುವಿಕೆಯು, ಸುಖಂ-ಆತ್ಮನಿಗೆ ಅನುಕೂಲವಾದ ವಸ್ತುವಿನ ಅನುಭವವು,ದುಃಖಂ-ತನಿಗೆ ಪ್ರತಿಕೂಲವಾದ ವಸ್ತುವಿನ ಅನುಭವವು, ಭವಃ - ಅನುಕೂಲಾನುಭವ ಹೇತುಕವಾದ ಮನೋವಿಕಾಸವು, ಅಭಾವಃ - ಪ್ರತಿಕೂಲಾನುಭವ ಹೇತುಕವಾದ ಮನಶ್ಶೈಥಿಲ್ಯವು, ಭಯಂ-ಮುಂದೇ ಬರುತಲಿರುವ ದುಃಖಕಾರಣವನ್ನು ಕಾಣುವುದರಿಂದುಂಟಾದ ದುಃಖವು, ಅಭಯಂ-ಅದರ ನಿವೃತ್ತಿಯು,ಅಹಿಂಸಾ-ಅನ್ಯರಿಗೆ ದುಃಖಕಾರಣ

ನಾಗದೇಇರುವಿಕೆಯು,ಸಮತಾ-ತನ್ನಲ್ಲಿಯೂಶತ್ರುಮಿತ್ರರಲ್ಲಿಯೂಆರ್ಥಾ ನರ್ಥಗಳು ಬರುವಲ್ಲಿ ಸಮಬುದ್ಧಿಯುಳ್ಳವನಾಗಿರುವಿಕೆಯು, ತುಷ್ಟಿಃ-ಸಮಸ್ತರಾದ ಆತ್ಮರನ್ನು ನೋಡಿದರೂ ಸಂತೋಷವುಳ್ಳವನಾಗಿರುವಿಕೆಯು, ತಪಃ-ಶಾಸ್ತ್ರವಿಹಿತವಾಗಿಯೂ, ಭೋಗಸಂಕೋಚ ರೂಪವಾಗಿಯೂ ಇರುವ ಕಾಯಕ್ಲೇಶಕ್ಕೆಕಾರಣವಾದ ಮನೋವೃತ್ತಿಯು, ದಾನಂ-ತನಗೆ ಅನುಭಾವ್ಯವಾದ ಭೋಗ್ಯವಸ್ತುಗಳನ್ನು ಅನ್ಯರಿಗೆ ಕೊಡುವಂತೆ ಮಾಡುವ ಮನೋವೃತ್ತಿಯು, ಯಶಃ-ಗುಣವಂತನೆಂಬದಾಗಿ ಜನಗಳ ಹೊಗಳುವಿಕೆಗೆ ಯೋಗ್ಯವಾದ ಮನೋವೃತ್ತಿ ವಿಶೇಷವು, ಅಯಶಃ-ನಿರ್ಗುಣನೆಂಬದಾಗಿ ಜನವದಂತಿಗೆ ಯೋಗ್ಯವಾದ ಮನೋವೃತ್ತಿ ವಿಶೇಷವು, ಪೃಥಗ್ವಿಧಾಃ-ಈರೀತಿಯಾಗಿ ಪರಸ್ಪರ ವಿಲಕ್ಷಣಗಳಾಗಿರುವ, ಭೂತಾನಾಂ ಭಾವಾಃ-ಸರ್ವಭೂತಗಳ ಪ್ರವೃತ್ತಿ ನಿವೃತ್ತಿಗಳಿಗೆಕಾರಣಗಳಾದ ಮನೋವೃತ್ತಿಗಳು,ಮತ್ತಏವ-ನನ್ನಸಂಕಲ್ಪಾಧೀನಗಳಾಗಿಯೇ, ಭವಂತಿ-ಉಂಟಾಗುವುವು. ॥೪॥೫॥

(ಮ॥ ಗೀ॥ ವಿ॥) ಬುದ್ಧಿಃ-ಕಾರ್ಯಾಕಾರ್ಯನಿಶ್ಚಯವು, ಜ್ಞಾನಂ-(ಮ) ತಿಳಿಯುವಿಕೆಯು, (ಗೀ॥ ವಿ॥) ಸಾಮಾನ್ಯ ಜ್ಞಾನವು, ಅಸಮ್ಮೋಹಃ-ಅಕಾರ್ಯಗಳಲ್ಲಿ ಇಚ್ಛಾಭಾವವು,(ಅಥವಾ) ಮಿಥ್ಯಾಜ್ಞಾನಾಭಾವವು, ಸತ್ಯಂ-ಯಥಾರ್ಥಜ್ಞಾನ ದೊಡನೆ ಅನುಷ್ಠಾನ ಮಾಡುವಿಕೆಯು, (ಅಥವಾ, ಯಥಾರ್ಥವನ್ನು ಹೇಳುವಿಕೆಯು, ದಮಃ- (ಮ॥ ಗೀ॥ ವಿ॥) ಇಂದ್ರಿಯನಿಗ್ರಹವು, ಶಮಃ- (ಮ॥ ಗೀ॥ ವಿ॥) ಭಗವನ್ನಿಷ್ಠೆಯು, ತಪಃ-ಬ್ರಹ್ಮಚರ್ಯಾದಿ ವ್ರತಗಳು,ದಾನಂ-ನ್ಯಾಯಾರ್ಜಿತ ದ್ರವ್ಯಾದಿಗಳನ್ನು ಅನ್ಯರಿಗೆ ಕೊಡುವಿಕೆಯು, ಉಳಿದ ಪದಗಳಿಗೆ ಮೊದಲಿನಂತೆ ಅರ್ಥವಂ ತಿಳಿಯಬೇಕು. ... ... ॥೪॥೫॥

ಶ್ಲೋ॥ ಮಹರ್ಷಯಸ್ಸಪ್ತಪೂರ್ವೇಚತ್ವಾರೋಮನವ
ಸ್ತಥಾ । ಮದ್ಭಾವಾಮಾನಸಾಜಾತಾಯೇಷಾಂಲೋ
ಕಇಮಾಃಪ್ರಜಾಃ ॥ ... ... ॥೬॥

ಪ॥ ಮಹರ್ಷಯಃ-ಸಪ್ತ-ಪೂರ್ವೇ-ಚತ್ವಾರಃ-ಮನವಃ-ತಥಾ। ಮದ್ಭಾವಾಃ-ಮಾನಸಾಃ-ಜಾತಾಃ-ಏಷಾಂ-ಲೋಕೇ-ಇಮಾಃ-ಪ್ರಜಾಃ ॥

ಅ॥ ಪೂರ್ವೇ-ಪೂರ್ವಿಕರಾದ, ಸಪ್ತಮಹರ್ಷಯಃ-ಭೃಗುಮೊದಲಾದ ಸಪ್ತರ್ಷಿ

ಗಳೂ, ತಥಾ- ಆಪ್ರಕಾರವೇ, ಚತ್ವಾರೋಮನವಃ- ಸಾವರ್ಣಿಯೇ ಮೊದಲಾದ ನಾಲ್ಕು ಮನುಗಳೂ, ಮಾನಸಾಜಾತಾಃ- ನನ್ನ ಮನಸ್ಸಂಕಲ್ಪದಿಂದುಂಟಾದವರು. ಮದ್ಭಾವಾಃ- ನನ್ನ (ಶಂ)ಸರ್ವವ್ಯಾಪಕನಾದ ವಿಷ್ಣು) ಸಂಬಂಧವಾದ ಸಾಮರ್ಥ್ಯಮುಳ್ಳ ನನ್ನ ಭಾವವೇ ಯಾವಜನರ ಭಾವವೋ ಅವರು ಮದ್ಭಾವರು, ನನ್ನ ಸಂಕಲ್ಪಾನುವರ್ತಿಗಳೆಂದು ತಾತ್ಪರ್ಯವು. ಲೋಕಇಮಾಃ ಪ್ರಜಾಪಸಾಂ- ಲೋಕದಲ್ಲಿ ಈಪ್ರಜೆಗಳೆಲ್ಲವೂ ಯಾವ ಋಷಿಗಳ ಪುತ್ರ ಪೌತ್ರ ಸಂತಾನಗಳೋ ಅಂತವರೆಂದು ಭಾವವು.||೬||

(ರಾ|| ಭಾ||) ಸಮಸ್ತವಾದ ಭೂತವರ್ಗದ ಸೃಷ್ಟಿಸ್ಥಿತಿಗಳಿಗೆ ಪ್ರವರ್ತಕರೂ ತನ್ನ ಸಂಕಲ್ಪಾಧೀನ ಪ್ರವೃತ್ತಿಯುಳ್ಳವರೆನ್ನುತ್ತಾನೆ. ಯಾವ ಭೃಗ್ವಾದಿ ಸಪ್ತಮಹರ್ಷಿಗಳ ಸಂತಾನವಾಗಿಲೋಕದಲ್ಲಿ ಈ ಸಮಸ್ತವಾದ ಪ್ರಜೆಗಳೂ ವುಂಟಾದವುಗಳಾಗಿ ಪ್ರತಿಕ್ಷಣವೂ ಪ್ರಲಯಪರ್ಯಂತವಾಗಿ ಸಂತಾನೋತ್ಪಾದಕಗಳಾಗಿಯೂಸಂತಾನಪಾಲಕಗಳಾಗಿಯೂ ಇರುವುವೋ; ಅಂತಾ ನಿತ್ಯಸೃಷ್ಟಿ ಪ್ರವರ್ತನಕ್ಕಾಗಿ ಬ್ರಹ್ಮಮಾನಸ ಪುತ್ರರಾದ ಅತೀತಮನ್ವಂತರದಲ್ಲುಂಟಾಗಿದ್ದ ಭೃಗ್ವಾದಿ ಸಪ್ತಮಹರ್ಷಿಗಳೂ, ಆಪ್ರಕಾರವೇ ಸಾವರ್ಣಿಕಮನುಗಳು ನಾಲ್ವರೂ; ನನ್ನ ಸಂಕಲ್ಪಾನು ವರ್ತಿಗಳೆಂದುಭಾವವು. ||೬||

(ಶ್ರೀ) ಲೋಕಇಮಾಃಪ್ರಜಾಃ-ಲೋಕದಲ್ಲಿರುವ ಪ್ರಜೆಗಳೆಲ್ಲರು, ಏಷಾಂ- ಯಾವ ಸಪ್ತರ್ಷಿಗಳೇ ಮೊದಲಾದವರ, ಪುತ್ರ ಪೌತ್ರಾದಿ ರೂಪರಾಗಿಯೂ ಶಿಷ್ಯ ಪ್ರಶಿಷ್ಯರೂಪರಾಗಿಯೂ ಇರುವರೋ; ತೇ ಸಪ್ತಮಹರ್ಷಯಃ- ಆಏಳುಮಹರ್ಷಿಗಳೂ, ಪೂರ್ವೇ - ಅವರಿಗೂ ಪೂರ್ವೀಕರಾದ, ಚತ್ವಾರಃ - ಸನಕಾದಿಗಳಾದ ನಾಲ್ವರೂ, ತಥಾ- ಆಪ್ರಕಾರವೇ, ಸ್ವಾಯಂಭುವಾದಿ ಮನುಗಳೂ, ಮದ್ಭಾವಾಃ ನನ್ನ ಪ್ರಭಾವವನ್ನುಳ್ಳವರಾಗಿ, ಮಾನಸಾಜಾತಾಃ- ಹಿರಣ್ಯಗರ್ಭರೂಪನಾದ ನನ್ನ ಮನಸ್ಸಂಕಲ್ಪದಿಂದುಂಟಾದವರು. ||೬||

(ಮ|| ಗೀ|| ವಿ||) ಸಪ್ತಮಹರ್ಷಯಃಪೂರ್ವೇ- ಪೂರ್ವೀಕರಾದ ,,ಮರೀಚಿರತ್ರ್ಯಂಗಿರಸೌಪುಲಸ್ತ್ಯಃ ಪುಲಹಃಕ್ರತುಃ । ವಸಿಷ್ಠಶ್ಚ ಮಹಾತೇಜಾಃ ಪೂರ್ವೇಸಪ್ತರ್ಷಯಸ್ಸ್ಮೃತಾಃ,, ಎಂಬುವಂತೆ ಮರೀಚಿ, ಅತ್ರಿ, ಅಂಗಿರಸ್ಸು, ಪುಲಸ್ತ್ಯರು, ಪುಲಹರು, ಕ್ರತುವು, ವಸಿಷ್ಠರು ಎಂಬೀ ಏಳುಋಷಿಗಳೂ, ಚತ್ವಾರೋಮನವಃಪೂರ್ವೇ - ಪೂರ್ವೀಕರಾದ ಸ್ವಾಯಂಭುವಮನುವು, ಸ್ವಾರೋಚಿಷಮನುವು,

ರೈವತಮನುವು, ಉತ್ತಮಮನುವು, ಎಂಬೀ ನಾಲ್ಕು ಮನುಗಳೂ, ಮದ್ಭಾವಾಮಾನಸಾಜಾತಾಃ- ನನ್ನ ಮನಸ್ಸಂಕಲ್ಪದಿಂದ ನನ್ನದಶೆಯಿಂದ ಹುಟ್ಟಿದವರು. ಇವರು ಚತುರ್ಮುಖಬ್ರಹ್ಮನ ದಶೆಯಿಂದ ಹುಟ್ಟಿರುವುದಾಗಿ ಹೇಳುವ ಪುರಾಣಾದಿಗಳಿಗೆ ಚತುರ್ಮುಖಾಂತರ್ಯಾಮಿಯಾದ ನಾನು ಚತುರ್ಮುಖ ದ್ವಾರಾ ಉಂಟುಮಾಡಿದನೆಂಬ ತಾತ್ಪರ್ಯವಂ ತಿಳಿಯಬೇಕು, ... ... ||೬||

ಶ್ಲೋ|| ಏತಾಂವಿಭೂತಿಂಯೋಗಂಚಮಮಯೋವೇತ್ತಿ
ತತ್ತ್ವತಃ| ಸೋಽವಿಕಂಪ್ಯೇನಯೋಗೇನಯುಜ್ಯತೇನಾ
ತ್ರಸಂಶಯಃ || ... ... ||೭||

ಪ|| ಏತಾಂ-ವಿಭೂತಿಂ-ಯೋಗಂ-ಚ-ಮಮ-ಯಃ-ವೇತ್ತಿ-ತತ್ವತಃ| ಸಃ-ಅವಿಕಂಪ್ಯೇನ-ಯೋಗೇನ-ಯುಜ್ಯತೇ-ನ-ಅತ್ರ-ಸಂಶಯಃ- (ಶಂ) (ಅವಿಕಂಪೇನ) ಪಾಠವು.

ಅ|| ಮಮ-ನನ್ನ, ಏತಾಂವಿಭೂತಿಂ-ಈ ಐಶ್ವರ್ಯವನ್ನು, (ಶಂ) ಪೂರ್ವೋಕ್ತವಾದ ಭೃಗ್ವಾದಿಗಳ ವಿಸ್ತಾರವನ್ನು, (ಗೀ|| ವಿ) ಅನೇಕ ವಿಭೂತಿ ರೂಪಗಳನ್ನು, ಯೋಗಂಚ- (ಶಂ) ಯೋಗವೆಂದರೆ ಯುಕ್ತಿಯು, ಎಂದರೆ ಯೊಗೈಶ್ವರ್ಯ ಸಾಮರ್ಥ್ಯವು. (ಅಥವಾ) ಸರ್ವಜ್ಞಾತ್ವವು. (ರಾ) ಹೇಯ ಪ್ರತ್ಯನೀಕ ಕಲ್ಯಾಣಗುಣಗಣವೆಂಬ ಯೋಗವೆನ್ನೂ, ತತ್ವತಃ-ಯಥಾವತ್ತಾಗಿ, ಯಃ-ಯಾವನಾದರೆ, ವೇತ್ತಿ-ಅರಿಯುತ್ತಾನೆಯೊ; ಸಃ-ಅವನು, ಅವಿಕಂಪ್ಯೇನ-ಚಲಿಸಲಶಕ್ಯವಾದ, (ಶಂ|| ಶ್ರೀ|| ಮ|| ಗೀ|| ವಿ|| ಶಂ|| ಆ|| ಅವಿಕಂಪೇನ-ಎಂಬದಾಗಿ ಪಾಠವು ಅರ್ಥಭೇದವಿಲ್ಲವು) ಯೋಗೇನ- (ಶಂ) ತತ್ವಜ್ಞಾನದೊಡನೆ, (ರಾ) ಭಕ್ತಿಯೋಗದೊಡನೆ, (ಗೀ|| ವಿ||) ಧ್ಯಾನಮಾಡುವ ಉಪಾಯದೊಡನೆ, ಯುಜ್ಯತೆ-ಕೂಡಿದವನಾಗುತ್ತಾನೆ.ಅತ್ರ ಸಂಶಯೋನ-ಈ ವಿಷಯದಲ್ಲಿ ಸಂಶಯವಿಲ್ಲವು. ||೭||

(ರಾ|| ಭಾ||) ಯಾವನಾದರೆ ಈ ನಮ್ಮ ಐಶ್ವರ್ಯವನ್ನೂ (ಸಮಸ್ತ ವಸ್ತುಗಳ ಉತ್ಪತ್ತಿ ಸ್ಥಿತಿ ಪ್ರವೃತ್ತಿಗಳು ನಮ್ಮ ಅಧೀನವಾಗಿರುವಿಕೆ ಎಂಬೀ ನನ್ನ ಸಂಪತ್ತನ್ನೂ) ನಮ್ಮ ಹೇಯ ಪ್ರತ್ಯನೀಕಕಲ್ಯಾಣ ಗುಣಗಣ ವೆಂಬೀ ಯೋಗವನ್ನೂ ಯಥಾವತ್ತಾಗಿ ತಿಳಿಯುತ್ತಾನೆಯೊ, ಅವನು ಬೃಹಸ್ಪತಿಯು ದುರುಪ ದೇಶದಿಂದಲಾದರೂ ಪ್ರಾಚೀನ ಪಾಪಮೂಲಕವಾದ ಅವಿಶ್ವಾಸಾಲಸ್ಯಾದಿ ವಿರೋಧಿಗಳಿಂದಲಾದರೂ ಶಬ್ದಾದಿ ವಿಷಯ ಚಾಪಲ್ಯದಿಂದಲಾದರೂ ಚಲಿಸಲಶಕ್ಯವಾದ ಭಕ್ತಿಯೋಗದೊಡನೆ ಸೇರುತ್ತಾನೆ. ಈ ವಿಷಯದಲ್ಲಿ ಸಂಶಯ ಪಡಬೇಕಾಗಿಲ್ಲವು. ನಮ್ಮ ವಿಭೂತಿಜ್ಞಾನವೂ ಕಲ್ಯಾಣ ಗುಣವಿ

ಷೆಯುಕ ಜ್ಞಾನವೂ, ಭಕ್ತಿಯೋಗವರ್ಧಕವಾಗಿರುವುದೆಂಬೀ ಅರ್ಥವನ್ನು ನೀನೇ ಮುಂದೆ ತಿಳಿದುಕೊಳ್ಳುವಿ ಯೆಂದಭಿಪ್ರಾಯವು. ॥೭॥

(ಗೀ॥ ವಿ॥) ಹಿಂದೆ ಹೇಳಲ್ಪಟ್ಟ ಭಗವನ್ಮಾಹಾತ್ಮ್ಯ ಜ್ಞಾನಕ್ಕೆ ಫಲವನ್ನು ಹೇಳುತ್ತಾನೆ. ಯಃ-ಯಾವನಾದರೆ, ಮಮ-ನನ್ನ, ಏತಾಂ-ಈ ಪೂರ್ವೋಕ್ತವಾದ, ವಿಭೂತಿಂ-ದೇವಾದಿಗಳಿಂದ ದುಜ್ಞೇಯವಾಗಿರುವಿಕೆ ಎಂಬಿದೇ ಮೊದಲಾದಮಾಹಾತ್ಮ್ಯವನ್ನೂ, ಯೋಗಂಚ-ಸಾಮರ್ಥ್ಯವನ್ನೂ. ಶಿಷ್ಟಂಪೂರ್ವವತ್. ... ... ॥೭॥

ಶ್ಲೋ॥ ಅಹಂಸರ್ವಸ್ಯಪ್ರಭವೋಮತ್ತಸ್ಸರ್ವಂಪ್ರವರ್ತ
ತೇ । ಇತಿಮತ್ವಾಭಜನ್ತೇಮಾಂ ಬುಧಾಭಾವಸಮನ್ವಿ
ತಾಃ ॥ ... ... ... ॥೮॥

ಪ॥ ಅಹಂ-ಸರ್ವಸ್ಯ-ಪ್ರಭವಃ-ಮತ್ತಃ-ಸರ್ವಂ-ಪ್ರವರ್ತತೇ। ಇತಿ-ಮತ್ವಾ-ಭಜಂತೇ-ಮಾಂ-ಬುಧಾಃ-ಭಾವಸಮನ್ವಿತಾಃ ॥

ಅ॥ ಅಹಂ-ನಾನು, (ಶಂ) ವಾಸುದೇವನೆಂಬ ಪರಬ್ರಹ್ಮನಾದ ನಾನು, ಸರ್ವಸ್ಯ-ಸಮಸ್ತವಾದ ಪ್ರಪಂಚಕ್ಕೆ, ಪ್ರಭವಃ-ಉತ್ಪತ್ತಿ ಕಾರಣನಾಗಿರುವೆನು, (ಶ್ರೀ) ಭೃಗುಮನ್ವಾದಿಗಳ ಮೂಲಕವಾಗಿ ಉತ್ಪತ್ತಿ ಕಾರಣನು, ಮತ್ತಃ-ನನ್ನಿಂದಲೇ ಸರ್ವಂ-ಸಕಲವೂ, (ಶಂ) ಸ್ಥಿತಿಯೂ, ನಾಶವೂ, ಕರ್ಮವೂ, ಅದರ ಫಲಗಳೂ, ಆ ಕರ್ಮಫಲಾನುಭವವೇ ಮೊದಲಾದವುಗಳಿಂದ ವಿಕಾರರೂಪವಾಗಿರುವ ಸಮಸ್ತವೂ, (ಶ್ರೀ) ಬುದ್ಧಿಜ್ಞಾನಾಸಮ್ಮೋಹಾದಿಯಾದ ಸಮಸ್ತವೂ, ಪ್ರವರ್ತತೇ-ಪ್ರವರ್ತಿಸುವುವು, ಇತಿ-ಈರೀತಿಯಾಗಿ, ಮತ್ವಾ-ತಿಳಿದು, ಬುಧಾಃ-ವಿವೇಕ ಮುಖ್ಯರು, (ಶಂ) ಪರಮಾರ್ಥತತ್ವ ವಿವೇಕಮುಖ್ಯರು, (ರಾ॥ ಗೀ॥ ವಿ॥) ಜ್ಞಾನಿಗಳು, ಭಾವಸಮನ್ವಿತಾಃ-ಪ್ರೀತಿಯುಕ್ತರಾಗಿ, (ಶಂ) ಪರಮಾರ್ಥ ತತ್ವದಲ್ಲಿ ಅಭಿನಿವೇಶ ಮುಖ್ಯರಾಗಿ, (ಗೀ॥ ವಿ॥) ಭಕ್ತಿಯುಕ್ತರಾಗಿ, ಮಾಂ-ನನ್ನನ್ನು, ಭಜಂತೇ-ಭಜನೆ ಮಾಡುತ್ತಾರೆ. ... ... ॥೮॥

(ರಾ॥ ಭಾ॥) ವಿಭೂತಿ ಜ್ಞಾನವಿಪಾಕರೂಪವಾದ ಭಕ್ತಿ ವಿವೃದ್ಧಿಯನ್ನು ಸಾಧುಜನಗಳ ಚರಿತ್ರದಿಂದ ತೋರಿಸುತ್ತಾರೆ. ನಾನು ವಿಚಿತ್ರವಾದ ಸಮಸ್ತ ಚಿದಚಿತ್ಪ್ರಪಂಚಕ್ಕೂ ಉತ್ಪತ್ತಿ ಕಾರಣನಾಗಿರುವೆನು. ಸಮಸ್ತ ಪ್ರಪಂಚವೂ ನನ್ನಿಂದಲೆ ತಮ್ಮ ತಮ್ಮ ಕರ್ಮಾನುಗುಣವಾಗಿ ಪ್ರವರ್ತಿಸುತಲಿರುವುದು. ಈ ಪ್ರಕಾರವಾಗಿರುವ ನಮ್ಮ ಸ್ವಾಭಾವಿಕವಾದ ನಿರಂಕುಶೈಶ್ವರ್ಯವನ್ನೂ ಸೌಶೀಲ್ಯ ಸೌಂದರ್ಯವಾ

ತ್ಸಲ್ಯಾದಿ ಕಲ್ಯಾಣ ಗುಣಯೋಗವನ್ನೂ, ಮನನಮಾಡಿ ಜ್ಞಾನಿಗಳು ನಿರತಿಶಯ ಪ್ರೇಮೆಯಿಂದ ಕೂಡಿದವರಾಗಿ ಸರ್ವಕಲ್ಯಾಣ ಗುಣಾನ್ವಿತರಾದ ನಮ್ಮನ್ನು ಉಪಾಸನೆ ಮಾಡುತ್ತಾರೆ. * ‖೮‖

(ಗೀ‖ ವಿ‖) ಈ ಶ್ಲೋಕದ ಪೂರ್ವಾರ್ಧದಿಂದಲೇ (ಮಾಂ-ನನ್ನನ್ನು) ಎಂಬೀ ಅರ್ಥವು ಪ್ರಾಪ್ತವಾಗಿರುವುದರಿಂದ ಪುನಶ್ಚ ಉತ್ತರಾರ್ಧದಲ್ಲಿ (ನಾನು) ಎಂಬ ಅಧಿಕೋಕ್ತಿಯು ಜೀವೇಶ್ವರೈಕ್ಯಾಭಿಪ್ರಾಯದಿಂದ ಸ್ವಾತ್ಮನನ್ನು ದ್ವೇಷಿಸಿ ನಾನೇ ಸರ್ವಕ್ಕೂ ಉತ್ಪತ್ತಿಕಾರಣನೆಂಬದಾಗಿ ಎಣಿಸಿ ಭಜನ ಮಾಡುತ್ತಾರೆಂಬೀ ಅಭಿಪ್ರಾಯ ನಿರಾಸಾರ್ಥವಾಗಿ ಪ್ರಯೋಗಿಸಲ್ಪಟ್ಟಿರುವುದೆಂದರಿಯಬೇಕು. ಎಂದರೆ ಜೀವೇಶ್ವರ ಭೇದವನ್ನು ಸ್ಫುಟವಾಗಿ ತೋರಿಸುವುದಕ್ಕೆಂತಲೇ ಅರಿಯಬೇಕು. * * * ‖೮‖

ಶ್ಲೋ‖ ಮಚ್ಚಿತ್ತಾಮದ್ಗತಪ್ರಾಣಾಬೋಧಯಂತಃಪರಸ್ಪರಂ|ಕಥಯಂತಶ್ಚಮಾಂನಿತ್ಯಂತುಷ್ಯಂತಿಚರಮಂತಿಚ ‖ ... ... ‖೯‖

ಪ‖ ಮಚ್ಚಿತ್ತಾಃ-ಮದ್ಗತಪ್ರಾಣಾಃ-ಬೋಧಯಂತಃ-ಪರಸ್ಪರಂ, ಕಥಯಂತಃ-ಚ-ಮಾಂ-ನಿತ್ಯಂ-ತುಷ್ಯಂತಿ-ಚ-ರಮಂತಿ-ಚ‖

ಅ‖ ಮಚ್ಚಿತ್ತಾಃ-ನನ್ನಲ್ಲಿಡಲ್ಪಟ್ಟ ಮನಸ್ಸುಳ್ಳವರಾಗಿಯೂ, ಮದ್ಗತಪ್ರಾಣಾಃ-ನನ್ನಲ್ಲಿಡಲ್ಪಟ್ಟ ಇಂದ್ರಿಯಗಳು (ಅಥವಾ) ಪ್ರಾಣಗಳುಳ್ಳವರಾಗಿಯೂ, ಮಾಂ-ನನ್ನನ್ನು, ಪರಸ್ಪರಂ-ಅನ್ಯೋನ್ಯವಾಗಿ (ಎಂದರೆ ಒಬ್ಬರಿಗೊಬ್ಬರು) ಬೋಧಯಂತಃ-ಬೋಧಿಸುವಂತವರಾಗಿಯೂ, ಕಥಯಂತಶ್ಚ-ಹೇಳುವಂತವರಾಗಿಯೂ, ನಿತ್ಯಂ-ಪ್ರತಿದಿನವು, ತುಷ್ಯಂತಿಚ-ಸಂತೋಷವನ್ನು ಹೊಂದುತ್ತಾರೆ, ರಮಂತಿಚ-ಸುಖವನ್ನೂ ಹೊಂದುತ್ತಾರೆ. ... ... ... ... ‖೯‖

(ರಾ‖ ಭಾ‖) ಅವರುಹೇಗೆ ಉಪಾಸನೆ ಮಾಡುತ್ತಾರೆಂದರೆ ಆದಕ್ಕುತ್ತರವನ್ನು ಹೇಳುತಾರೆ. ನಮ್ಮಲ್ಲಿಯೇ ಪ್ರವೇಶಿಸಿರುವ ಮನಸ್ಸುಳ್ಳವರಾಗಿಯೂ, ನನ್ನಿಂದಲೇ ಪ್ರಾಣಧಾರಣೆ ಮಾಡುವಂತವರಾಗಿಯೂ, (ನನ್ನನ್ನು ಒಂದು ಕ್ಷಣಮಾತ್ರವಾದರೂ ಬಿಟ್ಟದ್ದರೆ(ಜಲದಿಂದ ತೆಗೆಯಲ್ಪಟ್ಟ ಮತ್ಸ್ಯದಂತೆ ಆತ್ಮಧಾರಣವಂ ಮಾಡಲಾರದವರೆಂದುಭಾವವು.) ತಮ್ಮ ತಮ್ಮಗಳಿಂದ ಅನುಭೂತಗಳಾದ ನಮ್ಮ ಗುಣ

ಗಣಗಳನ್ನು ಒಬ್ಬರಿಗೊಬ್ಬರೂ ತಿಳಿಸುವಂತವರಾಗಿಯೂ, ಅತಿ ಮಾನುಷ ದಿವ್ಯಚೇಷ್ಟಿತನಾದ ನಿನ್ನ ರಮಣೀಯವಾದ ದಿವ್ಯಚೇಷ್ಟಿತಗಳನ್ನು ಸರ್ವಕಾಲಗಳಲ್ಲಿಯೂ ಹೇಳುವಂತವರಾಗಿಯೂ ಸಂತೋಷಿಸುತ್ತಾರೆ. ಹೇಳುವಂತವರು ಅನನ್ಯ ಪ್ರಯೋಜನವಾಗಿ ತಾವುಗಳು ಮಾಡುವ ಪ್ರವಚನದಿಂದ ಸಂತೋಷಿಸುತ್ತಾರೆ. ಅದನ್ನು ಕೇಳುವಂತವರೂ ಅನವಧಿಕಾತಿಶಯ ಪ್ರಿಯವಾದ ಶ್ರವಣದಿಂದ ಸಂತೋಷಿಸುತ್ತಾರೆಂದು ತಾತ್ಪರ್ಯವು. * ॥೯॥

(ತಾ॥ ಚಂ॥) ಏಕಾರ್ಥಕವಾದ ಬೋಧನಶಬ್ದಕ್ಕೂ ಕಥನಶಬ್ದಕ್ಕೂ ಪೌನರುಕ್ತ್ಯ ದೋಷವಿಲ್ಲವೋ? ಎಂದರೆ ವಿಷಯಭೇದವಿರುವುದರಿಂದ ಪೌನರುಕ್ತ್ಯ ದೋಷವಿಲ್ಲವು. 'ಬೋಧಯಂತಃ, ಎಂಬೀಪದದಿಂದ ತಿಳಿಯದೇಇರುವ ವಿಷಯಗಳಂ ಬೋಧಿಸುತ್ತಾರೆಂತಲೂ, 'ಕಥಯಂತಃ, ಎಂಬ ಪದದಿಂದ ವೃತ್ತವರ್ಣನವಂಮಾಡುತ್ತಾರೆಂತಲೂ ತಿಳಿಯಬೇಕು. ಈಪ್ರಕಾರವಾಗಿಯೆ "ತುಷ್ಯಂತಿಚರಮಂತಿಚ,, ಎಂಬೀ ಪದಗಳಿಗೂ ಪೌನರುಕ್ತ್ಯಪರಿಹಾರವಂತಿಳಿಯಬೇಕು. ಭಗವದ್ಗುಣವರ್ಣನದಿಂದ ಕೆಲವರು ಸಂತೋಷಿಸುತ್ತಾರೆಂತಲೂ ಅದನ್ನು ಶ್ರವಣಮಾಡುವುದರಿಂದ ಕೆಲವರು ಸಂತೋಷಿಸುತ್ತಾರೆಂತಲೂ ವಿಷಯಭೇದವಂ ತಿಳಿದು ಪೌನರುಕ್ತ್ಯ ಪರಿಹಾರವಂ ಮಾಡಿಕೊಳ್ಳಬೇಕು. ... ... ॥೯॥

ಶ್ಲೋ ॥ ತೇಷಾಂಸತತಯುಕ್ತಾನಾಂ ಭಜತಾಂಪ್ರೀತಿ
ಪೂರ್ವಕಂ।ದದಾಮಿಬುದ್ಧಿಯೋಗಂತಂ ಯೇನಮಾಮು
ಪಯಾಂತಿತೇ ॥ ... ॥೧೦॥

ಪ॥ ತೇಷಾಂ- ಸತತ ಯುಕ್ತಾನಾಂ- ಭಜತಾಂ- ಪ್ರೀತಿಪೂರ್ವಕಂ । ದದಾಮಿ- ಬುದ್ಧಿಯೋಗಂ- ತಂ- ಯೇನ- ಮಾಂ- ಉಪಯಾಂತಿ- ತೇ॥

ಅ॥ ಯೇನ- ಯಾವದರಿಂದ, ತೇಮಾಮುಪಯಾಂತಿ- ಅವರು ನನ್ನನ್ನು ಹೊಂದುವರೋ, ತಂಬುದ್ಧಿಯೋಗಂ- ಅಂಥಾ ಬುದ್ಧಿಯೋಗವನ್ನು, ಸತತ ಯುಕ್ತಾನಾಂ- ಯಾವಾಗಲೂ ನನ್ನಲ್ಲಿ ಚಿತ್ತವನ್ನಿಟ್ಟವರಾಗಿಯೂ, ಪ್ರೀತಿಪೂರ್ವಕಂಭಜತಾಂ- ಪ್ರೀತಿಪೂರ್ವಕವಾಗಿ ಭಜಿಸುವಂತವರಾಗಿಯೂ ಇರುವ, ತೇಷಾಂ- ಅವರಿಗೆ, ದದಾಮಿ- ಕೊಡುತ್ತೇನೆ ... ... ... ... ॥೧೦॥

(ಶಂ॥ ಭಾ॥) ಮಾಮುಪಯಾಂತಿ- ನನ್ನನ್ನು ತಮ್ಮ ಆತ್ಮವ ನ್ನಾಗಿ ತಿಳಿಯುತ್ತಾರೆ. ಬುದ್ಧಿಯೋಗಂ- ಬುದ್ಧಿಯೆಂದರೆ ಆತ್ಮತತ್ವ ವಿಷಯವಾದ ನಿಶ್ಚಯವು, ಯೋಗವೆಂದರೆ ಅಂತಾ ಆತ್ಮಜ್ಞಾನದಲ್ಲಿ ಮನಸ್ಸನ್ನು ನಿಲ್ಲಿಸುವಿಕೆಯು, (ಶ್ರೀ) ಜ್ಞಾನಯೋಗವನ್ನು ಸರ್ವಕಾಲ ದಲ್ಲಿಯೂ (ಪರಮಾತ್ಮ ತತ್ವವಿಚಾರದಲ್ಲಿ ಶ್ರದ್ಧಾಯುಕ್ತವಾದ ಮನ ಸ್ಸುಳ್ಳವರಾಗಿ ಅತ್ಯಂತ ವಿಶ್ವಾಸದಿಂದ ಪರಮಾತ್ಮಧ್ಯಾನವಂ) ಮಾಡು ವವಿವೇಕಿಗಳಿಗೆ ಪರಮಾತ್ಮ ತತ್ವವಿಷಯವಾದ ಸಮ್ಯಗ್ದರ್ಶನವೆಂಬ ಬುದ್ಧಿಯೋಗವನ್ನು ನಾನೇ ಉಂಟುಮಾಡುವೆನು. ಎಂದರೆ ಗುರೂ ಪದೇಶಾದಿಗಳಿಂದ ತನಗೆ ತಿಳಿದಿರುವ ಪರಮಾತ್ಮಸ್ವರೂಪಧ್ಯಾನವನ್ನು ಸರ್ವದಾ ಮಾಡುತಲಿರುವುದರಲ್ಲಿ ಶ್ರದ್ಧೆಯುಳ್ಳ ವಿವೇಕಮುಳ್ಳವರಿಗೆ ಕ್ರ ಮವಾಗಿ ಬ್ರಹ್ಮಸ್ವರೂಪಾನುಭವ ಯೋಗ್ಯವಾದ ಬ್ರಹ್ಮಜ್ಞಾನವನ್ನು ನಾನೇ ಉಂಟು ಮಾಡುವೆನೆಂದು ಭಾವವು. * ॥೧೦॥

(ರಾ॥ ಭಾ॥) ಸತತ ಯುಕ್ತಾನಾಂ-ನಮ್ಮೊಡನೆ ನಿತ್ಯಯೋಗ ವನ್ನಪೇಕ್ಷಿಸುವಂತವರಾಗಿ, ಪ್ರೀತಿಪೂರ್ವಕಂಭಜತಾಂ-ಪ್ರೀತಿಪೂರ್ವಕ ವಾಗಿ ಉಪಾಸನೆ ಮಾಡುವ, ತೇಷಾಂ-ಆ ಅಧಿಕಾರಿಗಳಿಗೆ, ತೇ- ಅವ ರು, ಯೇನ-ಯಾವ ಬುದ್ಧಿಯೋಗದಿಂದ, ಮಾಮುಪಯಾಂತಿ-ನಮ್ಮ ನ್ನು ಹೊಂದುವರೊ,ತಂಬುದ್ಧಿಯೋಗಂ-ಪರಿಪಾಕದಶೆಯನ್ನು ಹೊಂ ದಿರುವ ಅಂತಹ ಬುದ್ಧಿಯೋಗವನ್ನೇ, ಪ್ರೀತಿಪೂರ್ವಕಂದದಾಮಿ-ಪ್ರೀ ತಿಪೂರ್ವಕವಾಗಿ ಕೊಡುವೆನು. * * * ॥೧೦॥

(ಗೀ॥ ವಿ॥) ಬುದ್ಧಿಯೋಗಂ-ಜ್ಞಾನರೂಪವಾದ ಮೋಕ್ಷೋಪಾ ಯುವನ್ನು. * * * * * ॥೧೦॥

ಶ್ಲೋ॥ತೇಷಾಮೇವಾನುಕಂಪಾರ್ಥಮಹಮಜ್ಞಾನಜಂ
ತಮಃ । ನಾಶಯಾಮ್ಯಾತ್ಮಭಾವಸ್ಥೋಜ್ಞಾನದೀಪೇನ
ಭಾಸ್ವತಾ॥ ... ... ... ॥೧೧॥

ಪ॥ ತೇಷಾಂ- ಏವ- ಅನುಕಂಪಾರ್ಥಂ-ಅಹಂ-ಅಜ್ಞಾನಜಂ- ತಮಃ । ನಾಶಯಾ ಮಿ-ಅತ್ಮಭಾವಸ್ಥಃ- ಜ್ಞಾನದೀಪೇನ- ಭಾಸ್ವತಾ॥

ಅ॥ ತೇಷಾಮೇವ-ಅವರುಗಳಿಗೇನೆ,ಅನುಕಂಪಾರ್ಥಂ-ಅನುಗ್ರಹಕ್ಕಾಗಿಯೆ,ಅಹಂ- ನಾನು, ಅತ್ಮಭಾವಸ್ಥಃ- ಅವರ ಮನೋವೃತ್ತಿಯಲ್ಲಿ ಧ್ಯಾನಕ್ಕೆ ವಿಷಯನಾಗಿರುವಂತೆ

ದೆನಾಗಿ, ಭಾಸ್ವತಾ- ಪ್ರಕಾಶವಾದ, ಜ್ಞಾನದೀಪೇನ- ಜ್ಞಾನವೆಂಬದೀಪದಿಂದ, ಅಜ್ಞಾನಜಂ ತಮಃ- ಅಜ್ಞಾನದಿಂದುಂಟಾದ ಅಂಧಕಾರವನ್ನು, ನಾಶಯಾಮಿ- ನಾಶಪಡಿಸುವೆನು. ... ... ... ॥೧೧॥

(ಶಂ॥ ಭಾ॥) ನಿನ್ನನ್ನು ಹೊಂದುವುದಕ್ಕೆ ಪ್ರತಿಬಂಧಕವಾದ ಅಜ್ಞಾನವನ್ನು ನಾಶಪಡಿಸುವಂತಹ ಜ್ಞಾನಯೋಗವನ್ನು ಏತಕ್ಕಾಗಿ ನಿನ್ನಭಕ್ತರಿಗುಂಟುಮಾಡುತ್ತೀಯೆ? ಅದರಿಂದ ನಿನಗೇನು ಪ್ರಯೋಜನವು? ಎಂದರೆ ಅದಕ್ಕುತ್ತರವನ್ನು ಹೇಳುತ್ತಾನೆ. ನಿರಂತರ ಬ್ರಹ್ಮಧ್ಯಾನಪರರಾದ ನನ್ನಭಕ್ತರು ಅದಕ್ಕೆ ಪ್ರತಿಬಂಧಕಗಳಾದ ಪಾಪಗಳಿಂದ ಬಾಧೆಪಡುವುದಂ ಕಂಡು ದಯಾ ಪರವಶನಾಗಿ ಅಂತವರನ್ನನುಗ್ರಹಿಸಬೇಕೆಂಬ ಇಚ್ಛೆಯಿಂದ ಅಂತವರಿಗೆ ಅವಿವೇಕದಿಂದುಂಟಾಗಿರುವ ಪ್ರಪಂಚಮೋಹವೆಂಬ ಗಾಢಾಂಧಕಾರವನ್ನು ಅವರ ಅಂತಃಕರಣದಲ್ಲಿಯೇ ನಾನಿದ್ದುಕೊಂಡು ವಿವೇಕವೆಂಬ ದೀಪದಿಂದ(ಆದೀಪಕ್ಕೆ ಭಕ್ತಿಯೇ ತೈಲವಾಗಿರುವುದು, ಧ್ಯಾನಾಭ್ಯಾಸಾಸಕ್ತಿಯೇ ದೀಪಪ್ರಕಾಶಕವಾದ ಗಾಳಿಯು, ಬ್ರಹ್ಮಚರ್ಯಾದಿ ಸಾಧನ ಸಂಸ್ಕಾರಮುಳ್ಳ ವಿವೇಕವೇ ಬತ್ತಿಯು, ವೈರಾಗ್ಯವುಳ್ಳ ಅಂತಃಕರಣವನ್ನೇ ಆಧಾರವಾಗಿ ಉಳ್ಳದ್ದಾಗಿರುವುದು, ರಾಗದ್ವೇಷಾದಿಗಳೆಂಬ ಗಾಳಿಇಲ್ಲದ ನಿಶ್ಚಲವಾದ ಚಿತ್ತವೇ ಸ್ಥಾನವು, ನಿರಂತರ ಧ್ಯಾನದಿಂದುಂಟಾದ ಸ್ವಾನುಭವವೇ ಪ್ರಕಾಶವು.) ನಾಶಪಡಿಸುವೆನು. ॥೧೧॥

(ರಾ॥ ಭಾ॥) ಅಂತಹ ಉತ್ತಮಾಧಿಕಾರಿಗಳ ಅನುಗ್ರಹಾರ್ಥವಾಗಿಯೇ ನಾನವರುಗಳ ಮನೋವೃತ್ತಿಯಲ್ಲಿ ವಿಷಯಭೂತನಾಗಿದ್ದುಕೊಂಡು ನನ್ನ ಕಲ್ಯಾಣ ಗುಣಗಣಗಳನ್ನು ಅವರಿಗೆ ಪ್ರಕಾಶಪಡಿಸುವಂತವನಾಗಿ ಸ್ವಯಂ ಪ್ರಕಾಶಮುಳ್ಳ ಜ್ಞಾನವೆಂಬ ದೀಪದಿಂದ ಜ್ಞಾನ ವಿರೋಧಿಯಾದ ಪ್ರಾಚೀನ ಕರ್ಮವೆಂಬ ಅಜ್ಞಾನದಿಂದುಂಟಾಗಿರುವ ಶಬ್ದಾದಿವಿಷಯ ಪ್ರಾವಣ್ಯವೆಂಬ ಅಂಧಕಾರವನ್ನು ಹೋಗಲಾಡಿಸುವೆನು. ... ... ॥೧೧॥

(ಗೀ॥ ವಿ॥) ತಮಃ- ಸುಖದುಃಖ ರೂಪವಾದ ಬಂಧವನ್ನು, ಹೋಗಲಾಡಿಸುವೆನೆಂದು ತಾತ್ಪರ್ಯವು. ... ॥೧೧॥

॥ ಶ್ಲೋ॥ ಅರ್ಜುನಉವಾಚ॥ಪರಂಬ್ರಹ್ಮಪರಂಧಾಮಪ

ವಿತ್ರಂಪರಮಂಭವಾನ್ |ಪುರುಷಂಶಾಶ್ವತಂದಿವ್ಯಮಾದಿ
ದೇವಮಜಂವಿಭುಂ ॥೧೨॥ ಆಹುಸ್ತ್ವಾಮೃಷಯಸ್ಸ
ರ್ವೇದೇವರ್ಷಿರ್ನಾರದಸ್ತಥಾ| ಅಸಿತೋದೇವಲೋವ್ಯಾಸ
ಸ್ಸ್ವಯಂಚೈವಬ್ರವೀಷಿಮೇ ॥ ... ॥೧೩॥

ಪ॥ ಅರ್ಜುನಃ-ಉವಾಚ॥ ಪರಂಬ್ರಹ್ಮ-ಪರಂಧಾಮ-ಪವಿತ್ರಂ-ಪರಮಂ-ಭವಾನ್। ಪುರುಷಂ- ಶಾಶ್ವತಂ- ದಿವ್ಯಂ- ಆದಿದೇವಂ- ಅಜಂ-ವಿಭುಂ ॥ ಆಹುಃ-ತ್ವಾಂ-ಋಷಯಃ-ಸರ್ವೇ-ದೇವರ್ಷಿಃ- ನಾರದಃ-ತಥಾ । ಅಸಿತಃ-ದೇವಲಃ - ವ್ಯಾಸಃ - ಸ್ವಯಂ-ಚ-ಏವ-ಬ್ರವೀಷಿ-ಮೇ ॥

ಅ॥ ಅರ್ಜುನ ಉವಾಚ॥ ಅರ್ಜುನನು ಹೇಳಿದನು. ಪರಂಬ್ರಹ್ಮ-ಪರಂಬ್ರಹ್ಮವೂ, ಪರಂಧಾಮ- (ಶಂ॥ ರಾ॥) ಶ್ರೇಷ್ಠವಾದ ತೇಜಸ್ಸ್ವರೂಪನೂ, ಪರಮಂ ಪವಿತ್ರಂ-ಉತ್ತಮವಾದ ಪರಿಶುದ್ಧ ವಸ್ತುವೂ, ಭವಾನ್-ನೀವೇ-ತ್ವಾಂ-ನಿಮ್ಮನ್ನು, ಶಾಶ್ವತಂ-ನಿತ್ಯರನ್ನಾಗಿಯೂ, ದಿವ್ಯಂ-ಪ್ರಕಾಶ ಸ್ವರೂಪರನ್ನಾಗಿಯೂ, ಆದಿದೇವಂ-ದೇವತೆಗಳಿಗೆ ಆದಿಭೂತರನ್ನಾಗಿಯೂ, ಅಜಂ- ಉತ್ಪತ್ತಿ ಶೂನ್ಯರನ್ನಾಗಿಯೂ ವಿಭುಂ-ಸರ್ವವ್ಯಾಪಿಯನ್ನಾಗಿಯೂ, ಪುರುಷಂ- ಪುರುಷರನ್ನಾಗಿಯೂ, ಸರ್ವೇಋಷಯಃ - ಸಮಸ್ತರಾದ ಋಷಿಗಳೂ, ದೇವರ್ಷಿರ್ನಾರದಃ-ದೇವರ್ಷಿಯಾದ ನಾರದರೂ, ಅಸಿತಃ- ಅಸಿತರೆಂಬ ಋಷಿಯೂ, ದೇವಲಃ ದೇವಲರೆಂಬ ಋಷಿಯೂ, ವ್ಯಾಸಃ-ವೇದವ್ಯಾಸರೂ, ಆಹುಃ- ಹೇಳುವರು. ತಥಾ-ಹಾಗೆಯೆ, ಸ್ವಯಂಚೈವ- ಸ್ವತಸ್ಸರ್ವಜ್ಞರಾಗಿಯೂ ಬ್ರಹ್ಮಾದಿಗಳಿಗೆ ಗುರುವಾಗಿಯೂ ಇರುವ ನೀವೂನು, ಮೇ- "ಶಿಷ್ಯಸ್ತೇಹಂಶಾಧಿಮಾಂತ್ವಾಂಪ್ರಪನ್ನಂ" ಎಂಬದಾಗಿ ತಮ್ಮಗಳಿಗೆ ಶಿಷ್ಯನಾಗಿಯೂ ತಮ್ಮ ಚರಣಾರವಿಂದಗಳನ್ನೆ ಶರಣ ಹೊಂದಿದವನಾಗಿಯೂ ಇರುವ ನನಿಗೆ ಬ್ರವೀಷಿ-ಹೇಳುತ್ತೀರಿ. * ॥೧೦॥೧೩॥

(ಶಂ॥ ಭಾ॥) ವಿಭುಂ- ವಿಭವನಶೀಲಂ, ಆಳುವಂತಾ ಸ್ವಭಾವ ಮುಳ್ಳವನು. ... ॥೧೦॥೧೩॥

(ರಾ॥ ಭಾ॥) ಈರೀತಿಯಾಗಿ ಕೇಳುವಂತವರಿಗೆ ನಿರತಿಶಯಾನಂದ ಜನಕವಾದ ಭಗವತ್ಕಲ್ಯಾಣ ಗುಣಯೋಗವನ್ನೂ ಪರಮಾತ್ಮನ ಐಶ್ವರ್ಯವನ್ನೂ ಕೇಳಿ ಅದನ್ನು ವಿಸ್ತಾರವಾಗಿ ಕೇಳಬೇಕೆಂಬ ಕುತೂಹಲದಿಂದ ಅರ್ಜುನನು ಪ್ರಶ್ನೆಮಾಡುತ್ತಾನೆ. ಪರಂಬ್ರಹ್ಮ-ಸ್ವರೂಪದಿಂದಲೂ ಗುಣದಿಂದಲೂ ನಿರತಿಶಯ ಬೃಹತ್ವಯುಕ್ತದ್ದಾಗಿರುವುದರಿಂದ ಸರ್ವೋತ್ಕೃಷ್ಟ ವಸ್ತುವೆಂಬದಾಗಿಯೂ, ಪರಂಧಾಮ-ಅಪ್ರಕಾರವಾಗಿಯೇ ಸರ್ವೋತ್ಕೃಷ್ಟನಾಗಿರುವ ಸಮಸ್ತವಾದ ಅಜ್ಞಾ

ನಾಂಧಕಾರ ಹರವಾದ ಜ್ಯೋತಿಸ್ಸೆಂತಲೂ, ಪರಮಂ ಪವಿತ್ರಂ-ಪಾವನಗಳಾದ ಗಂಗಾದಿ ತೀರ್ಥಗಳಿಗೂ ಇನ್ನೂ ಪಾವನಗಳಾದ ವಸ್ತುಗಳಿಗೂ ತನ್ನ ಸಂಬಂಧದಿಂದಲೇ ಪಾವನತ್ವವನ್ನುಂಟುಮಾಡುವ ಸರ್ವೋತ್ಕೃಷ್ಟ ಪಾವನ ವಸ್ತುವೆಂತಲೂ, (ವೇದೇಷು ಶ್ರುತಂವಸ್ತು ಎಂಬೀ ಮೂರುಪದಗಳು ಅಧ್ಯಾಹಾರ್ಯಗಳಾಗಿರುವುವು.) ವೇದಗಳಲ್ಲಿ ಪ್ರಸಿದ್ಧವಾದ ವಸ್ತುವು ನೀನೇ ಅಲ್ಲವೆ. ಪರಂಬ್ರಹ್ಮ ಎಂಬುವುದಕ್ಕೆ "ಯತೋವಾ ಇಮಾನಿ ಭೂತಾನಿಜಾಯಂತೆ,, ಇತ್ಯಾದಿ ಶ್ರುತಿಗಳೂ 'ಪರಂಧಾಮ, ಎಂಬುವುದಕ್ಕೆ "ಅಥಯದತಃ ಪರೋದಿವೊ ಜ್ಯೋತಿರ್ದೀಪ್ಯತೆ,, ಇತ್ಯಾದಿ ಶ್ರುತಿಗಳೂ, 'ಪರಮಂ ಪವಿತ್ರಂ, ಎಂಬುವುದಕ್ಕೆ "ಯಥಾ ಪುಷ್ಕರ ಪಲಾಶ ಆಪೋನಶ್ಲಿಷ್ಯತೆ,, ಇತ್ಯಾದಿ ಶ್ರುತಿಗಳೂ ಪ್ರತಿಪಾದಕಗಳೆಂದರಿಯಬೇಕು. ॥ ೧೧೪ ॥ ಮತ್ತು ಪರಾವರ ತತ್ವಗಳನ್ನು ಯಥಾವತ್ತಾಗಿ ತಿಳಿದವರಾದ ಸಮಸ್ತ ಋಷಿಗಳೂ ತಮ್ಮನ್ನು ದಿವ್ಯಪುರುಷನೆಂತಲೂ ಆದಿದೇವನೆಂತಲೂ, ಉತ್ಪತ್ತಿರಹಿತನೆಂತಲೂ ಸರ್ವವಸ್ತುಗಳಲ್ಲಿಯೂ ಪರಿಪೂರ್ಣವಾಗಿ ವ್ಯಾಪಿಸಿರುವಂತವನೆಂತಲೂ ಹೇಳುತ್ತಾರೆ. ಅಪ್ರಕಾರವೇ ದೇವರ್ಷಿಯಾದ ನಾರದರೂ ಅಸಿತರೂ ದೇವಲರೂ ವ್ಯಾಸರೂ "ಏಷನಾರಾಯಣಶ್ರೀಮಾನ್ ಕ್ಷೀರಾರ್ಣವನಿಕೇತನಃ। ನಾಗಪರ್ಯಂಕಮುತ್ಸೃಜ್ಯ ಹ್ಯಾಗತೋಮಧುರಾಂಪುರೀಂ॥ಪುಣ್ಯಾದ್ವಾರವತೀತತ್ರಯತ್ರಾಸ್ತೇಮಧುಸೂದನಃ। ಸಾಕ್ಷಾದ್ದೇವಃಪುರಾಣೋಽಸಾಸಹಿಧರ್ಮಸ್ಸನಾತನಃ ॥ ಏಚವೇದವಿದೋವಿಪ್ರಾಯೇಚಾಧ್ಯಾತ್ಮವಿದೋಜನಾಃ ।ತೇವದಂತಿಮಹಾತ್ಮಾನಂಕೃಷ್ಣಂ ಧರ್ಮಂಸನಾತನಂ॥ಪವಿತ್ರಾಣಾಂಹಿಗೋವಿಂದಃಪವಿತ್ರಂಪರಮುಚ್ಯತೇ। ಪುಣ್ಯಾನಾಮಪಿಪುಣ್ಯೋಽಸೌಮಂಗಳಾನಾಂಚಮಂಗಳಂ।ತ್ರೈಲೋಕ್ಯಂಪುಂಡರೀಕಾಕ್ಷೋ ದೇವದೇವಸ್ಸನಾತನಃ । ಆಸ್ತೇಹರಿರಚಿಂತ್ಯಾತ್ಮಾತತ್ರೈವ ಮಧುಸೂಧನಃ ,, ಎಂಬುವುದಾಗಿಯೂ, ಅಪ್ರಕಾರವೇ "ಯತ್ರನಾರಾಯಣೋ ದೇವಃ ಪರಮಾತ್ಮಾಸನಾತನಃ। ತತ್ರಕೃತ್ಸ್ನಂಜಗತ್ಪಾರ್ಥತೀರ್ಥಾನ್ಯಾಯತನಾನಿಚ ॥ ತತ್ಪುಣ್ಯಂ ತತ್ಪರಂಬ್ರಹ್ಮತತ್ತೀರ್ಥಂ ತತ್ತಪೋವನಂ । ತತ್ರದೇವರ್ಷಯಸ್ಸಿದ್ಧಾಸ್ಸರ್ವೇಚೈವತಪೋಧನಾಃ ॥ ಆದಿದೇವೋ ಮಹಾಯೋಗೀಯತ್ರಾಸ್ತೇಮ

ಧುಸೂದನಃ । ಪುಣ್ಯಾನಾಮಪಿತತ್ಪುಣ್ಯಂಮಂಗಲಾನಾಂಚಮಂಗಲಮ್ ... ಭೂತ್ತೇಸಂಶಯೊತ್ರ ವೈ ॥ ಕೃಷ್ಣಏವಹಿಲೋಕಾನಾಮುತ್ಪತ್ತಿರಪಿಚಾವ್ಯಯಃ । ಕೃಷ್ಣಸ್ಯಹಿಕೃತೇಭೂತಮಿದಂವಿಶ್ವಂಚರಾಚರಂ,, ಎಂಬದಾಗಿಯೂ ಹೇಳಿರುತ್ತಾರೆ. ಸ್ವತಸ್ಸರ್ವಜ್ಞನಾಗಿಯೂ ಬ್ರಹ್ಮಾದಿಗಳಿಗೂಕೂಡ ಗುರುವಾಗಿಯೂ ಇರುವ ನೀವೂನೂ " ಭೂಮಿರಾಪೋನಲೋವಾಯುಃ ಖಂಮನೋಬುದ್ಧಿರೇವಚ। ಅಹಂಕಾರಇತೀಯಂಮೇ ಭಿನ್ನಾಪ್ರಕೃತಿರಷ್ಟಧಾ,, (೭॥ ೪॥) ಎಂಬದಾಗಿಯೂ, "ಅಹಂ ಸರ್ವಸ್ಯಪ್ರಭವೊ ಮತ್ತಸ್ಸರ್ವಂ ಪ್ರವರ್ತತೆ,, (೧೦॥ ೮॥) ಇತ್ಯಂತವಾಗಿ ಹಿಂದೇ ಹೇಳಿರುತ್ತೀರೆಂದು ಭಾವವು. ... ... ... ॥೧೧॥೧೩॥

(ಗೀ॥ ಏ॥) (ಯತ್- ಯಾವವಸ್ತುವು, ಪರಂ- ಉತ್ತಮವಾದ, ಬ್ರಹ್ಮ- ಸರ್ವಸದ್ಗುಣ ಪೂರ್ಣವಾಗಿರುವುದೋ, (ಯತ್ - ಯಾವವಸ್ತುವು) ಪರಂಧಾಮ- ಉತ್ತಮವಾದ ತೇಜಸ್ಸೋ, (ಅಥವಾ) ಉತ್ತಮವಾದ ಆಶ್ರಯವೋ, ಪರಮಂಪವಿತ್ರಂ- ಉತ್ತಮವಾದ ಪವಿತ್ರವಾಗಿರುವ ವಸ್ತುವು, (ಯತ್- ಯಾವದೋ, ತತ್-ಅಂತಾ ವಸ್ತುವು,) ಭವಾನ್- ನೀನು, ಉತ್ತಮಗಳಾದ ಸರ್ವ ಸದ್ಗುಣಗಳಿಂದಪರಿಪೂರ್ಣನೂ ತ್ತಮವಾದ ತೇಜಸ್ಸೂ ಉತ್ತಮವಾದ ಪವಿತ್ರವಸ್ತುವೂ ನೀನೆಂದರ್ಥವು. ಸಮಸ್ತರಾದ ರಾಜರ್ಷಿಗಳೂ ಭೃಗ್ವಾದಿ ಮಹಾಮುನಿಗಳೂ ದೇವರ್ಷಿಯಾದ ನಾರದರೂ ಅಸಿತಾದಿ ಮಹರ್ಷಿಗಳೂ ನಿನ್ನನ್ನು ಪರಿಪೂರ್ಣ ಷಡ್ಗುಣನನ್ನಾಗಿಯೂ ಸದಾ ಏಕಪ್ರಕಾರದಿಂದಿರುವಂತವನನ್ನಾಗಿಯೂ ಕ್ರೀಡಾದಿ ಗುಣ ವಿಶಿಷ್ಟನನ್ನಾಗಿಯೂ ದೇವತೆಗಳಿಗೆ ಆದಿಭೂತನನ್ನಾಗಿಯೂ ಉತ್ಪತ್ತಿಯಿಲ್ಲದವನನ್ನಾಗಿಯೂ ನಾನಾರೂಪಗಳಿಂದ ಕೂಡಿರುವಂತವನನ್ನಾಗಿಯೂ ಹೇಳುತ್ತಾರೆ. ಈಅರ್ಥವನ್ನೇ ನೀವೂ ನನಿಗೆ ಅನುಗ್ರಹಿಸಿರುತ್ತೀರೆಂದಭಿಪ್ರಾಯವು.॥೧೨॥೧೩

ಶ್ಲೋ॥ ಸರ್ವಮೇತದೃತಂಮನ್ಯೇಯನ್ಮಾಂವದಸಿಕೇಶವ।
ನಹಿತೇಭಗವನ್ವ್ಯಕ್ತಿಂವಿದುರ್ದೇವಾನದಾನವಾಃ॥೧೪॥

ಪ॥ ಸರ್ವಂ- ಏತತ್-ಋತಂ- ಮನ್ಯೇ-ಯತ್- ಮಾಂ- ವದಸಿ- ಕೇಶವ । ನ-ಹಿ-ತೇ- ಭಗವನ್- ವ್ಯಕ್ತಿಂ- ವಿದುಃ- ದೇವಾಃ -ನ-ದಾನವಾಃ ॥

ಅ॥ ಹೇಕೇಶವ- ಎಲೈ ಶ್ರೀಕೃಷ್ಣನೇ,ಮಾಂ- ನನ್ನನ್ನುಕುರಿತು, ಯತ್-ಯಾ

ಏದನ್ನು, ವದಸಿ- ಹೇಳಿರುವಿಯೊ, ಏತತ್ಸರ್ವಂ- ಇವೆಲ್ಲವೂ, ಋತಂ- ಸತ್ಯವೆಂತಲೆ, ಮನ್ಯೇ- ನೆನೆಸುತ್ತೇನೆ. ಹೇಭಗವನ್- ಜ್ಞಾನಶಕ್ತ್ಯಾದಿ ಷಡ್ಗುಣ ನಿಧಿಯಾದ ಎಲೈ ಶ್ರೀಭಗವದ್ವಾಸುದೇವನೆ, ತೇ- ನಿನ್ನ, ವ್ಯಕ್ತಿಂ- ಅಭಿವ್ಯಕ್ತಿಯನ್ನು, ದೇವಾ ನವಿದುಃ- ದೇವತೆಗಳರಿಯರು, ದಾನವಾಃ- ದಾನವರೂ, ನ- ತಿಳಿಯಲಾರರು. ||೧೪||

(ಶಂ|| ಭಾ||) ನಿನ್ನ ಅವತಾರ ಮಾಹಾತ್ಮ್ಯವನ್ನು ದೇವತೆಗಳಾದರೂ ಅಸುರರಾದರೂ ತಿಳಿಯಲಾರರೆಂಬದಾಗಿಯೂ ಬ್ರಹ್ಮನಿಷ್ಠರಾದ ವ್ಯಾಸಾದಿ ಋಷಿಗಳೂ ಪರಬ್ರಹ್ಮನಾದ ನೀನೂ ಹೇಳಿರುವ ವಾಕ್ಯಗಳುಯಥಾರ್ಥಗಳೆಂಬದಾಗಿಯೂನಂಬಿರುವೆನು ದೇವಾದಿಗಳಿಗೇನೆನಿನ್ನ (ನಿರುಪಾಧಿಕ ಸ್ವಭಾವವು) ಪ್ರಭಾವವು ತಿಳಿಯ ಲಶಕ್ಯವಾದ ಮೇಲೆ ಮನುಷ್ಯರು ತಿಳಿಯಲಾರರೆಂಬುವುದನ್ನು ಹೇಳಬೇಕಾದದ್ದೇನೆಂದು ತಾತ್ಪರ್ಯವು. ... ... ... ||೧೪||

(ರಾ||ಭಾ||) ಕೇಶಿಯೆಂಬ ರಾಕ್ಷಸನಂ ಸಂಹಾರ ಮಾಡಿರುವುದರಿಂದ ಕೇಶವ ಶಬ್ದವಾಚ್ಯನಾದ ಎಲೈ ಪರಮಾತ್ಮನೆ ನನ್ನಂ ಕುರಿತು ಯಾವ ತಮ್ಮಗಳ ಐಶ್ವರ್ಯವನ್ನೂ ಅವಧಿ ರಹಿತವಾದ ಕಲ್ಯಾಣಗುಣಗಳನ್ನೂ ಹೇಳಿರುತ್ತೀರೋ ಇವೆಲ್ಲವೂ ಸತ್ಯವಾಕ್ಯಗಳೆಂತಲೆ ನೆನೆಸಿರುವೆನು. ನಿರತಿಶಯಗಳಾದ ಜ್ಞಾನೈಶ್ವರ್ಯ ಬಲವೀರ್ಯ ಶಕ್ತಿ ತೇಜೋನಿಧಿಯಾದ ಎಲೈ ಶ್ರೀಕೃಷ್ಣಸ್ವಾಮಿಯೆ ನಿಮ್ಮ ಅವತಾರಾದಿ ದಿವ್ಯಪ್ರಭಾವವನ್ನು ಅಲ್ಪಜ್ಞರಾದದೇವತೆಗಳೂ ದಾನವರೂಅರಿಯರು.||೧೪||

ಶ್ಲೋ|| ಸ್ವಯಮೇವಾತ್ಮನಾತ್ಮಾನಂ ವೇತ್ಥತ್ವಂಪುರುಷೋತ್ತಮ | ಭೂತಭಾವನಭೂತೇಶ ದೇವದೇವಜಗತ್ಪತೇ|| ... ... ||೧೫||

ಪ|| ಸ್ವಯಂ- ಏವ- ಆತ್ಮನಾ - ಆತ್ಮಾನಂ-ವೇತ್ಥ- ತ್ವಂ - ಪುರುಷೋತ್ತಮ| ಭೂತಭಾವನ- ಭೂತೇಶ- ದೇವದೇವ- ಜಗತ್ಪತೇ ||

ಅ||ರಾ|| ಭಾ|| ಪುರುಷೋತ್ತಮ - ಬದ್ಧಮುಕ್ತ ಜೀವಕೋಟಿಗಳಿಗಿಂತಲೂ ಸರ್ವಪ್ರಕಾರದಿಂದಲೂ ಅತಿಶಯಿಸಿರುವ ವೈಭವಮುಳ್ಳ ಸ್ವಾಮಿಯೇ, ಭೂತಭಾವನ - ಸರ್ವಭೂತಗಳಿಗೂ ಉತ್ಪತ್ತಿ ಹೇತುಭೂತನಾಗಿರುವ ಸ್ವಾಮಿಯೇ, ಭೂತೇಶ- ಸರ್ವಭೂತಗಳಿಗೂ ನಿಯಂತಾ ಆಗಿರುವವನೆ, ದೇವದೇವ- ದೇವತೆಗಳಿಗೂ ಪರದೇವತೆಯಾಗಿರುವ ಸ್ವಾಮಿಯೇ, ಜಗತ್ಪತೇ- ಸರ್ವ ಪ್ರಪಂಚಕ್ಕೂ ಶೇಷಿಯಾದ ಶ್ರೀಕೃಷ್ಣನೆ, ತ್ವಂ - ನೀನು, ಆತ್ಮನಾ- ನಿನ್ನಿಂದಲೆ, ಆತ್ಮಾನಂ- ನಿನ್ನನ್ನು, ಸ್ವಯಮೇವ- ನಿಮ್ಮಸ್ವರೂಪ ಜ್ಞಾ

ನವಿಂದಲೆ, ವೇತ್ಥ - ತಿಳಿಯುತ್ತೀರಿ, ಬೇರೊಬ್ಬರು ತಮ್ಮ ಸ್ವರೂಪವನ್ನು ಯಥಾವತ್ತಾಗಿ ತಿಳಿಯಲು ಶಕ್ತರಲ್ಲವೆಂದು ಭಾವವು. ಇಲ್ಲಿನ ದೇವದೇವಶಬ್ದದಿಂದ ಸೌಂದರ್ಯವೇ ಮೊದಲಾದ ಕಲ್ಯಾಣಗುಣಗಳಲ್ಲಿ ದೇವತೆಗಳು,ಮನುಷ್ಯ ಮೃಗಪಕ್ಷ್ಯಾದಿಗಳನ್ನತಿಶಯಿಸಿರುವಂತೆ ಆದೇವತೆಗಳೆಲ್ಲರನ್ನೂ ಶ್ರೀಕೃಷ್ಣನು ಅತಿಶಯಿಸಿರುವನೆಂದುಭಾವವು. ||೧೫||

(ಶಂ|| ಭಾ||)ಯಾವ ಕಾರಣದಿಂದ ನೀನು ದೇವಾದಿಗಳಿಗೂ ಆದಿಕಾರಣನಾಗಿರುವಿಯೋಆದುದರಿಂದಲೆ ಅನೇಕ ಸಂಖ್ಯಾಸಂಖ್ಯಾತರಾದ ಪ್ರಾಣಿಗಳಲ್ಲಿ ಯಾವನೋ ಒಬ್ಬನೇ ಮಹಾ ಪ್ರಯಾಸದಿಂದ ಅನೇಕ ಜನ್ಮಸಂಸಿದ್ಧನಾಗಿ ನಿನ್ನ ಅನುಗ್ರಹಕ್ಕೆ ಪಾತ್ರನಾದ ಮೇಲೆ ನಿನ್ನಸ್ವರೂಪವನ್ನರಿಯುತ್ತಾನೆಂದು ಅರ್ಜುನನು ಹೇಳುತ್ತಾನೆ. ಪುರುಷ ಶ್ರೇಷ್ಠನಾಗಿಯೂ ಸಕಲ ಭೂತಗಳಿಗೂ ಸೃಷ್ಟಿಕರ್ತನಾಗಿಯೂ ಸರ್ವಭೂತಗಳಿಗೂ ನಿಯಾಮಕನಾಗಿಯೂ ಸೂರ್ಯಾದಿಗಳಿಗೂ ಪ್ರಕಾಶವಂ ಕೊಡುವಂತವನಾಗಿಯೂ ಇರುವ ಎಲೈ ಜಗದ್ರಕ್ಷಕನಾದ ಶ್ರೀಕೃಷ್ಣನೆ ನೀನು ನಿನ್ನಿಂದಲೆ ಅಲ್ಪಜ್ಞರಾದ ಅಸ್ಮದಾದಿಗಳಂತೆ ಗುರೂಪದೇಶಾದ್ಯಪೇಕ್ಷಾದಿಗಳಿಲ್ಲದೆ ನೀನೆ ನಿನ್ನ ನಿರತಿಶಯಜ್ಞಾನೈಶ್ವರ್ಯ ಬಲಾದಿಶಕ್ತಿಯುಳ್ಳ ಸ್ವರೂಪವನ್ನು ತಿಳಿದುಕೊಳ್ಳುತ್ತಿ ಎಂದು ಭಾವವು. ||೧೫||

ಶ್ಲೋ|| ವಕ್ತುಮರ್ಹಸ್ಯಶೇಷೇಣದಿವ್ಯಾಹ್ಯಾತ್ಮವಿಭೂತಯಃ | ಯಾಭಿರ್ವಿಭೂತಿಭಿರ್ಲೋಕಾನಿಮಾಂಸ್ತ್ವಂ ವ್ಯಾಪ್ಯತಿಷ್ಠಸಿ|| ... ... ||೧೬||

ಪ|| ವಕ್ತುಂ-ಅರ್ಹಸಿ-ಅಶೇಷೇಣ-ದಿವ್ಯಾಃ-ಹಿ-ಆತ್ಮವಿಭೂತಯಃ| ಯಾಭಿಃ-ವಿಭೂತಿಭಿಃ-ಲೋಕಾನ್-ಇಮಾನ್-ತ್ವಂ-ವ್ಯಾಪ್ಯ-ತಿಷ್ಠಸಿ ||

(ಅ||ರಾ||ಭಾ||)(ಯಾಃ-ಎಂಬದಾಗಿ ಅಧ್ಯಾಹರಿಸಬೇಕು.)ದಿವ್ಯಾಃ-ಅಚಿಂತ್ಯಗಳಾಗಿರುವ, ಆತ್ಮವಿಭೂತಯಃ-ನಿಮ್ಮಗಳಿಗೆಅಸಾಧಾರಣಗಳಾಗಿರುವ ನಿಯಮನ ಶಕ್ತಿಗಳು,ಯಾಃ-ಯಾವವೋ, ತ್ವಂ-ನೀವು, ಯಾಭಿರ್ವಿಭೂತಿಭಿಃ-ಯಾವ ನಿಯಮನ ಶಕ್ತಿಗಳೊಡನೆ, (ಶಂ) ಯಾವ ಮಾಹಾತ್ಮ್ಯ ವಿಸ್ತರಗಳಿಂದ, (ಯುಕ್ತ್ವಸ್ಸನ್-ಕೂಡಿರುವಂತವನಾಗಿ,)ಇಮಾನ್-ಲೋಕಾನ್-ಈ ಲೋಕಗಳನ್ನು, ವ್ಯಾಪ್ಯ-ನಿಯಂತಾ ಆಗಿ ವ್ಯಾಪಿಸಿಕೊಂಡು, ತಿಷ್ಠಸಿ-ಇರುತ್ತೀರೊ,ತಾವಿಭೂತಯಃ-ಆಯಾ ನಿಯಮನ ಶಕ್ತಿವಿಶೇಷಗಳನ್ನೂ,ಅಶೇಷೇಣ-ಸಂಪೂರ್ಣನಾಗಿ, ವಕ್ತು ಮರ್ಹಸಿ-ಹೇಳುವುದಕ್ಕೆ ಅರ್ಹರಾಗಿರುತ್ತೀರೆಂದು ತಿಳಿಯಬೇಕು. ||೧೬||

ಶಂ|| ತಾತ್ಪರ್ಯವು. ಎಲೈ ಶ್ರೀಕೃಷ್ಣಸ್ವಾಮಿಯೆ, ನಿನ್ನ ಪ್ರಭಾವಗಳು ಅತ್ಯಂತಾಶ್ಚರ್ಯಕರಗಳಾಗಿರುವವು. ಯಾವ ನಿನ್ನ

ಪ್ರಭಾವದಿಂದಲೆ (ವಿಭೂತಿ ರೂಪಗಳಿಂದಲೆ) ಈ ಸಕಲ ಬ್ರಹ್ಮಾಂಡಗಳು ಪರಿಪೂರ್ಣವಾಗಿ ವ್ಯಾಪ್ತವಾಗಿರುವುವೋ ಅಂತಹ ಮಹಾತ್ಮ್ಯೆ ವಿಸ್ತಾರಗಳನ್ನು ಸಂಪೂರ್ಣವಾಗಿ ನನಗುಪದೇಶಿಸುವಂತವನಾಗೆಂದು ತಾತ್ಪರ್ಯವು. ... ... ॥೧೬॥

(ಗೀ॥ ವಿ॥) ಯಾಭಿರ್ವಿಭೂತಿಭಿಃ-ರಾಮಕೃಷ್ಣಾದಿ ಅನೇಕ ರೂಪಗಳಿಂದ, (ಅಥವಾ) “ ತೇಷಾಂ ವಿಷ್ಣುಸ್ವರೂಪಾಣಾಂ ಸನ್ನಿಧೇರನ್ಯವಸ್ತುಷು । ವಿಶಿಷ್ಟತ್ವಂಸ್ವಜಾತೇಸ್ಸ್ಯಾದ್ವಿಭೂತ್ಯಾಖ್ಯಾನಿ ತಾನಿತು „ ಎಂಬೀ ಪ್ರಕಾರವಾಗಿ ಸನ್ನಿಧಿ ಮಹತ್ವದಿಂದ ಆಯಾ ವಸ್ತುಗಳಿಗೆ ಯೋಗ್ಯತೆಯನ್ನುಕೊಟ್ಟಿರುವಯಾವಿಷ್ಣುರೂಪಗಳಿಂದ, ಎಂದರೆ ಯಾವ ಪರಮಾತ್ಮನ ಸನ್ನಿಧಾನದಿಂದ ಸ್ವಜಾತಿಯಲ್ಲಿಯೂ ವಿಜಾತಿಯಲ್ಲಿಯೂ, ಆಧಿಕ್ಯ ವುಂಟಾಗಿರುವುದೋ ಆಪರಮಾತ್ಮರೂಪವು ವಿಭೂತಿ ಎನ್ನಲ್ಪಡುವುದು. ಅವು ಯಾವವೆಂದರೆ, “ರುದ್ರಾಣಾಂ ಶಂಕರಶ್ಚಾಸ್ಮಿ „ (೧೦॥ ೨೩॥) ಎಂಬಿದೇ ಮೊದಲಾದ ಶ್ಲೋಕಗಳಲ್ಲಿ ಹೇಳಿರುವಂತೆ ಸ್ವಜಾತೀಯರಾದ ಏಕಾದಶ ರುದ್ರರಲ್ಲಿ ಅಧಿಕಗಳಾದ ಶಂಕರಾದ್ಯಂತರ್ಯಾಮಿ ರೂಪಗಳು ವಿಭೂತಿ ಎನ್ನಲ್ಪಡುವುವು. “ನಕ್ಷತ್ರಾಣಾಂ ಮಹಂ ಶಶೀ „ (೧೦॥ ೨೧॥) ಎಂಬಿದೇ ಮೊದಲಾದ ಶ್ಲೋಕಗಳಲ್ಲಿ ಹೇಳಿರುವ ವಿಜಾತೀಯವಾದ ನಕ್ಷತ್ರಾದಿಗಳಿಗಿಂತಲೂ ಅಧಿಕವಾದ ಚಂದ್ರಾದ್ಯಂತರ್ಯಾಮಿ ರೂಪಗಳು ವಿಜಾತೀಯವಾದವಿಭೂತಿಗಳೆನ್ನಲ್ಪಡುವುವು. ಈಪ್ರಕಾರವೇ „ ಬಲಂಬಲವತಾಂಚಾಹಂ „ (೭॥೧೧॥) ಎಂಬಿದೇ ಮೊದಲಾದ ಶ್ಲೋಕಗಳಲ್ಲಿ ಹೇಳಿರುವಂತೆ ಬಲಾದಿ ಧರ್ಮಗಳುಳ್ಳವರಿಗೆ ಬಲಾದಿ ಸಾರವನ್ನು ಕೊಡುವ ಪರಮಾತ್ಮ ರೂಪಗಳು ವಿಭೂತಿಗಳೆನ್ನಲ್ಪಡುವುವೆಂಬೀಪ್ರಕಾರಗಳಾದಅರ್ಥವಿಶೇಷಗಳನ್ನುತಿಳಿಯಬೇಕು. ... ... ... ... ॥೧೬॥

ಶ್ಲೋ॥ ಕಥಂವಿದ್ಯಾಮಹಂಯೋಗಿಂಸ್ತ್ವಾಂಸದಾಪರಿಚಿಂತಯನ್ | ಕೇಷುಕೇಷುಚಭಾವೇಷು ಚಿಂತ್ಯೋಽಸಿಭಗವನ್ಮಯಾ॥ ... ... ॥೧೭॥

ಪ|| ಕಥಂ-ವಿದ್ಯಾಂ-ಅಹಂ-ಯೋಗಿನ್-(ರಾ|| ಯೋಗೀ-)ತ್ವಾಂ-ಸದಾ-ಪರಿಚಿಂತಯನ್। ಕೇಷು-ಕೇಷು-ಚ-ಭಾವೇಷು-ಚಿಂತ್ಯಃ-ಅಸಿ-ಭಗವನ್-ಮಯಾ||

(ಅ|| ರಾ|| ಭಾ||) ಭಗವನ್-ಜ್ಞಾನಶಕ್ತ್ಯಾದಿ ಕಲ್ಯಾಣಗುಣನಿಧಿಯಾದ ಎಲೈ ಶ್ರೀಕೃಷ್ಣನೆ, ಅಹಂ-ನಾನು, ಯೋಗೀ-ಭಕ್ತಿಯೋಗ ನಿಷ್ಠನಾಗಿ, ತ್ವಾಂ ಸದಾಪರಿಚಿಂತಯನ್-ನಿಮ್ಮನ್ನೇ ಸರ್ವಕಾಲದಲ್ಲಿಯೂ ಭಕ್ತಿಯಿಂದ ಉಪಾಸನೆ ಮಾಡಲೂ ಪ್ರವರ್ತಿಸಿದವನಾಗಿ, ಕಥಂ ವಿದ್ಯಾಂ-ನಿಮ್ಮನ್ನು ಪರಿಪೂರ್ಣ ಐಶ್ವರ್ಯಾದಿ ಕಲ್ಯಾಣ ಗುಣನಿಧಿಯಾಗಿ ಹೇಗೆ ತಿಳಿಯುವೆನು, ಕೇಷುಕೇಷುಚ ಭಾವೇಷು ಮಯಾಚಿಂತ್ಯೋಸಿ-ಹಿಂದೇಹೇಳರುವಬುದ್ಧಿಜ್ಞಾನಾದಿ ಭಾವಗಳಗಿಂತಲೂ ಭಿನ್ನವಾದ ಯಾವ ಯಾವ ವಸ್ತುಗಳಲ್ಲಿ ನನ್ನಿಂದ ನಿಯಂತೃತ್ವೇನ ಚಿಂತಿಸಲ್ಪಡುತ್ತೀರಿ. ಬುದ್ಧಿಜ್ಞಾನಾದಿ ವಸ್ತುಗಳಗಿಂತಲೂ ಇನ್ನೂ ಯಾವ ಯಾವ ವಸ್ತುಗಳಲ್ಲಿ ನೀವು ಇರುವುದಾಗಿ ನಾನು ಧ್ಯಾನಿಸಬೇಕೊ ಅದನ್ನು ಹೇಳಬೇಕೆಂದು ತಾತ್ಪರ್ಯವು. ... ... ... ||೧೭||

(ಶಂ|| ತಾ||) ನಿನ್ನನ್ನು ಸರ್ವಕಾಲದಲ್ಲಿಯೂ ಯಾವ ರೀತಿಯಾಗಿ ಧ್ಯಾನವಂ ಮಾಡಿದರೆ ನಿನ್ನ ಸ್ವರೂಪವನ್ನು ತಿಳಿದುಕೊಳ್ಳುವೆನೊ, ಎಂಡರೆಎಲೈ ಶ್ರೀಕೃಷ್ಣನೆ ಯಾವ ವಸ್ತುಗಳಲ್ಲಿರುವ ನಿನ್ನನ್ನು ಧ್ಯಾನಮಾಡಿದರೆ ಸುಲಭವಾಗಿ ನಾನು ತಿಳಿದುಕೊಳ್ಳುವೆನೊಅದನ್ನು ಪದೇಶಿಸಬೇಕೆಂದು ತಾತ್ಪರ್ಯವು. ... ||೧೭||

ಶ್ಲೋ || ವಿಸ್ತರೇಣಾತ್ಮನೋಯೋಗಂ ವಿಭೂತಿಂಚಜ
ನಾರ್ದನ ! ಭೂಯಃಕಥಯತೃಪ್ತಿರ್ಹಿಶೃಣ್ವತೋನಾಸ್ತಿ
ಮೇಽಮೃತಂ || ... ... ... ||೧೮||

ಪ|| ವಿಸ್ತರೇಣ-ಆತ್ಮನಃ- ಯೋಗಂ-ವಿಭೂತಿಂ-ಚ-ಜನಾರ್ದನ-ಭೂಯಃ-ಕಥಯ-ತೃಪ್ತಿಃ-ಹಿ-ಶೃಣ್ವತಃ-ನ-ಅಸ್ತಿ-ಮೇ-ಅಮೃತಂ ||

ಅ|| ರಾ|| ಭಾ|| ಜನಾರ್ದನ-ಎಲೈ ಶ್ರೀಕೃಷ್ಣನೇ, ಆತ್ಮನಃ-ತಮ್ಮಗಳ, ಯೋಗಂ-ಸೃಷ್ಟಿ ಕರ್ತೃತ್ವಾದಿ ಕಲ್ಯಾಣ ಗುಣ ಸಂಬಂಧವನ್ನೂ, ವಿಭೂತಿಂಚ-ನಿಯಮನವನ್ನೂ, ಭೂಯಃ ಕಥಯ-ಪುನಶ್ಚ ವಿಸ್ತರಿಸಿ ಹೇಳುವಂತವನಾಗು, ಅಮೃತಂ-ಅಮೃತದಂತೆ ಭೋಗ್ಯ ತಮವಾಗಿರುವ ತಮ್ಮ ಮಹಾತ್ಮ್ಯವನ್ನು, ಶೃಣ್ವತಃ- ನೀವೇಸ್ವತಃ ಉಪದೇಶಿಸಲು ಅದಂ ಕೇಳುತಲಿರುವ ನನಿಗೆ, ತೃಪ್ತಿಃ-ಇದುಪರಿಗೂ ಕೇಳದ್ದು ಸಾಕೆಂಬ ಅಲಂಬುದ್ಧಿಯು, ನಾಸ್ತಿ- ಇಲ್ಲವು. ಹಿ-ಪ್ರಸಿದ್ಧಾರ್ಥ ವಾಚಕವಾದ ಹಿ ಶಬ್ದದಿಂದ ಇಂಥಾ ನನ್ನ ಅಭಿಪ್ರಾಯವು ನಿಮಿಗೂ ತಿಳದಿರುವ್ರದಷ್ಟ್ಟೆ, ಎಂಬೀ ಅರ್ಥವು ಕ್ಷಿದ್ದಾಗಿರುವುದು. ... .... ... ||೧೮

(ಶಂ॥ ಭಾ॥) ಜನಾರ್ದನಃ-ದೇವಶತ್ರುಗಳಾದಜನರಿಗೆ(ಅಸುರರಿಗೆ) ನರಕಾದಿ ದುರ್ಗತಿ ಪ್ರದಾನ ಮಾಡುವುದರಿಂದ ಜನಾರ್ದನ ಶಬ್ದವಾಚ್ಯನಾದ ಎಲೈ ಶ್ರೀಕೃಷ್ಣನೆ!ನಿನ್ನ ಮುಖೋದ್ಗತಗಳಾದ ವಾಕ್ಯಾಮೃತಗಳನ್ನು ಎಷ್ಟು ಶ್ರವಣ ಮಾಡಿದರೂ ನನಗೆ ತೃಪ್ತಿಯುಂಟಾಗಲಿಲ್ಲವಾದ್ದರಿಂದ ನಿನ್ನ ಯೋಗೈಶ್ವರ್ಯ ವಿಶೇಷಗಳನ್ನೂ ಧ್ಯೇಯವಾದ ಪದಾರ್ಥ ವಿಸ್ತರಗಳನ್ನೂ ಪುನಃ ನನಗುಪದೇಶಿಸಬೇಕು. ॥೧೭॥

(ತಾ॥ ಚಂ॥) ಪ್ರತಿಕೂಲರಾದವರಿಗೆನರಕಾದಿಗಳಂ ಕೊಡುವುದರಿಂದಲೂ ಅನುಕೂಲರಾದವರಿಂದ ತಮ್ಮಗಳ ಇಷ್ಟಾರ್ಥಗಳು ಯಾಚಿಸಲ್ಪಡುವುದರಿಂದಲೂ ಪರಮಾತ್ಮನಿಗೆ ಜನಾರ್ದನ ಶಬ್ದವು ಪ್ರಯುಕ್ತವಾಗಿರುವುದು. (ಶಂ) ಇವರೂ ಈ ಅರ್ಥವನ್ನು ಹೇಳಿರುತ್ತಾರೆ.) “ ಅಹಂ ಸರ್ವಸ್ಯ ಪ್ರಭವಃ ,, (೧೦॥ ೮) ಇತ್ಯಾದಿಗಳಿಂದ ಹಿಂದೆ ಈ ಅರ್ಥಗಳೂ ಹೇಳಲ್ಪಟ್ಟದ್ದರೂ ವಿಸ್ತಾರವಾಗಿ ಹೇಳಬೇಕೆಂದು “ಭೂಯಃ ಕಥಯ,, ಎಂಬುವುದಕ್ಕೆ ಅರ್ಥವಂ ತಿಳಿಯಬೇಕು. ॥೧೮॥

ಶ್ರೀಭಗವಾನುವಾಚ॥ ಹಂತತೇಕಥಯಿಷ್ಯಾಮಿ(ಶಂ॥ಶ್ರೀ॥
ಗೀ॥ ವಿ॥ ದಿವ್ಯಾಹ್ಯಾತ್ಮವಿಭೂತಯಃ) ವಿಭೂತೀರಾತ್ಮನ
ಶ್ಶುಭಾಃ। ಪ್ರಾಧಾನ್ಯತಃಕುರುಶ್ರೇಷ್ಠನಾಸ್ತ್ಯಂತೋವಿಸ್ತ
ರಸ್ಯಮೇ॥ ... ... ... ॥೧೯॥

ಪ॥ ಶ್ರೀಭಗವಾನ್-ಉವಾಚ॥ ಹಂತ-ತೇ-ಕಥಯಿಷ್ಯಾಮಿ-(ರಾ) ವಿಭೂತೀಃ-ಆತ್ಮನಃ-ಶುಭಾಃ) ದಿವ್ಯಾಃ-ಹಿ- ಆತ್ಮವಿಭೂತಯಃ, ಪ್ರಾಧಾನ್ಯತಃ-ಕುರುಶ್ರೇಷ್ಠ-ನಾಸ್ತಿ-ಅಂತಃ-ವಿಸ್ತರಸ್ಯ-ಮೇ॥

ಅ॥ ಶ್ರೀಭಗವಾನುವಾಚ॥ ಶ್ರೀಕೃಷ್ಣನು ಹೇಳಿದನು. ಹೇಕುರುಶ್ರೇಷ್ಠ-ಕುರುಕುಲದಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೇ !ಹಂತ- (ಶಂ॥ರಾ॥) ಈಗಲೇ,(ಗೀ। ವಿ) ಸಂತೋಷವು. ತೇ-ನಿನಗೆ, ದಿವ್ಯಾಃ-ಅದ್ಭುತಗಳಾದ, ಆತ್ಮವಿಭೂತಯಃ-ನನ್ನ ವಿಭೂತಿ ರೂಪಗಳು (ಯಾವವೋ ಅವುಗಳಲ್ಲಿ.) (ಗೀ॥ ವಿ॥) ವಸ್ತುಗಳಿಗೆ ಶ್ರೇಷ್ಠ್ಯವನ್ನು ಕೊಡತಕ್ಕ ನನ್ನ ನಾನಾ ವಿಧಗಳಾದ ರೂಪಗಳಲ್ಲಿ, ಪ್ರಾಧಾನ್ಯತಃ - ಮುಖ್ಯವಾದವುಗಳನ್ನು,(ಶಂ) ಯಾವ ಯಾವ ವಸ್ತುಗಳಲ್ಲಿ ವಿಶೇಷವಾದ ವಿಭೂತಿ ರೂಪಗಳ್ಯಾವವೋ ಅವುಗಳನ್ನು, ಕಥಯಿಷ್ಯಾಮಿ-ಹೇಳುವೆನು, ಹಿ-ಏತಕ್ಕೆಂದರೆ, ಮೇ- ನನ್ನ, ವಿಸ್ತರಸ್ಯ- ವಿಭೂತಿ ವಿಸ್ತಾರಕ್ಕೆ, ಅಂತಃ-ಸಮಾಪ್ತಿಯು, ನಾಸ್ತಿ-ಇಲ್ಲವು. ... .... ॥೧೯॥

(ರಾ॥ ಭಾ॥ ) ಈ ಪ್ರಕಾರವಾಗಿ ಪ್ರಶ್ನರೂಪವಾದ ಅರ್ಜುನವಾಕ್ಯವಂ ಕೇಳಿ ಶ್ರೀಕೃಷ್ಣನು ಹೇಳುತ್ತಾನೆ. ಒಳ್ಳೇದಯ್ಯಾ ಎಲೈ ಕುರುಕುಲ ರಾಜರಲ್ಲಿ ಶ್ರೇಷ್ಠನಾದ ಅರ್ಜುನನೇ ! ಹಂತ-ಸಂತೋಷವಾಯಿತು. ಮಂಗಳ ತಮಗಳಾಗಿರುವ ನಮ್ಮ ನಿಯಾಮ್ಯವಸ್ತುಗಳನ್ನು ಉತ್ಕೃಷ್ಟೋತ್ಕೃಷ್ಟಗಳಾಗಿ ತೆಗದು ನಿನಿಗುಪದೇಶಿಸುವೆನು, ನಮ್ಮ ವಿಭೂತಿ ವಿಸ್ತಾರಕ್ಕೆ ಪೂರ್ತಿಯಿಲ್ಲವು. ವಿಭೂತಿಎಂದರೆ ಆಳಲ್ಪಡುವುದು. ಹೇಗೆಂದರೇ ! ಪ್ರಾಣಿಗಳ ಬುದ್ಧಿಯೇ ಮೊದಲಾದ ಪ್ರತ್ಯೇಕ ಪ್ರತ್ಯೇಕ ಮಾಗಿರುವ ಭಾವಗಳೆಲ್ಲವೂ ನನ್ನಿಂದಲೇ ಯುಂಟಾಗಿರುವುವೆಂದು ಹೇಳಿ ಇಂಥಾವಿಭೂತಿಯನ್ನೂ ಯೋಗವನ್ನೂ ಯಥಾ ವತ್ತಾಗಿ ಯಾವನಾದರೆ ತಿಳಿಯುತ್ತಾನೆಯೊ ಎಂದು ಹೇಳಿರುವುದರಿಂದ ವಿಭೂತಿ ಶಬ್ದಕ್ಕೆ ಮೇಲೇ ವಿವರಿಸಿರುವಂತೆ ಅರ್ಥವಂ ತಿಳಿಯಬೇಕು. ಆ ಪ್ರಕಾರವೇ ಅಲ್ಲಿ (೧೦॥ ೭॥) ಯೋಗ ಶಬ್ದದಿಂದ ಹೇಳಿರುವುದು ಸೃಷ್ಟಿಕರ್ತೃತ್ವಾದಿಗಳೆಂತಲೂ ವಿಭೂತಿ ಶಬ್ದದಿಂದ ಹೇಳಿರುವುದು ಆ ಪರಮಾತ್ಮನಿಂದ ಆಳಲ್ಪಡುವ ವಸ್ತುವೆಂತಲೂ ತಿಳಿಯಬೇಕು. ಮತ್ತೂ ಈ ಅರ್ಥವೇ “ ಅಹಂಸರ್ವಸ್ಯ ಪ್ರಭವಃ ,, (೧೦॥ ೮॥) ಎಂಬೀ ಶ್ಲೋಕದಿಂದಲೂ ಹೇಳಲ್ಪಟ್ಟಿತು.
॥೧೯॥

ಶ್ಲೋ॥ ಅಹಮಾತ್ಮಾಗುಡಾಕೇಶಸರ್ವಭೂತಾಶಯಸ್ಥಿ
ತಃ । ಅಹಮಾದಿಶ್ಚಮಧ್ಯಂಚ ಭೂತಾನಾಮಂತಏವಚ॥
॥೨೦॥

ಪ॥ ಅಹಂ-ಆತ್ಮಾ-ಗುಡಾಕೇಶ-ಸರ್ವಭೂತಾಶಯಸ್ಥಿತಃ । ಅಹಂ-ಆದಿಃ-ಚ-ಮಧ್ಯಂ-ಚ-ಭೂತಾನಾಂ-ಅಂತಃ-ಏವ-ಚ॥

ಅ॥ ಗುಡಾಕೇಶ-ನಿದ್ರೆಯನ್ನು ಜಯಿಸಿರುವ ಎಲೈ ಅರ್ಜುನನೆ (ಅಥವಾ) ಗುಡಾವೇಷ್ಟನಂಕೇಶೇಷುಯಸ್ಯಸಗುಡಾಕೇಶಃ, ಗುಡಾಃ-ವೇಷ್ಟನ ಶಾಲಿನಃ ಆಸಮಂತಾತ್ಕೇಶಾಯಸ್ಯಸಃಇತಿವಾವಿಗ್ರಾಹ್ಯಂ- ಸುತ್ತಿಕೊಂಡಿರುವಕೂದಲುಗಳುಳ್ಳ ಎಲೈ ಅರ್ಜುನನೆ,ಅಹಂ ನಾನು,ಸರ್ವಭೂತಾಶಯಸ್ಥಿತಃ-ಸರ್ವಭೂತಗಳಹೃದಯದಲ್ಲಿರುವ, ಆತ್ಮಾ-ಆತ್ಮನು,ಭೂತಾನಾಂ-ಭೂತಗಳ, ಆದಿಃ-ಆದಿಯೂ,ಮಧ್ಯಂ-ಮಧ್ಯವೂ, ಅಂತಶ್ಚ-ಪೂರ್ತಿಯೂ,ಅಹಂ ನಾನೇ ... ... ... ... ॥೨೦॥

(ಶಂ॥ ಭಾ॥) ಜಿತನಿದ್ರನಾದ ಎಲೈ ಅರ್ಜುನನೆ ಸಮಸ್ತಭೂತಗಳ ಹೃದಯಗಳಲ್ಲಿರುವ ಪ್ರತ್ಯಗಾತ್ಮನು ನಾನೆ ಎಂಬದಾಗಿ ಧ್ಯಾನಿಸುವವನಾಗು. ಅಂತಹ ಪ್ರತ್ಯಗಾತ್ಮ ಸ್ವರೂಪವನ್ನು ನೀನು ಧ್ಯಾನ ಮಾಡಲು ಅಶಕ್ತನಾದರೆ ಸಮಸ್ತ ಭೂತಗಳ ಸೃಷ್ಟಿಸ್ಥಿತಿ ಲಯಗಳಿಗೆ ಕಾರಣಭೂತನೆಂಬದಾಗಿ ನನ್ನನ್ನು ಧ್ಯಾನಿಸುವಂತವನಾಗು. ॥೨೦॥

(ರಾ॥ ಭಾ॥) ಅಲ್ಲಿ ಸರ್ವಪ್ರಾಣಿಗಳ ಪ್ರವರ್ತನ ರೂಪವಾದ ಆಳುವಿಕೆಯನ್ನು ತಾನಾತ್ಮನಾಗಿದ್ದುಕೊಂಡೆ ಮಾಡುವನೆಂಬೀ ಯೊಗಶಬ್ದನಿರ್ದಿಷ್ಟವಾದ ಅರ್ಥವು ಸಮಸ್ತ ಪ್ರಪಂಚ ಸೃಷ್ಟಿಸ್ಥಿತಿಲಯಾತ್ಮಕವಾಗಿರುವುದೆಂಬುವುದನ್ನು ಸುಸ್ಪಷ್ಟವಾಗಿ ಹೇಳುತ್ತಾರೆ. ಎಲೈ ಅರ್ಜುನನೇ ! ಅಂಹಂ-ನಾನು, ಸರ್ವಭೂತಾಶಯೇ-ನನಿಗೆ ಶರೀರಗಳಾಗಿರುವ ಸರ್ವಪ್ರಾಣಿಗಳ ಹೃದಯದಲ್ಲಿಯೂ, ಆತ್ಮಾಸ್ಥಿತಃ-ಒಳಗೆ ನಿಯಂತಾ ಆಗಿರುವೆನು. ಅಹಂ-ಈ ಪ್ರಕಾರವಾಗಿ ಸರ್ವಭೂತಗಳಿಗೂ ಆತ್ಮನಾಗಿರುವ ನಾನೆ, ಭೂತಾನಾಂ- ಸರ್ವಪ್ರಾಣಿಗಳಿಗೂ, ಆದಿಶ್ಚ-ಉತ್ಪತ್ತಿಕಾರಣನೂ, ಮಧ್ಯಂಚ - ಸ್ಥಿತಿಕಾರಣನೂ, ಅಂತಏವಚ-ನಾಶಕಾರಣನೂ. ಈ ಪ್ರಕಾರವಾಗಿ ಪರಮಾತ್ಮನು ತನ್ನ ವಿಭೂತಿಗಳಾದ ಸರ್ವಪ್ರಾಣಿಗಳಲ್ಲಿಯೂ ಆತ್ಮನಾಗಿರುವಿಕೆಯೇ ಆಯಾ ಪ್ರಾಣಿವಾಚಕ ಶಬ್ದಗಳನ್ನು ತನಿಗೆ ವಾಚಕವಾದ ಅಹಂ ಶಬ್ದದೊಡನೆ ಸಮಾನಾಧಿ ಕರಣಗಳಾಗಿ ನಿರ್ದೇಸಿಸುವುವಕ್ಕೆ ಕಾರಣವೆಂದು ತಿಳಿಸುವುದಕ್ಕಾಗಿ ಸರ್ವಪ್ರಾಣಿಗಳಲ್ಲಿಯೂ ಆತ್ಮನಾಗಿರುವಿಕೆಯನ್ನು ಮೊದಲು ಪ್ರತಿಪಾದಿಸಿ ಇನ್ನು ಮುಂದೆ ವಿಭೂತಿ ವಿಶೇಷಗಳನ್ನೂ ತಮ್ಮನ್ನೂ ಶರೀರಾತ್ಮ ಭಾವದಿಂದ ಅಭಿನ್ನವಾಗಿ ನಿರ್ದೇಸಿಸುತ್ತಾನೆ. ನಿಯಮಿಸುವಂತವನಲ್ಲವೊ ಆತ್ಮನು, ನಿಯಮಿಸಲ್ಪಡುವುದಲ್ಲವೊ ವಿಭೂತಿಯು. ಈರೀತಿಯಾಗಿ ನಿಯಂತಾ ಆದ ಈಶ್ವರನಿಗೂ ನಿಯಾಮ್ಯವಾಗಿರುವುದರಿಂದ ವಿಭೂತಿಯಾದ ಜಗತ್ತಿನಲ್ಲಿರುವ ವಸ್ತುವರ್ಗಕ್ಕೂ ಪರಸ್ಪರಭೇದವೆ ಸಿದ್ಧವೆಂದರಿಯಬೇಕು. ಈ ಪ್ರಕರಣದಲ್ಲಿ " ಅಹಮಾತ್ಮಾಗುಡಾಕೇಶಸರ್ವಭೂತಾಶಯಸ್ಥಿತಃ,, ಎಂಬೀಉಪಕ್ರಮದಿಂದಲೂ, "ನತದಸ್ತಿವಿನಾಯತ್ಸ್ಯಾನ್ಮಯಾಭೂತಂಚರಾಚರಂ,, (೧೦॥೩೯॥)

ಎಂಬೀ ಉಪಸಂಹಾರದಿಂದಲೂ ಸ್ಪಷ್ಟವಾಗಿರುವುದರಿಂದ "ರುದ್ರಾಣಾಂಶಂಕರಶ್ಚಾಸ್ಮಿ,, (೧೦॥೨೩॥) ಇತ್ಯಾದಿ ರೂಪವಾದ ಸಾಮಾನಾಧಿಕರಣ್ಯನಿರ್ದೇಶವಂ ಬಿಟ್ಟು ರುದ್ರನೂ ನನ್ನ ವಿಭೂತಿಯೇ ವಿತ್ತೇಶನಾದ ಕುಬೇರನೂ ನನ್ನ ವಿಭೂತಿಯೆ ಎಂಬದಾಗಿ ನಿರ್ದೇಶಿಸದೆ ಇರಲು ಕಾರಣವೇನೆಂದರೆ ಅನೇಕ ಶತ ವಿಭೂತಿಶಬ್ದಗಳನ್ನು ಪ್ರಯೋಗಿಸುವುದಕ್ಕಿಂತಲೂ "ಸರ್ವಂ ಸಮಾಪ್ನೋಷಿತತೋಸಿಸರ್ವಃ,, ಎಂಬದಾಗಿ ಮೇಲಿನ ಅಧ್ಯಾಯದಲ್ಲಿ ಅರ್ಜುನನು" ಸರ್ವವಸ್ತುಗಳಲ್ಲಿಯೂ ನೀವು ವ್ಯಾಪಿಸಿರುವುದರಿಂದ ಸರ್ವವೂ ನೀವೇ,, ಎಂಬದಾಗಿ ಭೇದನಿರ್ದೇಶವನ್ನು ವ್ಯಕ್ತಪಡಿಸಿರುವ ಮೇರಿಗೆ ಇಲ್ಲಿಯೂ ಉಪಕ್ರಮೋಪ ಸಂಹಾರಗಳಲ್ಲಿ ಜಗತ್ತಿನಲ್ಲಿ ಒಳಗೆ ನಿಯಂತಾವಾಗಿರುವಿಕೆಯನ್ನು ಪ್ರತಿಪಾದಿಸಿ ಜಗತ್ತಿನಲ್ಲಿ ಉತ್ಕೃಷ್ಟವಾದ ಕೆಲವು ವಸ್ತುಗಳನ್ನು ಸ್ವೀಕರಿಸಿ ಅವುಗಳು ನಾನೆಂದರೆ ನನ್ನ ವಿಭೂತಿ ಎಂದು ಸುಲಭವಾಗಿ ಸಿದ್ಧಿಸುವುದೆಂತಲೂ, ಮತ್ತು ಇದರಿಂದ ಆಪ್ರಕಾರವಾಗಿ ಅಂತರ್ವ್ಯಾಪ್ತಿಯನ್ನು ಪ್ರತಿಪಾದಿಸುವಿಕೆಯೂ, ಉಪನಿಷತ್ಪ್ರಸಿದ್ಧವಾದ ಬ್ರಹ್ಮವು ಎಲ್ಲಿರುವುನೋ ಎಂದು ಹುಡುಕಬೇಕಾಗಿರುವುದಿಲ್ಲವು ನಿನ್ನ ಹೃದಯದಲ್ಲಿಯೆ ಇರುವನೆಂಬದಾಗಿ ಹೇಳಿದರೆ ಉಪಾಸನ ಸೌಕರ್ಯವೂ ಸಿದ್ಧಿಸುವುದೆಂತಲೂ ಭಾವವು. ॥೨೦॥

(ಗೀ॥ ವಿ॥) ಸರ್ವಭೂತಾಶಯಸ್ಥಿತಃ-ಸರ್ವಪ್ರಾಣಿಗಳ ಹೃದಯಗುಹೆಯಲ್ಲಿರುವಂತವನು. ... ... ॥೨೦॥

ಶ್ಲೋ॥ ಆದಿತ್ಯಾನಾಮಹಂವಿಷ್ಣುರ್ಜ್ಯೋತಿಷಾಂರವಿ
ರಂಶುಮಾನ್ । ಮರೀಚಿರ್ಮರುತಾಮಸ್ಮಿನಕ್ಷತ್ರಾಣಾಮ
ಹಂಶಶೀ ॥ ... ... ... ॥೨೧॥

ಪ॥ ಆದಿತ್ಯಾನಾಂ-ಅಹಂ-ವಿಷ್ಣುಃ-ಜ್ಯೋತಿಷಾಂ-ರವಿಃ-ಅಂಶುಮಾನ್ । ಮರೀಚಿಃ-ಮರುತಾಂ-ಅಸ್ಮಿ-ತೇಜಃ-ತೇಜಸ್ವಿನಾಂ-ಅಹಂ ॥

ಅ॥ ಆದಿತ್ಯಾನಾಂ-ದ್ವಾದಶಾದಿತ್ಯರ, ಮಧ್ಯದಲ್ಲಿ; ವಿಷ್ಣುಃ-ವಿಷ್ಣುವೆಂಬ ಸೂರ್ಯನು, ಜ್ಯೋತಿಷಾಂ-ಪ್ರಕಾಶವುಳ್ಳ ವಸ್ತುಗಳ, ಮಧ್ಯದಲ್ಲಿ; ಅಂಶುಮಾನ್-ಕಿರಣಗಳುಳ್ಳ, ರ

ರವಿಃ-ಸೂರ್ಯನೂ, ನಕ್ಷತ್ರಾಣಾಂ-ನಕ್ಷತ್ರಗಳ, ಮಧ್ಯದಲ್ಲಿ; ಶಶೀ-ಚಂದ್ರನೂ, ಅಹಂ-ನಾನೇ, ಮರುತಾಂ-ವಾಯುಗಣಗಳ, ಮಧ್ಯದಲ್ಲಿ;ಮರೀಚಿರಸ್ಮಿ-ಮರೀಚಿಯೆಂಬುವನುನಾನಾಗಿರುವೆನು. * * * * ||೨೧||

(ರಾ|| ಭಾ||) ಈ ಪ್ರಕಾರವಾಗಿ ಪರಮಾತ್ಮನು ತಮ್ಮ ಆಳುವಿಕೆಗೆ ಒಳಪಟ್ಟಿರುವ ಸರ್ವ ವಸ್ತುಗಳಲ್ಲಿಯೂ ತಾನಾತ್ಮನಾಗಿರುವಿಕೆಯನ್ನು ಹೇಳಿ ಆದರಿಂದ ಆಯಾ ವಸ್ತುಗಳ ನಾಮಗಳಿಂದ ತಮ್ಮನ್ನೇ ಹೇಳಬಹುದೆಂಬುವುದಕ್ಕೆ ಕಾರಣ ಪ್ರದರ್ಶನವಂ ಮಾಡಿ (" ಭಗವಂತನು ಸರ್ವಭೂತಗಳಿಗೂ ಆತ್ಮನಾಗಿದ್ದರೆನೇ ಸರ್ವ ಶಬ್ದಗಳಿಗು ಭಗವತ್ಪರ್ಯ್ಯಂತವಾಗಿ ಅರ್ಥವೇರ್ಪಡುವುದು. ಶರೀರ ವಾಚಕಗಳಾದ ಪದಗಳಿಗೆಲ್ಲವೂ ಶರೀರಿಯಾದ ಆತ್ಮಪರ್ಯಂತವೇ ಅರ್ಥವಾಗುವುದರಲ್ಲಿ ಸಂದೇಹ ಪಡಬೇಕಾಗಿಲ್ಲವು. ಅದು ಹೇಗೆಂದರೆ, ಲೋಕದಲ್ಲಿ ಮನುಷ್ಯ ಪಶುಪಕ್ಷಿ ವೃಕ್ಷಾದಿಗಳ ಶರೀರವನ್ನು ನೋಡಿ ಇವನು ಮನುಷ್ಯನು, ಇದು ಪಕ್ಷಿಯು, ಇತ್ಯಾದಿ ಶಬ್ದ ಪ್ರಯೋಗಗಳಂ ಮಾಡಿದರೆ ಆಮನುಷ್ಯಾದಿಶಬ್ದಗಳು ಆಯಾ ಶರೀರಗಳಲ್ಲಿರುವ ಆತ್ಮಪರ್ಯಂತವಾಗಿ ತಾನೇ ಪರ್ಯವಸಾನವಂ ಹೊಂದುತ್ತವೆ. ಆದರಂತೆ ಭಗವಂತನು ಸರ್ವಕ್ಕು ಆತ್ಮನಾಗಿರುವಿಕೆಯು ಸರ್ವಶಬ್ದವಾಚ್ಯತೆಗೆ ಕಾರಣವಾಗಿರುವುದೆಂದರಿಯಬೇಕು. ಈ ಅರ್ಥವು " ನತದಸ್ತಿ ವಿನಾಯತ್ಸ್ಯಾನ್ಮಯಾಭೂತಂಚರಾಚರಂ,, ( ೧೦|| ೩೯ ) ಎಂಬದಾಗಿ ಮುಂದೇ ಹೇಳುವುದರಿಂದಲೂ ಸಿದ್ಧವಾಗುವುದು. ಈ ಶ್ಲೋಕದಲ್ಲಿ ತಮ್ಮನ್ನು ಬಿಟ್ಟರೆ ಬೇರೊಂದಿಲ್ಲವೆಂಬ ಅರ್ಥವಾಗುವುದರಿಂದ (ಬ್ರಹ್ಮವ್ಯತಿರಿಕ್ತ ವಸ್ತುವಿಲ್ಲವೆಂದರಿಯುದೆ) ಅಬ್ರಹಾತ್ಮಕ ಸ್ವತಂತ್ರ ವಸ್ತುವಿಲ್ಲವೆಂದರಿಯಬೇಕು. ಸರ್ವವೂ ಪರಮಾತ್ಮನ ಆಳುವಿಕೆಗೆ ಸೇರಿರುವುದೆಂತಲೇ ತಿಳಿಯಬೇಕು. ಈ ವಿಷಯವು " ಮತ್ತಸ್ಸರ್ವಂ ಪ್ರವರ್ತತೆ,,( ೧೦|| ೮|| ) ಎಂಬೀ ಸ್ಥಳದಲ್ಲಿಯೂ ಹೇಳಲ್ಪಟ್ಟಿತು,,) ಇನ್ನು ಮುಂದೆ ತಮ್ಮಿಂದ ಆಳಲ್ಪಡುವ ವಸ್ತುಗಳೊಡನೆ ತಮ್ಮನ್ನು ಸೇರಿಸಿ ಆಯಾ ಶಬ್ದಗಳಿಂದ ತಾನು ವಾಚ್ಯನಾಗಿರುವಿಕೆಯನ್ನು ತೋರಿಸುತ್ತಾನೆ. ಹನ್ನೆರಡು ಸಂಖ್ಯೆಗಳಿಂದ ಯೆಣಿಸಲ್ಪಡುವ ದ್ವಾದಶಾದಿತ್ಯರಲ್ಲಿ (ಎಂದರೆ ಮೇ

ಷಾದಿಗಳಾದ ಒಂದೊಂದು ಮಾಸಕ್ಕೂ ಒಂದೊಂದಾದಿತ್ಯರಂತೆ ಹನ್ನೆರಡು ತಿಂಗಳಿಗೂ ಕ್ರಮವಾಗಿ ಜಗತ್ಪ್ರಕಾಶಾದಿ ಕಾರ್ಯಗಳನ್ನು ಮಾಡುವ ದ್ವಾದಶಾದಿತ್ಯರಲ್ಲಿ,)ಉತ್ಕೃಷ್ಟನಾದ ವಿಷ್ಣುವೆಂಬ ಆದಿತ್ಯನು ನಾನೆ, ನನ್ನ ವಿಭೂತಿ ಎಂದರ್ಥವು. ಈ ಪ್ರಕಾರವೆ ಮುಂದೆಯು ತಿಳಿಯಬೇಕು, ವಿಭೂತಿ ಎಂದರೆ ನಿಯಾಮ್ಯ (ಆಳಲ್ಪಡುವ)ವಸ್ತುವು. ಆದರಿಂದ ಶರೀರವೆಂದರ್ಥವು ಏರ್ಪಟ್ಟಿತು. ಪ್ರಕಾಶಕಗಳಾದ ತೇಜಸ್ಸುಗಳಲ್ಲಿ ಕಿರಣ ಸಹಸ್ರ ಶಾಲಿಯಾದಆದಿತ್ಯಗಣವೂ ನಾನೆ. ವಾಯುಗಣಗಳಲ್ಲಿ ಉತ್ಕೃಷ್ಟನಾದ ಮರೀಚಿ ಎಂಬುವನು ನಾನಾಗಿರುವೆನು. ನಕ್ಷತ್ರಗಳಿಗೆ ಪತಿಯಾದ ಯಾವ ಚಂದ್ರನಿರುವನೊ ಅವನೂನಾನೆ. ॥೨೧॥

(ಶ್ರೀ) ಮರೀಚಿರ್ಮರುತಾಮಸ್ಮಿ-ಆವಹಃ-ಪ್ರವಹಃ-ನಿವಹಃ-ಪರಾವಹಃ-ಉದ್ವಹಃ- ಸಂವಹಃ-ಪರಿವಹಃ, ಎಂಬೀ ಸಪ್ತಮರುತ್ತುಗಳಲ್ಲಿ ಮರೀಚಿ ಎಂಬ ನಾಮಾಂತರ ಮುಳ್ಳಪರಿವಹ ವಾಯುವು ನಾನೆಂದರ್ಥವು. ... ... ... ॥೨೧॥

(ಶಂ॥ ಆ॥) ದ್ವಾದಶಾದಿತ್ಯರೆಲ್ಲರೂ ನನ್ನ ವಿಭೂತಿಯೇ,ನಾಮರೂಪಾದಿಗಳಿಂದ ವಿಶೇಷಿತರಾಗಿರುವುದರಿಂದ ವಿಭೂತಿ ಎನ್ನಡಲ್ಪಡುವರು. ಈದ್ವಾದಶಾದಿತ್ಯರಲ್ಲಿ ವಿಷ್ಣುವೆಂಬ ಆದಿತ್ಯನೂನಾನೆ ಎಂದರೆ ಪ್ರಭಾವಾತಿಶಯದಿಂದ ನನ್ನ ವಿಭೂತಿ ವಿಶೇಷವೆಂದರಿಯಬೇಕು. ಈವಿಷ್ಣುವೆಂಬಆದಿತ್ಯನೆಪರಮೇಶ್ವರನಾಗಿರುವನೆಂದುನನ್ನ(ಬ್ರಹ್ಮದೃಷ್ಟಿಯಿಂದ ಈ ವಿಷ್ಣುವೆಂಬ ಆದಿತ್ಯನನ್ನು ಉಪಾಸನೆ ಮಾಡಬೇಕೆಂದರ್ಥವು. ಈ ಪ್ರಕಾರವಾಗಿಯೆ ಜ್ಯೋತಿಶ್ಚಕ್ರದಲ್ಲಿರುವ ಸಮಸ್ತಜ್ಯೋತಿಸ್ಸುಗಳೂ ನನ್ನ ವಿಭೂತಿಯಾದರೂ ಅವುಗಳ ಮಧ್ಯದಲ್ಲಿ ಕಿರಣಶಾಲಿಯಾದ ಸೂರ್ಯನು ನಾನೆ; ಅಧಿಕವಾದ ತೇಜಸ್ಸುಳ್ಳವನಾಗಿರುವುದರಿಂದ ನನ್ನ ವಿಭೂತಿ ವಿಶೇಷವೆಂದರಿಯಬೇಕು. ಅವನನ್ನು ಬ್ರಹ್ಮಬುದ್ಧಿಯಿಂದ ಉಪಾಸನ ಮಾಡಬೇಕೆಂದರ್ಥವು. (ಈ ಪ್ರಕಾರವೇ ಮುಂದೆಯೂ ತಿಳಿಯಬೇಕು) ಎಂದರೆ ಮುಂದೆ ಎಲ್ಲಾ ಕಡೆಯಲ್ಲಿಯೂ ಷಷ್ಠೀವಿಭಕ್ತಿಕಗಳಾದ ಪದಗಳಿಗೆ ಭಗವದ್ವಿಭೂತಿಗಳರ್ಥವೆಂ

ಜ್ಞಾನಶಕ್ತ್ಯಾದಿಗಳಿಂದ ಉತ್ಕೃಷ್ಟ (ಶ್ರೇಷ್ಠ) ನಾದ ಶಂಕರನು ನಾನಾಗಿರುವೆನು. ಯಕ್ಷ ರಕ್ಷಸಾಂವಿತ್ತೇಶೋಸ್ಮಿ-ಯಕ್ಷರಾಕ್ಷಸರಲ್ಲಿ ಶ್ರೇಷ್ಠನಾದ ಧನಾಧಿಪನಾಗಿರುವ ಕುಬೇರನೂ ನಾನೆ. ವಸೂನಾಂ ಪಾವಕಶ್ಚಾಸ್ಮಿ- ಅಷ್ಟವಸುಗಳಲ್ಲಿ ಪಾವಕನೆಂಬ ಶ್ರೇಷ್ಠನಾದವನು ವೂ ನಾನೆ. ಶಿಖರಿಣಾಂ ಮೇರುರಹಂ-ಶಿಖರ ಶೋಭಿತಗಳಾದಪರ್ವತಗ ಳಲ್ಲಿ,ಶ್ರೇಷ್ಠವಾದ ಮಹಾಮೇರು ಪರ್ವತವೂ ನಾನೆ. ‖೨೩‖

ಶ್ಲೋ‖ ಪುರೋಧಸಾಂಚಮುಖ್ಯಂಮಾಂವಿದ್ಧಿಪಾರ್ಥಬೃ ಹಸ್ಪತಿಂ | ಸೇನಾನೀನಾಮಹಂಸ್ಕಂದಸ್ಸರಸಾಮಸ್ಮಿ ಸಾಗರಃ ‖ ... ‖೨೪‖

ಪ‖ ಪುರೋಧಸಾಂ-ಚ-ಮುಖ್ಯಂ-ಮಾಂ-ವಿದ್ಧಿ-ಪಾರ್ಥ-ಬೃಹಸ್ಪತಿಂ | ಸೇನಾನೀ ನಾಂ-ಅಹಂ-ಸ್ಕಂದಃ-ಸರಸಾಂ-ಅಸ್ಮಿ-ಸಾಗರಃ ‖

ಅ‖ ಪಾರ್ಥ-ಎಲೈ ಅರ್ಜುನನೇ ! ಪುರೋಧಸಾಂ-ಪುರೋಹಿ ತರಲ್ಲಿ. ಮುಖ್ಯಂ-ಉತ್ಕೃಷ್ಟನಾದ, ಬೃಹಸ್ಪತಿಂಚ-ಬೃಹಸ್ಪತಿಯ ನ್ನೂ, ಮಾಂವಿದ್ಧಿ-ನನ್ನನ್ನಾಗಿ ತಿಳಿದುಕೊಳ್ಳುವಂತವನಾಗು.ಸೇನಾ ನೀನಾಂ ಸ್ಕಂದೋಹಂ-ಸೇನಾಪತಿಗಳಲ್ಲಿ ಶ್ರೇಷ್ಠನಾದ ಸುಬ್ರಹ್ಮ ಣ್ಯನು ನಾನು. ಸರಸಾಂಸಾಗರೋಸ್ಮಿ-ಸ್ಥಾವರ ಜಲಾಕರಗಳಲ್ಲಿ ಶ್ರೇ ಷ್ಠವಾದ ಸಮುದ್ರವೂ ನಾನೆ ಆಗಿರುವೆನು. ... ‖೨೪‖

ಶ್ಲೋ‖ ಮಹರ್ಷೀಣಾಂಭೃಗುರಹಂಗಿರಾಮಸ್ಮ್ಯೇಕಮ ಕ್ಷರಂ |ಯಜ್ಞಾನಾಂಜಪಯಜ್ಞೋಸ್ಮಿಸ್ಥಾವರಾಣಾಂಹಿ ಮಾಲಯಃ ‖ ... ... ‖೨೫‖

ಪ‖ ಮಹರ್ಷೀಣಾಂ-ಭೃಗುಃ-ಅಹಂ-ಗಿರಾಂ-ಅಸ್ಮಿ-ಏಕಂ-ಅಕ್ಷರಂ|ಯಜ್ಞಾ ನಾಂ-ಜಪಯಜ್ಞಃ-ಅಸ್ಮಿ-ಸ್ಥಾವರಾಣಾಂ-ಹಿಮಾಲಯಃ ‖

ಅ‖ ಮಹರ್ಷೀಣಾಂ-ಮರೀಚ್ಯಾದಿ ಮಹರ್ಷಿಗಳ ಮಧ್ಯದಲ್ಲಿ, ಭೃಗುಃ-ಭೃಗುಮಹರ್ಷಿಯೂ, ಅಹಂ-ನಾನು. ಗಿರಾಂ-ಅರ್ಥಬೋ ಧಕಗಳಾದ ಶಬ್ದಗಳ ಮಧ್ಯದಲ್ಲಿ, ಏಕಮಕ್ಷರಂ-ಉತ್ಕೃಷ್ಟವಾದ ಒಂದಕ್ಷರವಾಗಿರುವಪ್ರಣವಾಕ್ಷರವು ನಾನಾಗಿರುವೆನು.ಸ್ಥಾವರಾಣಾಂ-

ದಲಾರೆ. ದೇವತಾನ್ಯವಾಗಿರುವ ಸರ್ವೋತ್ತಮವಾದ ಪದಾರ್ಥದಿಂದೆಯು ಲ್ಲಾದರೆ ಸುಕೃತಿಗಳು ಹೋಗುತ್ತಾರೊ ಪಾಪಿಗಳು ಹೋಗುವುದಿಲ್ಲ ವೊ ಅಂಥಾ ಉತ್ತಮಸ್ಥಾನಕ್ಕೆ ದೇವಶಬ್ದ ವಾಚ್ಯನಾದ ಸರ್ವಪ್ರ ಕಾಶಕನಾಗಿರುವ ಪರಮಾತ್ಮನು ನಿನ್ನನ್ನು ಸೇರಿಸಲೆಂಬೀ ಅರ್ಥವೇ ಸಿದ್ಧವಾಗಿರುವುದರಿಂದ ಪಶುವಿಗೆ ಯಜಮಾನನು ಮಾಡುವುದು ಉಪ ಕಾರವೇ ಆಯಿತು. ಮತ್ತು ದೇವತಾ ಪ್ರೀಣನ ಹೇತುವಾಗಿರುವುದ ರಿಂದಲೂ ಪಶು ಯಜ್ಞದಲ್ಲಿ ಸ್ವರ್ಗಾದಿ ಫಲಗಳನ್ನು ಅಪೇಕ್ಷಿಸುವಂತವ ರಿಗೆ ಪ್ರತ್ಯವಾಯುವಿಲ್ಲವು. ಆದರೆ ಆಫಲವು ಅಲ್ಪವಾಗಿಯೂ ಅಸ್ಥಿರ ವಾಗಿಯೂ ದುಃಖ ಮಿಶ್ರವಾಗಿಯೂ ದುಃಖವನ್ನೇ ಮುಂದಿನಫಲ ವಾಗಿ ವುಳ್ಳದ್ದಾಗಿಯೂ ಆಗಿರುವುದು. ಈ ಜಪಾದಿ ರೂಪಗಳಾಗಿರುವ ಅಹಿಂಸಾತ್ಮಕ ಯಜ್ಞಗಳು ಉತ್ತಮಾಧಿಕಾರಿಸಾ ಪೇಕ್ಷತೆಯಿಂದಲೂ ಪರಮಾತ್ಮನಿಗೆ ಅತ್ಯಂತ ಪ್ರೀತಿಕರವಾಗಿರುವುದ ರಿಂದಲೂ ಮೋಕ್ಷಮಾರ್ಗಕ್ಕೆ ಸಮೀಪಗಳಾಗಿರುವುವು. ಆದುದ ರಿಂದಲೇನೆ ಉಪರಿ ಚರಾದಿಗಳು ಪಿಷ್ಟಪಶ್ವಾದಿ ಯಜ್ಞಾನುಷ್ಠಾನವಂ ಮಾಡಿದರು. (ಎಂಬೀ ಅರ್ಥವಿಶೇಷಗಳನ್ನು ಶ್ರೀಮತ್ತಾತ್ಪರ್ಯಚಂದ್ರಿ ಕೆಯಲ್ಲಿಯೇ ಸವಿಸ್ತರವಾಗಿ ನೋಡಬಹುದು.) ... ॥೨೫॥

ಶ್ಲೋ ॥ ಅಶ್ವತ್ಥಸ್ಸರ್ವವೃಕ್ಷಾಣಾಂದೇವರ್ಷೀಣಾಂಚನಾ
ರದಃ । ಗಂಧರ್ವಾಣಾಂಚಿತ್ರರಥ ಸ್ಸಿದ್ಧಾನಾಂಕಪಿಲೊ
ಮುನಿಃ ॥ ... ... ॥೨೬॥

ಪ॥ ಅಶ್ವತ್ಥಃ-ಸರ್ವವೃಕ್ಷಾಣಾಂ-ದೇವರ್ಷೀಣಾಂ-ಚ-ನಾರದಃ । ಗಂಧರ್ವಾಣಾಂ-ಚಿತ್ರರಥಃ-ಸಿದ್ಧಾನಾಂ-ಕಪಿಲಃ-ಮುನಿಃ ॥

(ಅ॥ ರಾ॥ ಭಾ॥) ಸರ್ವವೃಕ್ಷಾಣಾಂ-ಸರ್ವವೃಕ್ಷಗಳ,ಮಧ್ಯದಲ್ಲಿ; ಅಶ್ವತ್ಥಃ-ಪೂಜ್ಯವಾದ ಅಶ್ವತ್ಥವೃಕ್ಷವು ನಾನೆ. ಶ್ರೇಷ್ಠವಾದ ಪಾರಿ ಜಾತಾದಿ ವೃಕ್ಷಗಳಿದ್ದರೂ ಅವುಗಳಿಗೆ ಪೂಜ್ಯತ್ವವಿಲ್ಲವಾದುದರಿಂದ ಪೂಜ್ಯವಾದ ಅಶ್ವತ್ಥವೂ ನಾನೆಂದು ಹೇಳಿರುವನೆಂದರಿಯಬೇಕು. ದೇವರ್ಷೀಣಾಂಚನಾರದಃ-ದೇವರ್ಷಿಗಳಲ್ಲಿ ಪೂಜ್ಯರಾಗಿರುವ ನಾರದ ಮಹರ್ಷಿಯೂ ನಾನೆ. ದೇವರ್ಷಿಗಳಲ್ಲಿ ನಾರದರ ಅತಿಶಯವು ಬಹು

ಪ್ರಕಾರವಾಗಿ ಅನೇಕ ಸಂದರ್ಭಗಳಲ್ಲಿ ಶ್ರೀಮಹಾಭಾರತದಲ್ಲಿಯೇ ಪ್ರಪಂಚಿತವಾಗಿರುವುದು. ಗಂಧರ್ವಾಣಾಂ ಚಿತ್ರರಥಃ-ಗಂಧರ್ವರಲ್ಲಿ ಚಿತ್ರರಥನೆಂಬ ಉತ್ಕೃಷ್ಟನಾದ ಗಂಧರ್ವರಾಜನೂ ನಾನೆ. ಸಿದ್ಧಾನಾಂ ಕಪಿಲೋಮುನಿಃ- ಸಿದ್ಧರಲ್ಲಿ ಪೂರ್ವಜನ್ಮಾರ್ಜಿತವಾದ ಸುಕೃತ ವಿಶೇಷವಶದಿಂದ ಜನ್ಮ ಪ್ರಭೃತಿ ಅಣಿಮಾದ್ಯೈಶ್ವರ್ಯಸಿದ್ಧಿಯುಳ್ಳ ಕಪಿಲಮಹರ್ಷಿಯೂನಾನೆ. ... ... ||೨೬||

ಶ್ಲೋ|| ಉಚ್ಚೈಃಶ್ರವಸಮಶ್ವಾನಾಂವಿದ್ಧಿಮಾಮಮೃ
ತೋದ್ಭವಂ |ಐರಾವತಂಗಜೇಂದ್ರಾಣಾಂ ನರಾಣಾಂ
ಚನರಾಧಿಪಂ || ... ||೨೭||

ಪ|| ಉಚ್ಚೈಃಶ್ರವಸಂ- ಅಶ್ವಾನಾಂ- ವಿದ್ಧಿ- ಮಾಂ- ಅಮೃತೋದ್ಭವಂ| ಐರಾವತಂ- ಗಜೇಂದ್ರಾಣಾಂ- ನರಾಣಾಂ- ಚ- ನರಾಧಿಪಂ||

ಅ|| ಅಶ್ವಾನಾಂ- ಕುದುರೆಗಳ, ಮಧ್ಯದಲ್ಲಿ; ಅಮೃತೋದ್ಭವಂ- ಅಮೃತ ಸಮುದ್ರದಲ್ಲಿ ಜನಿಸಿರುವ, ಉಚ್ಚೈಃಶ್ರವಸಂ-ಶ್ರೇಷ್ಠವಾದ ಉಚ್ಚೈಃಶ್ರವಸ್ಸೆಂಬ ಕುದುರೆಯನ್ನು, ಮಾಂವಿದ್ಧಿ- ನನ್ನನ್ನಾಗಿ ತಿಳಿದುಕೊಳ್ಳುವಂತವನಾಗು. ಗಜೇಂದ್ರಾಣಾಂ- ಶ್ರೇಷ್ಠವಾದ ಆನೆಗಳ,ಮಧ್ಯದಲ್ಲಿ; ಐರಾವತಂ- ಶ್ರೇಷ್ಠವಾದ ಐರಾವತವೆಂಬ ಆನೆಯನ್ನಾಗಿ ನನ್ನನ್ನು ತಿಳಿದುಕೊಳ್ಳು. ನರಾಣಾಂ- ಮನುಷ್ಯರ, ಮಧ್ಯದಲ್ಲಿ; ನರಾಧಿಪಂ- ನರಾಧಿಪನಾದ ರಾಜನನ್ನಾಗಿ ನನ್ನನ್ನು ತಿಳಿಯುವಂತವನಾಗು. ಕಾಕಾಕ್ಷಿನ್ಯಾಯದಿಂದ ಐರಾವತದಲ್ಲಿಯೂ ಅಮೃತೋದ್ಭವತ್ವವನ್ನರಿಯಬೇಕು. ... ... ||೨೭||

ಶ್ಲೋ || ಆಯುಧಾನಾಮಹಂವಜ್ರಂಧೇನೂನಾಮಸ್ಮಿ
ಕಾಮಧುಕ್ | ಪ್ರಜನಶ್ಚಾಸ್ಮಿಕಂದರ್ಪಸ್ಸರ್ಪಾಣಾಮಸ್ಮಿ
ವಾಸುಕಿಃ|| ... ... ||೨೮||

ಪ|| ಆಯುಧಾನಾಂ- ಅಹಂ- ವಜ್ರಂ- ಧೇನೂನಾಂ- ಅಸ್ಮಿ- ಕಾಮಧುಕ್| ಪ್ರಜನಃ- ಚ- ಅಸ್ಮಿ- ಕಂದರ್ಪಃ- ಸರ್ಪಾಣಾಂ- ಅಸ್ಮಿ- ವಾಸುಕಿಃ||

ಅ|| ಆಯುಧಾನಾಂ- ಆಯುಧಗಳ, ಮಧ್ಯದಲ್ಲಿ; ವಜ್ರಂ-ವಜ್ರಾಯುಧವು,(ಶಂ)ದಧೀಚಿ ಎಂಬವರ ಅಸ್ಥಿಯಿಂದ ಮಾಡಲ್ಪಟ್ಟ ವಜ್ರಾ

ಯುಧವು, ಅಹಂ- ನಾನು, ಧೇನೂನಾಂ- ಪಶುಗಳ, ಮಧ್ಯದಲ್ಲಿ; ಕಾಮಧುಕ್- ಕಾಮಧೇನುವು, ಅಸ್ಮಿ- ಆಗಿರುವೆನು. (ಶ್ರೀ) ಕಾಮಧುಕ್- ಇಷ್ಟಾರ್ಥವನ್ನು ಕೊಡುವುದರಿಂದ ಕಾಮಧೇನುವೆಂಬದಾಗಿ ಹೆಸರುಂಟಾಯಿತು. ಪ್ರಜನಃ- ಪ್ರಜಾಜನನ ಹೇತುವಾದ, ಕಂದರ್ಪಃ- ಮನ್ಮಥನೂ, ಅಹಮಸ್ಮಿ- ನಾನಾಗಿರುವೆನು. ಸರ್ಪಾಣಾಂ- (ಶ್ರೀ) ವಿಷಮುಳ್ಳ ಹಾವುಗಳ, ಮಧ್ಯದಲ್ಲಿ, (ರಾ|| ಗೀ|| ವಿ||) ಒಂದು ತಲೆಯುಳ್ಳ ಹಾವುಗಳ, ಮಧ್ಯದಲ್ಲಿ, ವಾಸುಕಿಃ- ಶ್ರೇಷ್ಠವಾದ ವಾಸುಕಿ ಎಂಬಸರ್ಪವು, ಅಹಮಸ್ಮಿ- ನಾನೆ ಆಗಿರುವೆನು. ... ||೨೮||

(ತಾ|| ಚಂ||) ವಿಷ್ಣುಚಕ್ರವೇ ಮೊದಲಾದ ಮಹಾ ಆಯುಧಗಳಿಗಿಂತಲೂ ದಧೀಚಿಯ ಅಸ್ಥಿಯಿಂದುಂಟಾಗಿರುವ ವಜ್ರಾಯುಧವು ಅತ್ಯಂತ ನಿಕೃಷ್ಟವಾಗಿದ್ದರೂ ಇಲ್ಲಿ ಶ್ರೇಷ್ಠತ್ವೇನ ಹೇಳಿರುವುದಕ್ಕೆ ಅಭಿಪ್ರಾಯವೇನೆಂದರೆ ಸುದರ್ಶನಾದಿಗಳಾದ ಭಗವದಾಯುಧಗಳು ಕೃತಕಗಳಲ್ಲದೆ ಯಾವಾಗಲೂ ಇರತಕ್ಕವುಗಳಾಗಿಯೆ ಇರುವುವು. ಆದರೆ ಕೃತಕಗಳಾದ ಆಯುಧಗಳ ಮಧ್ಯದಲ್ಲಿ ವಜ್ರಾಯುಧವು ಶ್ರೇಷ್ಠವೆಂಬೀ ಅಭಿಪ್ರಾಯವನ್ನೇ ಸ್ವೀಕರಿಸಿ ಈರೀತಿಯಾಗಿ ಹೇಳಿರುತ್ತಾರೆಂದಭಿಪ್ರಾಯವು. ||೨೮||

ಶ್ಲೋ|| ಅನಂತಶ್ಚಾಸ್ಮಿನಾಗಾನಾಂವರುಣೋಯಾದಸಾ
ಮಹಂ | ಪಿತೄಣಾಮರ್ಯಮಾಚಾಸ್ಮಿ ಯಮಸ್ಸಂಯ
ಮತಾಮಹಂ || ||೨೯||

ಪ|| ಅನಂತಃ- ಚ- ಅಸ್ಮಿ- ನಾಗಾನಾಂ- ವರುಣಃ- ಯಾದಸಾಂ- ಅಹಂ|ಪಿತೄಣಾಂ- ಅರ್ಯಮಾ- ಚ- ಅಸ್ಮಿ- ಯಮಃ- ಸಂಯಮತಾಂ- ಅಹಂ||

ಅ|| ನಾಗಾನಾಂ- ಬಹು ಶಿರಸ್ಸುಗಳುಳ್ಳ ಸರ್ಪಗಳ, ಮಧ್ಯದಲ್ಲಿ; (ಶ್ರೀ) ವಿಷವಿಲ್ಲದ ಹಾವುಗಳ, ಮಧ್ಯದಲ್ಲಿ; ಅನಂತಶ್ಚ- ಶ್ರೇಷ್ಠವಾದ ಅನಂತನೆಂಬುವ ಸರ್ಪವೂ, ಅಹಮಸ್ಮಿ- ನಾನೆಆಗಿರುವೆನು. ಯಾದಸಾಂ- ಜಲವಾಸಿಗಳ, ಮಧ್ಯದಲ್ಲಿ; (ಶಂ) ಜಲದೇವತೆಗಳ, ಮಧ್ಯದಲ್ಲಿ; ವರುಣಃ- ಉತ್ಕೃಷ್ಟನಾದ ವರುಣದೇವತೆಯು, ಅಹಂ- ನಾನು. ಪಿತೄಣಾಂ- ಪಿತೃದೇವತೆಗಳ, ಮಧ್ಯದಲ್ಲಿ; ಅರ್ಯಮಾಚಾಸ್ಮಿ- ಶ್ರೇಷ್ಠ

ನಾದ ಅರ್ಯಮಾ ಎಂಬುವನೂ, ಅಹಮಸ್ಮಿ- ನಾನಾಗಿರುವೆನು. ಸಂಯಮತಾಂ-ಪಾಪಕರ್ಮಗಳಂಮಾಡುವಂತವರನ್ನುಶಿಕ್ಷಿಸುವ ಧಾರ್ಮಿಕರಾಜರುಗಳಲ್ಲಿ ಶ್ರೇಷ್ಠನಾದ, ಯಮಃ- ಯಮರಾಜನೂ, ಅಹಂ- ನಾನೆ ॥೨೯॥

ಶ್ಲೋ॥ ಪ್ರಹ್ಲಾದಶ್ಚಾಸ್ಮಿದೈತ್ಯಾನಾಂ ಕಾಲಃಕಲಯತಾ
ಮಹಂ । ಮೃಗಾಣಾಂಚಮೃಗೇಂದ್ರೋಽಹಂವೈನತೇ
ಯಶ್ಚಪಕ್ಷಿಣಾಂ॥ ... ॥೩೦॥

ಪ॥ ಪ್ರಹ್ಲಾದಃ- ಚ- ಅಸ್ಮಿ- ದೈತ್ಯಾನಾಂ- ಕಾಲಃ-ಕಲಯತಾಂ- ಅಹಂ। ಮೃಗಾಣಾಂ- ಚ- ಮೃಗೇಂದ್ರಃ- ಅಹಂ- ವೈನತೇಯಃ- ಚ- ಪಕ್ಷಿಣಾಂ॥

ಅ॥ ದೈತ್ಯಾನಾಂ- ದಿತಿವಂಶ್ಯರಾದ ಅಸುರರಲ್ಲಿ, ಶ್ರೇಷ್ಠನಾದ, ಪ್ರಹ್ಲಾದಶ್ಚ- ಪ್ರಹ್ಲಾದರೆಂಬುವರೂ. ಅಸ್ಮಿ- ನಾನೇ ಆಗಿರುವೆನು ಕಲಯತಾಂಕಾಲೋಽಹಂ- ಅನರ್ಥವನ್ನುಂಟುಮಾಡಬೇಕೆಂಬ ಇಚ್ಛೆಯುಳ್ಳವುಗಳಾಗಿ ಸಮಯಾನ್ವೇಷಿಗಳಾಗಿರುವ ವ್ಯಾಘ್ರಾದಿಗಳ ಮಧ್ಯದಲ್ಲಿ ಶ್ರೇಷ್ಠನಾದ ಮೃತ್ಯುವೂ ನಾನೇಆಗಿರುವೆನು. (ಗೀ॥ವಿ॥) ಬಂಧವನ್ನುಂಟುಮಾಡುವಂತವರಲ್ಲಿ ಕಾಲನೆಂಬುವನು ನಾನಾಗಿರುವೆನು. ಮೃಗಾಣಾಂಚ ಮೃಗೇಂದ್ರೋಽಹಂ- ಮೃಗಗಳಲ್ಲಿ ಶ್ರೇಷ್ಠವಾದ ಸಿಂಹವು ನಾನಾಗಿರುವೆನು. ಪಕ್ಷಿಣಾಂವೈನತೇಯಶ್ಚಾಹಂ- ಪಕ್ಷಿಗಳಲ್ಲಿ ಉತ್ಕೃಷ್ಟವಾದ ಗರುತ್ಮಂತನೂ ನಾನೆ. ॥೩೦॥

ಶ್ಲೋ॥ ಪವನಃಪವತಾಮಸ್ಮಿರಾಮಶ್ಶಸ್ತ್ರಭೃತಾಮಹಂ।
ಝಷಾಣಾಂಮಕರಶ್ಚಾಸ್ಮಿಸ್ರೋತಸಾಮಸ್ಮಿಜಾಹ್ನವೀ॥೩೧॥

ಪ॥ ಪವನಃ- ಪವತಾಂ- ಅಸ್ಮಿ- ರಾಮಃ- ಶಸ್ತ್ರಭೃತಾಂ- ಅಹಂ। ಝಷಾಣಾಂ- ಮಕರಃ- ಚ- ಅಸ್ಮಿ- ಸ್ರೋತಸಾಂ- ಅಸ್ಮಿ- ಜಾಹ್ನವೀ॥

(ಅ॥ ರಾ॥ ಭಾ॥) ಪವತಾಂ- ಸರ್ವದಾ ಗಮನ ಸ್ವಭಾವವುಳ್ಳವರಲ್ಲಿ ಉತ್ಕೃಷ್ಟನಾದ, ಪವನಃ- ವಾಯುದೇವತೆಯು, ಅಹಮಸ್ಮಿ- ನಾನೇಆಗಿರುವೆನು. ಶಸ್ತ್ರಭೃತಾಂ-ಆಯುಧಧಾರಿಗಳಾದಶತ್ರುಗಳನ್ನು ಜಯಿಸುವಂಥಾ ಧನುರ್ಧಾರಿಗಳಲ್ಲಿ ಉತ್ಕೃಷ್ಟನಾದ, ರಾಮಃ-ಶ್ರೀಸೀತಾರಾಮನು, ಅಹಂ- ನಾನು. ಇಲ್ಲಿ ಶ್ರೀರಾಮದೇವರೇ ನಾನಾಗಿರುವುದರಿಂದ ಶ್ರೀರಾಮನನ್ನು ತನ್ನಿಂದಾಕಲ್ಪಿಸುವ ವಿಭೂತಿಶ್ಲೋ

ಟಿಯಲ್ಲಿ ಸೇರಿಸಿ ಹೇಳುವುದು ಯುಕ್ತವಲ್ಲವು;ಆದುದರಿಂದಆಶ್ರೀರಾಮ ದೇವರ ಧರ್ಮವಾದ ಶಸ್ತ್ರಭೃತ್ತ್ವವು ವಿಭೂತಿಎಂದರಿಯಬೇಕು.ಆದಿ ತ್ಯಾದಿಗಳಾದ ಜೀವಾತ್ಮರೂ ಎಲ್ಲರಿಗೂ ಆತ್ಮನಾದ ಪರಮಾತ್ಮನಿಗೆ ಶರೀರಭೂತರಾದುದರಿಂದ ಶಸ್ತ್ರಭೃತ್ವದಂತೆ ಧರ್ಮಗಳೆಂದುಭಾವವು. ಇದರಂತೆಯೇ ವೃಷ್ಣೀನಾಂವಾಸುದೇವೋಸ್ಮಿ, ಎಂಬ ಪ್ರದೇಶದ ಲ್ಲಿಯೂ ತಿಳಿಯಬೇಕು. (ಮ) ರಾಮಃ- ಅನಂತರೂಪಿಯಾಗಿಯೂ ಪೂರ್ಣನಾಗಿಯೂ ನೋಡುವಂತವರಿಗೆ ಸಂತೋಷವನ್ನು ಕೊಡತಕ್ಕ ವನಾಗಿಯೂ ಇರುತ್ತಾನಾದುದರಿಂದ ರಾಮ ನೆನ್ನಲ್ಪಡುವನು. (ಗೀ॥ ವಿ॥) ಲೋಕವನ್ನು ಸಂತೋಷಪಡಿಸುವಂತವನು ರಾಮನು. ಝಷಾ ಣಾಂಮಕರಶ್ಚಾಹಮಸ್ಮಿ- ಮತ್ಸ್ಯಗಳಒಳಗೆ ಶ್ರೇಷ್ಠವಾದ ಮಕರ ವೆಂಬಮತ್ಸ್ಯ ವಿಶೇಷವು ನಾನಾಗಿರುವೆನು. ಸ್ರೋತಸಾಂಜಾಹ್ನವೀ ಅಹಮಸ್ಮಿ - ಪ್ರವಹಿಸುವ ನದಿಗಳ ಒಳಗೆ ಶ್ರೇಷ್ಠವಾದ ಗಂಗಾನ ದಿಯು ನಾನಾಗಿರುವೆನು. ... ... ॥೩೧॥

ಶ್ಲೋ ॥ ಸರ್ಗಾಣಾಮಾದಿರಂತಶ್ಚಮಧ್ಯಂಚೈವಾಹಮ
ರ್ಜುನ । ಅಧ್ಯಾತ್ಮವಿದ್ಯಾವಿದ್ಯಾನಾಂವಾದಃಪ್ರವದತಾ
ಮಹಂ ॥ ... ।೩೨॥

ಪ॥ ಸರ್ಗಾಣಾಂ- ಆದಿಃ- ಅಂತಃ- ಚ- ಮಧ್ಯಂ- ಚ- ಏವ - ಅಹಂ- ಅರ್ಜುನ । ಅಧ್ಯಾತ್ಮವಿದ್ಯಾ- ವಿದ್ಯಾನಾಂ- ವಾದಃ- ಪ್ರವದತಾಂ- ಅಹಂ॥

(ಅ॥ ರಾ॥ ಭಾ॥) ಇಲ್ಲಿನ ಸರ್ಗಶಬ್ದವು ಸೃಜ್ಯಂತ ಇತಿಸರ್ಗಾಃ, ಎಂಬವ್ಯುತ್ಪತ್ತಿಯಿಂದ ಸೃಷ್ಟಿಸಲ್ಪಡುವ ಪ್ರಾಣಿ ಸಮೂಹಗಳಿಗೆ ವಾಚಕಗಳೆಂದರಿಯಬೇಕು. ಆಪ್ರಕಾರವೇ ಆದಿಶಬ್ದವು ಸೃಷ್ಟಿಕ ರ್ತನನ್ನೂ ಅಂತಶಬ್ದವು ಸಂಹಾರಮಾಡುವವನನ್ನೂ ಮಧ್ಯಶಬ್ದವು ರಕ್ಷಕನನ್ನೂ ಬೋಧಿಸುವುದು. ಸರ್ಗಾಣಾಂ- ಸಮಸ್ತವಾದ ಸೃಜ್ಯ ಪ್ರಾಣಿಗಳವರ್ಗಕ್ಕೂ, ಆದಿಃ- ಕಾರಣಭೂತನಾಗಿ ಆಯಾವಸ್ತುಗಳಿಗೂ ನಿಯತರಾದ ಸೃಷ್ಟಿಕರ್ತನೂ, ಅಹಂ- ನಾನು. ಅಂತಶ್ಚ-ನಾಶಹೇತು ಭೂತನಾದ ಸಂಹಾರಕರ್ತನೂ, ಅಹಂ- ನಾನು. ಅರ್ಜುನ- ಎಲೈ

ಅರ್ಜುನನೆ, ಮಧ್ಯಂಚ-ಪಾಲನಮಾಡುವಂತವನೂ,ಅಹಮೇವ-ನಾನೆ. ವಿದ್ಯಾನಾಂ- ಸಮಸ್ತಗಳಾದ ವಿದ್ಯೆಗಳಒಳಗೆ, ಅಧ್ಯಾತ್ಮವಿದ್ಯಾ-ಶ್ರೇಷ್ಠವಾದ ಅಧ್ಯಾತ್ಮ ಬ್ರಹ್ಮವಿದ್ಯೆಯೂನಾನೆ. ಪ್ರವದತಾಂವಾದೋಽಹಂ-ವರಟುಯುಕ್ತಿಗಳನ್ನು ಹೇಳಿಕೊಂಡಿರುವಂತವರ(ತಮ್ಮಗರ್ವವುಶಮನವಾದಮೇಲೆ ತತ್ವನಿರ್ಣಯಕ್ಕಾಗಿಪ್ರವೃತ್ತವಾದ) ಪ್ರಾಮಾಣಿಕವಾದ ಯುಕ್ತಿಯಿಂದ ಯುಕ್ತವಾದ ವಾದವೂನಾನು. ||೩೨||

(ಶಂ|| ಭಾ|| ) ಸರ್ಗಾಣಾಮಾದಿರನ್ತಶ್ಚ ಮಧ್ಯಂಚೈವಾಹಮರ್ಜುನ- ಎಲೈ ಅರ್ಜುನನೆ! ಸಮಸ್ತ ಪ್ರಪಂಚಗಳ ಸೃಷ್ಟಿಗೆ ಮೊದಲೂ ಉತ್ಪತ್ತಿಯನ್ನು ಮಾಡುವಂತವನೂ ಸಂರಕ್ಷಣಕರ್ತನೂ ಕಡೆಯಲ್ಲಿ ನಾಶಪಡಿಸುವಂತವನೂ ನಾನೇಆಗಿರುವೆನು. ಎಂದರೆ ಈ ಅಧ್ಯಾಯದ ೨೦ನೇ ಶ್ಲೋಕದಲ್ಲಿ ಹೇಳಲ್ಪಟ್ಟ ಸೃಷ್ಟಿಸ್ಥಿತಿ ಲಯಗಳು ಪ್ರಾಣಿಗಳಿಗೆಮಾತ್ರವೇ ಸಂಬಂಧಿಸಿರುವುದೆಂತಲೂ ಇಲ್ಲಿ ಹೇಳಲ್ಪಟ್ಟ ಸೃಷ್ಟಿಸ್ಥಿತಿಲಯಗಳು ಸೃಷ್ಟಿಸಲ್ಪಡುವ ಸಮಸ್ತ ಪದಾರ್ಥಗಳ ವಿಷಯವೆಂತಲೂ ತಿಳಿಯಬೇಕು. ... ||೩೨||

(ಶ್ರೀ) ವಾದವೆಂಬುವುದು ವಾದವಿತಂಡಜಲ್ಪವೆಂದೀರೀತಿಯಿಂದ ತ್ರಿವಿಧವಾಗಿರುವುದು. ವಾದವೆಂದರೆ ರಾಗದ್ವೇಷಗಳಿಲ್ಲದೆ ಕೇವಲವಾಗಿ ತತ್ವಾರ್ಥಗಳಂ ತಿಳಿದುಕೊಳ್ಳಬೇಕೆಂಬ ಅಪೇಕ್ಷೆಯೊಡನೆ ಮಾಡಲ್ಪಡುವ ಪ್ರಶ್ನೋತ್ತರಗಳು. ಜಲ್ಪವೆಂದರೆ ಪರಮತಗಳಖಂಡನಪೂರ್ವಕವಾಗಿ ಸ್ವಮತವನ್ನು ಸ್ಥಾಪಿಸಿಕೊಂಡು ಅನ್ಯರನ್ನು ಜಯಿಸುವುದಕ್ಕಾಗಿ ಮಾಡುವ ಪ್ರಸಂಗವು. ವಿತಂಡವೆಂದರೆ ಕೇವಲವಾಗಿ ಪರಮತ ದೂಷಣಕ್ಕಾಗಿಯೇ ಮಾಡಲ್ಪಡುವ ವಿಕಟಯುಕ್ತಿಗಳು. ಈವಾದವಿತಂಡ ಜಲ್ಪಗಳಲ್ಲಿ ಕಾಮ ಕ್ರೋಧಗಳುಳ್ಳ ಜಲ್ಪವಿತಂಡಕ್ಕಿಂತಲೂ ಮೊದಲನೇದಾದವಾದವು ಶ್ರೇಷ್ಠವೆಂದರಿಯಬೇಕು. ||೩೨||

ಶ್ಲೋ || ಅಕ್ಷರಾಣಾಮಕಾರೋಽಸ್ಮಿದ್ವಂದ್ವಸ್ಸಾಮಾಸಿ
ಕಸ್ಯಚ | ಅಹಮೇವಾಕ್ಷಯಃಕಾಲೋ ಧಾತಾಹಂವಿ
ಶ್ವತೋಮುಖಃ || ... ||೩೩

ಪ|| ಅಕ್ಷರಾಣಾಂ- ಅಕಾರಃ- ಅಸ್ಮಿ- ದ್ವಂದ್ವಃ- ಸಾಮಾಸಿಕಸ್ಯ- ಚ| ಅಹಂ - ಏವ- ಅಕ್ಷಯಃ- ಕಾಲಃ- ಧಾತಾ- ಅಹಂ- ವಿಶ್ವತೋಮುಖಃ ||

(ಅ॥ರಾ॥ ಭಾ॥) ಅಕ್ಷರಾಣಾಂ- ಸಮಸ್ತಗಳಾದ ಅಕ್ಷರಗಳಿಗೂ ಪ್ರಕೃತಿಯಾಗಿರುವುದರಿಂದ ಶ್ರೇಷ್ಠವಾಗಿರುವ, ಅಕಾರಃ- ಅಕಾರವೂ,ಅಹಮಸ್ಮಿ-ನಾನೇಆಗಿರುವೆನು.ಸಾಮಾಸಿಕಸ್ಯಚ-ಸಮಾಸಸಮೂಹಗಳಒಳಗೆ, ಉಭಯಪದಾರ್ಥ ಪ್ರಧಾನವಾಗಿರುವುದರಿಂದ ಶ್ರೇಷ್ಠವಾಗಿರುವ,ದ್ವಂದ್ವಃ- ರಾಮಲಕ್ಷ್ಮಣೌ-ಸೀತಾರಾಮೌ, ಎಂಬೀಮೊದಲಾದ ಶಬ್ದಗಳಲ್ಲಿ ವ್ಯಾಕರಣಸಿದ್ಧವಾದ ದ್ವಂದ್ವಸಮಾಸವು, ಅಹಂ-ನಾನೆ. ಅಕ್ಷಯಃ- ಪೂರ್ತಿ ಇಲ್ಲದಿರುವ, ಕಾಲಃ- ಕಲಾಮುಹೂರ್ತಾದಿರೂಪವಾದಕಾಲವು, ಅಹಮೇವ- ನಾನೆ. ವಿಶ್ವತೋಮುಖಃ- ನಾಲ್ಕುಪ್ರದೇಶಗಳಲ್ಲಿಯೂ ಮುಖಮುಳ್ಳ, ಧಾತಾ- ಸೃಷ್ಟಿಕರ್ಮವನ್ನು ಮಾಡುವ ಹಿರಣ್ಯಗರ್ಭನಾದ ಚತುರ್ಮುಖನೂ, ಅಹಂ-ನಾನೆ. ॥೩೩॥

(ಶ್ರೀ) ಅಕ್ಷಯಃಕಾಲಃ-"ಕಾಲಃ ಕಲಯತಾಮಹಂ,, (೧೦॥ ೩೦) ಎಂಬೀ ಸ್ಥಲದಲ್ಲಿ ನಾಶವನ್ನು ಹೊಂದುವಕಾಲವು ಹೇಳಲ್ಪಟ್ಟಿತೆಂತಲೂ ಇಲ್ಲಿ ನಾಶರಹಿತವಾದ ಕಾಲವೆಂಬುವುದರಿಂದ ಪ್ರವಾಹರೂಪದಿಂದ ನಾಶವಿಲ್ಲದಕಾಲವು ಹೇಳಲ್ಪಟ್ಟಿತೆಂತಲೂ ತಿಳಿಯಬೇಕು. ಧಾತಾಹಂವಿಶ್ವತೋಮುಖಃ-ಕರ್ಮಫಲವನ್ನು ಕೊಡುವಂತವರಲ್ಲಿ ಅನೇಕಮುಖವಾಗಿದ್ದುಕೊಂಡು ಕರ್ಮಫಲವನ್ನು ಕೊಡುವಂತವನು ನಾನೆಂದರ್ಥವು. (ಗೀ॥ ವಿ॥) ಧರಿಸುವಂತವನಾಗಿಯೂ ರಕ್ಷಿಸುವಂತವನಾಗಿಯೂ ಇರುವ ನಾನು ಸರ್ವವ್ಯಾಪಿಯಾದ ಮುಖಾದ್ಯವಯವಗಳುಳ್ಳವನೆಂದರ್ಥವು. ... ... ॥೩೩॥

ಶ್ಲೋ॥ ಮೃತ್ಯುಸ್ಸರ್ವಹರಶ್ಚಾಹ ಮುದ್ಭವಶ್ಚಭವಿಷ್ಯತಾಂ । ಕೀರ್ತಿಶ್ಶ್ರೀರ್ವಾಕ್ಚನಾರೀಣಾಂ ಸ್ಮೃತಿರ್ಮೇಧಾಧೃತಿಃಕ್ಷಮಾ ॥ ॥೩೪॥

ಪ್ರ॥ಮೃತ್ಯುಃ- ಸರ್ವಹರಃ- ಚ- ಅಹಂ- ಉದ್ಭವಃ- ಚ- ಭವಿಷ್ಯತಾಂ । ಕೀರ್ತಿಃ- ಶ್ರೀಃ-ವಾಕ್- ಚ- ನಾರೀಣಾಂ - ಸ್ಮೃತಿಃ- ಮೇಧಾ- ಧೃತಿಃ- ಕ್ಷಮಾ ॥

(ಅ॥ರಾ॥ ಭಾ॥) ಸರ್ವಹರೋಮೃತ್ಯುಶ್ಚಾಹಂ- ಸರ್ವಪ್ರಾಣಾಪಹಾರಿಯಾದ ಮೃತ್ಯುವೂನಾನೆ. ಭವಿಷ್ಯತಾಮುದ್ಭವಶ್ಚಾಹಂ-ಮುಂದೆ ವುಂಟಾಗುವ ವಸ್ತುಗಳಜನಿಸುವಿಕೆಯೂ(ಉತ್ಪತ್ತಿಯಾಗುವಿಕೆಯು) ನನ್ನ. ನಾರೀಣಾಂ- ಸ್ತ್ರೀಯರಲ್ಲಿ ಶ್ರೇಷ್ಠವಾಗಿರುವ, ಕೀರ್ತಿಶ್ಚ-

ಕೀರ್ತಿದೇವತೆಯೂ, ಶ್ರೀಃ-ಶ್ರೀದೇವತೆಯೂ, ವಾಕ್- ಸರಸ್ವತಿಯೂ, ಸ್ಮೃತಿಃ- ಸ್ಮೃತಿದೇವತೆಯೂ, ಮೇಧಾ-ಬುದ್ಧಿದೇವತೆಯೂ,ಧೃತಿಃ- ಧೈರ್ಯದೇವತೆಯೂ, ಕ್ಷಮಾ- ಸಹನಗುಣವುಳ್ಳ ದೇವತೆಯೂ, ಅಹಂ- ನಾನು. ... ... ||೩೪||

(ಶಂ|| ಭಾ||) ಮೃತ್ಯುಸ್ಸರ್ವಹರಶ್ಚಾಹಂ- ಮೃತ್ಯುವು ಧನಾದಿ ಹರನೆಂತಲೂ ಪ್ರಾಣಹರನೆಂತಲೂ ಯೆರಡುಬಗೆಯಾಗಿರುವನು. ಇಲ್ಲಿ ಸರ್ವಹರವಾದ ಮೃತ್ಯುವೂ ನಾನೆಂದರ್ಥವು.(ಅಥವಾ)ಪ್ರಲಯಕಾಲದಲ್ಲಿ ಸರ್ವಹರಣವಂಮಾಡುವುದರಿಂದ ನಾನು ಸರ್ವಸಂಹಾರಕನಾದ ಮೃತ್ಯುವಾಗಿರುವೆನು. (ಶ್ರೀ) ಸಂಹಾರಮಾಡುವಂತವರಲ್ಲಿ ಸರ್ವ ಸಂಹಾರಕನಾದ ಮೃತ್ಯುವೂನಾನು. (ಗೀ|| ವಿ) ಮೃತ್ಯುವಿನಲ್ಲಿದ್ದುಕೊಂಡು ಸರ್ವವನ್ನು ನಾಶಪಡಿಸುವಂತವನುನಾನು. ಭವಿಷ್ಯತಾಮುದ್ಭವಶ್ಚ- (ಶಂ||ಶ್ರೀ||)ಶುಭವನ್ನು ಹೊಂದಲು ಯೋಗ್ಯರಾದ ಒಳ್ಳೇ ಪ್ರಾಣಿಗಳ ಶುಭಪ್ರಾಪ್ತಿಯೂ ನಾನೆ. (ಶಂ) ಅದರಕಾರಣವೂನಾನೆ. || ೩೪ ||

(ಮ|| ಗೀ|| ವಿ||) ಕೀರ್ತಿ ಶ್ರೀರ್ವಾಗಾದಿಗಳಲ್ಲಿ ನಾನಂತರ್ಯಾಮಿಯಾಗಿರುವೆನೆಂದರಿಯಬೇಕು. ... ||೩೪

ಶ್ಲೋ|| ಬೃಹತ್ಸಾಮತಥಾಸಾಮ್ನಾಂ ಗಾಯತ್ರೀಛಂದ
ಸಾಮಹಂ | ಮಾಸಾನಾಂಮಾರ್ಗಶೀರ್ಷೋಹಮೃತೂ
ನಾಂಕುಸುಮಾಕರಃ ... ||೩೫||

ಪ|| ಬೃಹತ್ಸಾಮ- ತಥಾ-ಸಾಮ್ನಾಂ- ಗಾಯತ್ರೀ- ಛಂದಸಾಂ-ಅಹಂ | ಮಾಸಾನಾಂ- ಮಾರ್ಗಶೀರ್ಷಃ- ಅಹಂ- ಋತೂನಾಂ- ಕುಸುಮಾಕರಃ||

ಅ|| ತಥಾ- ಆಪ್ರಕಾರವೆ, ಸಾಮ್ನಾಂ ರಥಂತರ ಗಾಯತ್ರವಾಮದೇವ್ಯಾದಿ ಸಕಲ ಸಾಮಗಳ ಮಧ್ಯದಲ್ಲಿ, ಬೃಹತ್ಸಾಮ- ಶ್ರೇಷ್ಠವಾಗಿರುವ ಬೃಹತ್ ಎಂಬ ಸಾಮವು ನಾನು. ಛಂದಸಾಂಗಾಯತ್ರ್ಯಹಂ- ಉಕ್ತಾ ಅತ್ಯುಕ್ತಾ ಎಂಬಿವೇ ಮೊದಲಾದ ನಾಮಗಳುಳ್ಳ ಛಂದಸ್ಸುಗಳಲ್ಲಿ ಶ್ರೇಷ್ಠವಾದ ಗಾಯತ್ರೀ ಛಂದಸ್ಸು ನಾನಾಗಿರುವೆನು. (ಶಂ|ಶ್ರೀ) ಗಾಯತ್ರೀಮಂತ್ರವು ದ್ವಿಜನಾದ ಬ್ರಾಹ್ಮಣನಿಗೆ ಎರಡನೆಜನ್ಮಕ್ಕೆ ಜನಕನಾಗಿರುವುದರಿಂದಗಾಯತ್ರೀಮಂತ್ರಕ್ಕೆಶ್ರೇ

ಷ್ಠ್ಯವೆಂದರ್ಥವು. ಮಾಸಾನಾಂಮಾರ್ಗಶೀರ್ಷೋಽಹಂ- ಚೈತ್ರಾದಿಗಳಾದ ಹನ್ನೆರಡುಮಾಸಗಳಲ್ಲಿ ಮಾರ್ಗಶೀರ್ಷಮಾಸವು ನಾನು. (ಆ॥ಗಿ॥)ಪಕ್ವವಾದಫಲಗಳಿಂದಭರಿತವಾದಮಾಸವಾದುದರಿಂದಮಾರ್ಗಶೀರ್ಷಮಾಸವುಶ್ರೇಷ್ಠವೆಂದರಿಯಬೇಕು. ಋತೂನಾಂಕುಸುಮಾಕರಃ- ಆರು ಋತುಗಳ ಮಧ್ಯದಲ್ಲಿ (ವಸಂತಾದಿಷಡೃತುಗಳಲ್ಲಿ) ಶ್ರೇಷ್ಠವಾಗಿರುವ ಮೊದಲನೇದಾದ ವಸಂತಋತುವು ನಾನಾಗಿರುವೆನು. ॥೩೫॥

ಶ್ಲೋ॥ದ್ಯೂತಂಛಲಯತಾಮಸ್ಮಿತೇಜಸ್ತೇಜಸ್ವಿನಾಮ
ಹಂ | ಜಯೋಽಸ್ಮಿವ್ಯವಸಾಯೋಽಸ್ಮಿಸತ್ತ್ವಂಸತ್ತ್ವವತಾ
ಮಹಂ ॥ ... ॥೩೬॥

ಪ॥ ದ್ಯೂತಂ- ಛಲಯತಾಂ- ಅಸ್ಮಿ- ತೇಜಃ- ತೇಜಸ್ವಿನಾಂ- ಅಹಂ | ಜಯಃ- ಅಸ್ಮಿ- ವ್ಯವಸಾಯಃ- ಅಸ್ಮಿ ಸತ್ವಂ- ಸತ್ವವತಾಂ- ಅಹಂ॥

ಅ॥ ಛಲಯತಾಂದ್ಯೂತಮಹಮಸ್ಮಿ- ಛಲವೆಂದರೆ ವಂಚನೋಪಾಯವು. ವಂಚನೋಪಾಯವುಳ್ಳವರ ಕಾರ್ಯಗಳ ಮಧ್ಯದಲ್ಲಿ ಉತ್ಕೃಷ್ಟವಾದ ಪಗಡೆಯಾಟವು ನಾನಾಗಿರುವೆನು.ತೇಜಸ್ವಿನಾಂತೇಜಃ ಅಹಮಸ್ಮಿ-ತೇಜಸ್ಸೆಂದರೆ ಶತ್ರುಗಳನ್ನವಮಾನಮಾಡುವ ಸಾಮರ್ಥ್ಯವು,ಅದುಳ್ಳವರಲ್ಲಿರುವಅಂತಹಸಾಮರ್ಥ್ಯವುನಾನು.ಜಯೋಽಸ್ಮಿ-ಬಾಹುಬಲವುಳ್ಳವರಿಗುಂಟಾಗುವ ಶತ್ರುಜಯವೂ ನಾನಾಗಿರುವೆನು. ವ್ಯವಸಾಯೋಽಸ್ಮಿ-ವೇದಾರ್ಥ ಪರಿಶೀಲನೆಯನ್ನು ಮಾಡುವ ಸಾಧುಜನಗಳಿಗುಂಟಾಗುವ ತತ್ವ ನಿಶ್ಚಯವೂ,ಅಹಮಸ್ಮಿ-ನಾನೇಆಗಿರುವೆನು.ಸತ್ವವತಾಂ ಸತ್ವಮಹಂ- ಗಂಭೀರಮನಸ್ಕರಾದವರ ಗಂಭೀರ ಮನಸ್ತ್ವವೂನಾನೇ ಆಗಿರುವೆನು. ... ॥೩೬॥

(ಶಂ)ಸತ್ವವತಾಂ- ಸಾತ್ವಿಕಜನರ, ಸತ್ವಂ-ಸತ್ವಗುಣವು.(ಗೀ॥ವಿ॥) ಬಲವುಳ್ಳವರ ಬಲವೂನಾನೆ. ॥೩೬॥

ಶ್ಲೋ॥ ವೃಷ್ಣೀನಾಂವಾಸುದೇವೋಽಸ್ಮಿಪಾಂಡವಾನಾಂಧ
ನಂಜಯಃ| ಮುನೀನಾಮಪ್ಯಹಂವ್ಯಾಸಃಕವೀನಾಮುಶ
ನಾಕವಿಃ॥ ... ॥೩೭॥

ಪ॥ ವೃಷ್ಣೀನಾಂ= ವಾಸುದೇವಃ- ಅಸ್ಮಿ- ಪಾಂಡವಾನಾಂ- ಧನಂಜಯಃ|ಮು ನೀನಾಂ-ಅಪಿ- ಅಹಂ- ವ್ಯಾಸಃ-ಕವೀನಾಂ- ಉಶನಾ-ಕವಿಃ॥

(ಅ॥ರಾ॥ಭಾ॥) ವೃಷ್ಣೀನಾಂ-ವೃಷ್ಣಿವಂಶ್ಯರಾದ ರಾಜರಲ್ಲಿ, ಶ್ರೇಷ್ಠನಾದ, ವಾಸುದೇವೋಸ್ಮಿ- ಶ್ರೀವಸುದೇವ ಪುತ್ರನು ನಾನಾಗಿರ ವೆನು. ಇಲ್ಲಿಯೂ, ಈ ಗೀತಾರ್ಥವನ್ನುಪದೇಶಿಸುವ ಶ್ರೀ ಕೃಷ್ಣಸ್ವಾ ಮಿಗೂ ಶ್ರೀವಾಸುದೇವನಿಗೂ ಭೇದವಿಲ್ಲದೇ ಇರುವುದರಿಂದ ವಿಭೂತಿ ತ್ವವು ಕೂಡುವುದಿಲ್ಲವಾದುದರಿಂದ ವಸುದೇವ ಪುತ್ರತ್ವವನ್ನು ವಿಭೂ ತಿಯಾಗಿ ಸ್ವೀಕರಿಸಬೇಕು. ಪಾಂಡವಾನಾಂಧನಂಜಯೋಸ್ಮಿ-ಪಾಂಡು ಪುತ್ರರಲ್ಲಿ ಶ್ರೇಷ್ಠನಾಗಿರುವ ಅರ್ಜುನನಾದ ನೀನೂ ನಾನೆ. ಮುನೀ ನಾಂ ವ್ಯಾಸೋಪ್ಯಹಂ-ಮನನವಂ ಮಾಡುವುದರಿಂದ ವಸ್ತುಯಾಥಾ ತ್ಮ್ಯವಂ ತಿಳಿದುಕೊಳ್ಳುವ ಋಷಿಗಳ ಮಧ್ಯದಲ್ಲಿ ಶ್ರೇಷ್ಠರಾಗಿರುವ ಶ್ರೀವೇದವ್ಯಾಸರೂ ನಾನೇಆಗಿರುವೆನು. ಈಅರ್ಥವು "ಆಲೋಡ್ಯ ಸರ್ವಶಾಸ್ತ್ರಾಣಿ ವಿಚಾರ್ಯಚ ಪುನಃಪುನಃ। ಇದಮೇಕಂಸುನಿಷ್ಪನ್ನಂ ಧ್ಯೇಯೋನಾರಾಯಣಸ್ಸದಾ,, ಇತ್ಯಾದಿ ವ್ಯಾಸವಾಕ್ಯದಿಂದಲೇ ಸಿದ್ಧ ವಾಗಿರುವುದು. ವಸ್ತುಯಾಥಾತ್ಮ್ಯ ಪರಿಜ್ಞಾನದಿಂದಲ್ಲವೇ ಇಂಥಾನಿ ರ್ಣಯೋಕ್ತಿಯಂ ಹೇಳಲುಬಹುದೆಂದರ್ಥವು. ಮತ್ತು ವಸಿಷ್ಠಾದಿಗ ಳಾದ ಮಹಾತ್ಮರಿರುವಲ್ಲಿ ಈವೇದವ್ಯಾಸರಿಗೇನೇ ಆಧಿಕ್ಯವು ಹೇಗೆಹೇ ಳಬಹುದೆಂದರೆ " ತಪೋವಿಶಿಷ್ಟಾದಪಿವೈವಸಿಷ್ಠಾನ್ಮುನಿಸತ್ತಮಾತ್। ಮನ್ಯೇಶ್ರೇಷ್ಠತಮಂತ್ವಾದ್ಯ ರಹಸ್ಯ ಜ್ಞಾನವೇದನಾತ್,, ಎಂಬೀಪ್ರ ಮಾಣದಿಂದ ತಪೋವಿಶಿಷ್ಟರಾದ ವಸಿಷ್ಠರಿಗಿಂತಲೂ ರಹಸ್ಯಜ್ಞಾನ ವೇ ದನರೂಪವಾದ ಅತಿಶಯದಿಂದ ಶ್ರೀವೇದವ್ಯಾಸರು ಶ್ರೇಷ್ಠರೆಂದರಿ ಯಬೇಕು. ಕವೀನಾಮುಶನಾಕವಿರಹಮಸ್ಮಿ- ಪಂಡಿತರಲ್ಲಿ ಶ್ರೇಷ್ಠ ರಾದ ಶುಕ್ರಾಚಾರ್ಯರೆಂಬ ಪಂಡಿತರು ನಾನಾಗಿರುವೆನು. ಇಲ್ಲಿ ಕವಿಶ ಬ್ದದಿಂದಗ್ರಂಥಕವನಾದಿಗಳಂಮಾಡುವಕವಿಗಳೆಂದಾಗಿಬಅರ್ಥವರ್ಣನ ವಂಮಾಡಕೂಡದು. ಅರೀತಿಯಾಗಿ ಹೇಳಿದರೆ ಶ್ರೀವಾಲ್ಮೀಕಿ ವ್ಯಾಸಾ ದಿಗಳಿಗಿಂತಲೂ ಶುಕ್ರಾಚಾರ್ಯರಿಗೆ ಅತಿಶಯವು ಸಿದ್ಧಸಲಾರದು. ನೀತಿ ನೈಪುಣ್ಯಾದಿ ರೂಪವಾದ ಪಾಂಡಿತ್ಯದಲ್ಲಿ ಇವರಿಗೆ ಪ್ರಸಿದ್ಧಿಯುಂಟಾಗಿ ರುವುದು. ಆದುದರಿಂದ ಯಥೋಕ್ತವಾದ ಅರ್ಥವನ್ನೇ ಗ್ರಹಿಸಬೇ ಕು. ॥೩೭॥

(ಶಂ) ಮುನೀನಾಮಪಿ-ಸರ್ವಪದಾರ್ಥಜ್ಞಾನವುಳ್ಳ ಮನನಶೀಲರಾದ ಋಷಿಗಳ ಮಧ್ಯದಲ್ಲಿ, ಕವೀನಾಂ- ಕ್ರಾಂತದರ್ಶಿನಾ,ಮುಶನಾಕವಿರಸ್ಮಿ-ಸಾಮಾನ್ಯ ಯುಕ್ತಿಗೆ ಸಾಧ್ಯವಾಗದ ಸಂಗತಿಗಳನ್ನು ತಿಳಿದವರ ಮಧ್ಯದಲ್ಲಿ ನಾನು ಶುಕ್ರಾಚಾರ್ಯನಾಗಿರುವೆನು. ‖೩೭‖

(ಗೀ‖ ವಿ‖) ವೃಷ್ಣೀನಾಂ-ಯಾದವರ ಮಧ್ಯದಲ್ಲಿ, ವಾಸುದೇವನೆಂಬ ನಾಮವುಳ್ಳವನು. ವಾಸು ಎಂದರೆ ಆಚ್ಛಾದಕನು, (ಅಥವಾ) ಸಮಸ್ತವನ್ನು ತನ್ನಲ್ಲಿ ವಾಸಮಾಡಿಸುತ್ತಾನಾದ್ದರಿಂದ ವಾಸುವೆಂದರಿಯಬೇಕು. ಆ ಪ್ರಕಾರವೆ ತಾನು ಸರ್ವಪದಾರ್ಥಗಳಲ್ಲಿರುವಂತವನಾದ್ದರಿಂದಲೂ ವಾಸುವೆನ್ನಲ್ಪಡುವನು. ದೇವ ಶಬ್ದಕ್ಕೆ ಕ್ರೀಡಾದಿ ಗುಣಯುಕ್ತನೆಂದರ್ಥವು. (ವಸತೀತಿವಾಸುಃ -'ವಾಸುಶ್ಚಾಸೌದೇವಶ್ಚ ವಾಸುದೇವಃ ಎಂಬದಾಗಿ ವಿಗ್ರಹ ಮಾಡಬೇಕು. ಅದಕ್ಕೆ "ಛಾದಯಾಮಿಜಗದ್ವಿಶ್ವಂ ಭೂತ್ವಾಸೂರ್ಯ ಇವಾಂ ಶುಭಿಃ । ಸರ್ವಭೂತಾಧಿ ವಾಸಶ್ಚ ವಾಸುದೇವಸ್ತತೋಽಸ್ಮ್ಯಹಂ ,, ಎಂಬ ಮೋಕ್ಷಧರ್ಮ ವಚನವೂ (ವಾಸುದೇವ ಶಬ್ದವ್ಯಾಖ್ಯಾನದಲ್ಲಿ) ಪ್ರಮಾಣವಾಗಿರುವುದು. ಇಂತಾ ವಾಸುದೇವನು ನಾನಾಗಿರುವೆನು. ಪಾಂಡವಾನಾಂ ಧನಂಜಯಃ-ಭೀಮಸೇನ ವ್ಯತಿರಿಕ್ತರಾದ ಪಾಂಡವರಲ್ಲಿ ಅರ್ಜುನನಿಗೆ ಆಧಿಕ್ಯವನ್ನುಂಟುಮಾಡುವ ಅರ್ಜುನಾಂತರ್ಗತನಾದ ಧನಂಜಯ ನಾಮಕನೂ ನಾನೆ. ಮುನೀನಾಮಪ್ಯ ಹಂವ್ಯಾಸಃ-ಸರ್ವಸ್ಮಾದ್ವಿಶಿಷ್ಟತ್ವಾದ್ವಿಃ-ಆಸಮಂತಾತ್ಸ್ವಗತಃ- "ಸ್ವಗತೌ,, ಇತಿಧಾತುಃ ವಿಶ್ಚಾಸಾವಾಸಶ್ಚ ಸರ್ವಗತಶ್ಚೇತಿವ್ಯಾಸಃ,ವಿ-ಉತ್ತಮನಾದವನು. ಆ-ಸರ್ವಪ್ರದೇಶಗಳಲ್ಲಿಯೂ, ಸಃ-ಇರುವನೆಂಬ ಕಾರಣದಿಂದ ನಾನು ವ್ಯಾಸನಾಮಕನಾಗಿರುವೆನು. (ಅಥವಾ) ವಿ-ಉತ್ತಮವಾದ,ಆಸ-ಸ್ಥಿತಿಯುಳ್ಳವನು. ಆದುದರಿಂದ ವ್ಯಾಸನಾಮಕನು. ‖೩೭‖

ಶ್ಲೋ ‖ ದಂಡೋದಮಯತಾಮಸ್ಮಿನೀತಿರಸ್ಮಿಜಿಗೀಷತಾಂ।ಮೌನಂಚೈವಾಸ್ಮಿಗುಹ್ಯಾನಾಂಜ್ಞಾನಂಜ್ಞಾನವತಾಮಹಂ‖ ... ... ‖೩೮‖

ಪ॥ ದಂಡಃ-ದಮಯತಾಂ-ಅಸ್ಮಿ-ನೀತಿಃ-ಅಸ್ಮಿ-ಜಿಗೀಷತಾಂ| ಮೌನಂ-ಚ-ಏವ-ಅಸ್ಮಿ-ಗುಹ್ಯಾನಾಂ-ಜ್ಞಾನಂ-ಜ್ಞಾನವತಾಂ-ಅಹಂ॥

ಅ॥ ರಾ॥ದಮಯತಾಂ-ನಿಯಮಗಳನ್ನತಿಕ್ರಮಿಸುವವರನ್ನು ದಂಡಿಸುವಂತವರ, ದಂಡಃ-ದಂಡನೆಯೂ, ಅಹಮಸ್ಮಿ-ನಾನೇ ಆಗಿರುವೆನು. ಜಿಗೀಷತಾಂ-ಶತ್ರುಜಯವನ್ನಪೇಕ್ಷಿಸುವಂತವರಿಗೆ,ನೀತಿಃ-ಜಯಸಾಧನನರಾದ ನೀತಿಯೂ, ಅಹಮಸ್ಮಿ-ನಾನಾಗಿರುವೆನು. ಗುಹ್ಯಾನಾಂ-ಹೊರಗೆ ಪ್ರಕಟಸಬಾರದ ಆಯುರ್ವಿತ್ತಗೃಹಚ್ಛಿದ್ರಾದಿಗಳ ರಹಸ್ಯಗಳ, ಮಧ್ಯದಲ್ಲಿ; ಮೌನಂಚ-ಉತ್ತಮವಾದ ಹಿತಾಹಿತಗಳಲ್ಲಿ ಒಂದನ್ನೂ ಹೇಳದೆ ಇರುವಿಕೆಯೂ, ಅಹಮೇವಾಸ್ಮಿ-ನಾನೇ ಆಗಿರುವೆನು. ಜ್ಞಾನವತಾಂ ಜ್ಞಾನಂ ಚಾಹಂ- ಜ್ಞಾನಮುಳ್ಳವರಗಳಲ್ಲಿರುವ ಪುರುಷಾರ್ಥೋಪಯುಕ್ತವಾದ ಒಳ್ಳೇಜ್ಞಾನವೂನಾನೆ. ಮೋಕ್ಷರೂಪವಾದ ಪುರುಷಾರ್ಥಕ್ಕೆ ಉಪಯೋಗಿಸಲ್ಪಡುವ ಜ್ಞಾನಕ್ಕಿಂತಲೂ ಇತರ ವಿಷಯವಾದ ಜ್ಞಾನಕ್ಕೆ ಜ್ಞಾನತ್ವವೇ ಇಲ್ಲವು. ಈಅರ್ಥ ಪ್ರ"ತದ್ಜ್ಞಾನಮಜ್ಞಾನಮತೋನ್ಯದುಕ್ತಂ, ಎಂಬದಾಗಿ ಹೇಳಲ್ಪಟ್ಟಿರುವುದು. ಈಪ್ರಮಾಣದಲ್ಲಿ ಮೋಕ್ಷೋಪಯುಕ್ತವಾದಬ್ರಹ್ಮಜ್ಞಾನವೇ ಜ್ಞಾನವೆಂತಲೂ ಇದಕ್ಕಿಂತಲೂಭಿನ್ನವಾದಜ್ಞಾನವೆಲ್ಲವೂ ಅಜ್ಞಾನವೆಂತಲೂ ಹೇಳಿರುವುದಾಗಿ ತಿಳಿಯಬೇಕು,॥೩೮॥

(ಶ್ರೀ) ಮೌನಂ- ರಹಸ್ಯವಾದ ಅಂಶವನ್ನು ಬಹಿಃಪ್ರಕಟನ ಮಾಡದೆ ಇರುವುದಕ್ಕೆ ಮೌನವು ಕಾರಣವಾಗಿರುವುದರಿಂದ ಮೌನಕ್ಕೆ ಈಸಂದರ್ಭದಲ್ಲಿ ಪ್ರಾಧಾನ್ಯವನ್ನರಿಯಬೇಕು. ॥೩೮॥

ಶ್ಲೋ॥ಯಚ್ಚಾಪಿಸರ್ವಭೂತಾನಾಂಬೀಜಂತದಹಮರ್ಜುನ । ನತದಸ್ತಿವಿನಾಯತ್ಸ್ಯಾನ್ಮಯಾಭೂತಂಚರಾಚರಂ॥ ... ... ॥೩೯॥

ಪ॥ ಯತ್- ಚ- ಅಪಿ- ಸರ್ವಭೂತಾನಾಂ- ಬೀಜಂ- ತತ್-ಅಹಂ- ಅರ್ಜುನ।ನ-ತತ್- ಅಸ್ತಿ- ವಿನಾ- ಯತ್ ಸ್ಯಾತ್-ಮಯಾ-ಭೂತಂ- ಚರಾಚರಂ॥

ಅ॥ ಹೇ ಅರ್ಜುನ-ಎಲೈ ಅರ್ಜುನನೇ ! ಸರ್ವಭೂತಾನಾಂ-ಸರ್ವಭೂತಗಳಿಗೂ,ಬೀಜಂ-ಕಾರಣವು,ಯಚ್ಚಾಪಿ-ಯಾವದೊ,ತತ್-ಅದೂ, ಅಹಂ-ನಾನು, ಚರಾಚರಂ - ಜಂಗಮಸ್ಥಾವರವಾದ, ಯದ್ಭೂತಂ

ಸ್ಯಾತ್-ಯಾವಭೂತ ವಿರುವುದೋ,ತನ್ಮಯಾವಿನಾನಾಸ್ತಿ-ಅದೂನನ್ನೆನ್ನು ಬಿಟ್ಟಿರಲಾರದು. ... ... ॥೩೯॥

(ರಾ॥ಭಾ॥)ಸರ್ವಾವಸ್ಥೆಗಳನ್ನುಹೊಂದಿರುವಸರ್ವಭೂತಗಳಿಗೂಯಾವದುಬೀಜವೋ (ಎಂದರೆ ಕಾಣಲ್ಪಡುವುದಾಗಿಯೂ ಕಾಣಲ್ಪಡದೆಯೂ ಇರುವುದೆಂಬೀ ಎರಡುಬಗೆಯಾದ ವಸ್ತುಗಳ ಉತ್ಪತ್ತಿಕಾರಣವುಯಾವದೋ)ಅದೂನಾನೆ. ಭೂತಗಳಲ್ಲಿ ಒಂದಾದರೂ ಅಂತರಾತ್ಮನಾಗಿರುವ ನನ್ನನ್ನು ಬಿಟ್ಟಿರುವುದು ಯಾವದೋ ಅಂತಾದ್ದಿಲ್ಲವು "ಅಹಮಾತ್ಮಾ ಗುಡಾಕೇಶ ಸರ್ವಭೂತಾಶಯಸ್ಥಿತಃ ,, ( ೧೦॥ ೨೦॥ ) ಎಂಬ ಉಪಕ್ರಮದಲ್ಲಿಯೂ, "ನತದಸ್ತಿವಿನಾಯತ್ಸ್ಯಾನ್ಮಯಾ ಭೂತಂಚರಾಚರಂ,, ಎಂಬೀ ಶ್ಲೋಕದಲ್ಲಿಯೂ ಸಕಲಕ್ಕೂ ಪರಮಾತ್ಮನು ಆತ್ಮನಾಗಿರುವಿಕೆಯೇ ಹೇಳಲ್ಪಟ್ಟಿರುವುದು. ಆದರಿಂದ ಸಮಸ್ತವಾದ ವಸ್ತುಸಮೂಹವೂ ಸರ್ವಾವಸ್ಥೆಯಲ್ಲಿಯೂ ಆತ್ಮಭೂತನಾದನನ್ನಿಂದ ಕೂಡಿಕೊಂಡೆ ಇರುವುದೆಂದರಿಯಬೇಕು. ಇಲ್ಲಿ ಸಮಸ್ತವೂ ನಾನೆಂಬ ಸಾಮಾನಾಧಿಕರಣ್ಯ ನಿರ್ದೇಶಕ್ಕೆ ಸರ್ವಕ್ಕೂ ತಾನಾತ್ಮನಾಗಿರುವಿಕೆಯೇ ಕಾರಣವೆಂದು ಹೇಳಲ್ಪಟ್ಟಿತು. ... ॥೩೯॥

(ಶಂ॥ ಭಾ॥)ಎಲೈ ಅರ್ಜುನನೆ ಸರ್ವ ಭೂತಗಳಿಗೂ ಯಾವದು ಪ್ರರೋಹಕಾರಣವಾಗಿರುವುದೋ ಅದೂ ನಾನೇಆಗಿರುವೆನು. (ಇಲ್ಲಿ ವಿಭೂತಿಪ್ರಕರಣವನ್ನು ಉಪಸಂಹಾರಮಾಡುವುದಕ್ಕಾಗಿ ಮುಂದೆ ಸಂಗ್ರಹಿಸಿ ಹೇಳುತ್ತಾನೆಂದರಿಯಬೇಕು.) ಜಂಗಮಸ್ಥಾವರಾತ್ಮಕವಾದ ಯಾವ ಭೂತ ಸಮೂಹವು ನನ್ನಿಂದುಂಟುಮಾಡಲ್ಪಟ್ಟಿರುವುದೊ ಅದೆಲ್ಲವೂ ನನ್ನನ್ನು ವಿನಾಯಿಸಿ ಇರುವುದಿಲ್ಲವು. ಎಂದರೆ ನನ್ನನ್ನುಬಿಟ್ಟಿರಲಾರದು. ನನ್ನನ್ನು ಬಿಟ್ಟಿರುವುದು ಶೂನ್ಯವಸ್ತುವೆ ಆಗಿರುವುದರಿಂದ ಸಮಸ್ತವೂ ನಾನೇದು ತಾತ್ಪರ್ಯವು. ॥೩೯॥

ಶ್ಲೋ॥ ನಾಂತೋಸ್ತಿಮಮದಿವ್ಯಾನಾಂ ವಿಭೂತೀನಾಂಪರಂತಪ। ಏಷತೂದ್ದೇಶತಃ ಪ್ರೋಕ್ತೋವಿಭೂತೇರ್ವಿಸ್ತರೋಮಯಾ ॥ ... ... ॥೪೦॥

ಪ॥ ನ- ಅಂತಃ-ಅಸ್ತಿ- ಮಮ- ದಿವ್ಯಾನಾಂ-ವಿಭೂತೀನಾಂ- ಪರಂತಪ। ಏಷಃ-

ತು-ಉದ್ದೇಶತಃ-ಪ್ರೋಕ್ತಃ-ವಿಭೂತೇಃ-ವಿಸ್ತರಃ-ಮಯಾ॥

ಅ॥ ಹೇ ಪರಂತಪ-ಶತ್ರುಗಳನ್ನು ಯುದ್ಧದಲ್ಲಿ ಸಂತಪಿಸುವಂತೆ ಮಾಡುವ ಶಕ್ತಿಯುಳ್ಳ ಎಲೈ ಅರ್ಜುನನೇ! ಮಮ-ನನ್ನ, ದಿವ್ಯಾನಾಂ-ಅದ್ಭುತಗಳಾದ, (ರಾ) ಮಂಗಳಕರಗಳಾದ, ವಿಭೂತೀನಾಂ-ವಿಭೂತಿಗಳಿಗೆ, (ರಾ) ನನ್ನಿಂದಾಳಲ್ಪಡುವ ವಸ್ತುಗಳಿಗೆ, ಅಂತೋನಾಸ್ತಿ-ಪೂರ್ತಿಯಿಲ್ಲವು. ಏಷತು ವಿಭೂತೇರ್ವಿಸ್ತರಃ-ಈಗ ನನ್ನಿಂದ ಹೇಳಲ್ಪಟ್ಟಿರುವ ವಿಭೂತಿಯು ವಿಸ್ತಾರವು, ಮಯಾ ಉದ್ದೇಶತಃ ಪ್ರೋಕ್ತಃ-ಪ್ರತ್ಯೇಕವಾಗಿ ಹೇಳುವುದು ಅಸಾಧ್ಯವಾಗಿರುವುದರಿಂದ ಕೆಲವು ಧರ್ಮಗಳನ್ನು ಮುಂದೆ ಮಾಡಿಕೊಂಡು ಸಂಗ್ರಹವಾಗಿ ಹೇಳಲ್ಪಟ್ಟಿತು. ... ... ... ॥೪೦॥

(ಶಂ॥ ತಾತ್ಪರ್ಯವು) ಈ ಪ್ರಕಾರವಾಗಿ ತಿಳಿಸಲ್ಪಟ್ಟ ವಿಭೂತಿಗಳಿಗಿಂತಲೂ ವಿಸ್ತಾರವಾದ ನನ್ನ ವಿಭೂತಿ ರೂಪಗಳಿರುವುವು. ಅವುಗಳೆಲ್ಲವನ್ನೂ ನಾನು ಹೇಳುವುದೂ ನೀನು ಕೇಳುವುದೆಂಬೀ ಯೆರಡೂ ಅಸಾಧ್ಯವೇ. ಸರ್ವಾಂತರಾತ್ಮನಾದ ಪರಮೇಶ್ವರನ ದಿವ್ಯಗಳಾದ ವಿಭೂತಿ ರೂಪಗಳಿಗೆ (ಇಷ್ಟೆಂಬ) ಇಯತ್ತೆಯನ್ನು ಹೇಳಲು ಯಾರಿಂದಲೂ ಆಗಲಾರದು. ಆದರೆ ಈಗ ಹೇಳಲ್ಪಟ್ಟಿರುವ ವಿಭೂತಿ ವಿಸ್ತಾರವು ಅತ್ಯಂತ ಸಂಕ್ಷೇಪದಿಂದ ಹೇಳಿರುವುದಾಗಿ ತಿಳಿಯಬೇಕೆಂದು ತಾತ್ಪರ್ಯವು. ... ... ॥೪೦॥

ಶ್ಲೋ॥ ಯದ್ಯದ್ವಿಭೂತಿಮತ್ಸತ್ತ್ವಂ ಶ್ರೀಮದೂರ್ಜಿತ
ಮೇವವಾ । ತತ್ತದೇವಾವಗಚ್ಛ ತ್ವಂ ಮಮತೇಜೋಂಶ
ಸಂಭವಂ ॥ ... ... ॥೪೧॥

ಪ॥ ಯತ್-ಯತ್-ವಿಭೂತಿಮತ್-ಸತ್ತ್ವಂ-ಶ್ರೀಮತ್-ಊರ್ಜಿತಂ-ಏವ-ವಾ। ತತ್-ತತ್-ಏವ-ಅವಗಚ್ಛ-ತ್ವಂ-ಮಮ-ತೇಜೋಂಶಸಂಭವಂ ॥

ಅ॥ ಯದ್ಯತ್ಸತ್ತ್ವಂ-ಯಾವ ಯಾವ ಪ್ರಾಣಿವರ್ಗವು, ವಿಭೂತಿಮತ್ -ಐಶ್ವರ್ಯ ಮುಳ್ಳದ್ದಾಗಿರುವುದೋ, (ಶಂ) ವಿಭೂತಿ ಯೊಡನೆ ಕೂಡಿರುವುದಾಗಿರುವುದೋ, (ಮ) ನನ್ನನ್ನು ವಿನಾಯಿಸಿ ಪೃಥಗ್ಭೂತವಲ್ಲವಾದದ್ದಾಗಿರುವುದೋ, ಶ್ರೀಮತ್- ಕಾಂತಿಯುಕ್ತವಾಗಿರುವುದೋ, (ಶ್ರೀ॥ ರಾ॥ ಗೀ॥ ವಿ) ಸಂಪದ್ಯುಕ್ತವಾಗಿರುವುದೋ

ಊರ್ಜಿತ ಮೇವವಾ-(ರಾ)ಕಲ್ಯಾಣಾರಂಭದೊಡನೆಮೇಲು ಮೇಲೆಯು ಳ್ಳದ್ದಾಗಿರುವುದೋ, (ಶಂ) ಉತ್ಸಾಹದೊಡನೆ ಕೂಡಿರುವುದೊ, (ಗೀ॥ವಿ)ಅಭಿವೃದ್ಧಿಯನ್ನು ಹೊಂದಿರುವುದೋ, ತತ್ತತ್-ಅವೆಲ್ಲವನ್ನು, ಮಮ-ನನ್ನ, ತೇಜೋಂಶ ಸಂಭವಂ- (ಶಂ॥ ರಾ॥) ತೇಜಸ್ಸಿನ ಒಂ ದಂಶದಿಂದುಂಟಾಗಿರುವುದನ್ನಾಗಿ, (ಗೀ॥ವಿ॥) ಕಪಿಲರು, ರಾಮರು,ವಾ ಸುದೇವರೇ ಮೊದಲಾದ ರೂಪಗಳು ಪೂರ್ಣವಾದ ರೂಪಗಳು, ಇತರ ರೂಪಗಳು ಅಂಶಗಳು,) ತ್ವಂ-ನೀನು,ಅವಗಚ್ಛ-ತಿಳಿದುಕೊಳ್ಳುವಂತ ವನಾಗು ॥೪೧॥

(ರಾ॥ ಶಂ॥) ಹೇಳಲ್ಪಡದಿರುವ ಭಗವದ್ವಿಭೂತಿಗಳನ್ನು ಸಂಗ್ರ ಹಿಸಿ ಹೇಳುವುದಕ್ಕಾಗಿ ಅವುಗಳ ಲಕ್ಷಣವನ್ನು ಹೇಳುತ್ತಾರೆ. ಲೋ ಕದಲ್ಲಿ ಯಾವ ಯಾವ ಪ್ರಾಣಿವರ್ಗವು ಪರಿಚ್ಛದಾದಿಗಳೊಡನೆ ಕೂಡಿ ರುವುದೊ ಕಾಂತಿಯುಳ್ಳದ್ದಾಗಿರುವುದೋ (ರಾ-ಅಥವಾ) ಧನಧಾನ್ಯಾ ದಿ ಸಂಪತ್ಸಮೃದ್ಧವಾಗಿರುವುದೋ, (ಶಂ) ಲಕ್ಷ್ಮಿಯೊಡನೆ ಕೂಡಿರು ವುದೊ ಅಥವಾ ಉತ್ಸಾಹದೊಡನೆ ಕೂಡಿರುವುದೊ (ರಾ) ಮೇಲೆ ಮೇ ಲೆ ಮಂಗಳಾರಂಭಗಳೊಡನೆ ಕೂಡಿರುವುವೊ ಅವೆಲ್ಲವೂ ನಮ್ಮ ಅ ನ್ಯರನ್ನು ತಿರಸ್ಕರಿಸುವ ತೇಜಸ್ಸಿನ ಏಕದೇಶದಿಂದುಂಟಾಗಿರುವುದೆಂ ದು ನೀನು ತಿಳಿದುಕೊಳ್ಳುವಂತನಾಗೆಂದಭಿಪ್ರಾಯವು. (ರಾ) ಈವ ಸ್ತುವೆಲ್ಲವು ಅಚಿಂತ್ಯ ಶಕ್ತಿಯುಳ್ಳ ನನ್ನ ಆಳುವಿಕೆ ಎಂಬ ಶಕ್ತಿ ಯ ಏಕದೇಶದಿಂದುಂಟಾಗಿರುವು ವೆಂದರಿಯುವಂತನಾವಗೆಂದು ತಾ ತ್ಪರ್ಯವು. ... ... ॥೪೧॥

ಶ್ಲೋ॥ ಅಥವಾಬಹುನೈತೇನಕಿಂಜ್ಞಾನೇನತವಾರ್ಜುನ।
ವಿಷ್ಟಭ್ಯಾಹಮಿದಂ ಕೃತ್ಸ್ನಮೇಕಾಂಶೇನ ಸ್ಥಿತೋ
ಜಗತ್ ॥ ... ... ॥೪೨॥

ಪ॥ ಅಥವಾ-ಬಹುನಾ-ಏತೇನ-ಕಿಂ-ಜ್ಞಾತೇನ- (ರಾ॥ ಜ್ಞಾನೇನ) ತವ-ಅರ್ಜುನ। ವಿಷ್ಟಭ್ಯ-ಅಹಂ-ಇದಂ-ಕೃತ್ಸ್ನಂ-ಏಕಾಂಶೇನ-ಸ್ಥಿತಃ-ಜಗತ್ ॥

ಅ॥ ಅಥವಾ-ಹಾಗಿಲ್ಲದಿದ್ದರೇ, ಹೇ ಅರ್ಜುನ-ಎಲೈ ಅರ್ಜುನ ನೆ, ಬಹುನಾ-ವಿಸ್ತಾರವಾಗಿ, ಜ್ಞಾತೇನ-ತಿಳಿಯಲ್ಪಟ್ಟ, (ರಾ॥ಬಹು ನಾ ಏತೇನ ಜ್ಞಾನೇನ - ಬಹುವಿಧವಾಗಿ ಈಗ ನನ್ನಿಂದುಪದೇಶಿಸಲ್ಪ

ಟ್ಟ ಜ್ಞಾನದಿಂದ,) ಏತೇನ-ಈ ವಿಭೂತಿಯಿಂದ, ತವಕಿಂ-ನಿನಿಗೇನು ಪ್ರಯೋಜನವು. ಅಹಂ-ನಾನು, ಕೃತ್ಸ್ನಮಿದಂ ಜಗತ್-ಸಕಲವಾದ ಈ ಪ್ರಪಂಚವನ್ನು, ಏಕಾಂಶೇನವಿಷ್ಟಭ್ಯಸ್ಥಿತಃ - ಏಕದೇಶದಿಂದ (ಒಂದಂಶದಿಂದ) ವ್ಯಾಪಿಸಿ ಅಥವಾ ಧರಿಸಿಕೊಂಡಿರುವೆನು. ॥೪೨॥

(ಶಂ॥ ಭಾ) ಎಲೈ ಅರ್ಜುನನೇ ಇಷ್ಟು ಮಾತ್ರವಲ್ಲದೆ ಎಷ್ಟು ಹೇಳಿದರೂ ತಿಳಿಯಬೇಕಾದದ್ದು ಸಾವಶೇಷವಾಗಿಯೇ ಇರುವುದರಿಂದ ಈ ವಿಭೂತಿ ವಿಸ್ತಾರಗಳನ್ನು ತಿಳಿದುಕೊಳ್ಳುವುದರಿಂದ ನಿನಿಗೇನು ಪ್ರಯೋಜನವು? "ಸಮಸ್ತ ಪ್ರಪಂಚಗಳೂ ಪರಮಾತ್ಮನ ಸ್ವಲ್ಪಭಾಗವು,, ಎಂಬ ಪುರುಷಸೂಕ್ತ ಶ್ರುತಿ ಪ್ರಕಾರವಾಗಿ ಸಮಸ್ತ ಬ್ರಹ್ಮಾಂಡಗಳನ್ನು ಒಂದಂಶದಿಂದಲೇ ವ್ಯಾಪಿಸಿರುವೆನೆಂತಲೂ "ಪ್ರಪಂಚ ಸಂಪರ್ಕ ವಿಲ್ಲದ ಭಾಗವು ಅಧಿಕವಾಗಿರುವುದು,, ಎಂಬೀ ಶ್ರುತಿಪ್ರಕಾರವಾಗಿಯೂ ಧ್ಯಾನಿಸೆಂದು ತಾತ್ಪರ್ಯವು. ॥೪೭॥

(ರಾ॥ ಭಾ॥) ಎಲೈ ಅರ್ಜುನನೇ ! ಈಗ ಹೇಳಿರುವ ಮಾರ್ಗವನ್ನು ಬಿಟ್ಟು ಬೇರೊಂದು ಬಗೆಯಾಗಿ ನೋಡೋಣ; ಈಗ ನನ್ನಿಂದು ಪದೇಶಿಸಲ್ಪಟ್ಟ ಬಹು ವಿಧವಾದ ಈಜ್ಞಾನದಿಂದ ನಿನಿಗೇನು ಪ್ರಯೋಜನವು? ಈಚೇತನಾ ಚೇತನಾತ್ಮಕವಾದ (ಕಾರ್ಯಾವಸ್ಥವಾಗಿಯೂ ಕಾರಣಾವಸ್ಥವಾಗಿಯೂ ಅದುದರಿಂದಲೇಸ್ಥೂಲರೂಪವಾಗಿಯೂಸೂಕ್ಷ್ಮರೂಪವಾಗಿಯೂ, ಇರುವ ಸಮಸ್ತವಾದ) ಜಗತ್ತನ್ನು ಸ್ವರೂಪ ಸ್ಥಿತಿ ಪ್ರವೃತ್ತಿರೂಪಗಳಾದ ವ್ಯಾಪಾರಗಳಲ್ಲಿ ನಮ್ಮ ಸಂಕಲ್ಪವನ್ನು ಅತಿಕ್ರಮಿಸದಂತೆ ನಮ್ಮ ಮಹಿಮೆಯ (ಹತ್ತು ಸಾವಿರ ದಲ್ಲೊಂದು ಭಾಗದ ಹತ್ತುಸಾವಿರದ ಒಂದಂಶದಿಂದ) ಅಯುತಾ ಯುತಾಂಶದಿಂದ ನಿಲ್ಲಿಸಿಕೊಂಡು ನಾನಿರುವೆನು. ಈ ಅರ್ಥವನ್ನು ಶ್ರೀಪರಾಶರ ಬ್ರಹ್ಮರ್ಷಿಯೂ "ಯಸ್ಯಾಯುತಾಯುತಾಂಶಾಂಶೇವಿಶ್ವಶಕ್ತಿರಿಯಂಸ್ಥಿತಾ,, ಎಂಬದಾಗಿ ಅನುಗ್ರಹಿಸಿರುತ್ತಾರೆ. ... ॥೪೭॥

(ಶ್ರೀ) ಇಂದ್ರಿಯದ್ವಾರತಶ್ಚಿತ್ತೇ ಬಹಿರ್ಧಾವತಿ ಸತ್ಯಪಿ। ಈಶದೃಷ್ಟಿವಿಧಾನಾಯ ವಿಭೂತೀರ್ದಶಮೆ ೭ ಬ್ರವೀತ್ ॥ ಉಪಾಸಕನ ಚಿತ್ತವು ಇಂದ್ರಿಯ ದ್ವಾರವಾಗಿ ಬಾಹ್ಯವಿಷಯಗಳಲ್ಲಿ ಪ್ರವಣವಾದರೂ ಸಮಸ್ತವೂ ಬ್ರಹ್ಮವೆಂಬದಾಗಿ ಸರ್ವತ್ರ ಬ್ರಹ್ಮದೃಷ್ಟಿಯಂ

ವಿಧಿಸುವುದಕ್ಕಾಗಿ ತನ್ನ ಅಸಾಧಾರಣಗಳಾದ ವಿಭೂತಿಗಳನ್ನು ಈದಶ ಮಾಧ್ಯಾಯದಲ್ಲುಪದೇಶಿಸಿದನು. ಉಪಾಸಕನಿಗೆ ಸರ್ವಂ ಬ್ರಹ್ಮಾತ್ಮಕವೆಂಬ ಜ್ಞಾನವುಂಟಾದರೆ ಬ್ರಹ್ಮವ್ಯತಿರಿಕ್ತ ಪದಾರ್ಥಗಳ್ಯಾವದೂ ಇಲ್ಲವಾದುದರಿಂದ ಅಂತವುಗಳಲ್ಲಿ ಭೋಗ್ಯಬುದ್ಧಿಯೇ ಉಂಟಾಗುವುದಿಲ್ಲವೆಂದರ್ಥವು.

## ಅದ್ವೈತ ಸಿದ್ಧಾನ್ತಾನುಸಾರಿಯಾದ ದಶಮಾಧ್ಯಾಯ ಸಂಗ್ರಹಶ್ಲೋಕವು.

ಅತ್ಯಂತೋತ್ಕರ್ಷಶಾಲೀನನು ಸತತ ಮಿಹಾ ಮುತ್ರ ಸರ್ವೋತ್ತಮೊಹಂತ್ವೇಕೈಕೋತ್ಕರ್ಷ ಭಾಜಸ್ಸುರಮುನಿ ಮನುಜ ಶ್ವಾಪದಾದ್ಯಾಸ್ತ್ವತೇ । ವ್ಯಷ್ಟೀರೂಪಾಮದಂಶಾ ಇತಿಖಲು ಭವತಾ ಪೂಜನೀಯಾಃ ಕ್ರಮೇಣ ತೇನದ್ರಕ್ಷ್ಯಸ್ಯಥೋ ಮಾಮಿಹಮಯಿದಶಮೇ ಪ್ರಾಹಪಾರ್ಥಂಪರಾತ್ಮಾ ॥

ಟೀ॥ ಸರ್ವೋತ್ತಮನಾದ ನಾನು ಸರ್ವದಾ ಇಹಪರಗಳಲ್ಲಿ ಅತ್ಯಂತಾಧಿಕವಾದ ಐಶ್ವರ್ಯಮುಳ್ಳವನಾಗಿರುವೆನು. ದೇವತೆಗಳು ಋಷಿಗಳು ಮನುಷ್ಯರು ನಾಲ್ಕು ಕಾಲುಗಳುಳ್ಳ ಪಶುಗಳೇ ಮೊದಲಾದ ಭೂತಗಳೆಲ್ಲವೂ ನನ್ನ ಐಶ್ವರ್ಯದಲ್ಲಿ ಏಕದೇಶೈಶ್ವರ್ಯವುಳ್ಳವುಗಳಾಗಿರುವುವು. ಇವೆಲ್ಲವೂ ನನ್ನ ಶಕ್ತಿಯಿಂದ ನಡೆಸಲ್ಪಡುವುವೆಂತಲೂ ವ್ಯಷ್ಟಿರೂಪಗಳೆಂತಲೂ ತಿಳಿದು ಧ್ಯಾನಿಸುತಲಿರಬೇಕು. ಈ ಪ್ರಕಾರವಾಗಿ ಧ್ಯಾನಿಸಿದರೆ ನಾನೇ ಸರ್ವಂ ಎಂಬ ಸ್ವಸ್ವರೂಪಾನುಭವವು ನಿನಿಗೆ ಸಿದ್ಧಿಸುವುದೆಂಬದಾಗಿ ಅರ್ಜುನನಂ ಕುರಿತು ಪರಾತ್ಮನಾದ ಶ್ರೀಕೃಷ್ಣನು ಈ ದಶಮಾಧ್ಯಾಯದಲ್ಲುಪದೇಶಿಸಿದನು. ... ॥೧೦॥

## ಶ್ರೀಮದ್ಯಾಮುನಾಚಾರ್ಯರಿಂದ ಸಂಗ್ರಹಿಸಲ್ಪಟ್ಟ ದಶಮಾಧ್ಯಾಯ ಸಂಗ್ರಹಶ್ಲೋಕವು.

ಮೂ॥ ಸ್ವಕಲ್ಯಾಣ ಗುಣಾನಂತ್ಯ ಕೃತ್ಸ್ನಸ್ವಾಧೀನತಾಮತಿಃ । ಭಕ್ತ್ಯುತ್ಪತ್ತಿ ವಿವೃದ್ಧ್ಯರ್ಥಂ ವಿಸ್ತೀರ್ಣಾ ದಶಮೋದಿತಾ ॥

ತಾ॥ ಪರಮಕೃಪಾಳುವಾದ ಶ್ರೀವಾಸುದೇವನು ಮೋಕ್ಷದಶೆಯಲ್ಲಿಯೂ ಫಲರೂಪತ್ವೇನ ಅನುವರ್ತಿಸುವುದರಿಂದ ಉತ್ತರಾವಧಿರಹಿತವಾದ ತನ್ನ ವಿಷಯವಾಗಿರುವ ಭಕ್ತಿಯುಂಟಾಗುವುದಕ್ಕಾಗಿಯೂ, ಉತ್ಪನ್ನವಾದ ಭಕ್ತಿಯು ಅಭಿವೃದ್ಧವಾಗುವುದಕ್ಕಾಗಿಯೂ, ಅವಧಿಶೂನ್ಯಗಳಾಗಿರುವ ಸರ್ವವಸ್ತುಗಳು ತನ್ನ ವಿಭೂತಿಗಳೆಂಬ ಪ್ರಕಾರವನ್ನು ಪದೇಶಿಸಿದನೆಂದು ತಾತ್ಪರ್ಯವು. (ವಿಭೂತಿಗಳೆಂದರೆ ಪರಮಾತ್ಮನಿಂದಾಳಲ್ಪಡುವ ವಸ್ತುಗಳು.)

ಶ್ರೀಮನ್ನಿಗಮಾನ್ತ ಮಹಾದೇಶಿಕಾನುಗೃಹೀತವಾದ
ಶ್ರೀಮದ್ಗೀತಾರ್ಥ ಸಂಗ್ರಹ ಗಾಥೆಯು.

ಎಲ್ಲೈ ಇಲ್ಲಾತ ಈಶಿಲಮುಮಿನ್ನಮುತಕ್ಕಡಲುಮ್, ಎಲ್ಲೈಇಲ್ಲಾತ ವಿಭೂತಿಯೆಲ್ಲಾಮ್ ತನತಾನಮೈಯುಮ್, ಎಲ್ಲೈಯಿಲ್ಲಾದಪತ್ತಿಯೆಳವಿಕ್ಕತ್ತಿರುವರುಳಾಲ್, ಎಲ್ಲೈಯಿಲೀಶನಿಯಮ್ಬಿನ ನಿಬ್ಬಿರ್ಣಮೈನ್ದನುಕ್ಕೆ. ... ॥೧೧॥

ವ್ಯಾ ॥ "ಸ್ವಕಲ್ಯಾಣಗುಣಾನಂತ್ಯ ಕೃತ್ಸ್ನಸ್ವಾಧೀನತಾಮತಿಃ । ಭಕ್ತ್ಯುತ್ಪತ್ತಿವಿವೃದ್ಧ್ಯರ್ಥಂ ವಿಸ್ತೀರ್ಣಾ ದಶಮೋದಿತಾ ॥" ಎಂಬ ಸಂಗ್ರಹ ಶ್ಲೋಕದಂತೆ ದಶಮಾಧ್ಯಾಯಾರ್ಥಗಳನ್ನೊಂದುಗಾಥೆಯಿಂದ ಸಂಗ್ರಹಿಸುತ್ತಾರೆ. ಎಲ್ಲೈಯಿಲ್- ಅವಧಿರಹಿತನಾದ, ಈಶನ್ - ಈಶ್ವರನು, ಸ್ವಾಭಾವಿಕಾನವಧಿಕಾತಿಶಯೈಶ್ವರ್ಯಶಾಲಿಯಾದ ವಾಸುದೇವನೆಂದರ್ಥವು. ಇಂತವನ; ತಿರುವರುಳಾಲ್-ಶ್ರೀಮತ್ಕೃಪೆಯಿಂದ, ನಿರುಪಾಧಿಕಕೃಪೆಯಿಂದೆಂದರ್ಥವು. ಎಲ್ಲೈಯಿಲ್ಲಾದ-ಅವಧಿಶೂನ್ಯವಾದ, ಪತ್ತಿ- ಭಕ್ತಿಯನ್ನು, ಮೋಕ್ಷದಶೆಯಲ್ಲಿಯೂ ಫಲರೂಪತ್ವೇನ ಅನುವರ್ತಿಸುವುದರಿಂದ ಉತ್ತರಾವಧಿರಹಿತವಾದ ಸ್ವವಿಷಯ ಭಕ್ತಿಯೋಗವನ್ನೆಂದರ್ಥವು. ಎಳವಿಕ್ಕ- ಆವಿರ್ಭವಿಸುವಂತೆ ಮಾಡುವುದಕ್ಕಾಗಿ, ಆಭಕ್ತಿಯು ಉತ್ಪತ್ತ್ಯರ್ಥವಾಗಿಯೂ ಉತ್ಪನ್ನವಾದ ಭಕ್ತಿಯು ಅಭಿವೃದ್ಧಿಗಾಗಿಯೂ ಎಂದರ್ಥವು. ಎಲ್ಲೈಯಿಲ್ಲಾದ-ಅವಧಿಶೂನ್ಯವಾದ, ಈಶೀಲಮುಮ್-ತನ್ನಸೌಶೀಲ್ಯವೆಂಬ ಮಹಾ

ಗುಣವನ್ನೂ, 'ಮಹತೋಮಂದೈಸ್ಸಹನೀರಂಧ್ರೇಣ ಸಂಶ್ಲೇಷಸ್ಸೌಶೀಲ್ಯಂ', ಎಂಬದಾಗಿ ಸೌಶೀಲ್ಯಗುಣಲಕ್ಷಣವನ್ನರಿಯಬೇಕು. ಆರ್ತ-ಭೋಗ್ಯವಾದ, ಅಮುತಕ್ಕಡಲುಮ್-ಅಮೃತಸಮುದ್ರವನ್ನೂ, ಇಲ್ಲಿ ಅಮೃತಸಾಗರತ್ವೇನ ನಿರತಿಶಯವಾದ ಪರಮಾತ್ಮನ ಕಲ್ಯಾಣ ಗುಣರಾಶಿಯು ಅಧ್ಯವಸಾನ ಮಾಡಲ್ಪಟ್ಟಿತು. ಈ ಗುಣರಾಶಿಯಲ್ಲಂತರ್ಗತವಾದ ಸೌಶೀಲ್ಯವನ್ನು ಪ್ರತ್ಯೇಕವಾಗಿ ನಿರ್ದೇಶಿಸಿರುವುದು ಈ ಸೌಶೀಲ್ಯಗುಣಕ್ಕೆ ಆಶ್ರಿತರಕ್ಷಣೋಪಯೋಗಾತಿಶಯಪ್ರಯುಕ್ತವಾದ ಪ್ರಾಧಾನ್ಯಜ್ಞಾಪನಾರ್ಥವೆಂದರಿಯಬೇಕು. ಎಲ್ಲೈಯಿಲ್ಲಾತ-ಅವಧಿರಹಿತಗಳಾದ, ಅಸಂಖ್ಯೇಯಗಳಾದ ಎಂದರ್ಥವು. ಎಲ್ಲಾಮ್- ಸರ್ವವಸ್ತುಗಳೂ, ತನದು-ಸ್ವಕೀಯವಾದ, ವಿಭೂತಿಯಾನಮೈಯುಮ್-ವಿಭೂತಿಯಾದ ಪ್ರಕಾರವನ್ನೂ, (ವಿಭೂತಿಎಂದರೆ ನಿಯಂತವ್ಯವರ್ಗವು) ಇಂದಿರರ್ಕ್ಕಮೈಂದನುಕ್ಕು- ಇಂದ್ರಪುತ್ರನಾದ ಅರ್ಜುನನಿಗೆ, ಇಯಂಬಿನರ್- ಉಪದೇಶಿಸಿದನು. .... ॥೧೧॥

ಇತಿ ಶ್ರೀಮದ್ಗೀತಾರ್ಥಸಾರೇ ದಶಮಾಧ್ಯಾಯಃ.

ಶ್ರೀಕೃಷ್ಣಾಯ ಪರಮಾತ್ಮನೇ ಶ್ರೀಪಾರ್ಥಸೂತ್ರಾಯನಮೋನಮಃ.



ಶ್ರಿಯೈ ನಮಃ



ಶ್ರೀಕೃಷ್ಣಾಯ ಪರಮಾತ್ಮನೇನಮಃ.

ಅಥ ಶ್ರೀಮದ್ಗೀತಾರ್ಥಸಾರೇ ಏಕಾದಶೋಧ್ಯಾಯಃ

## ಶ್ರೀವಿಶ್ವರೂಪಾಧ್ಯಾಯಃ.



ಶ್ಲೋ॥ ಅರ್ಜುನಉವಾಚ॥ಮದನುಗ್ರಹಾಯಪರಮಂಗು
ಹ್ಯಮಧ್ಯಾತ್ಮಸಂಜ್ಞಿತಂ । ಯತ್ತ್ವಯೋಕ್ತಂವಚ
ಸ್ತೇನ ಮೋಹೋಯಂವಿಗತೋಮಮ ॥ ॥೧॥

ಪ॥ ಅರ್ಜನಃ- ಉವಾಚ॥ ಮದನುಗ್ರಹಾಯ- ಪರಮಂ- ಗುಹ್ಯಂ- ಅಧ್ಯಾತ್ಮ ಸಂಜ್ಞಿತಂ। ಯತ್- ತ್ವಯಾ- ಉಕ್ತಂ- ವಚಃ- ತೇನ- ಮೋಹಃ- ಅಯಂ- ವಿಗತಃ- ಮಮ ॥ ... ... .... ... ... ... *

ಅ॥ ಅರ್ಜುನ ಉವಾಚ॥ ಅರ್ಜುನನು ಹೇಳಿದನು. ಮದನುಗ್ರಹಾಯ-ನನ್ನನ್ನನುಗ್ರಹಿಸುವುದಕ್ಕೋಸ್ಕರ, (ಶ್ರೀ) ನನ್ನ ದುಃಖವನ್ನು ಹೋಗಲಾಡಿಸುವುದಕ್ಕೋಸ್ಕರ, ಪರಮಂ - ಶ್ರೇಷ್ಠವಾಗಿಯೂ, (ಶಂ) ನಿರತಿಶಯವಾಗಿಯೂ, ಗುಹ್ಯಂ-ತತ್ವಾರ್ಥದೊಡನೆ ಕೂಡಿರುವ ರಹಸ್ಯಾರ್ಥವಾದ, (ರಾ) ಶ್ರೇಷ್ಠವಾಗಿರುವ ರಹಸ್ಯವಾದ, ಅಧ್ಯಾತ್ಮಸಂಜ್ಞಿತಂ-(ಶಂ॥ ಶ್ರೀ) ಆತ್ಮಾನಾತ್ಮವಿವೇಕವನ್ನುಂಟುಮಾಡುವ (ರಾ) ಅಧ್ಯಾತ್ಮ ಎಂಬ ಹೆಸರುಳ್ಳ, (ಗೀ॥ ವಿ) ಭಗವಂತನನ್ನು ಕುರಿತು ಹೇಳಲ್ಪಡುವ ವಾಕ್ಯವಾದ, ಯದ್ವಚಃ- ಯಾವವಾಕ್ಯವು, ತ್ವಯಾ-ನಿನ್ನಿಂದ, ಉಕ್ತಂ-ಹೇಳಲ್ಪಟ್ಟಿತೋ. ತೇನ- ಆದರಿಂದ, ಮಮಾಯಂಮೋಹಃ -(ಶಂ) ಈ ನನ್ನ ಅವಿವೇಕ ಬುದ್ಧಿಯು, (ರಾ) ದೇಹಾತ್ಮಾಭಿಮಾನರೂಪವಾದ ಈಮೋಹವು, (ಗೀ॥ ವಿ) ಬಂಧುಸ್ನೇಹವೆಂಬೀ ಮೋಹವು,ವಿಗತಃ-ಬಿಟಲ್ಪಟ್ಟಿತು. ... ... ॥೧॥

(ಶಂ॥ ಭಾ॥ ಶ್ರೀಕೃಷ್ಣನು ತನ್ನ ಸಮಸ್ತಗಳಾದ ರೂಪಗಳನ್ನು ದಶಮಾಧ್ಯಾಯದಲ್ಲಿ ಹೇಳಿ ಆದರ ಕಡೆಯಲ್ಲಿ “ ವಿಷ್ಟಭ್ಯಾಹ

ಮಿದಂಕೃತ್ಸ್ನಮೇಕಾಂಶೇನಸ್ಥಿತೋಜಗತ್ ,, (॥೧೦॥೪೨॥) ಎಂದು ಪದೇಶಿಸಲ್ಪಟ್ಟ ವಿಶ್ವರೂಪ ದರ್ಶನವನ್ನು ಮಾಡಬೇಕೆಂಬ ಅಪೇಕ್ಷೆ ಯಿಂದ ಅರ್ಜುನನು ಪ್ರಶ್ನೆಯನ್ನು ಮಾಡುತ್ತಾನೆ. ॥೧॥

(ಶ್ರೀ) ವಿಭೂತಿಪ್ರಭವಂಪ್ರೋಚ್ಯ ಕೃಪಯಾಪರಯಾಹರಿಃ । ದಿದೃಕ್ಷೋರರ್ಜುನಸ್ಯಾಥವಿಶ್ವರೂಪಮದರ್ಶಯತ್॥ ಶಂ॥ಭಾ॥ ಅರ್ಥವೆ

(ರಾ॥ಭಾ॥) ಈ ಪ್ರಕಾರದಿಂದಭಕ್ತಿಯುನಿಷ್ಪನ್ನವಾಗುವುದಕ್ಕಾಗಿ ಯೂ ನಿಷ್ಪನ್ನವಾದ ಭಕ್ತಿಯು ಅಭಿವೃದ್ಧಿಗಾಗಿಯೂ ಸಕಲ ವಸ್ತುಗ ಳಿಗಿಂತಲೂ ವಿಲಕ್ಷಣನಾದ ಪರಮಾತ್ಮನು ತನ್ನ ಅಸಾಧಾರಣವಾದ ಕ ಲ್ಯಾಣಗುಣಗಳೊಡನೆ ಕೂಡ ಸರ್ವ ವಸ್ತುಗಳಿಗೂ ಆತ್ಮನಾಗಿರುವಿಕೆ ಯನ್ನೂ, ಆದ್ದರಿಂದಲೆ ಆ ಪರಮಾತ್ಮನಿಗಿಂತಲೂ ಭಿನ್ನಗಳಾದ. ಸರ್ವವಸ್ತುಗಳೂ ಅವನಿಗೆ ಶರೀರವಾಗಿ ಆ ಪರಮಾತ್ಮಾಧೀನವಾದ ಸ್ವ ರೂಪಸ್ಥಿತಿ ಪ್ರವೃತ್ತಿಯುಳ್ಳವುಗಳಾಗಿರುವಿಕೆಯನ್ನೂ, ದಶಮಾಧ್ಯಾಯ ದಲ್ಲಿ ಹೇಳಿದನು. ಈ ಅರ್ಥಗಳೆಲ್ಲವನ್ನೂ ಸಾಕ್ಷಾತ್ಪರಮಾತ್ಮನಿಂದ ಲೇ ಕೇಳಿ ಇದು ಹೀಗೆಯೇ ಸರಿ ಎಂಬದಾಗಿ ನಿಶ್ಚಯಿಸಿ ಇಂಥಾ ವಿಲ ಕ್ಷಣ ಸ್ವಭಾವದೊಡನೆ ಕೂಡಿರುವ ಪರಮ ಪುರುಷನನ್ನು ಪ್ರತ್ಯಕ್ಷ ವಾಗಿಕಂಡು ಅನುಭವಿಸಬೇಕೆಂಬ ಅಪೇಕ್ಷೆಯಿಂದ ಅರ್ಜುನನು ಪ್ರಶ್ನೆ ಮಾಡುತ್ತಾನೆ. ಇಲ್ಲಿ ಯಾವರೂಪವನ್ನು ನೋಡಬೇಕೆಂಬದಾಗಿ ಅ ರ್ಜುನನು ಪ್ರಾರ್ಥಿಸುತ್ತಾನೊ ಅಂತಹ "ಸರ್ವಾಶ್ಚರ್ಯಮಯಂದೇವ ಮನಂತಂವಿಶ್ವತೋಮುಖಂ ।ತತ್ರೈಕಸ್ಥಂಜಗತ್ಕೃತ್ಸ್ನಂಪ್ರವಿಭ ಕ್ತಮನೇಕಧಾ ,, (೧೧॥ ೧೩) ಎಂಬೀರೂಪವನ್ನೇ ಭಗವತ್ಪ್ರಸಾ ದ ಸಿದ್ಧಿಯಾದ ಬಳಿಕ ಅರ್ಜುನನು ನೋಡುತ್ತಾನೆ. (ಈರೂಪವನ್ನೇ ಮುಂದೆಯೂವಿವರಿಸುತ್ತಾನೆ.)ದೇಹವೇ ಆತ್ಮನೆಂಬ ಮೋಹದಿಂದ ಭ್ರ ಮಿಸುತಲಿರುವ ನನ್ನ ವಿಷಯದಲ್ಲಿ ಅನುಗ್ರಹಾರ್ಥವಾಗಿಯೇ (ಇದರಿಂ ದ ಯುದ್ಧ ಪ್ರೋತ್ಸಾಹನಂ ಮಾಡುವುದಕ್ಕಾಗಿಯೇ ಈ ಉಪದೇಶವಂ ಮಾಡಿದನೆಂಬ ವ್ಯಾಖ್ಯಾನಾಂತರವು ನಿರಸ್ತವಾಯಿತೆಂದರಿಯಬೇಕು.) ಆತ್ಮಸ್ವರೂಪವನ್ನು ಕುರಿತು ತಿಳಿಯಬೇಕಾದ ಪರಮರಹಸ್ಯಾರ್ಥಗಳೆ ಲ್ಲವನ್ನೂ ನೀವು ನನಿಗುಪದೇಶಿಸಲು ಅದಂಕೇಳುವುದರಿಂದ ನನಿಗೆಆತ್ಮ ವಿಷಯವಾಗಿ ಉಂಟಾಗಿರುವ ವ್ಯಾಮೋಹವೆಲ್ಲವು ಪರಿಹಾರವಾಯಿತು.

(ಗೀ॥ ವಿ) ದಶಮಾಧ್ಯಾಯದ ಕಡೆಯಲ್ಲಿ "ವಿಷ್ಟಭ್ಯಾಹಮಿದಂಕೃತ್ಸ್ನ ಮೇಕಾಂಶೇನಸ್ಥಿತೋಜಗತ್" ಎಂಬ ಶ್ಲೋಕದಿಂದ ವ್ಯಾಪ್ತ್ಯುಪಾಸನವಂ ಮಾಡಬೇಕೆಂಬುದಾಗಿ ಸಂಕ್ಷೇಪದಿಂದುಪದೇಶಿಸಿದನು. ಸಂಕ್ಷೇಪದಿಂದುಪದೇಶಿಸಲ್ಪಟ್ಟ ವ್ಯಾಪ್ತರೂಪವು ಬುದ್ಧ್ಯಾರೂಢವಾಗುವುದಿಲ್ಲವಾದುದರಿಂದ ಧ್ಯಾನಯೋಗ್ಯವಾಗಲಾರದು; ಅದ ಕಾರಣ ಯಾವ ವ್ಯಾಪ್ತರೂಪವು ವಿಸ್ತರದಿಂದುಪದೇಶಿಸಲ್ಪಟ್ಟರೆ ಧ್ಯಾನ ಮಾಡಲಿಕ್ಕೆ ಶಕ್ಯವಾಗುವುದೋ ಅಂತಹ ವ್ಯಾಪ್ತರೂಪವು (ಅರ್ಜುನನಿಗೆ ತೋರಿಸಲ್ಪಟ್ಟ ವ್ಯಾಪ್ತರೂಪದಅನುವಾದವನ್ನುಮಾಡುವ) ಈ ಏಕಾದಶಾಧ್ಯಾಯದಲ್ಲಿ ಹೇಳಲ್ಪಡುವುದು. ಪೂರ್ವಾಧ್ಯಾಯದ ಕಡೇ ಶ್ಲೋಕದಿಂದ ಹೇಳಲ್ಪಟ್ಟ ವ್ಯಾಪ್ತರೂಪವನ್ನು ನೋಡಲಿಚ್ಛಿಸುವ ಅರ್ಜುನನು, ತನಗೆ ಭಗವದುಪದಿಷ್ಟವಾದ ಹಿಂದಿನ ಅರ್ಥಗಳನ್ನು ಅನುವಾದ ಮಾಡುವಂತವನಾಗಿ ನಾಲ್ಕು ಶ್ಲೋಕಗಳಿಂದ ಪರಮಪುರುಷನನ್ನು ಪ್ರಾರ್ಥಿಸುತ್ತಾನೆ. ಎಲೈ ಶ್ರೀ ಕೃಷ್ಣನೇ! ನನ್ನನ್ನನುಗ್ರಹಿಸುವುದಕ್ಕಾಗಿಯೇ ಉತ್ತಮವಾಗಿಯೂ, ಆತ್ಮಸ್ವರೂಪ ಪ್ರತಿಪಾದಕವಾಗಿರುವುದರಿಂದ ಅಧ್ಯಾತ್ಮ ಸಂಜ್ಞಿತವಾಗಿಯೂ ಇರುವ (ಎಂದರೆ "ಅಶೋಚ್ಯಾನನ್ವಶೋಚಸ್ತ್ವಂ" (೨॥೧೧) ಎಂಬದೇ ಮೊದಲಾದ ಆರನೇ ಅಧ್ಯಾಯ ಪರ್ಯಂತವಾಗಿ ಇದ್ದಂಥ) ಯಾವ ವಾಕ್ಯಗಳು ಹೇಳಲ್ಪಟ್ಟವೋ ಅವುಗಳಿಂದ ಈ ನನ್ನ ಅಜ್ಞಾನವು ಕೆಡಲ್ಪಟ್ಟಿತೆಂದು ತಾತ್ಪರ್ಯವು. ... ... ॥೧॥

ಶ್ಲೋ॥ ಭವಾಪ್ಯಯೌಹಿಭೂತಾನಾಂಶ್ರುತೌವಿಸ್ತರಶೋ
ಮಯಾ । ತ್ವತ್ತಃಕಮಲಪತ್ರಾಕ್ಷ ಮಾಹಾತ್ಮ್ಯಮಪಿ
ಚಾವ್ಯಯಂ। ... ... ॥೨॥

ಪ॥ ಭವಾಪ್ಯಯೌ- ಹಿ- ಭೂತಾನಾಂ- ಶ್ರುತೌ- ವಿಸ್ತರಶಃ- ಮಯಾ । ತ್ವತ್ತಃ- ಕಮಲಪತ್ರಾಕ್ಷ- ಮಾಹಾತ್ಮ್ಯಂ- ಅಪಿ- ಚ- ಅವ್ಯಯಂ॥

ಅ॥ ಹೇ ಕಮಲಪತ್ರಾಕ್ಷ-ತಾವರೆಯ ಪುಷ್ಪದ ದಳದಂತೆ ಒಪ್ಪುತ್ತಿರುವ ಕಣ್ಣುಗಳುಳ್ಳ ಎಲೈ ಶ್ರೀಕೃಷ್ಣನೆ (ತ್ವತ್ತಃ-ನಿನ್ನಿಂದ) ಭೂತಾನಾಂ-ನಿನಗಿಂತಲೂ ಭಿನ್ನಗಳಾದ ಸರ್ವ ಭೂತಗಳಿಗೂ

ತ್ವತ್ತಃ- ಪರಮಾತ್ಮನಾದ ತಮ್ಮದೆಶೆಯಿಂದ, ಭವಾಪ್ಯಯೌ- ಉತ್ಪ ತ್ತಿಪ್ರಲಯಗಳು, ವಿಸ್ತರಶಃ-ವಿಸ್ತಾರವಾಗಿ, ಮಯಾ-ನನ್ನಿಂದ, ಶ್ರು ತೌಹಿ- ಕೇಳಲ್ಪಟ್ಟವಲ್ಲವೊ ; ಅವ್ಯಯಂ - ನಿತ್ಯವಾಗಿರುವ, ಮಾ ಹಾತ್ಮ್ಯಮಪಿಚ- ಮಾಹಾತ್ಮ್ಯವೂ, (ರಾ) ಚೇತನಾಚೇತನವಸ್ತು ಶೇಷಿತ್ವವೂ ಜ್ಞಾನಬಲೈಶ್ವರ್ಯಾದಿಕಲ್ಯಾಣಗುಣಗಳಿಂದ ನಿಮಿಗೇನೇ ಅತಿಶಯಿತವಾದ ಪರತ್ವವೂ ಸರ್ವಾಧಾರತ್ವವೂ ಸರ್ವವ್ಯಾಪಾರ ಪ್ರವ ರ್ತಯಿತೃತ್ವವೇ ಮೊದಲಾದ ತಮ್ಮ ಮಹಿಮೆಯೂ, ಶ್ರುತಂಹಿ-ಕೇ ಳಲ್ಪಟ್ಟಿತಲ್ಲವೇ. ॥೨॥

ಶ್ರೀ॥ ಮಾಹಾತ್ಮ್ಯಮಪಿಚ- ಸೃಷ್ಟಿಸ್ಥಿತಿಯೇ ಮೊದಲಾದವು ಗಳಿಗೆ ಕರ್ತಾ ಆಗಿಯೂ, ಸರ್ವನಿಯಂತಾ ಆಗಿಯೂ, ಶುಭಾಶುಭ ಕರ್ಮಗಳನ್ನು ಮಾಡಿಸುವಂತವರಾಗಿಯೂ ಬಂಧ ಮೋಕ್ಷಾದಿ ವಿಚಿತ್ರ ಫಲಗಳನ್ನು ಕೊಡುವಂತವರಾಗಿಯೂ ಇರುವಂತವರಾದರೂ ಅವುಗಳಿಂದ ವಿಕಾರ ಶೂನ್ಯರಾಗಿಯೂ ಪಕ್ಷಪಾತವಿಲ್ಲದವರಾಗಿಯೂ ಕರ್ಮಸಂಬಂಧ ವಿಲ್ಲದವರಾಗಿಯೂ ಉದಾಸೀನರಾಗಿಯೂ ಇರುವ ನಾನಾವಿಧ ಮಾಹಾತ್ಮ್ಯವನ್ನೂ. ॥೨॥

( ರಾ॥ ಭಾ॥ ) ಎಲೈ ಕಮಲ ಪತ್ರಾಕ್ಷನಾದ ಶ್ರೀ ಕೃಷ್ಣನೇ ೭ನೇ ಅಧ್ಯಾಯದ ಮೊದಲು ಹತ್ತನೇ ಅಧ್ಯಾಯದವರೆಗೂ ನಿಮಿಗಿಂ ತಲೂ ಇತರರಾದ ಸರ್ವಪ್ರಾಣಿಗಳಿಗೂ ಪರಮಾತ್ಮನಾದ ನಿನ್ನದೆಶೆ ಯಿಂದಲೇ ಸೃಷ್ಟಿ ಪ್ರಲಯಗಳುಂಟಾಗುವುವೆಂಬೀ ವಿಷಯವು ವಿ ಸ್ತಾರವಾಗಿ ಕೇಳಲ್ಪಟ್ಟಿತು. ಮತ್ತು ಚೇತನಾಚೇತನ ರೂಪವಾದ ಸರ್ವವಸ್ತುಗಳಿಗೂ ನೀವು ಆಧಾರ ಭೂತರಾಗಿರುವ ಸ್ವಭಾವವೂ (ಎಂ ದರೇ ಚೇತನಾಚೇತನ ವಸ್ತು ಶೇಷಿತ್ವವು) ಜ್ಞಾನ ಬಲೈಶ್ವರ್ಯಾದಿ ಕ ಲ್ಯಾಣ ಗುಣಗಳಿಂದ ನಿಮಿಗೇನೆ ಅತಿಶಯಿತವಾಗಿರುವ ಪರತ್ವವೂ ಸರ್ವವ್ಯಾಪಾರಪ್ರವರ್ತಯಿತೃತ್ವವೆಂಬಿದೇ ಮೊದಲಾದ ನಿಮ್ಮ ಮಾ ಹಾತ್ಮ್ಯವನ್ನೂ ಸವಿಸ್ತರವಾಗಿ ಕೇಳಿದೆನು. ... ॥೭॥

ಶ್ಲೋ॥ ಏವಮೇತದ್ಯಥಾತ್ಥ ತ್ವಮಾತ್ಮಾನಂಪರಮೇ

ಶ್ವರ । ದ್ರಷ್ಟುಮಿಚ್ಛಾಮಿತೇರೂಪಮೈಶ್ವರಂ ಪುರು
ಷೋತ್ತಮ ॥ ... ... ॥೩॥

ಪ॥ ಏವಂ-ಏತತ್-ಯಥಾ-ಆತ್ಥ-ತ್ವಂ-ಆತ್ಮಾನಂ-ಪರಮೇಶ್ವರ । ದ್ರಷ್ಟುಂ-ಇಚ್ಛಾಮಿ-ತೇ-ರೂಪಂ-ಐಶ್ವರಂ ಪುರುಷೋತ್ತಮ॥

ಅ॥ ಹೇ ಪರಮೇಶ್ವರ-ಎಲೈ ಪರಮೇಶ್ವರನಾದ ಶ್ರೀ ಕೃಷ್ಣನೇ! ತ್ವಂ-ನೀನು, ಆತ್ಮಾನಂ-ನಿನ್ನನ್ನು ಕುರಿತು, ಯಥಾ-ಹೇಗೆ, ಆತ್ಥ-ಹೇಳಿರುತ್ತೀರೋ, ಏವಮೇತತ್-ಅದುಹಾಗೆಯೇಸರಿ. ಹೇಪುರುಷೋತ್ತಮ-ಎಲೈ ಪುರುಷಶ್ರೇಷ್ಠನಾದ ಶ್ರೀಕೃಷ್ಣನೇ ! ತೇ-ನಿನ್ನ, ಐಶ್ವರಂ ರೂಪಂ- (ಶಂ॥ ಶ್ರೀ) ಜ್ಞಾನ-ಐಶ್ವರ್ಯ-ಬಲ-ಶಕ್ತಿ - ವೀರ್ಯ-ತೇಜಸ್ಸುಗಳೆಂಬೀ ಷಡ್ಗುಣಗಳಿಂದೊಪ್ಪಿದ ಶ್ರೀ ವಿಷ್ಣುರೂಪವನ್ನು, (ಗೀ॥ ವಿ) ಅಚಿಂತ್ಯ ಶಕ್ತಿಯುಳ್ಳ ರೂಪವನ್ನು, ದ್ರಷ್ಟುಮಿಚ್ಛಾಮಿ-ನೋಡಬೇಕೆಂದಿಚ್ಛೈಸುತ್ತೇನೆ. ... ... ॥೩॥

(ರಾ॥ ಭಾ॥) ಎಲೈ ಪರಮೇಶ್ವರನಾದ ಶ್ರೀಕೃಷ್ಣನೆ, ತಮ್ಮನ್ನು ಕುರಿತು ಹೇಳಿದ್ದೆಲ್ಲವನ್ನು ತಿಳಿದುಕೊಂಡೆನು. ಆಶ್ರಿತರಲ್ಲುಂಟಾದ ವಾತ್ಸಲ್ಯಕ್ಕೆ ಸಮುದ್ರನಾದ ಎಲೈ ಪುರುಷೋತ್ತಮನೆ! ನಿಮ್ಮ (ಪರಮೇಶ್ವರರಾದ ನೀವು ಸರ್ವಚೇತನರುಗಳನ್ನು ಅಂತರಾತ್ಮನಾಗಿದ್ದುಕೊಂಡು ಆಳುವುದರಲ್ಲಿಯೂ, ರಕ್ಷಿಸುವುದರಲ್ಲಿಯೂ, ಸರ್ವಜಗತ್ತನ್ನುಸೃಷ್ಟಿಸುವುದರಲ್ಲಿಯೂ,ಸಂಹಾರಮಾಡುವುದರಲ್ಲಿಯೂ,ಭರಣಮಾಡುವುದರಲ್ಲಿಯೂ, ಸಮಸ್ತ ಕಲ್ಯಾಣ ಗುಣಾಕರರಾಗಿರುವುದರಲ್ಲಿಯೂ,ಆದುದರಿಂದಲೆಸರ್ವಸ್ಮಾತ್ಪರನಾಗಿರುವಿಕೆಯಲ್ಲಿಯೂ,ಸಕಲೇತರವಿಲಕ್ಷಣನಾಗಿರುವಿಕೆಯಲ್ಲಿಯೂ, ಅನುಗುಣವಾಗಿರುವ) ದಿವ್ಯರೂಪವನ್ನು ಸಾಕ್ಷಾತ್ಕರಿಸಲಪೇಕ್ಷಿಸುತ್ತೇನೆ. ... ॥೩॥

ಶ್ಲೋ॥ ಮನ್ಯಸೇಯದಿತಚ್ಛಕ್ಯಂ ಮಯಾದ್ರಷ್ಟುಮಿ
ತಿಪ್ರಭೋ । ಯೋಗೇಶ್ವರತತೋಮೇತ್ವಂ ದರ್ಶಯಾ
ತ್ಮಾನಮವ್ಯಯಂ॥ ... ... ॥೪॥

ಪ॥ ಮನ್ಯಸೇ-ಯದಿ-ತತ್-ಶಕ್ಯಂ-ಮಯಾ-ದ್ರಷ್ಟುಂ-ಇತಿ ಪ್ರಭೋ। ಯೋಗೇಶ್ವರ-ತತಃ-ಮೇ-ತ್ವಂ-ದರ್ಶಯ-ಆತ್ಮಾನಂ-ಅವ್ಯಯಂ॥

ಅ॥ ಹೇಪ್ರಭೋ-ಎಲೈ ಜಗತ್ಪ್ರಭುವಾದ ಶ್ರೀಕೃಷ್ಣಸ್ವಾಮಿಯೇ ! ತತ್-ಆರೂಪವು, ಮಯಾ-ನನ್ನಿಂದ, ದ್ರಷ್ಟುಂ-ನೋಡು ವುದಕ್ಕೆ, ಶಕ್ಯಮಿತಿ-ಶಕ್ಯವಾಗುವುದೆಂದು, ಮನ್ಯಸೇಯದಿ-ಎಣಿಸು ವಂತವರಾದರೆ, ತತಃ-ತರುವಾಯ, (ಅಥವಾ) ಆವಾಗ, ಹೇಯೋಗೆ ಶ್ವರ-ಯೋಗಿಗಳಿಗೆ ಪ್ರಭುವಾದ ಎಲೈ ಸ್ವಾಮಿಯೇ, ತ್ವಂ-ನೀ ನು, ಅವ್ಯಯಂ-ನಾಶರಹಿತವಾದ,ಆತ್ಮಾನಂ-ನಿಮ್ಮರೂಪವನ್ನು, ಮೇ-ನನಿಗೆ, ದರ್ಶಯ-ತೋರಿಸುವಂತವನಾಗು. ... ॥೪॥

(ರಾ॥ ಭಾ॥) ಸರ್ವಸ್ವಾಮಿಯಾಗಿಯೂ, ಜ್ಞಾನಾದಿ ಕಲ್ಯಾಣಗು ಣನಿಧಿಯಾಗಿಯೂ, ಇರುವ ಎಲೈ ಸ್ವಾಮಿಯೇ ! ಸರ್ವವನ್ನು ಸಾ ಕ್ಷಾತ್ಕರಿಸುವಂಥಾದ್ದಾಗಿಯೂ ಸರ್ವಾಧಾರ ಭೂತವಾಗಿಯೂಇರುವ ತಮ್ಮ ದಿವ್ಯರೂಪವು ನನ್ನಿಂದ ಸಾಕ್ಷಾತ್ಕರಿಸುವುದಕ್ಕೆ ಸಾಧ್ಯವಾಗು ವುದೆಂಬದಾಗಿ ನೀವು ನೆನೆಸುವಂತವರಾದರೆ (ಆಕಾರಣದಿಂದಲೆ) ನೀವು ನನಿಗೆ (ಸ್ವರೂಪದಲ್ಲಿಯೂ, ಗುಣಗಳಲ್ಲಿಯೂ, ವಿಭೂತಿಗಳಲ್ಲಿಯೂ, ಸ್ವಲ್ಪವುಕೊರತೆಯಿಲ್ಲದಂತೆ)ತಮ್ಮರೂಪವನ್ನುತೋರಿಸಬೇಕು. ॥೪॥

ಶ್ರೀಭಗವಾನುವಾಚ ॥ ಪಶ್ಯಮೇಪಾರ್ಥರೂಪಾಣಿ ಶತ
ಶೋಥಸಹಸ್ರಶಃ |ನಾನಾವಿಧಾನಿದಿವ್ಯಾನಿನಾನಾವರ್ಣಾ
ಕೃತೀನಿಚ ॥ ... ... ॥೫॥

ಪ॥ ಶ್ರೀಭಗವಾನ್-ಉವಾಚ॥ ಪಶ್ಯ-ಮೇ-ಪಾರ್ಥ-ರೂಪಾಣಿ-ಶತಶಃ-ಅಥ-ಸಹಸ್ರ ಶಃ| ನಾನಾವಿಧಾನಿ-ದಿವ್ಯಾನಿ-ನಾನಾವರ್ಣಾಕೃತೀನಿ-ಚ ॥

ಅ॥ ಶ್ರೀ ಭಗವಾನುವಾಚ-ಶ್ರೀ ಕೃಷ್ಣನು ಹೇಳಿದನು. ಹೇ ಪಾರ್ಥ-ಎಲೈ ಕುಂತೀ ಪುತ್ರನಾದ ಶ್ರೀಕೃಷ್ಣನೇ ! ನಾನಾವಿಧಾನಿ-ಅನೇಕ ಪ್ರಕಾರಗಳಾಗಿಯೂ,ದಿವ್ಯಾನಿ-ಲೋಕವಿಲಕ್ಷಣಗಳಾಗಿಯೂ, (ರಾ॥ ಗೀ॥ ವಿ) ಅಪ್ರಾಕೃತಗಳಾಗಿಯೂ, ನಾನಾವರ್ಣಾಕೃತೀನಿಚ-ನಾನಾವರ್ಣಗಳೇನು ನಾನಾ ಅವಯವಗಳೇನು ಅವುಗಳುಳ್ಳದ್ದಾಗಿ ಗಿಯೂ, ಶತಶಃ-ನೂರುಬಗೆಯಾಗಿಯೂ, ಅಥ-ಮತ್ತೂ, ಸಹಸ್ರಶಃ-ಅನೇಕಗಳಾಗಿಯೂ ಇರುವ,ರೂಪಾಣಿ-ರೂಪಗಳನ್ನು,ಪಶ್ಯ-ನೋಡು. ॥೫॥

(ರಾ॥ ಭಾ॥) ಈ ಪ್ರಕಾರವಾಗಿ ವಿಶ್ವರೂಪಿಯಾದ ಪರಮಾತ್ಮನನ್ನು ನೋಡಬೇಕೆಂಬ ಕುತೂಹಲದೊಡನೆ ಕೂಡಿ ಹರ್ಷದಿಂದ ಗದ್ಗದ ಕಂಠನಾಗಿರುವ ಅರ್ಜುನನಿಂದ ಪ್ರಾರ್ಥಿಸಲ್ಪಟ್ಟ ಭಗವಂತನು ಹೇಳುತ್ತಾನೆ. ಎಲೈ ಅರ್ಜುನನೇ! ನೂರು ಸಾವಿರವೆಂಬೀ ಪ್ರಕಾರದಿಂದ ಪರಾರ್ಧ ಪರ್ಯಂತವಾಗಿ ನೋಡಿದರೂ ಇನ್ನೂ ನಾನಾವಿಧಗಳಾದ ವರ್ಣಗಳೊಡನೆ ಕೂಡಿಯೂ ನಾನಾ ರೂಪಗಳೊಡನೆ ಕೂಡಿಯೂ ಇರುವ ಸರ್ವಾಧಾರ ಭೂತಗಳಾಗಿರುವ ದಿವ್ಯಗಳಾದ ನನ್ನ ರೂಪಗಳನ್ನು ಸವಿಶೇಷವಾಗಿ ನೋಡು; ತೋರಿಸುವೆನು. ॥೫॥

ಶ್ಲೋ॥ ಪಶ್ಯಾದಿತ್ಯಾನ್ವಸೂನ್ರುದ್ರಾನಶ್ವಿನೌಮರುತಸ್ತಥಾ । ಬಹೂನ್ಯದೃಷ್ಟಪೂರ್ವಾಣಿ ಪಶ್ಯಾಶ್ಚರ್ಯಾಣಿ ಭಾರತ ... ... ॥೬॥

ಪ॥ ಪಶ್ಯ- ಆದಿತ್ಯಾನ್- ವಸೂನ್ - ರುದ್ರಾನ್ - ಅಶ್ವಿನೌ- ಮರುತಃ- ತಥಾ । ಬಹೂನಿ- ಅದೃಷ್ಟಪೂರ್ವಾಣಿ- ಪಶ್ಯ-ಆಶ್ಚರ್ಯಾಣಿ- ಭಾರತ ॥

ಅ॥ ಹೇ ಭಾರತ-ಭರತರಾಜ ವಂಶ್ಯನಾದ ಎಲೈ ಅರ್ಜುನನೇ! (ನನ್ನ ಒಂದೊಂದು ರೂಪದಲ್ಲಿಯೂ) ಆದಿತ್ಯಾನ್- ದ್ವಾದಶಾದಿತ್ಯರನ್ನೂ, ವಸೂನ್- ಅಷ್ಟವಸುಗಳನ್ನೂ, ರುದ್ರಾನ್- ಹನ್ನೊಂದು ರುದ್ರರನ್ನೂ, ಅಶ್ವಿನೌ- ಎರಡು ಅಶ್ವಿನೀ ದೇವತೆಗಳನ್ನೂ, ತಥಾ- ಆ ಪ್ರಕಾರವೇ, ಮರುತಃ -- ನಲವತ್ತೊಂಭತ್ತು ಮರುದ್ಗಣಗಳನ್ನೂ, (ಮರುತ್ತೆಂದರೆ ವಾಯುವು) ಪಶ್ಯ-ನೋಡು, ಬಹೂನಿಅದೃಷ್ಟಪೂರ್ವಾಣಿಆಶ್ಚರ್ಯಾಣಿ-ಸರ್ವಲೋಕಗಳಲ್ಲಿಯೂ ಸರ್ವಶಾಸ್ತ್ರಗಳಲ್ಲಿಯೂ ಹಿಂದೆ ನೋಡಲ್ಪಡದ ನಾನಾ ಆಶ್ಚರ್ಯಗಳನ್ನೂ, ಪಶ್ಯ-ನೋಡುವಂತವನಾಗು. ... ... ... ॥೬॥

(ರಾ॥ ಭಾ॥) ನನ್ನ ಒಂದೊಂದು ರೂಪದಲ್ಲಿಯೂ ಹನ್ನೆರಡು ಅಶ್ವಿನೀ ದೇವತೆಗಳನ್ನೂ ನಲವತ್ತೊಂಭತ್ತು ವಾಯುಗಳನ್ನೂ ಮತ್ತು ಈ ರೀತಿಯಾಗಿಯೇ ಲೋಕದಲ್ಲಿ ಪ್ರತ್ಯಕ್ಷವಾಗಿ ಕಾಣಬರುವಾದವುಗಳನ್ನೂ, ಶಾಸ್ತ್ರಗಳಿಂದ ತಿಳಿಯಲು ಸಾಧ್ಯವಾದವುಗಳನ್ನೂ, ಯಾವಯಾವ ಲೋಕಗಳಲ್ಲಿ ಯಾವಯಾವ ಆಶ್ಚರ್ಯಗಳುಂಟೋ ಅವೆಲ್ಲವನ್ನೂ, ನೋಡೆಂದು ತಾತ್ಪರ್ಯವು. ... ॥೬॥

ಶ್ಲೋ॥ ಇಹೈಕಸ್ಥಂಜಗತ್ಕೃತ್ಸ್ನಂ ಪಶ್ಯಾದ್ಯಸಚರಾಚರಂ । ಮಮದೇಹೇ ಗುಡಾಕೇಶ ಯಚ್ಚಾನ್ಯದ್ದ್ರಷ್ಟುಮಿಚ್ಛಸಿ ॥ ... ... ॥೭॥

ಪ॥ ಇಹ- ಏಕಸ್ಥಂ- ಜಗತ್ - ಕೃತ್ಸ್ನಂ- ಪಶ್ಯ- ಅದ್ಯ- ಸಚರಾಚರಂ | ಮಮ- ದೇಹೇ- ಗುಡಾಕೇಶ- ಯತ್- ಚ ಅನ್ಯತ್-ದ್ರಷ್ಟುಂ-ಇಚ್ಛಸಿ॥

ಅ॥ ಹೇ ಗುಡಾಕೇಶ- ಎಲೈ ಅರ್ಜುನನೆ, ಸಚರಾಚರಂ- ಸ್ಥಾವರಜಂಗಮಗಳೊಡನೆ ಕೂಡಿರುವ, ಕೃತ್ಸ್ನಂ-ಸಕಲವಾದ, ಜಗತ್-ಜಗತ್ತನ್ನೂ, ಅನ್ಯತ್‌ಯದ್ದ್ರಷ್ಟುಮಿಚ್ಛಸಿ - ಬೇರೆಯಾವದನ್ನು ನೀನು ನೋಡಬೇಕೆಂಬದಾಗಿ ಇಚ್ಛಿಸುವಿಯೋ,(ಶಂ॥ಶ್ರೀ) ಈ ಯುದ್ಧದಲ್ಲುಂಟಾಗುವಯಾವಜಯಾಪಜಯಗಳನ್ನು ನೋಡಬೇಕೆಂದಿಚ್ಛಿಸುತ್ತಿಯೋ, ತಚ್ಚ- ಅದನ್ನೂ, ಇಹ-ಮಮದೇಹೇ- ಈ ನನ್ನ ದೇಹದಲ್ಲಿ, ಏಕಸ್ಥಂ-ಒಂದುಕಡೆ ಇರುವದಾಗಿ, (ಶ್ರೀ) ಅವಯವ ರೂಪದಿಂದ ಒಂದುಕಡೆ ಇರುವುದಾಗಿ, (ರಾ) ನನ್ನ ಅವಯವದಲ್ಲೊಂದು ಭಾಗದಲ್ಲಿರುವುದಾಗಿ, ಅದ್ಯ- ಈಗ, ಪಶ್ಯ- ನೋಡು. ॥೭॥

(ರಾ॥ ಭಾ॥) ಈ ನನ್ನ ಒಂದು ಶರೀರದಲ್ಲಿ ಆದರಲ್ಲಿಯೂ ಒಂದುಪ್ರದೇಶದಲ್ಲಿ ಚೇತನಾಚೇತನ ರೂಪವಾದ ಲೋಕಗಳೆಲ್ಲವನ್ನೂ ಚನ್ನಾಗಿ ನೋಡು. ಇನ್ನು ಯಾವದಾದರೂ ನೋಡಬೇಕಾಗಿದ್ದರೂ ಅದನ್ನು ಕೂಡ ಈ ನನ್ನ ಶರೀರದ ಏಕದೇಶಮಾತ್ರದಲ್ಲಿಯೆ ನೋಡು.

ಶ್ಲೋ॥ನತುಮಾಂಶಕ್ಷ್ಯಸೇದ್ರಷ್ಟುಮನೇನೈವಸ್ವಚಕ್ಷುಷಾ । ದಿವ್ಯಂದದಾಮಿತೇಚಕ್ಷುಃ ಪಶ್ಯಮೇಯೋಗಮೈಶ್ವರಂ॥ ... ... ॥೮॥

ಪ॥ ನ- ತು- ಮಾಂ- ಶಕ್ಷ್ಯಸೇ- ದ್ರಷ್ಟುಂ - ಅನೇನ- ಏವ- ಸ್ವಚಕ್ಷುಷಾ । ದಿವ್ಯಂ- ದದಾಮಿ- ತೇ- ಚಕ್ಷುಃ- ಪಶ್ಯ- ಮೇ- ಯೋಗಂ- ಐಶ್ವರಂ ||

ಅ॥ ಅನೇನಸ್ವಚಕ್ಷುಷೈವ- ಈನನ್ನ ಕಣ್ಣಿನಿಂದಲೇ, ಮಾಂ- ನನ್ನನ್ನು, ದ್ರಷ್ಟುಂ - ನೋಡುವುದಕ್ಕೆ, ನಶಕ್ಷ್ಯಸೆ - ಶಕ್ತನಾಗಲಾರೆ. ದಿವ್ಯಂ - ಜ್ಞಾನಸ್ವರೂಪವಾದ, (ರಾ) ಅಪ್ರಾಕೃತವಾದ, ಚಕ್ಷುಸ್ತೇದದಾಮಿ - ಕಣ್ಣನ್ನು ನಿನಿಗೆ ಕೊಡುವೆನು, ಮೇಐಶ್ವರಂ

ಯೋಗಂಪಶ್ಯ- ನನ್ನ ಅಚಿಂತ್ಯಸಾಮರ್ಥ್ಯಾತಿಶಯವನ್ನು ನೋಡು. (ಶ್ರೀ) ನನ್ನ ಅಘಟಿತ ಘಟನಾ ಸಾಮರ್ಥ್ಯವನ್ನು ನೋಡು. (ರಾ) ನನ್ನ ಅನಂತವಾದ ಜ್ಞಾನಾದಿ ಯೋಗವನ್ನೂ ಅನಂತವಾದ ವಿಭೂತಿ ಯೋಗವನ್ನೂ ನೋಡು. ... ... ||೮||

(ರಾ|| ಭಾ||) ನಾನು ನನ್ನ ಶರೀರದ ಏಕದೇಶದಲ್ಲಿ ಲೋಕವೆಲ್ಲವನ್ನೂ ತೋರಿಸುವೆನು, ನೀನೋ ಅಲ್ಪವಾದ ಪರಿಮಿತವಾಗಿರುವ ವಸ್ತುಗಳನ್ನು ಗ್ರಹಿಸುವ ಚರ್ಮಚಕ್ಷುಸ್ಸಿನಿಂದ ಸಕಲೇತರ ವಿಲಕ್ಷಣನಾಗಿಯೂ ಅಪರಿಮೇಯನಾಗಿಯೂ ಇರುವ ನನ್ನನ್ನು ನೋಡುವುದಕ್ಕೆ ಶಕ್ತನಾಗಲಾರೆ. ಆದುದರಿಂದ ನಿನಿಗೆ ಅಪ್ರಾಕೃತವಾಗಿಯೂ ನನ್ನನ್ನು ನೋಡುವುದಕ್ಕೆ ಯೋಗ್ಯವಾಗಿಯೂ ಇರುವ ಕಣ್ಣನ್ನು ಕೊಡುವೆನು. ನನ್ನ ಪರತ್ವಕ್ಕೆ ಅನುಗುಣವಾದ ಜ್ಞಾನಶಕ್ತ್ಯಾದಿ ಗುಣಯೋಗವನ್ನೂ ಆ ನನ್ನ ವಿಭೂತಿಯೋಗವನ್ನೂ ನೋಡುವಂತವನಾಗೆಂದಭಿಪ್ರಾಯವು. ... ... ||೮||

ಶ್ಲೋ|| ಸಂಜಯಉವಾಚ। ಏವಮುಕ್ತ್ವಾತತೋರಾಜನ್
ಮಹಾಯೋಗೇಶ್ವರೋಹರಿಃ| ದರ್ಶಯಾಮಾಸಪಾರ್ಥಾಯ
ಪರಮಂರೂಪಮೈಶ್ವರಂ ... ||೯||

ಪ|| ಸಂಜಯಃ-ಉವಾಚ|| ಏವಂ-ಉಕ್ತ್ವಾ-ತತಃ-ರಾಜನ್-ಮಹಾಯೋಗೇಶ್ವರಃ-ಹರಿಃ।ದರ್ಶಯಾಮಾಸ-ಪಾರ್ಥಾಯ-ಪರಮಂ-ರೂಪಂ-ಐಶ್ವರಂ ||

ಅ|| ಸಂಜಯ ಉವಾಚ-ಸಂಜಯನು ಹೇಳಿದನು. ರಾಜನ್-ಎಲೈ ರಾಜನಾದ ಧೃತರಾಷ್ಟ್ರನೇ? ಮಹಾಯೋಗೇಶ್ವರಃ-ಮಹಾಶ್ಚರ್ಯ ಯೋಗಗಳಿಗೆಲ್ಲವೂ ಈಶ್ವರನಾದ, ಹರಿಃ-ಶ್ರೀಕೃಷ್ಣನು, ಏವಂ-ಈಪ್ರಕಾರವಾಗಿ, ಉಕ್ತ್ವಾ-ಹೇಳಿ, ತತಃ-ತರುವಾಯ, ಐಶ್ವರಂ-ಈಶ್ವರ ಸಂಬಂಧವಾದ, ಪರಮಂರೂಪಂ-ಶ್ರೇಷ್ಠವಾದ ರೂಪವನ್ನು, ಪಾರ್ಥಾಯ-ಕುಂತೀಪುತ್ರನಾದ ಅರ್ಜುನನಿಗೆ, ದರ್ಶಯಾಮಾಸ-ತೋರಿಸಿದನು. ... ... ||೯||

(ರಾ|| ಭಾ||) ಈ ಪ್ರಕಾರವಾಗಿ ಹೇಳಿ ಅರ್ಜುನನ ಮಾವನ ಮಗನಾದ ಸಾರಥ್ಯದಲ್ಲಿರುವ ಆ ಶ್ರೀಕೃಷ್ಣನು ಮಹಾಶ್ಚರ್ಯ ಯೋಗ

ಗಳಿಗೆಲ್ಲವೂ ಈಶ್ವರನಾಗಿರುವ ನಾರಾಯಣ ನಾದುದರಿಂದ ತಮ್ಮ ಪರ ಮೇಶ್ವರ ಸಂಬಂಧವಾದ ರೂಪವನ್ನು ಸೋದರತ್ತೆಯ ಮಗನಾದ ಅರ್ಜುನನಿಗೆ ತೋರಿಸಿದನು. ಆರೂಪವೂ ನಾನಾವಿಧವಾಗಿಯೂ ವಿಚಿತ್ರವಾಗಿಯೂ ಸಕಲ ಲೋಕಗಳಿಗೂ ಆಶ್ರಯವಾಗಿಯೂ (ಎಂದರೆ ಸ್ಥಾನವಾಗಿಯೂ) ಸಮಸ್ತವನ್ನೂ ಆಳುವಂತಾದ್ದಾಗಿಯೂ ಇರುವು ದೆಂದರಿಯಬೇಕು. ... ... ॥೯॥

ಶ್ಲೋ॥ ಅನೇಕವಕ್ತ್ರನಯನಮನೇಕಾದ್ಭುತದರ್ಶನಂ|ಅ
ನೇಕದಿವ್ಯಾಭರಣಂದಿವ್ಯಾನೇಕೋದ್ಯತಾಯುಧಂ ॥೧೦॥
ದಿವ್ಯಮಾಲ್ಯಾಮ್ಬರಧರಂದಿವ್ಯಗಂಧಾನುಲೇಪನಂ|ಸರ್ವಾ
ಶ್ಚರ್ಯಮಯಂದೇವಮನಂತಂವಿಶ್ವತೋಮುಖಂ ॥೧೧॥

ಪ॥ ಅನೇಕವಕ್ತ್ರನಯನಂ-ಅನೇಕಾದ್ಭುತದರ್ಶನಂ | ಅನೇಕ ದಿವ್ಯಾಭರಣಂ-ದಿವ್ಯಾನೇಕೋದ್ಯತಾಯುಧಂ ॥ ದಿವ್ಯಮಾಲ್ಯಾಂಬರಧರಂ-ದಿವ್ಯಗಂಧಾನುಲೇಪನಂ | ಸರ್ವಾಶ್ಚರ್ಯಮಯಂ-ದೇವಂ-ಅನಂತಂ-ವಿಶ್ವತೋಮುಖಂ ॥ ... ... *

ಅ॥ ಅನೇಕ ವಕ್ತ್ರನಯನಂ-ಅನೇಕಗಳಾದ ಮುಖಗಳೇನು, ಕಣ್ಣುಗಳೇನು, ಇವುಗಳುಳ್ಳದ್ದಾಗಿಯೂ, ಅನೇಕಾದ್ಭುತದರ್ಶನಂ-ಅನೇಕವಾಗಿಯೂ ಅದ್ಭುತ (ಆಶ್ಚರ್ಯ) ವಾಗಿಯೂ ಇರುವದರ್ಶನ (ನೋಡುವಿಕೆ) ಯುಳ್ಳದ್ದಾಗಿಯೂ, ಅನೇಕ ದಿವ್ಯಾಭರಣಂ-ಅನೇಕಗಳಾದ ದಿವ್ಯಾಭರಣಗಳುಳ್ಳದ್ದಾಗಿಯೂ, ದಿವ್ಯಾನೇಕೋದ್ಯತಾಯುಧಂ - ದಿವ್ಯಗಳಾಗಿಯೂ ಅನೇಕಗಳಾಗಿಯೂ ಇರುವ ಆಯುಧಗಳುಳ್ಳದ್ದಾಗಿಯೂ, ದಿವ್ಯಮಾಲ್ಯಾಂಬರಧರಂ-ದಿವ್ಯವಾದ ಪುಷ್ಪಮಾಲೆಗಳೇನು ವಸ್ತ್ರಗಳೇನು ಇವುಗಳಂ ಧರಿಸಿಕೊಂಡಿರುವುದಾಗಿಯೂ, ದಿವ್ಯಗಂಧಾನುಲೇಪನಂ-ದಿವ್ಯವಾದ ಗಂಧಾನುಲೇಪವುಳ್ಳದ್ದಾಗಿಯೂ, ಸರ್ವಾಶ್ಚರ್ಯಮಯಂ- ಸಮಸ್ತವಾದ ಆಶ್ಚರ್ಯಮಯವಾಗಿಯೂ (ಎಂದರೆ ಆಶ್ಚರ್ಯ ಭೂತಗಳಾದ ಸರ್ವ ತತ್ವಗಳಿಗೂ ಆಶ್ರಯ ಭೂತವಾಗಿಯೂ, ಎಂದರ್ಥವು. ಈ ಪ್ರಕಾರವಾಗಿ ಹೇಳಿದರೆ 'ಅನೇಕಾದ್ಭುತದರ್ಶನಂ, ಎಂಬೀಪದದೊಡನೆ ಪೌನರುಕ್ತ್ಯವೂ ಇರುವುದಿಲ್ಲವು.

“ ಜಗದೇತನ್ಮಹಾಶ್ಚರ್ಯಂ ರೂಪಂಯಸ್ಯಮಹಾತ್ಮನಃ ,, ಇತ್ಯಾದಿ ಪ್ರಮಾಣಗಳೂ ಈ ಅರ್ಥವನ್ನೇ ಪ್ರತಿಪಾದಿಸುವುದು. ಅನಂತಂ-(ಶ್ರೀ॥ ರಾ॥ ಗೀ॥ ವಿ॥) ಸರ್ವಕಾಲಗಳಲ್ಲಿಯೂ ಇರತಕ್ಕ ಸರ್ವವಸ್ತುಗಳಿಗೂ ಆಧಾರವಾಗಿರುವುದರಿಂದ ಸಕಲಲೋಕಗಳಲ್ಲಿಯೂ ಸರ್ವಕಾಲಗಳಲ್ಲಿಯೂ ವ್ಯಾಪಿಸಿರುವುದಾಗಿಯೂ, (ಶಂ) ಕೊನೆಯಿಲ್ಲದವನಾಗಿಯೂ,ವಿಶ್ವತೋಮುಖಂ-ನಾಲ್ಕು ಕಡೆಗಳಲ್ಲಿಯೂ, ಮುಖಗಳುಳ್ಳದ್ದಾಗಿಯೂ ಇರುವ,ದೇವಂ-ಪ್ರಕಾಶಮಾನವಾದ, (ರೂಪಂ- ತನ್ನ ರೂಪವನ್ನು,ದರ್ಶಯಾಮಾಸ-ತೋರಿಸಿದನೆಂದು ಪೂರ್ವೇಣಾನ್ವಯಃ)॥೧೧॥

(ರಾ॥ ಭಾ॥) ತಾತ್ಪರ್ಯವು=ಆರೂಪವೆಂತಾದ್ದೆಂದರೆ, ಅದಂ ವಿವರಿಸುತ್ತಾರೆಂದರಿಯಬೇಕು. ಅನೇಕ ಮುಖಗಳೂ ಕಣ್ಣುಳೂ ವುಳ್ಳದ್ದಾಗಿಯೂ, ( ತಾ॥ ಚಂ॥ ) ನಾನಾ ಜಾತೀಯವಾದ ಅನೇಕ ಮುಖಯೊಗವು ಶ್ರೀ ವಿಶ್ವರೂಪಧ್ಯಾನದಲ್ಲಿ ಶ್ರೀಪಾಂಚರಾತ್ರವೆಂಬ ಭಗವಚ್ಛಾಸ್ತ್ರದಲ್ಲಿ ಪಠಿತವಾಗಿರುವುದು.) ಅನವಧಿಕಾತಿಶಯಾಶ್ಚರ್ಯತ್ವೇನ ಕಾಣಲ್ಪಡುವಂಥಾದ್ದಾಗಿಯೂ, ಅನೇಕಗಳಾದ ದಿವ್ಯಾಭರಣಗಳಿಂದೊಪ್ಪಿರುವುದಾಗಿಯೂ ಅಪ್ರಾಕೃತಗಳಾದ ನಾನಾ ಆಯುಧಗಳಂ ಸ್ವೀಕರಿಸಿರುವುದಾಗಿಯೂ, ದಿವ್ಯವಾದ ಪುಷ್ಪಮಾಲಿಗಳೇನು, ದಿವ್ಯವಸ್ತ್ರಗಳೇನು ಇವುಗಳಂ ಧರಿಸಿಕೊಂಡಿರುವುದಾಗಿಯೂ, ದಿವ್ಯಗಂಧಾನುಲಿಪ್ತವಾಗಿಯೂ, ಆಶ್ಚರ್ಯ ಭೂತಗಳಾದ ಸರ್ವ ತತ್ವಗಳಿಗೂ, ಆಶ್ರಯಭೂತಗಳಾಗಿಯೂ, ಭೂತಭವಿಷ್ಯದ್ವರ್ತಮಾನಗಳೆಂಬ ಕಾಲತ್ರಯವರ್ತಿಗಳಾದ ಸರ್ವಜಗತ್ತಿಗೂ ಆಶ್ರಯವಾಗಿರುವುದರಿಂದ ದೇಶದಿಂದಲಾದರು ಕಾಲದಿಂದಲಾದರೂ ಪರಿಚ್ಛೇದ ಮಾಡುವುದಕ್ಕೆ ಅನರ್ಹವಾಗಿಯೂ, (ಎಂದರೆ ಈರೂಪವು ಈ ಕಾಲದಲ್ಲಿರುವುದಲ್ಲದೆ ಸರ್ವಕಾಲಗಳಲ್ಲಿಯೂ ಇರಲಾರದೆಂಬುವುದು ಕಾಲಪರಿಚ್ಛೇದವು. ಈ ಪ್ರದೇಶದಲ್ಲಿರುವುದಲ್ಲದೆ ಸರ್ವಪ್ರದೇಶಗಳಲ್ಲಿಯೂ ಇರುವಂಥಾದ್ದಲ್ಲವೆಂಬುವುದು ದೇಶಪರಿಚ್ಛೇದವು. ಇಂಥಾಪರಿಚ್ಛೇದವಿಲ್ಲದೆಸರ್ವದೇಶ ಸರ್ವಕಾಲವರ್ತಿಯಾಗಿರುವುದೆಂದರಿಯಬೇಕು.) ನಾಲ್ಕುಕಡೆಯಲ್ಲಿಯೂ ಮುಖಗಳುಳ್ಳದ್ದಾಗಿಯೂ ಪ್ರಕಾಶಮಾನವಾಗಿಯೂ ಇರುವ ತನ್ನ ರೂಪಗಳನ್ನು ಅರ್ಜುನನಿಗೆ ತೋರಿಸಿದನೆಂದು ತಾತ್ಪರ್ಯವು. ॥೧೦|೧೧|

ಶ್ಲೋ॥ ದಿವಿಸೂರ್ಯಸಹಸ್ರಸ್ಯ ಭವೇದ್ಯುಗಪದುತ್ಥಿತಾ ।
ಯದಿಭಾಸ್ಸದೃಶೀಸಾಸ್ಯಾದ್ಭಾಸಸ್ತಸ್ಯಮಹಾತ್ಮನಃ ॥೧೨॥

ಪ॥ ದಿವಿ-ಸೂರ್ಯಸಹಸ್ರಸ್ಯ-ಭವೇತ್-ಯುಗಪತ್-ಉತ್ಥಿತಾ । ಯದಿ-ಭಾಃ-ಸದೃಶೀ-ಸಾ-ಸ್ಯಾತ್-ಭಾಸಃ-ತಸ್ಯ-ಮಹಾತ್ಮನಃ ॥

ಅ॥ ದಿವಿ- ಆಕಾಶದಲ್ಲಿ, ಯುಗಪತ್- ಏಕಕಾಲದಲ್ಲಿ, ಸೂರ್ಯಸಹಸ್ರಸ್ಯ-ಸಹಸ್ರ ಸಂಖ್ಯಾಕರಾದ ಸೂರ್ಯರುಗಳ,ಭಾಃ-ಕಿರಣವು, ಉತ್ಥಿತಾಯದಿ-ಉದಯಿಸಿದರೆ, ಸಾ- ಅದು, ತಸ್ಯಮಹಾತ್ಮನಃ ಆಮಹಾತ್ಮನಾದ ಪರಮ ಪುರುಷನ, ಭಾಸಃ-ಕಾಂತಿಗೆ, ಸದೃಶೀ-ಸಮಾನವಾಗಿ, ಸ್ಯಾತ್-ಆಗುವುದು. ... ... ॥೧೨॥

(ರಾ॥ ಭಾ॥) ತಾತ್ಪರ್ಯವು=ಆಕಾಶದಲ್ಲಿ ಸಹಸ್ರಸೂರ್ಯರು ಒಂದೇ ಕಾದಲ್ಲುದಯಿಸಿದರೆ ಅದು ಎಂಥಾ ಪ್ರಕಾಶವೊ ಅದನ್ನು ಆಮಹಾತ್ಮನ ದಿವ್ಯದೇಹಕ್ಕೆ ಸಮಾನವಾಗಿ ಹೇಳಬಹುದು, ಎಂದರೆ ಅಕ್ಷಯವಾದ ತೇಜಸ್ಸ್ವರೂಪವಾಗಿತ್ತೆಂದು ತಾತ್ಪರ್ಯವು. ॥೧೨॥

ಶ್ಲೋ॥ ತತ್ರೈಕಸ್ಥಂಜಗತ್ಕೃತ್ಸ್ನಂ ಪ್ರವಿಭಕ್ತಮನೇಕಧಾ । ಅಪಶ್ಯದ್ದೇವದೇವಸ್ಯ ಶರೀರೇಪಾಂಡವಸ್ತದಾ ॥೧೩॥

ಪ॥ ತತ್ರ- ಏಕಸ್ಥಂ- ಜಗತ್- ಕೃತ್ಸ್ನಂ- ಪ್ರವಿಭಕ್ತಂ- ಅನೇಕಧಾ । ಅಪಶ್ಯತ್- ದೇವದೇವಸ್ಯ- ಶರೀರೇ- ಪಾಂಡವಃ-ತಥಾ ॥

ಅ॥ ತದಾ-ಆವಾಗ, ಅನೇಕಧಾ- ನಾನಾವಿಧವಾಗಿ, (ಶಂ) ದೇವಪಿತೃ ಮನುಷ್ಯಾದಿ ಭೇದಗಳಿಂದ ನಾನಾವಿಧಗಳಾಗಿ, ಪ್ರವಿಭಕ್ತಂ-ವಿಭಾಗಿಸಲ್ಪಟ್ಟದ್ದಾಗಿರುವ, ಕೃತ್ಸ್ನಂಜಗತ್_ಸಕಲವಾದ ಜಗತ್ತನ್ನು, ದೇವದೇವಸ್ಯ - ದೇವತೆಗಳೆಲ್ಲರಿಗೂ ಪರದೇವತೆಯಾದ ಶ್ರೀ ಕೃಷ್ಣಸ್ವಾಮಿಯ, ತತ್ರಶರೀರೇ-ಆಶರೀರದಲ್ಲಿ, ಏಕಸ್ಥಂ-ಒಂದೇಸ್ಥಳದಲ್ಲಿರುವಂಥಾದ್ದನ್ನಾಗಿ, ಪಾಂಡವಃ- ಪಾಂಡುಪುತ್ರನಾದ ಅರ್ಜುನನು, ಅಪಶ್ಯತ್- ನೋಡಿದನು. ... ... ॥೧೩॥

(ರಾ॥ಭಾ) ಅಳವಿಡಲಶಕ್ಯವಾಗಿರುವ (ದೀರ್ಘವಾಗಿಯೂ, ಅಗಲವಾಗಿಯೂ, ಅನಂತವಾಗಿಯೂ ಇರುವ) ಭುಜಗಳೇನು, ಉದರ (ಹೊಟ್ಟೆ) ವೇನು, ಮುಖಗಳೇನು, ಕಣ್ಣುಗಳೇನು, ಇವುಗಳುಳ್ಳದ್ದಾ

ಗಿಯೂ ಅಪರಿಮಿತವಾದ ತೇಜಸ್ಸುಳ್ಳದ್ದಾಗಿಯೂ ಅಪರಿಮಿತವಾದ ದಿವ್ಯಾಯುಧಗಳಿಂದೊಪ್ಪಿರುವುದಾಗಿಯೂ ತನಿಗುಚಿತವಾದ ನಾನಾವಿಧ್ಯ ಮಾಲ್ಯಾಂಬರಧಾರಿಯಾಗಿಯೂ ದಿವ್ಯಗಂಧಾನುಲೇಪನ ಮುಳ್ಳದ್ದಾಗಿಯೂ ಅನಂತಾಶ್ಚರ್ಯಮಯವಾಗಿಯೂ ಇರುವ ದೇವದೇವನಾದ ಆ ಶ್ರೀಕೃಷ್ಣನ ಶರೀರದಲ್ಲಿ ಅನೇಕ ಪ್ರಕಾರನಾಗಿ ವಿಭಾಗಿಸಲ್ಪಟ್ಟ ಬ್ರಹ್ಮನೇ ಮೊದಲಾದ ಅನೇಕ ವಿಚಿತ್ರಗಳಾಗಿರುವ ದೇವತಿರ್ಯಙ್ಮನುಷ್ಯಸ್ಥಾವರಗಳೆಂಬ ಭೋಕ್ತೃವರ್ಗವಾಗಿಯೂ, ಭೂಮಿಯು ಆಕಾಶವೂ ಸ್ವರ್ಗಪಾತಾಳ ಅತಲ ವಿತಲ ಸುತಲವೇ ಮೊದಲಾದ ಭೋಗಸ್ಥಾನವಾಗಿಯೂ ಅನುಭವಿಸುವುದಕ್ಕೆ ಯೋಗ್ಯವಾದ ಪದಾರ್ಥರೂಪವಾಗಿಯೂ, ಅನುಭವಿಸಲು ಯೋಗ್ಯವಾದ ಸಾಮಗ್ರಿಗಳಾಗಿಯೂ ನಾನಾವಿಧಗಳಾಗಿ ವಿಭಾಗಿಸಲ್ಪಟ್ಟ ಪ್ರಕೃತಿ ಪುರುಷ ರೂಪವಾಗಿರುವ ಸಕಲ ಲೋಕವನ್ನೂ ಎಲ್ಲಿಯೋ ಒಂದು ಪ್ರದೇಶದಲ್ಲಿರುವಂತೆ ಅರ್ಜುನನು ಭಗವತ್ಪ್ರಸಾದದಿಂದ ಹೊಂದಲ್ಪಟ್ಟ ಅಂತಹ ವಿಶ್ವರೂಪ ಸಂದರ್ಶನ ಯೋಗ್ಯವಾಗಿರುವ ದಿವ್ಯ ಚಕ್ಷುಸ್ಸುಳ್ಳವನಾಗಿ ನೋಡಿದನು.

ಶ್ಲೋ॥ ತತಸ್ಸವಿಸ್ಮಯಾವಿಷ್ಟೋ ಹೃಷ್ಟರೋಮಾಧ
ನಂಜಯಃ । ಪ್ರಣಮ್ಯ ಶಿರಸಾದೇವಂ ಕೃತಾಂಜಲಿರ
ಭಾಷತ॥ ... ... ॥೧೪॥

ಪ॥ ತತಃ- ಸಃ-ವಿಸ್ಮಯಾವಿಷ್ಟಃ -ಹೃಷ್ಟರೋಮಾ-ಧನಂಜಯಃ । ಪ್ರಣಮ್ಯ-ಶಿರಸಾ-ದೇವಂ- ಕೃತಾಂಜಲಿಃ- ಅಭಾಷತ ॥

ಅ॥ ತತಃ-ಅಂತಹ ರೂಪವನ್ನು ನೋಡಿದ ತರುವಾಯ, ವಿಸ್ಮಯಾವಿಷ್ಟಃ - ಆಶ್ಚರ್ಯವನ್ನು ಹೊಂದಿದವನಾಗಿಯೂ, ಹೃಷ್ಟರೋಮಾ- ರೋಮಾಂಚಯುಕ್ತನಾಗಿಯೂ, ಇರುವ; ಧನಂಜಯಃ - ಆ ಅರ್ಜುನನು, ದೇವಂ-ವಿಶ್ವರೂಪಿಯಾದ ಶ್ರೀಕೃಷ್ಣಸ್ವಾಮಿಯನ್ನು, ಶಿರಸಾ-ತಲೆಯಿಂದ, ಪ್ರಣಮ್ಯ- ನಮಸ್ಕರಿಸಿ, ಕೃತಾಂಜಲಿಃ-ಎರಡು ಕೈಗಳನ್ನು ಜೋಡಿಸಿಕೊಂಡವನಾಗಿ, ಅಭಾಷತ- ಮಾತನಾಡಲಾರಂಭಿಸಿದನು. ... ... ॥೧೪॥

(ರಾ॥ ಭಾ॥) ತಾತ್ಪರ್ಯವು. ಅನಂತರದಲ್ಲಿ ಧನಂಜಯನಾದ ಅರ್ಜು

ನನು (ಮಹಾಶ್ಚರ್ಯವಾಗಿರುವ ಸಕಲಲೋಕಗಳನ್ನು ತಮ್ಮ ದಿವ್ಯಶರೀರದ ಏಕದೇಶದಲ್ಲಿಟ್ಟುಕೊಂಡು ಅವುಗಳಿಗೆ ಪ್ರೇರಕನಾಗಿ ಅಧಿಕಾಶ್ಚರ್ಯವಾಗಿರುವ ಅಪರಿಮಿತ ಜ್ಞಾನಾದಿ ಕಲ್ಯಾಣ ಗುಣಗಳಿಗೆವಾಸಸ್ಥಾನನಾದ ಪರಮಾತ್ಮನಂನೋಡಿ ಆಶ್ಚರ್ಯದಿಂದ ಕೂಡಿದವನಾಗಿಯೂ ದೇಹದಲ್ಲಿ ರೋಮಾಂಚ ಯುಕ್ತನಾಗಿಯೂ ಇರುವ ಅರ್ಜುನನು ದಂಡಾಕಾರವಾಗಿ ಕೆಳಗೆ ಬಿದ್ದು ನಮಸ್ಕರಿಸಿ ಕೈಗಳನ್ನು ಜೋಡಿಸಿಕೊಂಡು ಮುಂದೆ ಹೇಳಲ್ಪಡುವ ವಾಕ್ಯಗಳನ್ನು ವಿಜ್ಞಾಪಿಸಿಕೊಂಡನು. ... ... ‖೧೪‖

ಶ್ಲೋ‖ ಅರ್ಜುನ ಉವಾಚ‖ ಪಶ್ಯಾಮಿದೇವಾಂಸ್ತವದೇವ ದೇಹೆಸರ್ವಾಂ ಸ್ತಥಾಭೂತವಿಶೇಷಸಂಘಾರ್ | ಬ್ರಹ್ಮಾಣ ಮೀಶಂ ಕಮಲಾಸನಸ್ಥಮೃಷೀಂಶ್ಚ ಸರ್ವಾನುರಗಾಂಶ್ಚ ದಿವ್ಯಾರ್‖ ... ... ‖೧೫‖

ಪ‖ ಅರ್ಜುನಃ- ಉವಾಚ ‖ ಪಶ್ಯಾಮಿ-ದೇವಾರ್- ತವ- ದೇವ- ದೇಹೇ - ಸರ್ವಾರ್- ತಥಾ- ಭೂತವಿಶೇಷಸಂಘಾರ್ | ಬ್ರಹ್ಮಾಣಂ- ಈಶಂ-ಕಮಲಾಸನಸ್ಥಂ - ಋರ್ಷೀ- ಚ- ಸರ್ವಾರ್- ಉರಗಾರ್- ಚ- ದಿವ್ಯಾರ್ ‖

ಅ‖ ಅರ್ಜುನ ಉವಾಚ - ಅರ್ಜುನನು ಹೇಳಿದನು. ಹೇದೇವ-ಎಲೈ ದೇವನಾದ ಶ್ರೀಕೃಷ್ಣಸ್ವಾಮಿಯೇ, ತವ-ನಿನ್ನ, ದೇಹೇ- ವಿಶ್ವರೂಪ ಶರೀರದಲ್ಲಿ, ದೇವಾರ್- ಇಂದ್ರಾದಿ ದೇವತೆಗಳನ್ನೂ, ತಥಾ- ಆಪ್ರಕಾರವೇ, ಈಶಂ-ದೇವತೆಗಳೆಲ್ಲರಿಗೂ ಈಶ್ವರನಾಗಿಯೂ, ಕಮಲಾಸನಸ್ಥಂ-ಕಮಲಾಸನದಲ್ಲಿರುವಂತವನಾಗಿಯೂ, ಇರುವ; ಬ್ರಹ್ಮಾಣಂ-ಚತುರ್ಮುಖ ಬ್ರಹ್ಮನನ್ನೂ, ಸರ್ವಾರ್-ಸಮಸ್ತರಾದ, ಋಷೀಂಶ್ಚ- ವಸಿಷ್ಠಾದಿ ಋಷಿಗಳನ್ನೂ, ಸರ್ವಾರ್- ಸಮಸ್ತಗಳಾದ, ಭೂತವಿಶೇಷಸಂಘಾರ್- ಸ್ಥಾವರ ಜಂಗಮಾತ್ಮಕವಾದ ನಾನಾವಿಧ ಭೂತಸಮೂಹಗಳನ್ನೂ, ದಿವ್ಯಾರ್-ವಿಚಿತ್ರಗಳಾದ, ಉರಗಾಂಶ್ಚ- ಸರ್ಪಗಳನ್ನೂ, ಪಶ್ಯಾಮಿ-ನೋಡುವೆನು. ... ‖೧೫‖

(ಶಂ‖ ಭಾ‖) ಈಶಂ- ಪ್ರಜೆಗಳೆಲ್ಲರಿಗೂ ಈಶನಾಗಿಯೂ, ಕಮಲಾಸನಸ್ಥಂ - (ಶಂ‖ ಶ್ರೀ) ತಾವರೆಹುವ್ವಿನಂತೆ ಇರುವ ಭೂಮಿಗೆ ಕರ್ಣಿಕಾತುಲ್ಯವಾಗಿರುವ ಮೇರುಪರ್ವತದಲ್ಲಿ ವಾಸುಮಾಡುವ, (ಅಥ

ವಾ) ಶ್ರೀ॥ ತನ್ನ ನಾಭೀಕಮಲವೆಂಬ ಆಸನದಲ್ಲಿರುವಂತನಾದ ಚತು ರ್ಮುಖನನ್ನೂ, (ರಾ॥ ಗೀ॥ವಿ॥) ಕಮಲಾಸನಸ್ಥಂ-ಕಮಲಾಸನೇ- ಕಮಲಾಸನನಾದ ಚತುರ್ಮುಖ ಬ್ರಹ್ಮನ ಅಧೀನದಲ್ಲಿ, ಸ್ಥಂ - ಇರು ತಲಿರುವ, ಈಶಂ-ರುದ್ರನನ್ನೂ, ಭೂತವಿಶೇಷಸಂಘಾನ್-(ಶ್ರೀ) ನಾ ನಾಭೂತ ಸಮೂಹಗಳ್ಯಾವವೆಂದರೆ, ಜರಾಯುಜಸ್ವೇದಜಅಂಡಜಓ ದ್ಭಿಜರೂಪದಿಂದ ನಾಲ್ಕುವಿಧಗಳಾಗಿ ಪ್ರಾಣಿವರ್ಗಗಳಿರುವುವು. ಜರಾ ಯುಜವೆಂದರೆ ಗರ್ಭಕೋಶದಿಂದುಂಟಾಗುವ ಮನುಷ್ಯಾದಿಗಳೆಂತಲೂ ಅಂಡಜಗಳೆಂದರೆ ಮೊಟ್ಟೆಗಳಿಂದುಂಟಾಗುವ ಪಕ್ಷಿಸರ್ಪಾದಿಗಳೆಂತಲೂ, ಕ್ರಿಮಿಹುಳು ಮೊದಲಾದವುಗಳು ಸ್ವೇದಜಗಳೆಂತಲೂ ಭೂಮಿಯ ನ್ನು ಭೇಧಿಸಿಕೊಂಡು ಹುಟ್ಟುವ ವೃಕ್ಷಾದಿಗಳು ಉದ್ಭಿಜಗಳೆಂತ ಲೂ ತಿಳಿಯಬೇಕು. ... ... ॥೧೫॥

(ರಾ॥ ಭಾ॥) ತಾತ್ಪರ್ಯವು-ಅರ್ಜುನನು ಹೇಳುತ್ತಾನೆಂದರಿಯ ಬೇಕು. ಎಲೈ ಮಹಾಸ್ವಾಮಿಯೆ ನಿಮ್ಮ ದಿವ್ಯ ಶರೀರದಲ್ಲಿ ಸಮಸ್ತ ರಾದ ದೇವತೆಗಳನ್ನೂ ಆ ಪ್ರಕಾರವೇ ಸಮಸ್ತ ಪ್ರಾಣಿಗಳ ಸಮೂ ಹವನ್ನೂ, ಅಂಡಾಧಿಪತಿಯಾದ ಚತುರ್ಮುಖ ಬ್ರಹ್ಮನನ್ನೂ, ಆರೀತಿ ಯಾಗಿಯೇ ಅವರ ಇಚ್ಛಾನುವರ್ತಿಯಾದ ರುದ್ರನನ್ನೂ ದೇವರ್ಷಿ ಗಳೇ ಮೊದಲಾದ ಸಮಸ್ತ ಋಷಿಗಳನ್ನೂ ವಾಸುಕಿತಕ್ಷಕಾದ್ಯನೇಕ ಸರ್ಪರಾಜರನ್ನೂ ನೋಡುವೆನು. ... ॥೧೫॥

ಶ್ಲೋ॥ ಅನೇಕಬಾಹೂದರ ವಕ್ತ್ರನೇತ್ರಂ ಪಶ್ಯಾಮಿ
ತ್ವಾಂ ಸರ್ವತೋನಂತರೂಪಂ । ನಾಂತಂನಮಧ್ಯಂನ
ಪುನಸ್ತವಾದಿಂ ಪಶ್ಯಾಮಿವಿಶ್ವೇಶ್ವರವಿಶ್ವರೂಪ ॥೧೬॥

ಪ॥ ಅನೇಕ ಬಾಹೂದರ ವಕ್ತ್ರನೇತ್ರಂ-ಪಶ್ಯಾಮಿ-ತ್ವಾಂ-ಸರ್ವತಃ-ಅನಂತರೂ ಪಂ । ನ-ಅಂತಂ-ನ-ಮಧ್ಯಂ-ನ-ಪುನಃ-ತವ-ಆದಿಂ-ಪಶ್ಯಾಮಿ-ವಿಶ್ವೇಶ್ವರ-ವಿಶ್ವರೂಪ॥

ಅ॥ ಅನೇಕ ಬಾಹೂದರವಕ್ತ್ರನೇತ್ರಂ-ಅನೇಕಗಳಾದ ಭುಜ ಗಳೇನು, ಉದರ (ಹೊಟ್ಟೆ) ವೇನು, ಮುಖಗಳೇನು, ಕಣ್ಣುಗಳೇನು, ಇವುಗಳುಳ್ಳವನಾಗಿಯೂ, ಅನಂತರೂಪಂ- ಅಳವಿಡಲಶಕ್ಯವಾದ ರೂಪ ಮುಳ್ಳವನಾಗಿಯೂ ಇರುವ, ತ್ವಾ-ನಿಮ್ಮನ್ನು, ಸರ್ವತಃ-ಎಲ್ಲಿಯೂ,

ಪಶ್ಯಾಮಿ-ನೋಡುವೆನು. ಹೇವಿಶ್ವೇಶ್ವರ-ಎಲೈ ಲೋಕನಾಥನೆ,ಹೇ ವಿಶ್ವರೂಪ-ಜಗದ್ರೂಪಿಯಾದ ಎಲೈ ಪರಮಾತ್ಮನೆ, ತವ-ನಿನ್ನ, ಅಂತಂ-ಪೂರ್ತಿಯನ್ನು, ನಪಶ್ಯಾಮಿ-ಕಾಣಲಾರೆನು. ಮಧ್ಯಂ-ಮಧ್ಯಕಾಲವನ್ನೂ, ನಪಶ್ಯಾಮಿ-ನೋಡಲಾರೆನು, ಪುನಃ-ಮತ್ತೂ,ಆದಿಂ-ಆದಿಕಾಲವನ್ನೂ, ನಪಶ್ಯಾಮಿ-ಕಾಣಲಾರೆನು. ... ||೧೬||

(ರಾ|| ಭಾ||) ತಾತ್ಪರ್ಯವು :- ಅನೇಕಗಳಾದ ಕೈಕಾಲುಗಳೇ ಮೊದಲಾದ ಅವಯವಗಳೊಡನೆ ಕೂಡಿ ಅನಂತ ರೂಪನಾಗಿರುವ ತಮ್ಮನ್ನು ಯೆಲ್ಲೆಲ್ಲಿಯೂ ನೋಡುವೆನು. ಎಲೈ ಜಗದಧೀಶನೆ ! ವಿಶ್ವಶರೀರಕನಾಗಿರುವ ನಿಮಿಗೆ ಇದು ಆದಿಯೆಂತಲೂ, ಇದು ಮಧ್ಯವೆಂತಲೂ, ಇದು ಅಂತವೆಂತಲೂ, (ತಮ್ಮಗಳಿಂದನುಗ್ರಹಿಸಲ್ಪಟ್ಟ ದಿವ್ಯ ಕಣ್ಣುಗಳುಳ್ಳವನಾದರೂ,) ನಾನರಿಯಲಾರೆನು. ... ||೧೬||

(ಶ್ರೀ||) "ಪಶ್ಯಾಮಿತ್ವಾಂ", ಎಂಬದಾಗಿ ಪಾಠವು. ಅರ್ಥಭೇದವಿಲ್ಲವು. ... ... ||೧೬||

ಶ್ಲೋ|| ಕಿರೀಟಿನಂಗದಿನಂಚಕ್ರಿಣಂಚತೇಜೋರಾಶಿಂಸ
ರ್ವತೋದೀಪ್ತಿಮಂತಂ | ಪಶ್ಯಾಮಿತ್ವಾಂದುರೀಕ್ಷ್ಯಂಸ
ಮಂತಾದ್ದೀಪ್ತಾನಲಾರ್ಕದ್ಯುತಿಮಪ್ರಮೇಯಂ ||೧೭||

ಪ|| ಕಿರೀಟಿನಂ-ಗದಿನಂ-ಚಕ್ರಿಣಂ-ಚ-ತೇಜೋರಾಶಿಂ-ಸರ್ವತಃ-ದೀಪ್ತಿಮಂತಂ| ಪಶ್ಯಾಮಿ-ತ್ವಾ-ದುರ್ನಿರೀಕ್ಷ್ಯಂ-ಸಮಂತಾತ್- ದೀಪ್ತಾನಲಾರ್ಕದ್ಯುತಿಂ-ಅಪ್ರಮೇಯಂ||

ಅ|| ಕಿರೀಟಿನಂ-ಕಿರೀಟ ಮುಳ್ಳವರಾಗಿಯೂ, ಗದಿನಂ-ಗದೆ ಎಂಬ ಆಯುಧ ಮುಳ್ಳವರಾಗಿಯೂ,ಚಕ್ರಿಣಂಚ-ಚಕ್ರವೆಂಬ ಆಯುಧವುಳ್ಳವರಾಗಿಯೂ, ತೇಜೋರಾಶಿಂ-ತೇಜಸ್ಸುಗಳಿಗೆ ರಾಶಿಭೂತರಾಗಿಯೂ, ಸರ್ವತಃ-ಎಲ್ಲೆಲ್ಲಿಯೂ ವ್ಯಾಪಿಸಿರುವ, ದೀಪ್ತಿಮಂತಂ-ಕಾಂತಿಯುಳ್ಳವರಾಗಿಯೂ,ದುರ್ನಿರೀಕ್ಷ್ಯಂ-ಅಧಿಕ ಕಷ್ಟದಿಂದನೋಡಲ್ಪಡತಕ್ಕವರಾಗಿಯೂ, (ಶ್ರೀ|| ಗೀ|| ವಿ) ದುರ್ನಿರೀಕ್ಷ್ಯಂ ಎಂಬದಾಗಿ ಪಾಠವು. ನೋಡಲಸಾಧ್ಯರಾಗಿಯೂ, ಎಂದರ್ಥವು. ದೀಪ್ತಾನಲಾರ್ಕದ್ಯುತಿಂ - ಜಾಜ್ವಲ್ಯಮಾನರಾದ ಅಗ್ನಿಸೂರ್ಯರ ಪ್ರಕಾಶದಂತಿರುವ ಪ್ರಕಾಶಮುಳ್ಳವರಾಗಿಯೂ, ಅಪ್ರಮೇಯಂ - ಅಳವಿಡಲಶಕ್ಯರಾಗಿಯೂ ಇರುವ, (ಗೀ|| ವಿ||) ಅಧಿಕ ಪ್ರಕಾಶಮುಳ್ಳವರಾಗಿಯೂ ಇರು

ದ, ತ್ವಾ-ನಿಮ್ಮನ್ನು, (ಗೀ॥ ವಿ॥ ಶ್ರೀ) ತ್ವಾಂ ಎಂಬದಾಗಿ ಪಾಠವು. ಅರ್ಥ-ಭೇದವಿಲ್ಲವು. ಸಮಂತಾತ್ - ಎಲ್ಲೆಲ್ಲಿಯೂ, ಪಶ್ಯಾಮಿ - ನೋಡುವೆನು. ... ... ॥೧೭॥

(ರಾ॥ ಭಾ॥) ತಾತ್ಪರ್ಯವು. ತೇಜೋರಾಶಿಯಾಗಿಯೂ ಎಲ್ಲೆಲ್ಲಿಯೂ ಪ್ರಕಾಶವುಳ್ಳವರಾಗಿಯೂ, ಎಲ್ಲೆಲ್ಲಿಯೂ ನೋಡಲಶಕ್ಯರಾಗಿಯೂ, ಜ್ವಲಿಸುತಲಿರುವ ಸೂರ್ಯಾಗ್ನಿಗಳ ಕಾಂತಿಯಂತಿರುವ ಕಾಂತಿಯೊಡನೆ ಕೂಡಿದವರಾಗಿಯೂ, ಅಪರಿಚ್ಛಿನ್ನ ಮಾಹಾತ್ಮ್ಯವುಳ್ಳವರಾಗಿಯೂ, ಇರುವ ನಿಮ್ಮನ್ನು ಕಿರೀಟ ಗದಾ ಚಕ್ರಗಳನ್ನು ಧರಿಸಿರುವವರಾಗಿ ಸೇವಿಸುವೆನು. ... ॥೧೭॥

ಶ್ಲೋ ॥ ತ್ವಮಕ್ಷರಂಪರಮಂವೇದಿತವ್ಯಂತ್ವಮಸ್ಯವಿಶ್ವಸ್ಯಪರಂನಿಧಾನಂ | ತ್ವಮವ್ಯಯಶ್ಶಾಶ್ವತಧರ್ಮಗೋಪ್ತಾಸನಾತನಸ್ತ್ವಂಪುರುಷೋಮತೋಮೇ ॥ ॥೧೮॥

ಪ। ತ್ವಂ-ಅಕ್ಷರಂ-ಪರಮಂ-ವೇದಿತವ್ಯಂ-ತ್ವಂ-ಅಸ್ಯ-ವಿಶ್ವಸ್ಯ-ಪರಂ-ನಿಧಾನಂ। ತ್ವಂ-ಅವ್ಯಯಃ-ಶಾಶ್ವತ ಧರ್ಮಗೋಪ್ತಾ-ಸನಾತನಃ-ತ್ವಂ-ಪುರುಷಃ-ಮತಃ-ಮೇ॥

ಅ॥ ತ್ವಂ-ನೀವು, ವೇದಿತವ್ಯಂ-ಮೋಕ್ಷಾಪೇಕ್ಷಿಗಳಿಂದ ಅರಿಯಲ್ಪಡತಕ್ಕ, ಪರಮ ಮಕ್ಷರಂ-ಪರಬ್ರಹ್ಮವು. ತ್ವಮಸ್ಯ ವಿಶ್ವಸ್ಯಪರಂನಿಧಾನಂ-ನೀವೇ ಈ ಸಕಲ ಪ್ರಪಂಚಕ್ಕೂ ಶ್ರೇಷ್ಠವಾದ ಆಧಾರವು, ತ್ವಮವ್ಯಯಃ-ನೀವು ನಾಶವಿಲ್ಲದವರು, ಶಾಶ್ವತ ಧರ್ಮಗೋಪ್ತಾತ್ವಂ-ಶಾಶ್ವತವಾದ ಧರ್ಮವನ್ನು ಸಂರಕ್ಷಣೆಮಾಡುವಂತವರು ನೀವು, ಸನಾತನಃ-ಪುರುಷಪವಮೋಮತಃ- ಯಾವಾಗಲೂ ಇರುತಲಿರುವ ಪರಮ ಪುರುಷನೆಂತಲೆ ನನಿಗೆಸಮ್ಮತರಾಗಿರುತ್ತೀರಿ. ... ॥೧೮॥

(ರಾ॥ ಭಾ॥) "ದ್ವೇವಿದ್ಯೇವೇದಿತವ್ಯೇ" ಎಂಬಿದೇ ಮೊದಲಾದ ಉಪನಿಷತ್ತುಗಳಲ್ಲಿ ತಿಳಿಯಲ್ಪಡತಕ್ಕದ್ದೆಂಬದಾಗಿ ಹೇಳಲ್ಪಟ್ಟ ಪರಮವಾದ ಅಕ್ಷರವು ನೀವೆ, ಈ ಪ್ರಪಂಚಗಳಿಗೆಲ್ಲವೂ ಮುಖ್ಯವಾದ ಆಧಾರವೂ ನೀವೆ, ನೀವು ಯಾವ ಸ್ವರೂಪದೊಡನೆಯೂ ಯಾವ ವಿಭವದೊಡನೆಯೂ ಸೇರಿರುತ್ತೀರೊ, ಆ ಪ್ರಕಾರವೇ ಯಾವಾಗಲೂ ಇರುತ್ತೀರೆಂದು ನಾನು ತಿಳಿದಿರುವೆನು. ಸತ್ಯವಾದ ವೈದಿಕ ಧರ್ಮಗ

ಳೆಲ್ಲವನ್ನೂ ನೀವೇ ತಾನೇ ಈರೀತಿಯಾಗಿ ರಾಮಕೃಷ್ಣಾದ್ಯವತಾರ ಗಳಂ ಮಾಡಿ ಸಂರಕ್ಷಿಸುತ್ತೀರಿ. (ಆದುದರಿಂದ) "ವೇದಾಹಮೇತಂ ಪುರುಷಂ ಮಹಾಂತಂ- ಪರಾತ್ಪರಂ ಪುರುಷಂ,, ಎಂಬೀ ಪ್ರಕಾರವಾಗಿ ವೇದಾಂತ ಪ್ರಸಿದ್ಧನಾಗಿರುವ ಸನಾತನನಾದ ಪರಮ ಪುರುಷನೂ ನೀವೇ ಎಂಬದಾಗಿಯೇ ನಾನು ತಿಳಿದುಕೊಂಡೆನು. ಎಂದರೆ ಇದುವರೆಗೂ ಯದುಕುಲತಿಲಕರಾಗಿರುವಂತೆ ನನ್ನಿಂದ ತಿಳಿಯಲ್ಪಟ್ಟ ನಿಮ್ಮನ್ನು ಈಗ ತಾನೇ ಇಂತಹ ಪರಬ್ರಹ್ಮನಾದ ಪುರುಷೋತ್ತಮ ನೆಂಬದಾಗಿ ತಿಳಿದುಕೊಂಡೆನೆಂದು ತಾತ್ಪರ್ಯವು. ... ॥೧೮॥

ಶ್ಲೋ॥ ಅನಾದಿಮಧ್ಯಾಂತಮನಂತವೀರ್ಯಮನಂತಬಾಹುಂಶಶಿಸೂರ್ಯನೇತ್ರಂ । ಪಶ್ಯಾಮಿತ್ವಾದೀಪ್ತಹುತಾಶವಕ್ತ್ರಂ ಸ್ವತೇಜಸಾವಿಶ್ವಮಿದಂತಪಂತಂ ॥ ॥೧೯॥

ಪ॥ ಅನಾದಿ ಮಧ್ಯಾಂತಂ-ಅನಂತವೀರ್ಯಂ-ಅನಂತಬಾಹುಂ-ಶಶಿಸೂರ್ಯನೇತ್ರಂ-ಪಶ್ಯಾಮಿ-ತ್ವಾ-ದೀಪ್ತಹುತಾಶವಕ್ತ್ರಂ-ಸ್ವತೇಜಸಾ-ವಿಶ್ವಂ-ಇದಂ-ತಪಂತಂ ॥

ಅ॥ ಅನಾದಿ ಮಧ್ಯಾಂತಂ - ಉತ್ಪತ್ತಿ ಸ್ಥಿತಿ ನಾಶರಹಿತನಾಗಿಯೂ, ಅನಂತವೀರ್ಯಂ - ಅಪರಿಮಿತವಾದ ಸಾಮರ್ಥ್ಯಮುಳ್ಳವನಾಗಿಯೂ, ( ರಾ ) ಜ್ಞಾನಾದಿ ಷಡ್ಗುಣಗಳಿಗೆ ವಾಸಸ್ಥಾನ ಭೂತನಾಗಿಯೂ, ಅನಂತ ಬಾಹುಂ-ಮಹಾವೀರ್ಯಮುಳ್ಳ ಅನಂತ ಬಾಹುಗಳುಳ್ಳವನಾಗಿಯೂ, ಶಶಿಸೂರ್ಯನೇತ್ರಂ-ಚಂದ್ರಸೂರ್ಯರನ್ನು ಕಣ್ಣುಗಳಾಗಿಯುಳ್ಳವನಾಗಿಯೂ, ದೀಪ್ತಹುತಾ ಶವಕ್ತ್ರಂ-ಜ್ವಲಿಸುತಲಿರುವ ಅಗ್ನಿಯನ್ನೇ ಮುಖವಾಗಿವುಳ್ಳವನಾಗಿಯೂ, ಸ್ವತೇಜಸಾ-ತನ್ನ ತೇಜಸ್ಸಿನಿಂದ, ಇದಂ ವಿಶ್ವಂತಪಂತಂ-ಈಸರ್ವ ಪ್ರಪಂಚವನ್ನು ತಪಿಸುವಂತವನಾಗಿಯೂ ಇರುವ, ತ್ವಾ-ನಿನ್ನನ್ನು, (ಇಲ್ಲಿಯೂ (ತ್ವಾಂ) ಎಂಬದಾಗಿಯೇ ಶ್ರೀಧರೀಯ ಪಾಠವು) ಪಶ್ಯಾಮಿ-ನೋಡುವೆನು. ॥೧೯॥

(ರಾ॥ ಭಾ॥) ಆದಿಮಧ್ಯ ಅಂತ-ವಿಲ್ಲದವರಾಗಿಯೂ ಅಳವಿಡಲಶಕ್ಯವಾದ ಜ್ಞಾನಬಲ ವೀರ್ಯಗಳೆಂಬಿದೇ ಮೊದಲಾದ ಗುಣಗಳೊಡನೆ ಕೂಡಿರುವವರಾಗಿಯೂ,ಅಸಂಖ್ಯೇಯವಾದ ಕೈಕಾಲು ಕಣ್ಣುಗಳೆಂಬಿದೇಮೊದಲಾದ ಅವಯವಗಳೊಡನೆ ಕೂಡಿದವರಾಗಿಯೂ, ಚಂದ್ರ

ನಂತೆ ಅನುಕೂಲರಾದವರಲ್ಲಿ ಪ್ರಸನ್ನತೆಯಿಂದಲೂ ಸೂರ್ಯನಂತೆ ಪ್ರತಿಕೂಲರಲ್ಲಿ ಪ್ರತಾಪದಿಂದಲೂ ಯುಕ್ತವಾಗಿರುವ ಅಸಂಖ್ಯಾತವಾದ ಕಣ್ಣುಗಳುಳ್ಳವನಾಗಿಯೂ, ಪರಮಾತ್ಮನಿಗೆ ಅನುಕೂಲರಾಗಿ ನಮಸ್ಕಾರಾದಿಗಳಂ ಮಾಡುವ ದೇವಾದಿಗಳಂಕುರಿತು ಪ್ರಸಾದವೂ, ಆವರಿಗೆ ವಿರುದ್ಧರಾದ ಅಸುರರಾಕ್ಷಸಾದಿಗಳಂಕುರಿತು ಪ್ರತಾಪವೂ ಉಂಟಾಗಿರುವುದು. ಈ ಅರ್ಥವು "ರಕ್ಷಾಂಸಿಭೀತಾನಿದಿಶೋದ್ರವಂತಿ ಸರ್ವೇನಮಸ್ಯಂತಿಚಸಿದ್ಧಸಂಘಾಃ,, ಎಂಬದಾಗಿ ಮುಂದೆಯೂ ಹೇಳಲ್ಪಡುವುದು. ಜ್ವಲಿಸುತಲಿರುವ ಕಾಲಾಗ್ನಿಯಂತೆ ಸಂಹಾರಕ್ಕನುಗುಣವಾದ ಮುಖವುಳ್ಳವರಾಗಿಯೂ ಶತ್ರುಗಳನ್ನು ತಿರಸ್ಕರಿಸುವ ತಮ್ಮ ಸಾಮರ್ಥ್ಯದಿಂದ ಈ ಸಮಸ್ತ ಪ್ರಪಂಚವನ್ನು ಪರಿತಪಿಸುವಂತೆ ಮಾಡುವವರಾಗಿಯೂ ಇರುವಂತೆ ತಮ್ಮನ್ನು ನೋಡುವೆನು. ಈಪ್ರಕಾರವಾಗಿ ಸರ್ವ ಪ್ರಪಂಚಗಳಿಗೂ ಸೃಷ್ಟಿಕರ್ತಾಆಗಿಯೂ ಸರ್ವಕ್ಕೂ ಆಧಾರಭೂತರಾಗಿಯೂ ಸಮಸ್ತವನ್ನಾಳುವಂತವರಾಗಿಯೂ ಸರ್ವಸಂಹಾರಕರಾಗಿಯೂ ಜ್ಞಾನಾದ್ಯಪರಿಮಿತ ಕಲ್ಯಾಣಗುಣ ಸಮುದ್ರರಾಗಿಯೂ ಆದಿಮಧ್ಯಾಂತ ರಹಿತರಾಗಿಯೂ ಇಂತಹ ದಿವ್ಯದೇಹವುಳ್ಳವರಾಗಿಯೂ ಇರುವ ನಿಮ್ಮನ್ನು ತಮ್ಮ ಉಪದೇಶಾನುಗುಣವಾಗಿ (ಪ್ರತ್ಯಕ್ಷವಾಗಿ) ಸಾಕ್ಷಾತ್ಕರಿಸಿದೆನೆಂದು ತಾತ್ಪರ್ಯವು. ಆದರೆ ಒಂದು ದಿವ್ಯಶರೀರದಲ್ಲಿ ಅನೇಕಗಳಾದ ಉದರ ನೇತ್ರಾದಿಗಳು ಹೇಗೆ ಇರಬಹುದೆಂದುಸಂದೇಹಿಸದೆ ಈ ಸಂದೇಹಪರಿಹಾರಾರ್ಥವಾಗಿಮುಂದೇ ಹೇಳುವ ಸಮಾಧಾನವನ್ನರಿಯಬೇಕು. ಅನಂತ ಪರಿಮಾಣವುಳ್ಳ ಒಂದುಕಟಿ (ನಡುವಿನ) ಪ್ರದೇಶಕ್ಕಿಂತಲೂ ಮೇಲ್ಭಾಗದಲ್ಲಿ ಪೂರ್ವೋಕ್ತಪ್ರಕಾರವಾಗಿ ಅನಂತ ಉದರಾದಿಗಳೂ, ಕೆಳಗೆಹಿಂದೆ ಮಿಮರಿಸಿರುವಂತೆ ದಿವ್ಯಪಾದಗಳೂ ಒಂದೊಂದುಮುಖದಲ್ಲಿ ಯೆರಡೆರಡುಕಣ್ಣುಗಳೂ ಇರುವುದು ವಿರೋಧಿಸುವುದಿಲ್ಲವು. ॥೧೯॥

ಶಂ॥ ಆ॥ಆದರೇ:ಸತ್ಯಂಜ್ಞಾನಮನಂತಂಬ್ರಹ್ಮ- ಯತೋವಾಇಮಾನಿಭೂತಾನಿಜಾಯಂತೇ-ಏಷಸರ್ವೇಶ್ವರಃ- ಪ್ರಜ್ಞಾನಂಬ್ರಹ್ಮ,,ಎಂಬಿದೇ ಮೊದಲಾದ ಶ್ರುತಿ ಪ್ರಾಮಾಣ್ಯದಿಂದ ನಿನ್ನಿಂದ ಯಾವದು ಹೇಳಲ್ಪಟ್ಟಿತೋ ಅದು ಸತ್ಯವೆ, ಆದರೂ ನಮಿಗಿಂತಲೂ ಭಿನ್ನವಾಗಿ ಪ್ರಪಂ

ಚವಿರುವುದೆಂಬದಾಗಿ ಹೇಳಬಹುದೊ, ಎಂದರೆ "ಸರ್ವಂಖಲ್ವಿದಂಬ್ರ ಹ್ಮ,, ಇತ್ಯಾದಿ ಶ್ರುತ್ಯರ್ಥವನ್ನಾಶ್ರಯಿಸಿ ಆ ಪ್ರಪಂಚವೆಲ್ಲವೂ ಪರ ಮಾತ್ಮನಾದ ನೀನೇ ಎಂದರ್ಜುನನು ಹೇಳುತ್ತಾನೆ. ಅನಾದಿಮಧ್ಯಾಂ ತಂ-ಅನಂತವೀರ್ಯಂ- ಅನಂತಬಾಹುಂ - ಶಶಿಸೂರ್ಯನೇತ್ರಂ- ದೀಪ್ತ ಹುತಾಶವಕ್ತ್ರಂ- ಸ್ವತೇಜಸಾ (ಸೂರ್ಯಪಕ್ಷೆ) ತಪಂತಂ ತ್ವಾಂ ವಿಶ್ವಂ ಪಶ್ಯಾಮಿ ಎಂಬದಾಗಿ ಅನ್ವಯವು. ಈ ಸಮಸ್ತ ಪ್ರಪಂಚವೂ ನಿನಿಗಿಂತಲೂ ಅಭಿನ್ನವಾಗಿರುವುದೆಂತಲೆ ತಿಳಿಯುವೆನು. ಈಪ್ರಪಂ ಚವೆಲ್ಲವೂ ನೀವೆ, ನಿಮ್ಮನ್ನು ಪ್ರಪಂಚರೂಪದಿಂದಿರುವಂತರನನ್ನಾಗಿ ನೋಡುವೆನೆಂದು ತಾತ್ಪರ್ಯವು. ... ॥೧೯॥

ಮ॥ ಗೀ॥ ವಿ॥) ಚಂದ್ರಸೂರ್ಯರು ಪರಮಾತ್ಮನ ಕಣ್ಣುಗಳಿಂ ದುಂಟಾದವರಾದುದರಿಂದ ಅವರೇ ಕಣ್ಣುಗಳೆಂಬದಾಗಿ ಉಪಚಾರದಿಂ ದಹೇಳಿರುವುದಲ್ಲದೆ ಆಸೂರ್ಯ ಚಂದ್ರರೇ ಪರಮಾತ್ಮನಿಗೆ ಕಣ್ಣುಗಳ ಲ್ಲವು. ... ... ॥೧೯॥

ಶ್ಲೋ॥ ದ್ಯಾವಾಪೃಥಿವ್ಯೋರಿದಮಂತರಂಹಿವ್ಯಾಪ್ತಂತ್ವ
ಯೈಕೇನದಿಶಶ್ಚಸರ್ವಾಃ । ದೃಷ್ಟ್ವಾದ್ಭುತಂರೂಪಮು
ಗ್ರಂತವೇದಂಲೋಕತ್ರಯಂಪ್ರವ್ಯಥಿತಂಮಹಾತ್ಮನ್॥೨೦॥

ಪ॥ ದ್ಯಾವಾಪೃಥಿವ್ಯೋಃ- ಇದಂ- ಅಂತರಂ-ಹಿ- ವ್ಯಾಪ್ತಂ- ತ್ವಯಾ- ಏಕೇನ- ದಿಶಃ- ಚ- ಸರ್ವಾಃ । ದೃಷ್ಟ್ವಾ-ಅದ್ಭುತಂ- ರೂಪಂ- ಉಗ್ರಂ- ತವ- ಇದಂ - ಲೋಕ ತ್ರಯಂ- ಪ್ರವ್ಯಥಿತಂ- ಮಹಾತ್ಮನ್॥

ಅ॥ ಹೇಮಹಾತ್ಮನ್ - ಮಹಾತ್ಮನಾದ ಎಲೈ ಪರಮಾತ್ಮನೇ? ದ್ಯಾವಾಪೃಥಿವ್ಯೋಃ- ಆಕಾಶಭೂಮಿಗಳ, ಇದಮಂತರಂಹಿ- ಮಧ್ಯಪ್ರ ದೇಶವಾದ ಈ ಅಂತರಿಕ್ಷವೂ, ಏಕೇನತ್ವಯಾವ್ಯಾಪ್ತಂ-ಒಬ್ಬನಾದ ನಿನ್ನಿಂದಲೆ ವ್ಯಾಪಿಸಲ್ಪಟ್ಟಿರುವುದು. ಸರ್ವಾದಿಶಶ್ಚತ್ವಯಾವ್ಯಾಪ್ತಾಃ- ಸಮಸ್ತವಾದ ದಿಕ್ಕುಗಳೂ ನಿನ್ನಿಂದಲೇ ವ್ಯಾಪ್ತವಾಗಿರುವುವು. ಉ ಗ್ರಂ- ಭಯಂಕರವಾಗಿಯೂ, ಅದ್ಭುತಂ - ಆಶ್ಚರ್ಯ ಕರವಾಗಿಯೂ ಇರುವ, ತವ-ನಿನ್ನ, ಇದಂರೂಪಂ-ಈವಿಶ್ವರೂಪವನ್ನು, ದೃಷ್ಟ್ವಾ- ನೋಡಿ, ಲೋಕತ್ರಯಂ- ಮೂರುಲೋಕವೂ, ಪ್ರವ್ಯಥಿತಂ- ಅತ್ಯಂ

ಶವಾಗಿ ಭಯಪಟ್ಟಿರುವುದು. (೩೦) ಭಯಪಟ್ಟಿರುವುದು ಅಥವಾ ನಡುಗುವುದು. ... ... ॥೨೦॥

(ರಾ॥ಭಾ) ಇಂಥಾ ವಿಶ್ವರೂಪಿಯಾದ ನಿಮ್ಮನ್ನು ನೋಡಿ ದೇವಾದಿಗಳೂ ನಾನೂ ಅತ್ಯಂತವಾಗಿ ಭಯಪಡುವೆವೆನ್ನುತ್ತಾರೆ. ಇಲ್ಲಿನ ದ್ಯಾವಾಪೃಥಿವೀಶಬ್ದಗಳು ಮೇಲೆಇರುವ ಏಳುಲೋಕಗಳೇನು ಕೆಳಗಿರು ಏಳು ಲೋಕಗಳೇನು ಇವುಗಳಂತೆಯೆಳುವುವು. ಇದವಂತರ-ಈಪ್ರದೇಶವೆಲ್ಲವೂ, ಯಾವ ಅಂತರ ಶಬ್ದದಿಂದ ಹೇಳಲ್ಪಡುವ ಅವಕಾಶದಲ್ಲಿ ಸಮಸ್ತವಾದ ಲೋಕಗಳಿರುವುವೊ ಆಪ್ರಕಾರವೇ ಸಮಸ್ತವಾದದಿಕ್ಕುಗಳೂ ಒಬ್ಬರಾದ ನಿಮ್ಮಿಂದಲೇ ವ್ಯಾಪಿಸಲ್ಪಟ್ಟಿರುವುವಲ್ಲವೇ? ಆಯಾಮವಿಸ್ತಾರಗಳೊಡನೆ ಕೂಡಿಯೂ ಘೋರಾಕಾರವಾಗಿಯೂ ಇರುವ ತಮ್ಮ ಈ ವಿಶ್ವರೂಪ ವಿಗ್ರಹವನ್ನು ನೋಡಿ ಭಾರತ ಯುದ್ಧವನ್ನು ನೋಡಲಪೇಕ್ಷೆಯಿಂದಬಂದಿರುವದೇವಋಷಿಪಿತೃಗಣಸಿದ್ಧಗಂಧರ್ವಯಕ್ಷರಾಕ್ಷಸರಲ್ಲಿ ಶತ್ರುಗಳೆಂತಲೂ ಮಿತ್ರರೆಂತಲೂ ಮಧ್ಯಸ್ಥರೆಂತಲೂ ಹೇಳಲ್ಪಡುವ ಈ ಬಗೆಯಾದ ತ್ರಿವಿಧರೆಲ್ಲರೂ ಭಯಪಟ್ಟಿರುವರು. ಇಲ್ಲಿ ದೇವಾಸುರಾದಿ ಜನರಿಗೆ,ಅರ್ಜುನನಿಗೆ ಕೊಟ್ಟಿರುವಂತೆ ಅಂತಹ ವಿಶ್ವರೂಪವನ್ನು ಕಾಣುವಂಥಾ ದಿವ್ಯಚಕ್ಷುಸ್ಸು ಪರಮಾತ್ಮನಿಂದಲೇ ಅನುಗ್ರಹಿಸಲ್ಪಟ್ಟಿರುವುದೆಂದರಿಯಬೇಕು.

ಆದರೆ "ದರ್ಶಯಾಮಾಸಪಾರ್ಥಾಯ ಪರಮಂರೂಪಮೈಶ್ವರಂ,, (೧೧|೯) ಎಂಬದಾಗಿ ಅರ್ಜುನನಿಗೆಮಾತ್ರವೇ ಈದಿವ್ಯರೂಪವು ಕಾಣಿಸಲ್ಪಟ್ಟಿತೆಂದು ಹೇಳಿ ಈಗ ಮನುಷ್ಯರಂತೆ ಮಾಂಸ ಚಕ್ಷುಸ್ಸುಗಳಾದ ದೇವಾಸುರರಿಗೂ ಇಂತಹ ಭಗವದ್ವಿಗ್ರಹ ಸಾಕ್ಷಾತ್ಕಾರವು ಪ್ರಾಪ್ತವಾಯಿತೆಂಬದಾಗಿ ಹೇಳುವುದು ಹೇಗೆ ಸಂಗತವಾಗಬಹುದು? " ನತುಮಾಂಶಕ್ಯಸೇ ದ್ರಷ್ಟುಮನೇನೈವಸ್ವಚಕ್ಷುಷಾ। ದಿವ್ಯಂದದಾಮಿತೇಚಕ್ಷುಃ,, (೧೧|೮॥) ಎಂಬದಾಗಿ ಪ್ರಾಕೃತವಾದ ಮಾಂಸಚಕ್ಷುಸ್ಸಿನಿಂದ ನನ್ನನ್ನು ನೋಡುವುದಕ್ಕಾಗುವುದಿಲ್ಲವು. ಆದಕ್ಕಾಗಿ ನನ್ನ ದರ್ಶನಕ್ಕೆ ಯೋಗ್ಯವಾಗಿರುವ ದಿವ್ಯಚಕ್ಷುಸ್ಸನ್ನು ನಿನಗೆ ಕೊಡುವೆನೆಂಬದಾಗಿ ಹಿಂದೆ ಇದೇ ಅಧ್ಯಾಯದ ಎಂಟನೆಶ್ಲೋಕದಲ್ಲಿ ಹೇಳಿರುವುದರಿಂದ ಪ್ರಾಕೃತವಾದ ಕಣ್ಣುಗಳುಳ್ಳ ದೇವಾದಿಗಳಿಗೆ ಈವಿಶ್ವ

ರೂಪದರ್ಶನವಾಯಿತೆಂಬುವುದು ಯುಕ್ತವಲ್ಲವು. ಮತ್ತು ಅರ್ಜುನನು ಪರಮಾತ್ಮನಿಗೆ ಶಿಷ್ಯಭೂತನಾಗಿಯೂ ಅತ್ಯಂತ ಪ್ರಣಿಪಾತಾದಿ ಪೂರ್ವಕವಾಗಿ ಭಗವತ್ಸನ್ನಿಧಾನಕ್ಕೆ ಬಂದು ಶಾಸ್ತ್ರಾರ್ಥ ಶ್ರವಣವಂ ಮಾಡಿ ನಿರತಿಶಯ ಭಕ್ತಿಯುಕ್ತನಾಗಿಯೂ ಇರುವುದರಿಂದ ಇಂತಹ ಅರ್ಜುನನಿಗೆ ತನ್ನ ದಿವ್ಯಮಂಗಳ ವಿಗ್ರಹಪ್ರಕಾಶವಂ ಮಾಡುವುದೂ ಅದಕ್ಕಾಗಿಯೆ ಅರ್ಜುನನಿಗೆ ದಿವ್ಯಚಕ್ಷುಃಪ್ರದಾನವೂ ಯುಕ್ತವಾಗಿಯೇ ಇರುವುದು. ಅದಕ್ಕನುಸಾರವಾಗಿಯೇ ಮುಂದೆಯೂ "ದೇವಾ ಅಪ್ಯಸ್ಯರೂಪಸ್ಯನಿತ್ಯಂದರ್ಶನಕಾಂಕ್ಷಿಣಃ,,(೧೧॥೫೨)ಎಂಬದಾಗಿದೇವತೆಗಳೆಲ್ಲರೂ ಪ್ರತಿನಿತ್ಯವೂ ಈವಿಶ್ವರೂಪ ದರ್ಶನಾರ್ಥಿಗಳಾಗಿರುವರೆಂದು ಹೇಳಿರುವುದರಿಂದ ದೇವತೆಗಳಿಗೆ ಈ ವಿಶ್ವರೂಪದರ್ಶನಾರ್ಥಿತ್ವಮಾತ್ರವಲ್ಲದೆ ದರ್ಶನವಾಗಲಿಲ್ಲವೆಂಬದಾಗಿರುವುದರಿಂದಲೆ ದೇವಾಸುರಾದಿಗಳಾದಸರ್ವರಿಗೂ ಈವಿಶ್ವರೂಪ ಸಂದರ್ಶನ ವಾಯಿತೆಂತಲೂ ಆದುದರಿಂದ ಅವರೆಲ್ಲರೂ ಈರೂಪವಂ ನೋಡಿ ಭಯಪಟ್ಟರುವರೆಂತಲೂ ಹೇಳುವುದು ಯುಕ್ತವಲ್ಲವೆಂದರೆ ಆದಕ್ಕುತ್ತರವು ಹೇಳಲ್ಪಡುವುದು. ಸಮಗ್ರವಾದ ತನ್ನ ಐಶ್ವರ್ಯವನ್ನು ಅರ್ಜುನನಿಗೆ ತೋರಿಸುವುದಕ್ಕಾಗಿಯೆ ಭಾರತಯುದ್ಧವಂ ನೋಡುವುದಕ್ಕಾಗಿ ಬಂದ ದೇವಾದಿಗಳಿಗೂ ದಿವ್ಯ ಚಕ್ಷುಃಪ್ರದಾನವಂ ಮಾಡಿದರೆಂತಲೂ ಅವತಾರದಶೆಯಲ್ಲಿ ಭಗವತ್ಸಾಕ್ಷಾತ್ಕಾರವೂ ಮಹಾಸುಕೃತದಿಂದುಂಟಾಗುವಂತೆ ಇಂತಹ ವಿಶ್ವರೂಪ ಸಂದರ್ಶನ ಯೋಗ್ಯವಾದ ಪುಣ್ಯ ಪರಿಪಾಕವು ಆ ದೇವಾದಿಗಳಿಗೂ ಸಂಭವಿಸಬಹುದಾದುದರಿಂದಲೂ ಕ್ಷುದ್ರರನ್ನು ಭಯಪಡಿಸುವಂತೆ ಮಹನೀಯರಿಗೂ ತಾನು ಭಯಾವಹನಾಗಿರುವುದರಿಂದ ತನ್ನ ನಿರಂಕುಶೈಶ್ವರ್ಯ ಪ್ರಕಾಶವಾಗುವುದೆಂಬ ಪ್ರಕೃತೋಪಯೋಗವಿರುವುದರಿಂದಲೂ ದೇವಾದಿಗಳಿಗೂ ದಿವ್ಯಚಕ್ಷುಃಪ್ರದಾನಪೂರ್ವಕವಾಗಿ ಸ್ವಸ್ವರೂಪ ಸಾಕ್ಷಾತ್ಕಾರವನ್ನುಂಟುಮಾಡಿದನೆಂದರಿಯಬೇಕು. ... ... ॥೨೦॥

(ಗೀ॥ ವಿ॥) ಮೂರುಲೋಕದಲ್ಲಿರುವಂತವರೆಲ್ಲರೂ ಭಯಪಟ್ಟರೆಂದರೆ ಮೂರುಲೋಕದಲ್ಲಿರುವ ಭಕ್ತಜನರು ಮಾತ್ರವೇ ಭಯಪಟ್ಟರೆಂದರಿಯಬೇಕು. ಭಕ್ತರಲ್ಲದವರಿಗೆ ಭಗವದ್ದರ್ಶನ ಮುಂಟಾಗಲಾ

ರದಾದುದರಿಂದ ಅವರು ಭಯಪಡತಕ್ಕ ಕಾರಣವೇ ಇಲ್ಲವು. ಅಥವಾ ಮೂರುಲೋಕದಲ್ಲಿರುವಂತವರೆಲ್ಲರೂ ಈ ವಿಶ್ವರೂಪವನ್ನು ಕಣ್ಣಿನಿಂದ ನೋಡದಿದ್ದರೂ ಮನಸ್ಸಿನಿಂದ ಧ್ಯಾನಮಾಡಿ ಅದರಿಂದಅವರು ಭಯಪಟ್ಟಿರುವುದಂ ಅರ್ಜುನನು ನೋಡಿತನ್ನಂತೆಯೆ ಅವರೂ ಭಗವದ್ರೂಪವಂ ನೋಡಿ ಭಯಪಟ್ಟಿರುವಂತೆ ಅರ್ಜುನನು ತಿಳಿದಿರಬಹುದೆಂತಲಾದರೂ ಗ್ರಹಿಸಬಹುದು. ... ||೨೦||

ಶ್ಲೋ|| ಅಮೀಹಿತ್ವಾಂಸುರಸಂಘಾ ವಿಶಂತಿಕೇಚಿದ್ಭೀತಾಃ
ಪ್ರಾಂಜಲಯೋಗೃಣಂತಿ । ಸ್ವಸ್ತೀತ್ಯುಕ್ತ್ವಾಮಹರ್ಷಿ
ಸಿದ್ಧಸಂಘಾಃಸ್ತುವಂತಿತ್ವಾಂಸ್ತುತಿಭಿಃಪುಷ್ಕಲಾಭಿಃ" ೨೧||

ಪ|| ಅಮೀ-ಹಿ-ತ್ವಾಂ- (ರಾ|| ಗೀ|| ವಿ) ತ್ವಾ-ಸುರಸಂಘಾಃ-ವಿಶಂತಿ-ಕೇಚಿತ್-ಭೀತಾಃ-ಪ್ರಾಂಜಲಯಃ-ಗೃಣಂತಿ | ಸ್ವಸ್ತಿ-ಇತಿ- ಉಕ್ತ್ವಾ-ಮಹರ್ಷಿಸಿದ್ಧ ಸಂಘಾಃ-ಸ್ತುವಂತಿ-ತ್ವಾಂ-ಸ್ತುತಿಭಿಃ-ಪುಷ್ಕಲಾಭಿಃ ||

ಅ|| ಅಮೀಹಿಸುರ ಸಂಘಾಃ-ಈದೇವ ಸಮೂಹಗಳು, (ಗೀ|ವಿ||) ಇವರು ಅಮುಕ್ತ ದೇವವರ್ಗಕ್ಕೆ ಸೇರಿದವರು. ೧೫ನೇ ಶ್ಲೋಕದಲ್ಲಿ ಹೇಳಲ್ಪಟ್ಟವರು ಮುಕ್ತದೇವವರ್ಗಕ್ಕೆ ಸೇರಿದವರು. ತ್ವಾ - ನಿಮ್ಮನ್ನು, ವಿಶಂತಿ-ಶರಣ ಹೊಂದುತ್ತಾರೆ. ಕೇಚಿತ್-ಕೆಲವರು, ಭೀತಾಃ-ಭಯಪಟ್ಟವರಾಗಿಯೂ,ಪ್ರಾಂಜಲಯಃ-ಕೈಗಳನ್ನು ಜೋಡಿಸಿಕೊಂಡವರಾಗಿಯೂ, ಗೃಣಂತಿ-ಸ್ತುತಿವಾಕ್ಯಗಳನ್ನುಗ್ರಹಿಸುತ್ತಾರೆ. ಮಹರ್ಷಿಸಿದ್ಧ ಸಂಘಾಃ-ಮಹರ್ಷಿಗಳೇನು, ಸಿದ್ಧರೇನು, ಇವರುಗಳ ಸಮೂಹಗಳು, ಸ್ವಸ್ತೀತ್ಯುಕ್ತ್ವಾ-ಕ್ಷೇಮ ಮುಂಟಾಗಲೆಂದು ಹೇಳಿ, ಪುಷ್ಕಲಾಭಿಸ್ಸ್ತುತಿಭಿಃ-ಪೂರ್ಣವಾದ ಸ್ತೋತ್ರಗಳಿಂದ, ತ್ವಾಂ-ನಿಮ್ಮನ್ನು, ಸ್ತುವಂತಿ-ಸ್ತುತಿಸುತ್ತಾರೆ. ... ||೨೧||

(ಶಂ|| ಭಾ||) ಹಿಂದೆ ಅರ್ಜುನನಿಗೆ " ನಾವು ಕೌರವರನ್ನು ಜಯಿಸುವೆವೊ? ಅಥವಾ ಅವರೆ ನಮ್ಮನ್ನು ಜಯಿಸುವರೊ ? ಎಂಬದಾಗಿ ಸಂಶಯವುಂಟಾಯಿತು. ಅರ್ಜುನನ ಅಂತಹ ಸಂಶಯ ನಿವಾರಣವಂ ಮಾಡುವುದಕ್ಕಾಗಿ ಈ ಭಾರತ ಯುದ್ಧದಲ್ಲಿ ಪಾಂಡವರಿಗೇನೆ ಜಯವುಂಟಾಗುವುದಂ ಪ್ರದರ್ಶನ ಮಾಡಲು ಶ್ರೀ ಪರಮಾತ್ಮನು ಉದ್ಯುಕ್ತನಾದನು. ಆ ಸಂದರ್ಭವಂ ನೋಡಿ ಅರ್ಜುನನು ಹೇಳು

ತ್ತಾನೆ. ಅವಿಸಾಸುರಸಂಘಾಹಿ-ಈಯುದ್ಧರಂಗದಲ್ಲಿರುವಮನುಷ್ಯರೂ ಪಿಗಳಾದ ದೇವತೆಗಳೂ, ಇವರುಯಾರೆಂದರೆ ಶ್ರೀಪರಮಾತ್ಮನು ಶ್ರಿ ಕೃಷ್ಣಾವತಾರವಂ ಮಾಡುವಕಾಲದಲ್ಲಿ ಭಗವದಾಜ್ಞಾನುಸಾರವಾಗಿ ದೆವತೆಗಳು ಮನುಷ್ಯರಾಗಿ ಅವತರಿಸಿರುತ್ತಾರಲ್ಲವೆ;ಅವರೆಇವರೆಂದರಿಯ ಬೇಕು. ಇವರಲ್ಲಿ ಕೆಲವರು ನಿಮ್ಮನ್ನುನೋಡಿ ಓಡಿಹೋಗುವುದಕ್ಕೆ ಶಕ್ತಿ ಇಲ್ಲದೆ ಭಯಪಟ್ಟು ಕೈಗಳನ್ನುಜೊಡಿಸಿಕೊಂಡು ನಿಮ್ಮನ್ನುಸ್ತು ತಿಸುತಲಿರುವರು. ಮಹರ್ಷಿಗಳೂ ಸಿದ್ಧರೂ ಈಯುದ್ಧವು ಪ್ರಾಪ್ತ ವಾದ ಈಕಾಲದಲ್ಲಿ ಕಾಣಲ್ಪಡುವ ಉತ್ಪಾತಾದಿ ದುರ್ನಿಮಿತ್ತಗಳನ್ನು ನೋಡಿ ಜಗತ್ತಿಗೆ ಕ್ಷೇಮವುಂಟಾಗಲೆಂದು ಸಂಪೂರ್ಣವಾಗಿ ನಿಮ್ಮ ನ್ನುಸ್ತೋತ್ರಮಾಡುತ್ತಾರೆ. ... ॥೨೧॥

(ರಾ॥ ಭಾ॥) "ಅವಿಸಾಹಿತ್ವಾಸುರಸಂಘಾವಿಶಂತಿ,, ಎಂಬ ಪ್ರದೇ ಶದಲ್ಲಿ ಸಂಹಾರಾದಿಕವು ವಿವಕ್ಷಿತವಲ್ಲವೆಂತಲೂ ಭಗವತ್ಸಮಾಪಗಮನ ರೂಪವಾದ ಸೇವಾಪ್ರಕಾರವು ಹೇಳಲ್ಪಡುವುದೆಂತಲೂ ತಿಳಿಯಬೇ ಕು. ಉತ್ಕೃಷ್ಟರಾದ ಬ್ರಹ್ಮಾದಿ ದೇವಸಂಘಗಳು ನಿಖಿಲ ಜಗದಾ ಶ್ರಯ ಭೂತರಾದ ತಮ್ಮ ಸಮಿಸಾಪದಲ್ಲಿ ಪ್ರವೇಶಿಸುವರು. ಅವರಲ್ಲಿ ಕೆ ಲವರು ಮಹಾಘೋರರೂಪರಾದ ನಿಮ್ಮನ್ನು ನೋಡಿ ಭಯಪಟ್ಟವರಾ ಗಿ ಕೈಗಳನ್ನು ಜೋಡಿಸಿಕೊಂಡು ಸ್ತುತಿವಾಕ್ಯಗಳನ್ನು ಹೇಳುತಾ ಪ್ರಾರ್ಥಿಸುತಲಿರುತ್ತಾರೆ. ಪರಾವರತತ್ವಯಾಥಾತ್ಮ್ಯವಂ ತಿಳಿದ ಬೇ ರೆ ಕೆಲವು ಭೃಗುಮೊದಲಾದ ಮಹರ್ಷಿಗಳೂ, ಸನಕರೇ ಮೊ ದಲಾದ ಇವರ ಸಮೂಹಗಳೂಮಂಗಳ ವುಂಟಾಗಲೆಂಬದಾಗಿ ಹೇಳು ತಾ ತಮ್ಮಗಳ ಸ್ವರೂಪ ಸ್ವಭಾವಗಳಿಗೆ ಅನುರೂಪವಾಗಿರುವ ಸ್ತೋ ತ್ರಗಳಿಂದ ಸ್ತುತಿಸುತಲಿರುತ್ತಾರೆ. ॥೨೧॥

ಶ್ಲೋ॥ ರುದ್ರಾದಿತ್ಯಾವಸವೋಯೇಚ ಸಾಧ್ಯಾವಿಶ್ವೇಶ್ವಿ
ನೌಮರುತಶ್ಚೋಷ್ಮಪಾಶ್ಚ । ಗಂಧರ್ವಯಕ್ಷಾಸುರಸಿದ್ಧ
ಸಂಘಾ ವೀಕ್ಷಂತೆ ತ್ವಾಂವಿಸ್ಮಿತಾಶ್ಚೈವಸರ್ವೇ॥ ॥೨೨॥

ಪ॥ ರುದ್ರಾದಿತ್ಯಾಃ- ವಸವಃ- ಯೇ-ಚ- ಸಾಧ್ಯಾಃ- ವಿಶ್ವೇ- ಅಶ್ವಿನೌ- ಮರುತಃ- ಚ- ಊಷ್ಮಪಾಃ - ಚ । ಗಂಧರ್ವಯಕ್ಷಾಸುರಸಿದ್ಧಸಂಘಾಃ -ವೀಕ್ಷಂತೆ-ತ್ವಾಂ - ವಿಸ್ಮಿತಾಃ- ಚ- ಏವ- ಸರ್ವೇ॥

ಅ॥ ರುದ್ರಾದಿತ್ಯಾಃ-ಏಕಾದಶ ರುದ್ರರೂ ದ್ವಾದಶಾದಿತ್ಯರೂ, ವಸವಃ-ಅಷ್ಟವಸುಗಳೂ,ಯೇಸಾಧ್ಯಾಃ- ಯಾರಾದರೆಸಾಧ್ಯರೆಂಬನಾಮವುಳ್ಳವರೊ, ತೇಚ-ಅವರೂ, ವಿಶ್ವೇ-ವಿಶ್ವೇದೇವರೂ, ಅಶ್ವಿನೌ-ಅಶ್ವೀದೇವತೆಗಳೂ,ಮರುತಶ್ಚ-ನಲವತ್ತೊಂಭತ್ತುಮರುದ್ಗಣಗಳೂ, ಊಷ್ಮಪಾಶ್ಚ- "ಊಷ್ಮಭಾಗಾಹಿ ಪಿತರಃ,, ಎಂಬುವಂತೆ ಉಷ್ಣವಾದ ಅನ್ನಾದಿಗಳನ್ನು ಭುಜಿಸುವ ಪಿತೃದೇವತೆಗಳೂ, ಸರ್ವೇ-ಸಮಸ್ತರಾದ, ಗಂಧರ್ವ ಯಕ್ಷಸುರಸಿದ್ಧ ಸಂಘಾಶ್ಚ-ಗಂಧರ್ವರೂ ಯಕ್ಷರೂ ಅಸುರರೂ ಸಿದ್ಧರೂ, ಎಂಬ ಇವರ ಸಮೂಹವೂ,ವಿಸ್ಮಿತಾಃ-ಆಶ್ಚರ್ಯ ಪಟ್ಟವರಾಗಿ, ತ್ವಾಮೇವ-ತಮ್ಮನ್ನೇ, ವೀಕ್ಷಂತೆ-ನೋಡುತ್ತಾರೆ. ... ... ॥೨೨॥

(ತಾತ್ಪರ್ಯವು) ಹನ್ನೊಂದು ರುದ್ರರು ಹನ್ನೆರಡಾದಿತ್ಯರೂ ಯೆಂಟು ವಸುಗಳೂ ಸಾಧ್ಯರೆಂಬದೇವತೆಗಳೂ ವಿಶ್ವೇದೇವತೆಗಳೂ ಅಶ್ವಿನೀ ದೇವತೆಗಳೂ ನಲವತ್ತೊಂಭತು ಮರುದ್ಗಣಗಳೂ, (ವಾಯುಗಣಗಳೂ) ಪಿತೃದೇವತೆಗಳೂ ಗಂಧರ್ವ ಯಕ್ಷಾಸುರ ಸಿದ್ಧ ಸಂಘಗಳೆಂಬೀ ಸರ್ವರೂ ಆಶ್ಚರ್ಯಪಟ್ಟು ನಿಮ್ಮನ್ನು ಸ್ವಲ್ಪವೂ ವಿರಾಮವಂ ಹೊಂದದೆ ನೋಡುತಲಿರುತ್ತಾರೆ. * ॥೨೨॥

ಶ್ರೀ॥ಊಷ್ಮಪಾಶ್ಚ- ಅನ್ನವೇಮೊದಲಾದ ಉಷ್ಣವಾಗಿರುವ ಆಹಾರ ವಸ್ತುಗಳನ್ನು ತಿನ್ನುವಂತವರು ಊಷ್ಮಪರೆನ್ನಲ್ಪಡುವರು. ಅಂತವರು ಪಿತೃದೇವತೆಗಳಾದುದರಿಂದ ಈಶಬ್ದಕ್ಕೆ ಪಿತೃದೇವತೆಗಳೆಂದು ಅರ್ಥಮಾಡಲ್ಪಟ್ಟಿತು. "ಯಾವದುಷ್ಣಂಭವೇದನ್ನಂಯಾವದಶ್ನಂತಿವಾಗ್ಯತಾಃ । ಪಿತರಸ್ತಾವದಶ್ನಂತಿಯಾವನ್ನೋಕ್ತಾಹವಿರ್ಗುಣಾಃ,, ಅನ್ನವೇಮೊದಲಾದ ಭೋಜ್ಯವಸ್ತುಗಳು ಯಾವತ್ಪರ್ಯಂತವು ಉಷ್ಣವಾಗಿರುವವೊ,ಯಾವತ್ಪರ್ಯಂತವಾಗಿಬ್ರಾಹ್ಮಣರು ಪದಾರ್ಥಗಳ ಗುಣಗಳನ್ನು ಹೇಳದೆ ಮೌನವಾಗಿ ಭೋಜನವಂ ಮಾಡುವರೊ ಅದುವರೆಗೂ ಪಿತೃಗಳು ಭುಜಿಸುವರೆಂದಿದರತಾತ್ಪರ್ಯವು.॥೨೨॥

(ಶಂ॥ ಭಾ॥ ಗಂಧರ್ವರು_ ಹಾಹಾಹೂಹೂ ಮೊದಲಾದವರು, ಕುಬೇರಾದಿಗಳು ಯಕ್ಷರು, ವಿರೋಚನನೇ ಮೊದಲಾದವರು ಅಸುರರು,ಕಪಿಲರೇ ಮೊದಲಾದವರು ಸಿದ್ಧರೆಂದರಿಯಬೇಕು. ॥೨೨॥

ಶ್ಲೋ ॥ ರೂಪಂಮಹತ್ತೇಬಹುವಕ್ತ್ರನೇತ್ರಂಮಹಾಬಾಹೋಬಹುಬಾಹೂರುಪಾದಂ । ಬಹೂದರಂಬಹುದಂಷ್ಟ್ರಾಕರಾಳಂದೃಷ್ಟ್ವಾಲೋಕಾಃಪ್ರವ್ಯಧಿತಾಸ್ತಥಾಹಂ ॥ ... ... ॥೨೩॥

ಪ॥ ರೂಪಂ- ಮಹತ್- ತೇ- ಬಹುವಕ್ತ್ರನೇತ್ರಂ - ಮಹಾಬಾಹೋ - ಬಹುಬಾಹೂರುಪಾದಂ | ಬಹೂದರಂ- ಬಹುದಂಷ್ಟ್ರಾಕರಾಳಂ- ದೃಷ್ಟ್ವಾ-ಲೋಕಾಃ - ಪ್ರವ್ಯಧಿತಾಃ- ತಥಾ- ಅಹಂ॥

ಅ॥ ಮಹಾಬಾಹೋ- ಮಹಾಬಾಹುಶಾಲಿಯಾದ ಎಲೈ ಪರಮಾತ್ಮನೇ! ಮಹಾಸ್ವಾಮಿಯೇ! ಮಹತ್- ಅತಿವಿಸ್ತಾರವಾಗಿಯೂ, ಬಹುವಕ್ತ್ರನೇತ್ರಂ- ಲೆಕ್ಕವಿಲ್ಲದ ಮುಖಗಳೇನು, (ಮುಖಗಳನೇಕಗಳಾಗಿರುವುದರಿಂದ ಒಂದೊಂದು ಮುಖಕ್ಕೆ ಎರಡು ಕಣ್ಣುಗಳಂತೆ ಸಮುದಾಯದಲ್ಲಿ ಲೆಕ್ಕವಿಲ್ಲದ) ಕಣ್ಣುಗಳೇನು, ಇವುಗಳುಳ್ಳದ್ದಾಗಿಯೂ, ಬಹುಬಾಹೂರುಪಾದಂ- ನಾನಾಕೈಗಳು ನಾನಾತೊಡೆಗಳು ನಾನಾ ಕಾಲುಗಳು ಇವುಗಳುಳ್ಳದ್ದಾಗಿಯೂ, ಬಹೂದರಂ - ನಾನಾ ಉದರಗಳುಳ್ಳದ್ದಾಗಿಯೂ, (ಉದರವೆಂದರೆ ಹೊಟ್ಟೆಯು) ಬಹುದಂಷ್ಟ್ರಾಕರಾಳಂ- ಅನೇಕಗಳಾದ ಕೋರೆ ಹಲ್ಲುಗಳಿಂದ ಭಯಂಕರವಾಗಿಯೂ ಇರುವ, ತೇ-ತಮ್ಮ, ರೂಪಂ-ದಿವ್ಯರೂಪವನ್ನು, ದೃಷ್ಟ್ವಾ- ನೋಡಿ, ಲೋಕಾಃ-ಪೂರ್ವದಂತೆ ಯುದ್ಧವನ್ನು ನೋಡಲುದ್ದೇಶ್ಯದಿಂದ ಬಂದ ಅನುಕೂಲಪ್ರತಿಕೂಲಮಧ್ಯಸ್ಥರೆಂಬ ತ್ರಿವಿಧರಾದ ಜನಗಳೂ, ಪ್ರವ್ಯಧಿತಾಃ- ಭಯಪಟ್ಟಿರುವರು. ತಥಾ-ಆ ಪ್ರಕಾರವೆ, ಅಹಂ-ನಾನು,ಪ್ರವ್ಯಥಿತಃ- ಭಯಪಟ್ಟಿರುವೆನು. ॥೨೩॥

(ತಾತ್ಪರ್ಯವು) ಮಹಾಬಾಹುಶಾಲಿಯಾದ ಎಲೈ ಮಹಾಸ್ವಾಮಿಯೇ ಅನೇಕಗಳಾದ ಮುಖಗಳೇನು, ಕಣ್ಣುಗಳೇನು, ತೊಡೆಗಳೇನು, ಕಾಲುಗಳೇನು, ಉದರಗಳೇನು, ಇವುಗಳುಳ್ಳದ್ದಾಗಿಯೂಇರುವ ಅನೇಕಗಳಾದ ಕೋರೆಹಲ್ಲುಗಳಿಂದ ಭಯಂಕರವಾದ ನಿಮ್ಮ ಈರೂಪವನ್ನು ನೋಡಿಲೋಕರೆಲ್ಲರೂ ಅತ್ಯಂತ ಭಯವನ್ನುಹೊಂದಿರುವರು, ನಾನೂ ಆ ಪ್ರಕಾರವೇ ಭಯಪಟ್ಟಿರುವೆನು. ॥೨೩॥

ತ್ರಾಂತರಾತ್ಮಾಧೃತಿಂನವಿಂದಾಮಿಶಮಂಚವಿಷ್ಣೋ ॥೨೪॥

ಪ॥ ನಭಸ್ಪೃಶಂ-ದೀಪ್ತಂ-ಅನೇಕವರ್ಣಂ-ವ್ಯಾತ್ತಾನನಂ-ದೀಪ್ತವಿಶಾಲನೇತ್ರಂ। ದೃಷ್ಟ್ವಾ-ಹಿ-ತ್ವಾಂ-ಪ್ರವ್ಯಥಿತಾಂತರಾತ್ಮಾ-ಧೃತಿಂ-ನ-ವಿಂದಾಮಿ-ಶಮಂ-ಚ-ವಿಷ್ಣೋ॥

ಅ॥ಹೇವಿಷ್ಣೋ-ಸರ್ವವಸ್ತುಗಳಲ್ಲಿಯೂ ವ್ಯಾಪಿಸಿರುವ ಎಲೈ ಸರ್ವಸ್ವಾಮಿಯೇ!ನಭಸ್ಪೃಶಂ- ಪರಮಾಕಾಶಮಾದ ಪರಮಪದವನ್ನಾಶ್ರಯಿಸಿರುವಂತವರಾಗಿಯೂ, ದೀಪ್ತಂ- ಪ್ರಕಾಶಯುಕ್ತರಾಗಿಯೂ, ಅನೇಕವರ್ಣಂ-ಶುಕ್ಲರಕ್ತಾದ್ಯನೇಕ (ಬಿಳಿಪು ಕೆಂಪು ಮೊದಲಾದಅನೇಕ) ವರ್ಣಗಳುಳ್ಳವರಾಗಿಯೂ, ವ್ಯಾತ್ತಾನನಂ- ತೆರೆಯಲ್ಪಟ್ಟ ಮುಖಗಳುಳ್ಳವರಾಗಿಯೂ, ದೀಪ್ತವಿಶಾಲನೇತ್ರಂ- ಜ್ವಲಿಸುತಲಿರುವ ವಿಸ್ತಾರವಾದ ಕಣ್ಣುಗಳುಳ್ಳವರಾಗಿಯೂಇರುವ,ತ್ವಾಂ-ತಮ್ಮನ್ನು,ದೃಷ್ಟ್ವಾ-ನೋಡಿ, (ದಿವ್ಯಚಕ್ಷುಸ್ಸಿನಿಂದ ಪ್ರತ್ಯಕ್ಷವಾಗಿ ನೋಡಿಯೆಂದು ತಾತ್ಪರ್ಯವು.) ಪ್ರವ್ಯಥಿತಾಂತರಾತ್ಮಾ- ಅತ್ಯಂತವಾಗಿ ಭಯಪಟ್ಟಮನಸ್ಸುಳ್ಳವನಾಗಿ, ಧೃತಿಂ- ದೇಹಧಾರಣೆಯನ್ನು, ನವಿಂದಾಮಿ- ನಾನು ಹೊಂದಲಿಲ್ಲವು. ಶಮಂಚ- ಮನಸ್ಸೇಮೊದಲಾದ ಇಂದ್ರಿಯಗಳ ಅವ್ಯಾಕುಲರಾಹಿತ್ಯವನ್ನೂ, ನವಿಂದಾಮಿ- ಹೊಂದಲಿಲ್ಲವು.॥೨೪॥

(ಕಂ) ಅನೇಕವರ್ಣಂ- ಅನೇಕವಾದದ್ದಾಗಿಯೂ ಭಯಂಕರವಾದದ್ದಾಗಿಯೂ ಇರುವ ಅವಯವಗಳುಳ್ಳ, ಶಮಂಚ- ಸಂತೋಷವನ್ನೂ, (ಗೀ॥ ವಿ॥) ಸುಖವನ್ನೂ. ॥೨೪॥

(ತಾತ್ಪರ್ಯವು) ಎಲೈ ಶ್ರೀಮಹಾವಿಷ್ಣುವೇ ? ಪರಮಾಕಾಶವಾದಪರಮಪದವನ್ನಾಶ್ರಯಿಸಿದವರಾಗಿಯೂ ಪ್ರಕಾಶವುಳ್ಳವರಾಗಿಯೂ ಬಿಳುಪು ಕೆಂಪು ಮೊದಲಾದ ಅನೇಕ ವರ್ಣಗಳುಳ್ಳವರಾಗಿಯೂ ತೆರೆಯಲ್ಪಟ್ಟ ಮುಖಗಳುಳ್ಳವರಾಗಿಯೂ ಜ್ವಲಿಸುತಲಿರುವ ವಿಸ್ತಾರವಾದ ಕಣ್ಣುಗಳುಳ್ಳವರಾಗಿಯೂ ಇರುವ ನಿಮ್ಮನ್ನು ತಮ್ಮಗಳಿಂದ ಪ್ರಸಾದಿಸಲ್ಪಟ್ಟ ದಿವ್ಯ ಚಕ್ಷುಸ್ಸಿನಿಂದ ಸಾಕ್ಷಾತ್ಕರಿಸಿ ಅತ್ಯಂತವಾಗಿ ಭಯಪಟ್ಟ ಮನಸ್ಸುಳ್ಳವನಾಗಿ ದೇಹಧಾರಣವಂ ಮಾಡಲಾರೆನು. ಅವ್ಯಾಕುಲವಿಲ್ಲದ ಮನಸ್ಸುಳ್ಳವನಾಗಿಯೂ ಆಗಲಾರೆನು. ॥೨೪॥

ಶ್ಲೋ॥ ದಂಷ್ಟ್ರಾಕರಾಲಾನಿಚತೇಮುಖಾನಿದೃಷ್ಟ್ವೈವ

ಕಾಲಾನಲಸನ್ನಿಭಾನಿ । ದಿಶೋನಜಾನೆ ನ ಲಭೇಚ ಶರ್ಮ
ಪ್ರಸೀದ ದೇವೇಶ ಜಗನ್ನಿವಾಸ॥ ॥೨೫॥

ಪ॥ ದಂಷ್ಟ್ರಾಕರಾಳಾನಿ- ಚ- ತೇ- ಮುಖಾನಿ- ದೃಷ್ಟ್ವೈವ- ಏವ- ಕಾಲಾನಲ ಸನ್ನಿಭಾನಿ । ದಿಶಃ- ನಜಾನೆ- ನ- ಲಭೆ- ಚ- ಶರ್ಮ- ಪ್ರಸೀದ- ದೇವೇಶ-ಜಗನ್ನಿವಾಸ ॥

ಅ॥ ಹೇದೇವೇಶ- ಎಲೈ ಬ್ರಹ್ಮಾದಿ ದೇವತೆಗಳಿಗೂ ನಿಯಾಮ ಕನಾದ ಮಹಾಸ್ವಾಮಿಯೆ, ಜಗನ್ನಿವಾಸ- ಜಗತ್ತಿಗೆಲ್ಲವೂ ಆಧಾರಭೂ ತನಾದ ಎಲೈ ಮಹಾಸ್ವಾಮಿಯೆ, ದಂಷ್ಟ್ರಾಕರಾಳಾನಿ- ಕೋರೆಹ ಲ್ಲುಗಳಿಂದ ಭಯಂಕರಗಳಾಗಿಯೂ, ಕಾಲಾನಲ ಸನ್ನಿಭಾನಿ- ಪ್ರಲಯ ಕಾಲಾಗ್ನಿಯಂತೆ ಜ್ವಲಿಸುತಲೂ ಇರುವ, ಮುಖಾನಿ- ತಮ್ಮ ಮುಖ ಗಳನ್ನು, ದೃಷ್ಟ್ವೈವ- ನೋಡಿದ ಮಾತ್ರದಿಂದಲೆ, ದಿಶೋನಜಾನೆ- ಪೂರ್ವಪಶ್ಚಿಮವೇ ಮೊದಲಾದ ದಿಕ್ಕುಗಳಿವು ಎಂಬದಾಗಿ ನಾನರಿಯ ಲಾರೆನು. ಶರ್ಮಚ- ಸುಖವನ್ನೂ, ನಲಭೇ- ನಾನು ಹೊಂದಲಾ ರೆನು, ಪ್ರಸೀದ- ನನ್ನನ್ನುಕುರಿತು ಪ್ರಸನ್ನನಾಗು. ಹೇಗಾದರೆ ನಾನುಪೂರ್ವದಂತೆಸ್ವಸ್ಥಭಾವವುಳ್ಳವನಾಗುವೆನೊಆಪ್ರಕಾರವಾಗಿಮಾ ಡೆಂದಭಿಪ್ರಾಯವು. ... ... ॥೨೫॥

(ತಾತ್ಪರ್ಯವು.) ಬ್ರಹ್ಮಾದಿದೇವತೆಗಳಿಗೂ ನಿಯಂತಾಆಗಿಯೂ ಅಖಿಲ ಜಗದಾಧಾರಭೂತನಾಗಿಯೂ ಇರುವಎಲೈಮಹಾಸ್ವಾಮಿಯೆ? ಕೋರೆಹಲ್ಲುಗಳಿಂದ ಭಯಂಕರಗಳಾಗಿಯೂ ಪ್ರಲಯ ಕಾಲಾಗ್ನಿ ಯಂತೆ ಜ್ವಲಿಸುತಲೂಇರುವ ತಮ್ಮ ಮುಖಗಳನ್ನು ನೋಡಿದಮಾತ್ರ ದಲ್ಲಿಯೇ ಇದು ಪೂರ್ವದಿಕ್ಕು, ಇದು ಪಶ್ಚಿಮವು, ಎಂಬೀ ದಿಕ್ಕುಗಳ ನ್ನರಿಯೆನು, ಸುಖವನ್ನೂ ನಾನು ಹೊಂದಲಾರೆನು, ಆದುದರಿಂದ ನನ್ನನ್ನು ಕುರಿತು ಪ್ರಸನ್ನನಾಗು. ನಾನು ಹೇಗಾದರೆ ಪೂರ್ವಸ್ಥಿ ತಿಯಂ ಹೊಂದುವೆನೂ ಆಪ್ರಕಾರವಾಗಿರೆಂದಭಿಪ್ರಾಯವು. ॥೨೫॥

(ತಾ॥ ಚಂ॥) ಇತರಗಳಾದ ಅವಯವಗಳಿಗಿಂತಲೂ ಮುಖಗ ಳಿಗೆ ಅತಿ ಭಯಂಕರತ್ವವನ್ನು ತೋರಿಸುವುದಕ್ಕಾಗಿ ‘‘ದಂಷ್ಟ್ರಾಕ ರಾಳಾನಿ,, ಎಂಬ ಶ್ಲೋಕವು ಪ್ರವೃತ್ತವಾಯಿತು. ॥೨೫॥

ಶ್ಲೋ॥ ಅಮೀಸರ್ವೇಧೃತರಾಷ್ಟ್ರಸ್ಯ ಪುತ್ರಾಸ್ಸರ್ವೈಸ್ಸ
ಹೈವಾವನಿಪಾಲಸಂಘೈಃ । ಭೀಷ್ಮೋದ್ರೋಣಸ್ಸೂತಪು
ತ್ರಸ್ತಥಾಸೌಸಹಾಸ್ಮದೀಯೈರಪಿಯೋಧಮುಖ್ಯೈಃ॥೨೬॥
ಶ್ಲೋ॥ ವಕ್ತ್ರಾಣಿತೇತ್ವರಮಾಣಾವಿಶಂತಿದಂಷ್ಟ್ರಾಕರಾ
ಳಾನಿಭಯಾನಕಾನಿ।ಕೇಚಿದ್ವಿಲಗ್ನಾದಶನಾಂತರೇಷುಸಂ
ದೃಶ್ಯಂತೆ ಚೂರ್ಣಿತೈರುತ್ತಮಾಂಗೈಃ। ॥೨೭॥

ಪ॥ (೧) ಅಮೀ-(೨) ಚ-ತ್ವಾ-ಧೃತರಾಷ್ಟ್ರಸ್ಯ-ಪುತ್ರಾಃ-ಸರ್ವೇ-(೩) ಸಹ-ಏವ-ಅವನಿಪಾಲಸಂಘೈಃ । ಭೀಷ್ಮಃ-ದ್ರೋಣಃ-ಸೂತಪುತ್ರಃ-ತಥಾ-ಅಸೌ-ಸಹ-ಅಸ್ಮದೀಯೈಃ-ಅಪಿ-ಯೋಧಮುಖ್ಯೈಃ ॥ ವಕ್ತ್ರಾಣಿ-ತೇ-ತ್ವರಮಾಣಾಃ-ವಿಶಂತಿ-ದಂಷ್ಟ್ರಾಕರಾಲಾನಿ-ಭಯಾನಕಾನಿ । ಕೇಚಿತ್-ವಿಲಗ್ನಾಃ-ದಶನಾಂತರೇಷು-ಸಂದೃಶ್ಯಂತೇ-ಚೂರ್ಣಿತೈಃ-ಉತ್ತಮಾಂಗೈಃ ॥(ರಾ॥ (೧)ಅಮೀ-ಸರ್ವೇ॥೩)ಸರ್ವೈಃ॥ ತ್ವಾಂ ॥೨॥ ಶ್ರೀ॥)

ಅ॥ ಸರ್ವೇ-ಸಮಸ್ತರಾದ, ಅಮೀಧೃತರಾಷ್ಟ್ರಸ್ಯಪುತ್ರಾಃ-ಈಧೃತರಾಷ್ಟ್ರನ ಮಕ್ಕಳಾದ ದುರ್ಯೋಧನಾದಿಗಳೂ, ಭೀಷ್ಮಶ್ಚ-ಭೀಷ್ಮಾಚಾರ್ಯರೂ,ದ್ರೋಣಶ್ಚ-ದ್ರೋಣಾಚಾರ್ಯರೂ,ಅಸೌ-ಸೂತಪುತ್ರನಾದ ಕರ್ಣನೂ, ಅವನಿಪಾಲ ಸಂಘೈಸ್ಸಹೈವ - ರಾಜಸಮೂಹಗಳೊಡನೇ ಕೂಡಿಯೆ, ತಥಾ-ಆಪ್ರಕಾರವೇ, ಅಸ್ಮದೀಯೈಃ-ನಮ್ಮಗಳಿಗೇ ಸೇರಿರುವ, ಯೋಧಮುಖ್ಯೈಸ್ಸಹ-ಯುದ್ಧದಲ್ಲಿ ಮುಖ್ಯರಾದವರೊಡನೆ ಕೂಡಿಯೆ, ತ್ವಾ-ನಿಮ್ಮನ್ನು.ಕುರಿತು, ತ್ವರಮಾಣಾಃ-ತ್ವರೆಯುಳ್ಳವರಾಗಿ, ದಂಷ್ಟ್ರಾಕರಾಳಾನಿ-ಕೋರೆಹಲ್ಲುಗಳಿಂದ ಕ್ರೂರವಾಗಿರುವ,ತೇವಕ್ತ್ರಾಣಿ- ನಿನ್ನಬಾಯಿಗಳನ್ನು, ವಿಶಂತಿ-ಪ್ರವೇಶಿಸುತ್ತಾರೆ. ಕೇಚಿತ್-ಕೆಲವರು, ದಶನಾಂತರೇಷು-ಹಲ್ಲುಗಳ ಮಧ್ಯಪ್ರದೇಶಗಳಲ್ಲಿ, ವಿಲಗ್ನಾಃ-ಸಿಕ್ಕಿಕೊಂಡು,ಚೂರ್ಣಿತೈಃ-ಚೂರ್ಣವಾಗಿ ಮಾಡಲ್ಪಟ್ಟ, ಉತ್ತಮಾಂಗೈಃ-ಶಿರಸ್ಸುಗಳೊಡನೆ, ಸಂದೃಶ್ಯಂತೇ-ಕಾಣಲ್ಪಡುತ್ತಾರೆ. (ರಾ॥ ಸರ್ವೇ ಅಮೀಧೃತರಾಷ್ಟ್ರಸ್ಯ ಪುತ್ರಾಸ್ಸರ್ವೈರವನಿಪಾಲಸಂಘೈಃ ,, ಎಂಬದಾಗಿ ಅನ್ವಯವು.।೨೬॥ ।೨೭॥

(ರಾ॥ ಭಾ॥) ಈ ಪ್ರಕಾರವಾಗಿ ಸಮಸ್ತ ಜಗತ್ತುಗಳ ಸ್ವರೂ

ಜಸ್ಥಿತಿ ಪ್ರವೃತ್ತಿಗಳು ತನ್ನ ಅಧೀನವಾಗಿರುವ ಪ್ರಕಾರವನ್ನು ತೋರಿಸಿರುವ ಶ್ರೀಪಾರ್ಥ ಸಾರಥಿಯಾದ ಶ್ರೀಕೃಷ್ಣನು ದುರ್ಯೋಧನಾದಿ ರಾಜವೇಷಧಾರಿಗಳಾಗಿಯೂ ಧರ್ಮರಾಜರ ಸೇನಾಜನಗಳಲ್ಲಿ ಅನುಪ್ರವಿಷ್ಟರಾಗಿಯೂ, ಇರುವ ಅಸುರರನ್ನು ಸಂಹರಿಸಿ ತಾನು ಮಾಡುವ ಭೂಭಾರಾವತರಣ ವೆಂಬಲೀಲೆಯನ್ನು ಅರ್ಜುನನಿಗೆ ತೋರಿಸಿದನು. ಅರ್ಜುನನೂಪರಮಾತ್ಮನಸರ್ವಪ್ರಪಂಚಸೃಷ್ಟಿಕರ್ತೃತ್ವಾದಿರೂಪವಾದ ಸರ್ವೈಶ್ವರ್ಯವನ್ನು ಪ್ರತ್ಯಕ್ಷವಾಗಿ ಕಂಡು ಸರ್ವಾಂತರಾತ್ಮನಾದ ಆಭಗವಂತನಲ್ಲಿಯೇ ಇನ್ನು ಮುಂದೆ ದುರ್ಯೋಧನಾದಿ ಸಮಸ್ತ ದುಷ್ಟರಾಜರೂ ಲಯಿಸಿ ಹೋಗುವ ಪ್ರಕಾರವನ್ನು ಅವರಿಂದನುಗ್ರಹಿಸಲ್ಪಟ್ಟ ದಿವ್ಯ ಚಕ್ಷುಸ್ಸಿನಿಂದ ಕಂಡು ವಿಜ್ಞಾಪಿಸುತ್ತಾನೆ. ಈ ಧೃತರಾಷ್ಟ್ರರಾಜನ ಮಕ್ಕಳಾದ ದುರ್ಯೋಧನಾದಿಗಳೂ, ಭೀಷ್ಮರೂ,ದ್ರೋಣಾಚಾರ್ಯರೂ,ಕರ್ಣನೂ,ಮತ್ತೂ ನಮ್ಮ ಶತ್ರುಪಕ್ಷದಲ್ಲಿರುವಸಮಸ್ತ ರಾಜರೊಡನೆ ನಮ್ಮ ಪಕ್ಷದಲ್ಲಿಸೇರಿರುವ ಕೆಲವು ರಾಜರೊಡನೆಯೂ, ಅತ್ಯಂತ ಶೀಘ್ರವಾಗಿ ಕೋರೆಹಲ್ಲುಗಳಿಂದ ಘೋರಾಕಾರವಾಗಿರುವ ಭಯಂಕರಗಳಾದ ತಮ್ಮ ಬಾಯಿಗಳಲ್ಲಿ ವಿನಾಶಾರ್ಥವಾಗಿ ಪ್ರವೇಶಿಸುತ್ತಾರೆ. ಅವ್ಟರಲ್ಲಿಯೆ ಕೆಲವರು ನರನರವಂಒದಾಗಿ ಕಡಿದು ಚೂರ್ಣವಾಗಿ ಮಾಡಲ್ಪಟ್ಟ ತಲೆಗಳೊಡನೆ ನಿಮ್ಮ ಹಲ್ಲುಗಳ ಸಂದುಗಳಲ್ಲಿ ಸಿಕ್ಕಿಕೊಂಡವರಾಗಿ (ತೆಂಗಿನಕಾಯಿ ಚಿಪ್ಪಿಯ ಶಕಲಗಳು ನಮ್ಮಗಳ ಹಲ್ಲುಗಳ ಸಂದಿನಲ್ಲಿ ಕಾಣುವಂತೇ) ಕಾಣಲ್ಪಡುತ್ತಾರೆ. ॥೭೬॥ ॥೭೭॥

ಶ್ಲೋ॥ ಯಥಾನದೀನಾಂಬಹವೋಂಬುವೇಗಾಸ್ಸಮುದ್ರ
ಮೇವಾಭಿಮುಖಾದ್ರವಂತಿ ।ತಥಾತವಾಮೀನರಲೋಕ
ವೀರಾವಿಶಂತಿವಕ್ತ್ರಾಣ್ಯಭಿವಿಜ್ವಲಂತಿ॥ ॥೭೮॥

ಶ್ಲೋ॥ ಯಥಾಪ್ರದೀಪ್ತಂಜ್ವಲನಂಪತಂಗಾವಿಶಂತಿ
ನಾಶಾಯ ಸಮೃದ್ಧವೇಗಾಃ । ತಥೈವನಾಶಾಯವಿಶಂತಿ
ಲೋಕಾಸ್ತವಾಪಿವಕ್ತ್ರಾಣಿಸಮೃದ್ಧವೇಗಾಃ॥ ॥೭೯॥

ಪ॥ ಯಥಾ-ನದೀನಾಂ-ಬಹವಃ-ಅಂಬುವೇಗಾಃ-ಸಮುದ್ರಂ-ಏವ-ಅಭಿಮುಖಾಃ-

ದ್ರವಂತಿ | ತಥಾ-ತವ-ಅಮೀ- ನರಲೋಕವೀರಾಃ-ವಿಶಂತಿ ವಕ್ತ್ರಾಣಿ-ಅಭಿವಿಜ್ವಲಂತಿ||
ಯಥಾ-ಪ್ರದೀಪ್ತಜ್ವಲನಂ-ಪತಂಗಾಃ-ವಿಶಂತಿ-ನಾಶಾಯ-ಸಮೃದ್ಧವೇಗಾಃ| ತಥಾ-ಏವ-
ನಾಶಾಯ-ವಿಶಂತಿ-ಲೋಕಾಃ-ತವ-ಅಪಿ-ವಕ್ತ್ರಾಣಿ-ಸಮೃದ್ಧವೇಗಾಃ ||

ಅ|| ಬಹವಃ-ಅನೇಕಗಳಾಗಿರುವ, ನದೀನಾಮಂಬುವೇಗಾಃ-ನದಿಗಳ ಜಲಪ್ರವಾಹಗಳು, ಯಥಾ - ಹೇಗಾದರೆ, ಸಮುದ್ರಮೇವ-ಸಮುದ್ರವನ್ನು ಕುರಿತೇ, ಅಭಿಮುಖಾಃ-ಸಾಕ್ಷಾತ್ ಯೆದುರಾಗಿ, ದ್ರವಂತಿ-ಓಡುತ್ತವೆಯೊ, ತಥಾ-ಆಪ್ರಕಾರವೇ, ಅಮೀನರಲೋಕವೀರಾಃ-ಈ ಮನುಷ್ಯಲೋಕದಲ್ಲಿರುವಪ್ರಧಾನರಾದವೀರರೆಲ್ಲರೂ, ಅಭಿವಿಜ್ವಲಂತಿ-ಎದುರಾಗಿ ಭಯಪಟ್ಟುಕೊಂಡು ಜ್ವಲಿಸುತಲಿರುವ, ತವವಕ್ತ್ರಾಣಿ-ನಿಮ್ಮ ಮುಖಗಳನ್ನು, ವಿಶಂತಿ-ಪ್ರವೇಶಿಸುತ್ತಾರೆ. ಪತಂಗಾಃ-ದೀಪವನ್ನಾರಿಸುವುದಕ್ಕಾಗಿ ಬರುವ ಪತಂಗವೆಂಬ ಕೀಟಗಳು, ಸಮೃದ್ಧವೇಗಾಃ-ಅಧಿಕವಾದ ವೇಗವುಳ್ಳವುಗಳಾಗಿ, ನಾಶಾಯ-ತಮ್ಮಗಳ ವಿನಾಶಕ್ಕೋಸ್ಕರ, ಯಥಾ-ಹೇಗಾದರೆ, ಪ್ರದೀಪ್ತಜ್ವಲನಂ-ಜ್ವಲಿಸುತಲಿರುವವನ್ಹಾಗ್ನಿಯನ್ನು, ವಿಶಂತಿ-ಪ್ರವೇಶಿಸುವುವೊ, ತಥೈವ-ಆಪ್ರಕಾರವೇ, ಲೋಕಾಃ-ಹಿಂದೆ ಹೇಳಲ್ಪಟ್ಟ ಜನಗಳು, ನಾಶಾಯ- ನಾಶಹೊಂದುವುದಕ್ಕಾಗಿಯೆ, ತವ-ನಿಮ್ಮ, ವಕ್ತ್ರಾಣ್ಯಪಿ-ಮುಖಗಳನ್ನೂ, ವಿಶಂತಿ-ಪ್ರವೇಶಿಸುತ್ತಾರೆ. ... ... ||೨೮|೨೯||

ತಾ|| ಈ ರಾಜರೆಲ್ಲರೂ ನದೀ ಪ್ರವಾಹಗಳು ಸಮುದ್ರದಲ್ಲಿ ಪ್ರವೇಶಿಸುವಂತೆಯೂ, ಪತಂಗ ಕೀಟಗಳು ಮಹತ್ತಾದ ಅಗ್ನಿಜ್ವಾಲೆಯಲ್ಲಿ ಪ್ರವೇಶಿಸುವಂತೆಯೂ ನಿಮ್ಮ ಬಾಯಿಗಳಲ್ಲಿ ತಾವಾಗಿಯೇ ನಾಶಹೊಂದುವುದಕ್ಕಾಗಿ ಬಹುವೇಗದೊಡನೆ ಬಂದು ಬೀಳುತ್ತಾರೆಂದು ತಾತ್ಪರ್ಯವು. ... ... ||೨೮|೨೯||

ಶ್ಲೋ|| ಲೇಲಿಹ್ಯಸೇಗ್ರಸಮಾನಸ್ಸಮಂತಾಲ್ಲೋಕಾನ್
ಸಮಗ್ರಾನ್ವದನೈರ್ಜ್ವಲದ್ಭಿಃ |ತೇಜೋಭಿರಾಪೂರ್ಯಜಗ
ತ್ಸಮಗ್ರಂಭಾಸಸ್ತವೋಗ್ರಾಃಪ್ರತಪಂತಿವಿಷ್ಣೋ|೩೦|

ಪ|| ಲೇಲಿಹ್ಯಸೇ-ಗ್ರಸಮಾನಃ- ಸಮಂತಾತ್- ಲೋಕಾನ್-ಸಮಗ್ರಾನ್-ವದನೈಃ-ಜ್ವಲದ್ಭಿಃ|ತೇಜೋಭಿಃ|ಆಪೂರ್ಯ-ಜಗತ್ - ಸಮಗ್ರಂ-ಭಾಸಃ - ತವ-ಉಗ್ರಾಃ-ಪ್ರತಪಂತಿ - ವಿಷ್ಣೋ ||

ಅ॥ ಹೇವಿಷ್ಣೋ- ಎಲೈ ಶ್ರೀಮಹಾವಿಷ್ಣುವೇ, ತೇಜೋಭಿಃ- ತೇಜಸ್ಸುಗಳಿಂದ, ಸಮಗ್ರಂ- ಸಕಲವಾದ, ಜಗತ್- ಜಗತ್ತನ್ನು, ಆಪೂರ್‍ಯ- ವ್ಯಾಪಿಸಿಕೊಂಡು, ಸಮಗ್ರಾನ್‌ಲೋಕಾನ್-ಸಕಲರಾದ ರಾಜಜನರನ್ನು, ಜ್ವಲದ್ಭಿಃ- ಜ್ವಲಿಸುತಲಿರುವ,ವದನೈಃ-ಮುಖಗಳಿಂದ, ಸಮಂತಾತ್- ಸುತ್ತುಮುತ್ತಲೂ, ಗ್ರಸಮಾನಃ-ಭಕ್ಷಿಸುವಂತವನಾಗಿ, ಲೇಲಿಹ್ಯಸೇ- ರುಚಿನೋಡುತ್ತಿ. ತವ- ನಿನ್ನ, ಉಗ್ರಾಃ- ಕ್ರೂರಗಳಾದ, ಭಾಸಃ- ಕಾಂತಿಗಳು, ಪ್ರತಪಂತಿ- ದಹಿಸುತ್ತವೆ. ॥೩೦॥

ತಾ॥ ಎಲೈ ಸರ್ವಜಗದ್ವ್ಯಾಪಿಯಾದಎಲೈಸ್ವಾಮಿಯೆ! ಜ್ವಲಿಸುತಲಿರುವ ಮುಖಗಳಿಂದ ಈ ರಾಜಜನರೆಲ್ಲರನ್ನೂ ಭಕ್ಷಿಸುತ ಕೋಪವೇಗದಿಂದ ಅವರುಗಳ ರಕ್ತಗಳಿಂದ ನೆನೆಸಲ್ಪಟ್ಟ ತುಟಿಗಳನ್ನು ಸುತ್ತಮುತ್ತಲೂ ಪುನಃಪುನಃ ನಾಲಿಗೆಯಿಂದ ರುಚಿನೋಡುವಂತೆ ಕಾಣುತ್ತಿ. ಅತಿ ಘೋರಗಳಾಗಿರುವ ನಿಮ್ಮ ಕಿರಣಗಳು ತಮ್ಮಗಳ ಪ್ರಕಾಶದಿಂದ ಸಮಸ್ತ ಪ್ರಪಂಚವನ್ನು ವ್ಯಾಪಿಸಿಕೊಂಡು ದಹಿಸುತ್ತವೆ. ॥೩೦॥

(ಗೀ॥ವಿ॥) ಲೇಲಿಹ್ಯಸೆ=ನಿಮ್ಮ ತುಟಿಗಳಲ್ಲಿ ಅಂಟಿರುವ ನಿಮ್ಮಿಂದ ಭಕ್ಷಿಸಲ್ಪಟ್ಟ ಜನರ ರಕ್ತವನ್ನು ನಾಲಿಗೆಯಿಂದ ಗ್ರಹಿಸುತ್ತೀರೆಂದು ಭಾವವು. ॥೩೦॥

ಶ್ಲೋ॥ಆಖ್ಯಾಹಿಮೇಕೋಭವಾನುಗ್ರರೂಪೋನಮೋಸ್ತುತೇ
ದೇವವರಪ್ರಸೀದ|ವಿಜ್ಞಾತುಮಿಚ್ಛಾಮಿಭವಂತಮಾದ್ಯಂ
ನಹಿ ಪ್ರಜಾನಾಮಿ ತವಪ್ರವೃತ್ತಿಮ್॥ ॥೩೧॥

ಪ॥ ಆಖ್ಯಾಹಿ- ಮೇ- ಕಃ- ಭವಾನ್- ಉಗ್ರರೂಪಃ- ನಮಃ- ಅಸ್ತು- ತೇ- ದೇವವರ- ಪ್ರಸೀದ | ವಿಜ್ಞಾತುಂ- ಇಚ್ಛಾಮಿ- ಭವಂತಂ- ಆದ್ಯಂ-ನ- ಹಿ- ಪ್ರಜಾನಾಮಿ- ತವ- ಪ್ರವೃತ್ತಿಂ॥

ಅ॥ ಹೇದೇವವರ- ಎಲೈ ದೇವಶ್ರೇಷ್ಠನೆ? ಉಗ್ರರೂಪಃ-ಕ್ರೂರವಾದ ರೂಪವುಳ್ಳ, ಭವಾನ್- ನೀನು, ಕಃ- ಯಾರು? ಮೇ- ನನಗೆ, ಆಖ್ಯಾಹಿ- ಹೇಳು. ತೇ- ನಿನ್ನನ್ನುಕುರಿತು, ನಮೋಸ್ತು-ನಮಸ್ಕಾರವಾಗಲಿ. ಪ್ರಸೀದ- ಪ್ರಸನ್ನನಾಗು. ಆದ್ಯಂ- ಆದಿಪುರುಷನಾದ,

ಭವಂತಂ- ನಿನ್ನನ್ನು, ವಿಜ್ಞಾತುಂ- ವಿಶೇಷವಾಗಿ ತಿಳಿಯುವುದಕ್ಕೆ, ಇಚ್ಛಾಮಿ- ಇಚ್ಛೈಸುವೆನು. ಪ್ರವೃತ್ತಿಂ- ನಿಮ್ಮ ಕರ್ತವ್ಯವನ್ನು, ನಹಿಪ್ರಜಾನಾಮಿ- ನಾನು ತಿಳಿಯಲೇ ಇಲ್ಲವು. ॥೩೧॥

(ರಾ॥ ಭಾ॥) "ದ್ರಷ್ಟುಮಿಚ್ಛಾಮಿ ತೇ ರೂಪಮೈಶ್ವರಂ,, (೧೧೩) ಎಂಬದಾಗಿ ತಮ್ಮ ನಿರಂಕುಶೈಶ್ವರ್ಯವನ್ನು ಪ್ರತ್ಯಕ್ಷದಲ್ಲಿ ನೋಡಬೇಕೆಂಬದಾಗಿ ಪ್ರಾರ್ಥಿಸಿರುವ ನನಗೆ ತಮ್ಮ ನಿರಂಕುಶೈಶ್ವರ್ಯವಂ ತೋರಿಸಿದ ನೀವು ತಮ್ಮ ಘೋರರೂಪವನ್ನೂ ತೋರಿಸಿ ಆಯಿತು. ಆದುದರಿಂದ ಇಂತಹ ಘೋರರೂಪಿಯಾದ ನೀವು ಯಾರೋ? ಯೇನುಮಾಡಬೇಕೆಂದಿರುತ್ತೀರೋ? ನಾನರಿಯೆನು, ಆದುದರಿಂದ ಆದಿಕಾರಣಭೂತರಾದ ನಿಮ್ಮನ್ನರಿಯಲಪೇಕ್ಷಿಸುವೆನು. ಇಷ್ಟವಾದ ತಮ್ಮ ಮನಃಪ್ರವೃತ್ತಿಯನ್ನು ನಾನರಿಯಲಾರೆನಷ್ಟೆ. ಈತತ್ವವಾದ ವಿಷಯಗಳನ್ನು ನನಗೆ ಹೇಳಬೇಕು. ಬ್ರಹ್ಮಾದಿ ಸರ್ವದೇವತೆಗಳಿಗೂ ಶ್ರೇಷ್ಠನಾದ ಎಲೈ ಸ್ವಾಮಿಯೆ ನಿನ್ನಂಕುರಿತು ನಮಸ್ಕರಿಸುವೆನು. ನನ್ನ ವಿಷಯದಲ್ಲಿ ಪ್ರಸನ್ನನಾಗಬೇಕು. ಈರೀತಿಮಾಡುವುದಕ್ಕಾಗಿ ಈಅಭಿಪ್ರಾಯದಿಂದ ಇಂತಹ ಸರ್ವಸಂಹಾರಕವಾದ ರೂಪವನ್ನು ಪರಿಗ್ರಹಿಸಿದೆನೆಂದು ಹೇಳಿ ಪ್ರಸನ್ನರೂಪರಾಗಬೇಕೆಂದು ತಾತ್ಪರ್ಯವು. ॥೩೧॥

ಶ್ರೀಭಗವಾನುವಾಚ ॥ ಕಾಲೋಽಸ್ಮಿಲೋಕಕ್ಷಯಕೃತ್ಪ್ರ
ವೃದ್ಧೋ ಲೋಕಾನ್ಸಮಾಹರ್ತುಮಿಹಪ್ರವೃತ್ತಃ ।
ಋತೇಽಪಿತ್ವಾಂ ನಭವಿಷ್ಯಂತಿ ಸರ್ವೇ ಯೇಽವಸ್ಥಿತಾಃ ಪ್ರ
ತ್ಯನೀಕೇಷು ಯೋಧಾಃ॥ ॥೩೨॥

ಪ॥ ಶ್ರೀಭಗವಾನ್-ಉವಾಚ ॥ ಕಾಲಃ-ಅಸ್ಮಿ-ಲೋಕಕ್ಷಯಕೃತ್-ಪ್ರವೃದ್ಧಃ-ಲೋಕಾನ್-ಸಮಾಹರ್ತುಂ-ಇಹ-ಪ್ರವೃತ್ತಃ। ಋತೇ-ಅಪಿ-ತ್ವಾಂ-ನ-ಭವಿಷ್ಯಂತಿ-ಸರ್ವೇ-ಯೇ-ಅವಸ್ಥಿತಾಃ-ಪ್ರತ್ಯನೀಕೇಷು-ಯೋಧಾಃ ॥

ಅ॥ ಶ್ರೀಭಗವಾನುವಾಚ—ಶ್ರೀಕೃಷ್ಣನು ಹೇಳಿದನು. ಲೋಕಕ್ಷಯಕೃತ್- ಜನಗಳಿಗೆ ನಾಶವನ್ನು ಮಾಡುವ, ಪ್ರವೃದ್ಧಃ-ಅತ್ಯಂತ ಕ್ರೂರರೂಪಿಯಾದ, (ಶಂ) ಅತ್ಯಂತವಾಗಿಅಭಿವೃದ್ಧನಾಗುವ, (ಮ॥ ಗೀ॥ ವಿ) ಪೂರ್ಣನಾಗಿರುವ, ಕಾಲೋಽಸ್ಮಿ - ಕಾಲನಾಗಿರುವೆನು.

(ಗೀ॥ ವಿ) ಸಂಬದ್ಧವಾದ ಸಕಲ ಸದ್ಗುಣವುಳ್ಳವನೂ ಸರ್ವಜ್ಞನೂ ಸಮಸ್ತ ಶತ್ರುಗಳನ್ನು ಓಡಿಸುವಂತವನೂ. ಈ ಅರ್ಥಕ್ಕೆ "ಕಾಲಃಕಲಿತ ಸಂಪೂರ್ಣ ಸದ್ಗುಣತ್ವಾಜ್ಜನಾರ್ದನಃ । ಸಂಹಾರಾತ್ಸರ್ವವಿತ್ವಾದ್ವಾಸರ್ವವಿದಾ್ರವಣೇನವಾ,, ಎಂಬವರಾಹ ಪುರಾಣವಚನವೂ ಆಧಾರವಾಗಿರುವುದು. ಲೋಕಾರ್ನ್ - ಜನರನ್ನು, ಸಮಾಹರ್ತುಂ-ಸಂಹಾರ ಮಾಡುವುದಕ್ಕಾಗಿ, ಇಹ-ಈಗ, (ಶಂ॥ ಶ್ರೀ) ಈ ಲೋಕದಲ್ಲೀ ಕಾಲದಲ್ಲಿ, ಪ್ರವೃತ್ತಃ-ಪ್ರವೃತ್ತಿಸಿರುವೆನು. ಪ್ರತ್ಯನೀಕೇಷು-ಆಯಾಸೇನೆಗಳಲ್ಲಿ, ಯೋಧಾಃ-ಯುದ್ಧವಂ ಮಾಡುವಂತವರು, ಯೇಽವಸ್ಥಿತಾಃ-ಯಾರಿರುವರೊ, (ತೆ ಸರ್ವೇ-ಆಸಕಲರೂ, ಋತೇಪಿತ್ವಾಂ-ನಿನ್ನನ್ನು ವಿನಾಯಿಸಿ, (ರಾ) ನಿನ್ನ ಪ್ರಯತ್ನವಿಲ್ಲದೇನೆ, (ಗೀ॥ ವಿ) ನೀನೇ ಮೊದಲಾದ ಪಂಚಪಾಂಡವರೂ ಅಶ್ವತ್ಥಾಮಾ-ಕೃತವರ್ಮ-ಕೃಪಾಚಾರ್ಯರು ಇವರನ್ನು ವಿನಾಯಿಸಿ, ನಭವಿಷ್ಯಂತಿ-ಇರಲಾರರು. ನಾಶಹೊಂದುವರೆಂದರ್ಥವು. ... ... ॥೩೨॥

(ರಾ॥ಭಾ॥) ಸಮಸ್ತರಾದ ದುರ್ಯೋಧನಾದಿ ರಾಜಜನರ ಆಯುಸ್ಸಿನ ಪೂರ್ತಿಯನ್ನು ಯೆಣಿಸಿಕೊಂಡಿರುವಂತವನಾಗಿರುವೆನು. ಅಸ್ಮಿ ಎಂಬುವುದು ಅವ್ಯಯವು. ಅಹಂಪದ ಸಮಾನಾರ್ಥವುಳ್ಳದ್ದಾಗಿರುವುದು ಅಸ್ಮಿ - ನಾನು, ಆರಾಜಲೋಕರನಾಶವಂ ಮಾಡುವಂತವನಾಗಿ ಘೋರರೂಪದೊಡನೆ ಪ್ರವೃತ್ತಿಸಿರುವೆನು. ಈರಾಜಲೋಕವೆಲ್ಲವನ್ನೂ ಸಂಹಾರಮಾಡುವುದಕ್ಕಾಗಿಯೇ ಈಭೂಲೋಕದಲ್ಲವತಾರವಂ ಮಾಡಿರುವೆನು. ಅಥವಾ ಈಯುದ್ಧ ಪ್ರೋತ್ಸಾಹನವ್ಯಾಪಾರದಲ್ಲಿ ಪ್ರವೃತ್ತಿಸಿರುವೆನೆಂದಾದರೂ ಅರ್ಥವಾಗಬಹುದು. ನಿಮ್ಮಶತ್ರುಗಳ ಸೈನ್ಯಗಳಲ್ಲಿ ಯಾವ ವೀರಭಟರಿರುವರೊ ಅವರೆಲ್ಲರು ನೀನಿಲ್ಲದೇಹೋದರೂ ನನ್ನ ಸಂಕಲ್ಪಮಾತ್ರದಿಂದಲೇ ನಾಶವಂ ಹೊಂದುವರಲ್ಲದೇನಿಲ್ಲಲಾರರು. ॥೩೨॥

ಶ್ಲೋ॥ ತಸ್ಮಾತ್ತ್ವಮುತ್ತಿಷ್ಠಯಶೋಲಭಸ್ವಜಿತ್ವಾಶ
ತ್ರೂನ್ಭುಂಕ್ಷ್ವರಾಜ್ಯಂಸಮೃದ್ಧಂ।ಮಯೈವೈತೇನಿಹ
ತಾಃಪೂರ್ವಮೇವನಿಮಿತ್ತಮಾತ್ರಂಭವಸವ್ಯಸಾಚಿನ್॥೩೩॥

ಪ॥ ತಸ್ಮಾತ್-ತ್ವಂ- ಉತ್ತಿಷ್ಠ- ಯಶಃ- ಲಭಸ್ವ- ಜಿತ್ವಾ- ಶತ್ರೂನ್-ಭುಂಕ್ಷ್ವ- ರಾಜ್ಯಂ- ಸಮೃದ್ಧಂ | ಮಯಾ- ಏವ- ಏತೇ- ನಿಹತಾಃ- ಪೂರ್ವಂ- ಏವ- ನಿಮಿತ್ತಮಾತ್ರಂ- ಭವ-ಸವ್ಯಸಾಚಿನ್॥

ಅ॥ ತಸ್ಮಾತ್- ಆದುದರಿಂದ, ತ್ವಂ-ನೀನು, ಉತ್ತಿಷ್ಠ-(ಯುದ್ಧವಂಮಾಡುವುದಕ್ಕಾಗಿ, ಏಳು, ಶತ್ರೂನ್-ಶತ್ರುಜನಗಳನ್ನು, ಜಿತ್ವಾ- ಜಯಿಸಿ, ಯಶಃ- ಕೀರ್ತಿಯನ್ನು, (ಶಂ॥ ಶ್ರೀ) ದೇವತೆಗಳಿಂದಲೂ ಜಯಿಸಲಶಕ್ಯರಾದ ಭೀಷ್ಮ ದ್ರೋಣಾದಿಗಳನ್ನೂ ಜಯಿಸಿದನೆಂಬ ಕೀರ್ತಿಯನ್ನು, ಲಭಸ್ವ- ಹೊಂದುವಂತವನಾಗು, ಸಮೃದ್ಧಂ-ಸಕಲ ಭೋಗಗಳಿಂದ ತುಂಬಿರುವ, (ಶಂ) ಶತ್ರುಸಂಬಂಧ ಶೂನ್ಯವಾದ ಸಂಪತ್ತುಳ್ಳ, ರಾಜ್ಯಂ- ರಾಜ್ಯವನ್ನು, ಭುಂಕ್ಷ್ವ- ಅನುಭವಿಸು, ಏತೇ- ಇವರು, ಮಯ್ಯೈವ- ನನ್ನಿಂದಲೇ, ಪೂರ್ವಮೇವ- ಪೂರ್ವದಲ್ಲಿಯೇ, ನಿಹತಾಃ- ಕೊಲ್ಲಲ್ಪಟ್ಟಿರುವವರು, (ರಾ) ಕೊಲ್ಲಲ್ಪಡುವುದಕ್ಕೆ ಉದ್ದೇಶಿಸಲ್ಪಟ್ಟಿರುವವರು. ಹೇಸವ್ಯಸಾಚಿನ್- ಎಲೈ ಅರ್ಜುನನೇ ! ಅರ್ಜುನನಿಗೆ ಸವ್ಯಸಾಚಿಯೆಂಬ ನಾಮವು ಹೇಗೆ ಬಂತೆಂದರೆ ಅದನ್ನು ಸ್ವಲ್ಪವಿವರಿಸುವೆವು. ಲೋಕದಲ್ಲಿ ಧನುರ್ಧಾರಿಗಳಾದವರು ದಕ್ಷಿಣಹಸ್ತದಿಂದ ಬಿಲ್ಲಿನಲ್ಲಿಬಾಣಸಂಧಾನವಂಮಾಡಿಬಾಣಗಳಂಬಿಡುವರು. ಇದು ಎಲ್ಲಾ ವೀರರಲ್ಲಿಯೂ ಉಂಟು; ಈ ಅರ್ಜುನನೋ ವಾಮಹಸ್ತದಿಂದಲೂ ಬಾಣಮೋಕ್ಷವಂ ಮಾಡುವಂತವನಾಗಿರುವುದರಿಂದ ಸವ್ಯಸಾಚಿ ಎಂಬ ನಾಮ ಉಂಟಾಯಿತೆಂದು ಅರಿಯಬೇಕು. ನಿಮಿತ್ತಮಾತ್ರಂ-ವ್ಯಾಜಮಾತ್ರವಾಗಿ, (ರಾ) ನನಗೆ ನೀನು ಆಯುಧದಂತೆ ನಿಮಿತ್ತಮಾತ್ರವಾಗಿ, ಭವ-ಆಗು. ... ... ॥೩೩॥

(ರಾ॥ ಭಾ॥) ತಾತ್ಪರ್ಯವು— ಸವ್ಯಸಾಚಿಯಾದ ಎಲೈ ಅರ್ಜುನನೇ! ಪೂರ್ವೋಕ್ತ ಕಾರಣಗಳಿಂದ ಶತ್ರುಗಳಂಕುರಿತು ಯುದ್ಧಮಾಡುವುದಕ್ಕಾಗಿ ಏಳುವಂತವನಾಗು. ಶತ್ರುಗಳಂ ಜಯಿಸಿ ಅದರಿಂದುಂಟಾದ ಕೀರ್ತಿಯನ್ನು ಹೊಂದು. ಕ್ಷತ್ರಿಯರಿಗೆ ಸ್ವಧರ್ಮವಾದ ಯುದ್ಧದಿಂದ ಸಂಪಾದಿಸಲ್ಪಟ್ಟ ರಾಜ್ಯವನ್ನು ಪೂರ್ಣವಾಗಿ ಅನುಭವಿಸು. ಅಪರಾಧಿಗಳಾದ ಈ ರಾಜರೆಲ್ಲರೂ ನನ್ನಿಂದ ಪೂರ್ವದಲ್ಲಿಯೇ ನಿಹತರಾಗಲೂ ಸಂಕಲ್ಪಿತರಾಗಿರುತ್ತಾರೆ. ಆದರೆ ನೀನು ಅವರ ಸಂಹಾ

ರವಿಷಯದಲ್ಲಿ ಸ್ವಲ್ಪಮಟ್ಟಿಗೆ ಸಹಾಯಭೂತನಾಗಿರುವಂತವನಾಗು. ನಾನವರಂ ಸಂಹರಿಸಲು ಪ್ರಯತ್ನಮಾಡಿರುವುದರಿಂದ ನೀನು ಆಯು ಧಸ್ಥಾನೀಯನಾಗೀರಬೇಕು. ॥೩೩॥

(ತಾ॥ ಚಂ॥) ಎಲೈ ಶ್ರೀಕೃಷ್ಣನೇ! ನನ್ನ ಪ್ರಯತ್ನವಿಲ್ಲದಿದ್ದ ರೂ ಧಾರ್ತರಾಷ್ಟ್ರರಾದ ದುರ್ಯೋಧನಾದಿಗಳು ಜೀವಿಸಲಾರರು, ಆದುದ ರಿಂದ ನನ್ನನ್ನು ಈ ಯುದ್ಧಕ್ಕಾಗಿ ಪ್ರೇರಣೆ ಮಾಡುವುದರಿಂದೇನು ಪ್ರಯೋಜನವೆಂಬ ಅರ್ಜುನಾಕಾಂಕ್ಷೆಯನ್ನು ತಾನೆಚಿಂತಿಸಿ ಶ್ರೀಕೃ ಷ್ಣನು ಅರ್ಜುನನಂ ಕುರಿತು ಎಲೈ ಅರ್ಜುನನೇ ನನ್ನ ಭಕ್ತನಾದ ನಿನಿಗೆ ಜಯಯಶೋರಾಜ್ಯಲಾಭವಾಗಲೆಂದೆಣಿಸಿ ಆದಕ್ಕಾಗಿ ನಿನ್ನನ್ನು ಯುದ್ಧಕ್ಕಾಗಿ ಪ್ರೇರಣೆ ಮಾಡುತ್ತೇನೆಂದು ಬೋಧಿಸುವಸಂದರ್ಭವಂ ತಿಳಿಸುವುದಕ್ಕಾಗಿ ಈ ಶ್ಲೋಕವು ಪ್ರವೃತ್ತವಾಯಿತು. ॥೩೩॥

ಶ್ಲೋ ॥ ದ್ರೋಣಂಚ ಭೀಷ್ಮಂಚ ಜಯದ್ರಥಂಚ
ಕರ್ಣಂತಥಾನ್ಯಾನಪಿ ಯೋಧವೀರಾ‌ನ್ | ಮಯಾಹ
ತಾಂಸ್ತ್ವಂಜಹಿಮಾವ್ಯಥಿಷ್ಠಾ ಯುಧ್ಯಸ್ವ ಜೇತಾಸಿರಣೇ
ಸಪತ್ನಾ‌ನ್ ॥ ... ... ॥೩೪॥

ಪ॥ ದ್ರೋಣಂ- ಚ- ಭೀಷ್ಮಂ-ಚ- ಜಯದ್ರಥಂ- ಚ- ಕರ್ಣಂ- ತಥಾ- ಅನ್ಯಾನ್- ಅಪಿ- ಯೋಧವೀರಾನ್। ಮಯಾ- ಹತಾನ್- ತ್ವಂ- ಜಹಿ - ಮಾವ್ಯಥಿಷ್ಠಾಃ- ಯುಧ್ಯಸ್ವ- ಜೇತಾ- ಅಸಿ- ರಣೇ-ಸಪತ್ನಾನ್॥

ಅ॥ ಮಯಾ- ನನ್ನಿಂದ, ಹತಾನ್- ಕೊಲ್ಲಲುದ್ದೇಶಿಸಲ್ಪಟ್ಟಿರು ವ, " ದ್ರೋಣಂಚ- ದ್ರೋಣಾಚಾರ್ಯರನ್ನೂ, ಭೀಷ್ಮಂಚ-ಭೀಷ್ಮಾ ಚಾರ್ಯರನ್ನೂ, ಜಯದ್ರಥಂಚ- ಜಯದ್ರಥನನ್ನೂ, ಕರ್ಣಂ- ಕರ್ಣ ನನ್ನೂ, ತಥಾ-ಹಾಗೆಯೇ, ಅನ್ಯಾನ್ಯೊಧವೀರಾನಪಿ - ಇತರರಾದ ವೀರರಾಗಿರುವ ಯುದ್ಧಸನ್ನದ್ಧರನ್ನೂ, ತ್ವಂ- ನೀನು, ಜಹಿ- ಕೊಲ್ಲು ತ್ತೀಯೆ, ಮಾವ್ಯಥಿಷ್ಠಾಃ - ವ್ಯಸನಪಡಬೇಡ, ಯುಧ್ಯಸ್ವ- ಯುದ್ಧ ವಂಮಾಡು, ರಣೇ-ಯುದ್ಧದಲ್ಲಿ, ಸಪತ್ನಾನ್- ಶತ್ರುಗಳನ್ನು, ಜೇತಾ ಸಿ- ಜಯಿಸುವಂತವನಾಗುತ್ತಿ. ... ॥೩೬॥

(ರಾ ॥ ತಾತ್ಪರ್ಯವು ) ನನ್ನಿಂದ ಕೊಲ್ಲಲುದ್ದೇಶಿಸಲ್ಪಟ್ಟಿರುವ ದ್ರೋಣಾಚಾರ್ಯರನ್ನೂ, ಭೀಷ್ಮಾಚಾರ್ಯರನ್ನೂ, ಜಯದ್ರಥನನ್ನೂ, ಕರ್ಣನನ್ನೂ ಹಾಗೆಯೇ ಇವರಿಗಿಂತಲೂ ಅನ್ಯರಾದ ಭಟವೀರರನ್ನೂ ನೀನು ಸಂಹಾರವಮಾಡುತ್ತೀಯೆ. ಗುರುಗಳನ್ನೂ ಬಂಧುಗಳನ್ನೂ ಹೇಗೆ ಕೊಲ್ಲಬಹುದೆಂಬದಾಗಿ ವ್ಯಸನ ಪಡಬೇಡ. ಅವರುಗಳನ್ನು ಕುರಿತು ಧರ್ಮಭಯದಿಂದಲೂ ವ್ಯಸನಪಡದೆ (ಅಪರಾಧಿಗಳಾದುದರಿಂದ ಪರಮಾತ್ಮನಿಂದಲೆ ಕೊಲ್ಲಲು ಉದ್ದೇಶಿಸಲ್ಪಟ್ಟಿರುತ್ತಾರೆಂದು ನಿಶ್ಚಯಿಸಿಕೊಂಡು)ಯುದ್ಧವಂಮಾಡು. ಈರೀತಿಯಾಗಿ ಮಾಡಿದರೆ ಯುದ್ಧದಲ್ಲಿ ಶತ್ರುಗಳಂ ಜಯಿಸುತ್ತೀ ಎಂದು ತಾತ್ಪರ್ಯವು. ॥೩೪॥

(ಶಂ॥ ಗೀ॥ ವಿ) ಈ ಶ್ಲೋಕದಲ್ಲಿ ಪ್ರಕೃತರಾದ ದ್ರೋಣಾದಿ ನಾಲ್ವರ ವಿಷಯದಲ್ಲಿಯೂ ಅರ್ಜುನನಿಗೆ ಇವರಂ ಜಯಿಸುವ ವಿಷಯದಲ್ಲಿ ಶಂಕೆಯುಂಟಾಗಿರುವುದರಿಂದ ಅದಕ್ಕೆ ಪರಿಹಾರವಂ ಶ್ರೀಕೃಷ್ಣನು ಬೋಧಿಸಿದನೆಂದರಿಯಬೇಕು. ಇಲ್ಲಿ ಏನು ಶಂಕೆಯೆಂದರೆ ! ದ್ರೋಣಾಚಾರ್ಯರು ಯುದ್ಧಶಾಸ್ತ್ರನಿಪುಣರು. ಅಸ್ತ್ರಶಸ್ತ್ರ ಪ್ರಯೋಗ ಮರ್ಮಗಳಂ ಸವಿಸ್ತಾರವಾಗಿ ತಿಳಿದವರು. ಅಷ್ಟುಮಾತ್ರವಲ್ಲದೆ ತನಿಗೆ ಅಸ್ತ್ರವಿದ್ಯೆಯಲ್ಲಿ ಗುರುವಾಗಿಯೂ ಇರುವುದರಿಂದ ಇವರು ನನ್ನಿಂದ ಹೇಗೆ ಕೊಲ್ಲಲ್ಪಡುವರೆಂಬದಾಗಿ ಶಂಕೆಯುಂಟಾಯಿತು. ಭೀಷ್ಮಾಚಾರ್ಯನವಿಷಯದಲ್ಲಿ; ಸ್ವಚ್ಛಂದಮೃತ್ಯುವುಳ್ಳವರಾಗಿಯೂ ದಿವ್ಯಾಸ್ತ್ರಸಂಪನ್ನರಾಗಿಯೂ ಪರಶುರಾಮರೊಡನೆ ದ್ವಂದ್ವಯುದ್ಧವಂ ಮಾಡಿ ಪರಾಜಯವಂ ಹೊಂದದವರಾಗಿಯೂಇರುವ ಇವರಂ ಹೇಗೆಜಯಿಸಬಹುದೆಂಬದಾಗಿ ಶಂಕೆಯುಂಟಾಯಿತು. ಜಯದ್ರಥನ ತಂದೆಯು ಒಂದು ವರವಂ ಪಡದಿರುತ್ತಾನೆ. ಅದು ಯಾವದೆಂದರೆ, ತನ್ನ ಮಗನಾದ ಜಯದ್ರಥನ ತಲೆಯನ್ನು ಯಾವನಾದರೆ ಕತ್ತರಿಸಿ ಭೂಮಿಯಲ್ಲಿ ತಳ್ಳುತ್ತಾನೆಯೊ ಅವನ ತಲೆಯು ಸಹಸ್ರಧಾ ಒಡೆದುಬೀಳುವುದೆಂಬವರವು ಪ್ರಾಪ್ತವಾಗಿರುವುದು. ಆದುದರಿಂದ ಇವನಂ ಹೇಗೆ ಸಂಹರಿಸುವುದೆಂಬದಾಗಿ ಅರ್ಜುನನ ಮನಸ್ಸು ವ್ಯಾಕುಲಿತವಾಗಿರುವುದು. ಕರ್ಣನೂ ಇಂದ್ರನಿಂದ ಕೊಡಲ್ಪಟ್ಟ ಅಮೋಘವಾದ ಶಕ್ತಿ ಎಂಬ ಆಯುಧವುಳ್ಳವನು. ಈ ಆಯುಧವನ್ನು ಯಾರಮೇಲೆ ಪ್ರಯೋಗಿಸುತ್ತಾನೆಯೊ

ಅವರಂ ಬಿಡದೇ ನಾಶಪಡಿಸುವಂತಾ ಸ್ವಭಾವುಳ್ಳದ್ದಾಗಿರುವುದರಿಂದ ನನ್ನ ವಿಷಯದಲ್ಲಿಯೂ ಈ ಆಯುಧವು ವಿಫಲವಾಗಲಾರದೆಂದೆಣಿಸಿ ಅರ್ಜುನನ ಮನಸ್ಸು ವ್ಯಾಕುಲಿತವಾಗಿರುವುದು. ಈ ಸಂದರ್ಭವಂ ತಿಳಿದಿರುವ ಪರಮಾತ್ಮನು ಅರ್ಜುನನಂ ಕುರಿತು ಮೇಲೆ ವಿವರಿಸಿರುವಂತೆ ನೀನು ವ್ಯಾಕುಲವಂ ಹೊಂದಬೇಡ; ಇವರೆಲ್ಲರೂ ನನ್ನಿಂದಲೇ ಕೊಲ್ಲಲ್ಪಟ್ಟಿರುವರು. ವ್ಯಾಜಮಾತ್ರಕ್ಕಾಗಿ ನೀನು ಯುದ್ಧವಂ ಮಾಡೆಂದು ಬೋಧಿಸಿದನೆಂದರಿಯಬೇಕು. ... ... ॥೩೪॥

ಶ್ಲೋ॥ ಸಂಜಯ ಉವಾಚ ॥ ಏತಚ್ಛ್ರುತ್ವಾವಚನಂ ಕೇಶವಸ್ಯ ಕೃತಾಂಜಲಿರ್ವೇಪಮಾನಃಕಿರೀಟೀ ।ನಮಸ್ಕೃತ್ವಾಭೂಯ ಏವಾಹಕೃಷ್ಣಂ ಸಗದ್ಗದಂಭೀತಭೀತಃ ಪ್ರಣಮ್ಯ ॥ ॥೩೫॥

ಪ॥ ಸಂಜಯಃ-ಉವಾಚ॥ ಏತತ್-ಶ್ರುತ್ವಾ-ವಚನಂ-ಕೇಶವಸ್ಯ-ಕೃತಾಂಜಲಿಃ-ವೇಪಮಾನಃ-ಕಿರಿಟೀ। ನಮಸ್ಕೃತ್ವಾ-ಭೂಯಃ- ಏವ- ಆಹ-ಕೃಷ್ಣಂ-ಸದ್ಗದಂ-ಭೀತಭೀತಃ-ಪ್ರಣಮ್ಯ ॥

ಅ॥ ಸಂಜಯ ಉವಾಚ=ಸಂಜಯನು ಹೇಳಿದನು. ವೇಪಮಾನಃ-ನಡುಗಿಕೊಂಡಿರುವ, ಕಿರೀಟೀ-ಅರ್ಜುನನು, ಕೇಶವಸ್ಯ-ಶ್ರೀಕೃಷ್ಣಸ್ವಾಮಿಯ,ಏತದ್ವಚನಂ ಶ್ರುತ್ವಾ-ಈ ಮಾತನ್ನು ಕೇಳಿ,ಕೃತಾಂಜಲಿಃ-ಕೈಗಳನ್ನು ಜೋಡಿಸಿಕೊಂಡವನಾಗಿ, ಕೃಷ್ಣಂ-ಕೃಷ್ಣಸ್ವಾಮಿಯನ್ನು, ನಮಸ್ಕೃತ್ವಾ- ನಮಸ್ಕರಿಸಿ, ಭೀತಭೀತಃ - ಅತ್ಯಂತವಾಗಿ ಭಯಪಟ್ಟು, ಸಗದ್ಗಗಂ-ಗದ್ಗದ ಧ್ವನಿಯೊಡನೆ,ಭೂಯಏವ-ತಿರಿಗಿಯೂ, ಆಹ-ಹೇಳಿದನು. ... ... ॥೩೫॥

ತಾ॥ ಸುಂದರವಾದ ಕಿರೀಟವುಳ್ಳ ಅರ್ಜುನನು ಆಶ್ರಿತ ವತ್ಸಲನಾದ ಶ್ರೀ ಕೃಷ್ಣಸ್ವಾಮಿಯ ಪೂರ್ವೋಕ್ತವಾದ ಈ ದಿವ್ಯ ಸೂಕ್ತಿಯಂ ಕೇಳಿ ಶ್ರೀ ಕೃಷ್ಣನಂ ಕುರಿತು ಸಾಷ್ಟಾಂಗ ದಂಡವತ್ಪ್ರಣಾಮವಂ ಮಾಡಿ ಅತ್ಯಂತ ಭಯದೊಡನೆ ಪುನಶ್ಚ ಶ್ರೀ ಕೃಷ್ಣಸ್ವಾಮಿಯಂ ನಮಸ್ಕರಿಸಿ ಕೈಗಳಂ ಜೋಡಿಸಿಕೊಂಡು ನಡುಗುತಾ ಗದ್ಗದವೆಂಬ ಕಂಠಸ್ವರ ವಿಕಾರದೊಡನೆ ಮುಂದೇ ಹೇಳುವ ಪ್ರಕಾರವಾಗಿ ವಿಜ್ಞಾಪಿಸುತ್ತನೆ. ... ... ॥೩೫॥

(ಶಂ॥ ಭಾ॥) ಅಧಿಕವಾದ ಭಯ ದುಃಖಗಳುಂಟಾಗುವ ಕಾಲದಲ್ಲಿಯೂ, ಪ್ರೀತಿಪಾತ್ರವಾದ ವಸ್ತುಗಳಂ ಕಂಡು ಆದರಿಂದ ಅಧಿಕ ಸುಖವು ಅಥವಾ ಸಂತೋಷ ಮುಂಟಾಗುವಕಾಲದಲ್ಲಿಯೂ, ಕಣ್ಣಿನಲ್ಲಿ ನೀರು ತುಂಬಿಕೊಂಡು ಶ್ಲೇಷ್ಮದಿಂದ ಕಂಠಾವ ರೋಧವುಂಟಾದ ಕಾಲದಲ್ಲಿ ಆಡುವ ಮಾತಿಗೆ ಯಾವ ಅಪಾಟವಮುಂಟೋ ಅದನ್ನು ಗದ್ಗದವೆನ್ನುವರು. ... ... *

ವಿಶ್ವರೂಪ ಸಂದರ್ಶನ ದಶೆಯಲ್ಲಿ ಅರ್ಜುನನೊಡನೆ ಆಡುತಲಿರುವ ಭಗವತ್ಸಂವಾದವಚನಗಳನ್ನು ಸಂಜಯನು ಧೃತರಾಷ್ಟ್ರನಿಗೆ ಹೇಳಲು ಕಾರಣವೇನೆಂದರೆ ಸಾಭಿಪ್ರಾಯವಾದ ಸಂಜಯವಾಕ್ಯಗಳಿಗೆ ತಾತ್ಪರ್ಯವಂ ತಿಳಿಸುತ್ತಾರೆ. ಯಾವದೆಂದರೆ ! ದ್ರೋಣಾದಿಗಳಾದ ಅಜೇಯರಾಗಿರುವ ನಾಲ್ವರೂ ಅರ್ಜುನನಿಂದ ಸಂಹರಿಸಲ್ಪಟ್ಟಮೇಲೆ ನಿರಾಶ್ರಯನಾದ ದುರ್ಯೋಧನು ಅರ್ಜುನನ್ನೇನು ಮಾಡಬಲ್ಲನೆಂದು ಯೋಚಿಸಿ ದುರ್ಯೋಧನಾದಿಗಳು ಪಾಂಡವರಂ ಜಯಿಸುವ ವಿಷಯದಲ್ಲಿ ನಿರಾಶರಾಗಿ ಸಂಧಿಯಂ ಮಾಡುತ್ತಾರೆ. ಅದರಿಂದ ಈ ಉಭಯ ಪಕ್ಷೀಯರಿಗೂ ಸಮಾಧಾನವುಂಟಾಗುವುದೆಂಬುವುದೆ ಸಂಜಯರ ಅಭಿಪ್ರಾಯವು. ಆದರೆ ಇಂತಹ ಸಂಜಯಾಭಿಪ್ರಾಯವಂ ಧೃತರಾಷ್ಟ್ರನು ಕೇಳಿ ಯೇತಕ್ಕೆ ಸಂಧಿಯಂ ಮಾಡಲಿಲ್ಲವೆಂದರೆ ದುರ್ಯೋಧನಾದಿಗಳೆಲ್ಲರೂ ನಾಶವಾಗಬೇಕೆಂಬ ಭವಿತವ್ಯತಾವಶದಿಂದ ರಾಜನಿಗೆ ಸಂಧಿಯು ರುಚಿಸಲಿಲ್ಲವು. ॥೩೫॥

(ತಾ॥ ಚಂ) ಈ ಶ್ಲೋಕದಲ್ಲಿ " ನಮಸ್ಕೃತ್ವಾ-ಪ್ರಣಮ್ಯ,, ಎಂಬೀ ಏಕಾರ್ಥಕ ಪದಗಳಂ ಪ್ರಯೋಗಿಸಲು ಕಾರಣವೇನೆಂದರೆ? ಭಗವದ್ವಾಕ್ಯಗಳಂ ಕೇಳಿದ ಮಾತ್ರದಲ್ಲಿಯೇ ಅರ್ಜುನನು ಪರವಶನಾಗಿ ಮೊದಲುನಮಸ್ಕಾರಮಾಡಿದನೆಂತಲೂ ಅತ್ಯಂತವಾಗಿಭಯಪಟ್ಟುಮುಂದೆ ಹೇಳಲ್ಪಡುವವಾಕ್ಯಾರಂಭ ಸೂಚಕಗಳಾಗಿರುವುವು ಇತರಗಳಾದಪ್ರಣಾಮಾಂಜಲಿಗಳೆಂತಲೂ ತಿಳಿಯಬೇಕು. ಅರ್ಜುನನಪೇಕ್ಷಾಮಾತ್ರದಿಂದ ತನ್ನ ವಿಗ್ರಹಾದಿಗಳಂ ಪ್ರಕಾಶ ಪಡಿಸಿರುವಂತೆ ತನ್ನ ಅಭಿಪ್ರಾಯ ಪ್ರಕಾಶವೂ ಆಶ್ರಿತ ವಾತ್ಸಲ್ಯದಿಂದಲೇ ಎಂದು ತೋರಿಸುವುದಕ್ಕಾಗಿ ಭಾಷ್ಯದಲ್ಲಿ " ಆಶ್ರಿತ ವಾತ್ಸಲ್ಯಜಲಧೇಃ,, ಎಂಬ ವಿಶೇ

ಷಣವು ಶ್ರೀ ಕೃಷ್ಣನ ವಿಷಯದಲ್ಲಿ ಸ್ವೀಕೃತವಾಯಿತೆಂದರಿಯ ಬೇಕು.

ಮತ್ತು ಶ್ರೀಕೃಷ್ಣನು ಬ್ರಹ್ಮರುದ್ರರಿಗೂ ರಕ್ಷಕನೆಂದು ತೋರಿಸುವುದಕ್ಕಾಗಿ ಕೇಶವ ಶಬ್ದ ಪ್ರಯೋಗವೆಂತಲೂ ಆಶ್ರಿತರಿಗೆ ಸಂಸಾರಕರ್ಷಣವಂ ಮಾಡುವ ಅರ್ಥವಂ ತೋರಿಸುವುದಕ್ಕಾಗಿ ಕೃಷ್ಣಶಬ್ದ ಪ್ರಯೋಗವೆಂತಲೂ ಶ್ರೀಕೃಷ್ಣನ ದಿವ್ಯ ಪಾದಾರವಿಂದ ವಂದನವಂ ಮಾಡುವುದರಿಂದ ಕಿರೀಟ ಯುಕ್ತವಾದ ಅರ್ಜುನ ಶಿರಸ್ಸು ಕೃತಾರ್ಥವಾಯಿತೆಂಬ ಅರ್ಥವಂ ಸೂಚಿಸುವುದಕ್ಕಾಗಿ ಅರ್ಜುನನಿಗೆ ಕಿರೀಟೀ ಎಂಬ ಶಬ್ದವು ಪ್ರಯುಕ್ತವಾಗಿರುವುದೆಂತಲೂ ತಿಳಿಯಬೇಕು. "ಭಾರಃಪರಂ ಪಟ್ಟಕಿರೀಟ ಜುಷ್ಟಮಪ್ಯುತ್ತಮಾಂಗಂನನಮೇ ನ್ಮುಕುಂದಂ,, ಎಂಬದಾಗಿ ಶ್ರೀಶುಕಾಚಾರ್ಯರೂ ಹೇಳಿರುತ್ತಾರೆ. ಮುಕುಂದನ ವಂದನೋಪಯೋಗಿಯಾಗಿರುವುದರಿಂದ ಉತ್ತಮಾಂಗವೆನ್ನಲ್ಪಡುವ ತಲೆಯು ಶ್ರೀ ಕೃಷ್ಣಪಾದಾರವಿಂದಗಳಂ ಸೇವಿಸದೇ ಹೋದರೆ ಅದು ಪಟ್ಟ ಕಿರೀಟಾದಿಗಳಿಂದ ಕೂಡಿದ್ದರೂ ಕೇವಲ ಭಾರ ರೂಪವಾಗಿರುವುದಲ್ಲದೆ ಅದು ಪುರುಷಾರ್ಥ ಸಾಧನ ಮಾದದ್ದಲ್ಲವೆಂದು ಶ್ಲೋಕ ತಾತ್ಪರ್ಯವು. ... ... ... ॥೩೫॥

ಶ್ಲೋ॥ ಅರ್ಜುನ ಉವಾಚ॥ ಸ್ಥಾನೇ ಹೃಷೀಕೇಶ ತವ ಪ್ರಕೀರ್ತ್ಯಾ ಜಗ ತ್ಪ್ರಹೃಷ್ಯ ತ್ಯನುರಜ್ಯತೇಚ । ರಕ್ಷಾಂಸಿಭೀತಾನಿ ದಿಶೋ ದ್ರವಂತಿ ಸರ್ವೇ ನಮಸ್ಯಂತಿ ಚ ಸಿದ್ಧಸಂಘಾಃ॥ ॥೩೬॥

ಪ॥ ಅರ್ಜುನಃ- ಉವಾಚ॥ ಸ್ಥಾನೇ- ಹೃಷೀಕೇಶ- ತವ- ಪ್ರಕೀರ್ತ್ಯಾ - ಜಗತ್- ಪ್ರಹೃಷ್ಯತಿ- ಅನುರಜ್ಯತೆ- ಚ । ರಕ್ಷಾಂಸಿ- ಭೀತಾನಿ - ದಿಶಃ- ದ್ರವಂತಿ- ಸರ್ವೇ- ನಮಸ್ಯಂತಿ- ಚ- ಸಿದ್ಧಸಂಘಾಃ।

ಅ॥ ಅರ್ಜುನ ಉವಾಚ- ಅರ್ಜುನನು ಹೇಳಿದನು. ಹೇ ಹೃಷೀಕೇಶ- ಎಲ್ಲಾ ಇಂದ್ರಿಯಗಳಿಗೆ ನಿಯಂತಾ ಆದಶ್ರೀಕೃಷ್ಣಸ್ವಾಮಿಯೇ! ಜಗತ್-ಯುದ್ಧವಂ ನೋಡುವುದಕ್ಕಾಗಿ ಬಂದಿರುವ ದೇವಗಂಧರ್ವ

ಸಿದ್ಧ ಯಕ್ಷ ವಿದ್ಯಾಧರ ಕಿನ್ನರ ಕಿಂಪುರುಷಾದಿ ಜನವು, ( ತಮ್ಮ ಪ್ರಸಾದದಿಂದ ತಮ್ಮನ್ನು ನೋಡಿ) ತವಪ್ರಕೀರ್ತ್ಯಾ- ತಮ್ಮ ಕೀರ್ತಿಯಿಂದ, (ಶ್ರೀ) ತಮ್ಮ ಮಾಹಾತ್ಮ್ಯವನ್ನು ಕೀರ್ತನ ಮಾಡುವುದ್ದರಿಂದ, ( ಶಂ ) ತಮ್ಮ ಮಾಹಾತ್ಮ್ಯವಂ ಕೇಳುವುದರಿಂದ, ಪ್ರಹಷ್ಯತಿ- ಸಂತೋಷಿಸುವುದು. ಅನುರಜ್ಯತೇಚ- ತಮ್ಮಲ್ಲತ್ಯಂತವಾಗಿ ಪ್ರೀತಿಯುಳ್ಳದ್ದಾಗಿಯೂ ಇರುವುದು. ರಕ್ಷಾಂಸಿ- ರಾಕ್ಷಸರು, ಭೀತಾನಿ-ಭಯಪಟ್ಟವರಾಗಿ, ದಿಶಃ-ದಿಕ್ಕುಗಳಂಕುರಿತು, ದ್ರವಂತಿ-ಓಡುವವು. ಸರ್ವೇಸಿದ್ಧಸಂಘಾಃ - ಸಮಸ್ತ ಸಿದ್ಧಸಮೂಹಗಳೂ, ನಮಸ್ಯಂತಿಚ-ಆಗಾಗ್ಯೆ ನಮಸ್ಕರಿಸುವುವು. ("ತದೇತತ್ಸರ್ವಂ"ಎಂಬದಾಗಿ ಸೇರಿಸಿಕೊಳ್ಳಬೇಕು) ತದೇತತ್ಸರ್ವಂ-ಇವೆಲ್ಲವು, ಸ್ಥಾನೇ-ಯುಕ್ತವೇಸರಿ, ಇದು ಅವ್ಯಯಪದವು. ॥೩೬॥

ತಾ ॥ ಎಲೈ ಹೃಷೀಕೇಶನಾದ ಸ್ವಾಮಿಯೆ? ಈ ಯುದ್ಧವಂ ನೋಡುವುದಕ್ಕಾಗಿ ಬಂದ ದೇವಗಂಧರ್ವ ಸಿದ್ಧ ಯಕ್ಷ ವಿದ್ಯಾಧರ ಕಿನ್ನರ ಕಿಂಪುರುಷಾದಿ ಸಕಲಲೋಕವೂ ತಮ್ಮ ಅನುಗ್ರಹದಿಂದ ಸರ್ವೇಶ್ವರನಾದ ತಮ್ಮನ್ನು ಸೇವಿಸಿ ತಮ್ಮ ಕೀರ್ತಿಯನ್ನು ಕಂಡು ಸಂತೋಷಿಸುವುದು. ತಮ್ಮನ್ನು ನೋಡಿ ಭಯಪಟ್ಟಿರುವ ಈ ರಾಕ್ಷಸರು ಅನೇಕ ದಿಕ್ಕುಗಳಲ್ಲಿಯೂ ಓಡುತಲಿರುತ್ತಾರೆ. ಈ ಸಮಸ್ತವೂ ಯುಕ್ತವಾಗಿಯೇ ಇರುವುದು. ... ॥೩೬॥

ಶ್ಲೋ॥ಕಸ್ಮಾಚ್ಚ ತೇ ನನಮೇರನ್ ಮಹಾತ್ಮನ್ ಗರೀಯ
ಸೇಬ್ರಹ್ಮಣೋಪ್ಯಾದಿಕರ್ತ್ರೇ ॥೩೭॥

ಪ॥ ಕಸ್ಮಾತ್- ಚ- ತೇ- ನ- ನಮೇರನ್ - ಮಹಾತ್ಮನ್- ಗರೀಯಸೇ- ಬ್ರಹ್ಮಣಃ- ಅಪಿ- ಆದಿಕರ್ತ್ರೇ॥

(ರಾ॥ ಭಾ॥ ಅ॥) ಪೂರ್ವಶ್ಲೋಕದಲ್ಲಿ ಇವೆಲ್ಲವೂ ಯುಕ್ತವಾಗಿಯೇ ಇರುವುದೆಂದು ಹೇಳಿತು. ಅದನ್ನೇ ಉಪಪಾದನ ಮಾಡುತ್ತಾರೆ. ಮಹಾತ್ಮನ್-ಅಗಾಧಹೃದಯನಾದ ಸ್ವಾಮಿಯೇ, ಗರೀಯಸೇ-ಅತ್ಯಂತಗೌರವಾರ್ಹನಾಗಿಯೂ, ಬ್ರಹ್ಮಣೋಽಪ್ಯಾದಿಕರ್ತ್ರೇ - ಸಾಕ್ಷಾಚ್ಚ

ತುರ್ಮುಖ ಬ್ರಹ್ಮನಿಗೂ ಕಾರಣಭೂತನಾದ ಜಗತ್ಕರ್ತನಾಗಿಯೂಇರುವ, ತೇ-ನಿನಿಗೆ, ಆಬ್ರಹ್ಮಾದಿಗಳು; ಕಸ್ಮಾಚ್ಚನನಮೇರ್ನ- ಏತಕ್ಕೆನಮಸ್ಕರಿಸಲಾರರು? (ನಮಸ್ಕರಿಸುತ್ತಾರೆಂತಲೇ ತಾತ್ಪರ್ಯವು.) ॥೩೭॥

ಶ್ಲೋ ॥ ಅನಂತದೇವೇಶಜಗನ್ನಿವಾಸತ್ವಮಕ್ಷರಂಸದಸತ್ತತ್ಪರಂಯತ್॥೩೭॥ತ್ವಮಾದಿದೇವಃ ಪುರುಷಃ ಪುರಾಣಸ್ತ್ವಮಸ್ಯವಿಶ್ವಸ್ಯಪರಂನಿಧಾನಂ ॥ ॥೩೮॥

ಪ॥ ಅನಂತ-ದೇವೇಶ-ಜಗನ್ನಿವಾಸ-ತ್ವಂ - ಅಕ್ಷರಂ-ಸತ್-ಅಸತ್-ತತ್ಪರಂ-ಯತ್ ॥ ೩೭ ॥ ತ್ವಂ-ಆದಿದೇವಃ- ಪುರುಷಃ-ಪುರಾಣಃ - ತ್ವಂ-ಅಸ್ಯ - ವಿಶ್ವಸ್ಯ-ಪರಂ-ನಿಧಾನಂ ॥ ... ... ... ॥೩೮॥

(ಅ॥ ರಾ॥ ಭಾ॥) ಅನಂತ - ಅಪರಿಚ್ಛಿನ್ನರೂಪನೇ, ದೇವೇಶ-ಬ್ರಹ್ಮಾದಿದೇವತಾಸಮೂಹವನ್ನಾಳುವಂತವನೆ, ಜಗನ್ನಿವಾಸ-ಜಗತ್ತಿಗೆಲ್ಲವೂ ವಾಸಸ್ಥಾನನಾದವನೆ ತ್ವಂ-ನೀನೇ ಅಕ್ಷರಂ - ಸ್ವರೂಪವಿಕಾರವಿಲ್ಲದ ಜೀವತತ್ವವು. ಸತ್-ನಾಮರೂಪ ವಿಭಾಗವುಳ್ಳದ್ದಾಗಿರುವುದರಿಂದ ಕಾರ್ಯರೂಪವಾಗಿಯೂ, ಅಸತ್-ನಾಮರೂಪ ವಿಭಾಗಶೂನ್ಯವಾಗಿರುವುದರಿಂದ ಕಾರಣರೂಪವಾಗಿಯೂ ಇರುವ ಪ್ರಕೃತಿ ತತ್ವವೂ, ತ್ವಂ-ನೀನೆ. ತತ್ಪರಂಯತ್- ಆಪ್ರಕೃತಿಗಿಂತಲೂ ಪ್ರಕೃತಿಸಂಬದ್ಧನಾದ ಜೀವನಿಗಿಂತಲೂ ವಿಲಕ್ಷಣವಾದ ಮುಕ್ತಾತ್ಮತತ್ವವ್ಯಾವದುಂಟೊ, ತತ್_ಅದೂ, ತ್ವಂ-ನೀನೆ (ಆದುದರಿಂದ) ತ್ವಂ-ನೀನೆ, ಆದಿದೇವಃ- ಸಮಸ್ತದೇವತೆಗಳಿಗೂ ಮೊದಲನೇ ದೇವತೆಯು, ತ್ವಂ-ನೀನೆ, ಪುರಾಣಃಪುರುಷಃ- ಶಾಶ್ವತನಾದ ಪುರುಷನು. ತ್ವಂ-ನೀನೇ, ಅಸ್ಯವಿಶ್ವಸ್ಯ- ನಿನಿಗೆಶರೀರಭೂತವಾದ ಈ ಪ್ರಪಂಚಕ್ಕೆ, ಪರಂನಿಧಾನಂ-ಅಂತರಾತ್ಮನಾಗಿರುವುದರಿಂದ ಉತ್ತಮವಾದ ಆಧಾರವಸ್ತುವು.(ಗೀ॥ ವಿ) ಆಶ್ರಯವಾದ ವಸ್ತುವು. ॥೩೮॥

(ಶಂ॥ ಭಾ॥ ) ಕ್ಷುದ್ರವಾದ ಮನಸ್ಸಿಲ್ಲದ ಎಲೈ ಮಹಾತ್ಮನೆ, ಉತ್ತಮರಾಗಿಯೂ ಚತುರ್ಮುಖ ಬ್ರಹ್ಮನಿಗೂ ಆದಿಕಾರಣರಾಗಿಯೂ ಇರುವ ನಿಮಗೆ ಅವರೆಲ್ಲರೂ ಏತಕ್ಕೆ ನಮಸ್ಕರಿಸಲಾರರು? ದೇವದೇವ

ರಾಗಿಯೂ ನಾಶರಹಿತರಾಗಿಯೂ ಜಗತ್ತಿಗೆ ಆಧಾರಭೂತರಾಗಿಯೂ ಇರುವ ಎಲೈ ಸರ್ವಸ್ವಾಮಿಯೆ? ನಾಶರಹಿತವೂ, (ಇರುವುದೆಂಬದಾಗಿ ಹೇಳಲ್ಪಡುವುದೂ,) ಇಲ್ಲವೆಂದು ಹೇಳಲ್ಪಡುವುದೂ, ಎಂಬಿವುಗಳಿಲ್ಲವೂ ಭಿನ್ನವಾಗಿರುವುದೂ ಎಂಬೀಎಲ್ಲವೂ ನೀವೆ. ||೩೭||

(ಮ||) ಸತ್-ಪೂರ್ಣನಾದ ಆತ್ಮನು, ಅಸತ್ - ಕಾರಣವಾಗಿರುವಂತವನು. ... ... ... ||೩೭||

ಶ್ಲೋ||ವೇತ್ತಾಽಸಿವೇದ್ಯಂಚಪರಂಚಧಾಮತ್ವಯಾತತಂ
ವಿಶ್ವಮನಂತರೂಪ || ... ||೩೮||

ಪ||ವೇತ್ತಾ- ಅಸಿ-ವೇದ್ಯಂ- ಚ- ಪರಂ- ಚ- ಧಾಮ- ತ್ವಯಾ-ತತಂ- ವಿಶ್ವಂ- ಅನಂತರೂಪ||

(ಅ|| ರಾ|| ಭಾ||) ಅನಂತರೂಪ- ಅಸಂಖ್ಯಾತಗಳಾದ ದಿವ್ಯ ಶರೀರಗಳುಳ್ಳ ಸ್ವಾಮಿಯೆ, ವೇತ್ತಾಅಸಿ- ಜಗತ್ತಿನಲ್ಲಿ ನಿನಗಿಂತಲೂ ಭಿನ್ನರಾದ ಸರ್ವವಿದ್ವಾಂಸರೂ ನೀನೇ ಆಗಿರುತ್ತಿ. ವೇದ್ಯಂಚತ್ವಮೇವ- ತಿಳಿಯಲ್ಪಡತಕ್ಕ ವಸ್ತುವೂ ನೀನೆ. ತ್ವಮೇವ- ಈಪ್ರಕಾರವಾಗಿ ಸರ್ವಾಂತರಾತ್ಮನಾಗಿರುವ ನೀನೆ, ಪರಂಧಾಮಚ - ಉತ್ತಮವಾದ ಹೊಂದತಕ್ಕ (ಪ್ರಾಪ್ಯ) ಸ್ಥಾನವು. (ಗೀ||ವಿ||) ಪರಂಚಧಾಮ- ತೇಜಸ್ಸರೂಪವು, ವಿಶ್ವಂ- ಚೇತನಾಚೇತನ ರೂಪವಾದ ಜಗತ್ತೆಲ್ಲವೂ, ತ್ವಯಾತತಂ- ಅಂತರಾತ್ಮಭೂತನಾಗಿರುವ ನಿನ್ನಿಂದಲೆ ವ್ಯಾಪಿಸಲ್ಪಟ್ಟಿರುವುದು. ಈ ಪ್ರಕಾರವಾಗಿ ಸಮಸ್ತ ವಸ್ತುಗಳಲ್ಲಿಯೂ ಆತ್ಮನಾಗಿರುವುದರಿಂದ ಆಯಾ ವಸ್ತುಗಳಿಗೆ ವಾಚಕಗಳಾದ ಶಬ್ದಗಳು ನಿಮ್ಮನ್ನೇ ಬೋಧಿಸುವುವೆಂಬದಾಗಿ ಮುಂದಿನಶ್ಲೋಕದಲ್ಲಿ ಹೇಳುತ್ತಾರೆ. ... ... ||೩೮||

ಶ್ಲೋ|| ವಾಯುರ್ಯಮೋಽಗ್ನಿರ್ವರುಣಶ್ಶಶಾಂಕಃ ಪ್ರಜಾಪ
ತಿಸ್ತ್ವಂಪ್ರಪಿತಾಮಹಶ್ಚ|| ||೩೯||

ಪ|| ವಾಯುಃ- ಯಮಃ- ಅಗ್ನಿಃ- ವರುಣಃ- ಶಶಾಂಕಃ- ಪ್ರಜಾಪತಿಃ- ತ್ವಂ- ಪ್ರಪಿತಾಮಹಃ - ಚ ||

(ಅ|| ರಾ||) ವಾಯುಃ- ವಾಯುವೆಂಬುವನೂ, ತ್ವಂ- ನೀನೆ. ಯಮಃ- ಯಮನೆನ್ನಲ್ಪಡುವನೂ, ತ್ವಂ- ನೀನೆ. ಅಗ್ನಿಃ- ಅಗ್ನಿ

ಯೂ,ತ್ವಂ- ನೀನೆ. ವರುಣಃ-ವರುಣನೂ, ತ್ವಂ-ನೀನೆ. ಶಶಾಂಕಃ-ಚಂದ್ರನೂ, ತ್ವಂ- ನೀನೆ. ಪ್ರಜಾಪತಿಃ-ಪ್ರಜೆಗಳಿಗೆ ಸ್ವಾಮಿಯೂ, ತ್ವಂ- ನೀನೆ. (ಶಂ) ಕಶ್ಯಪರೇ ಮೊದಲಾದ ಪ್ರಜಾಪತಿಗಳೂ ನೀನೆ. ಪ್ರಪಿತಾಮಹಶ್ಚ- ಪ್ರಜೆಗಳಿಗೆ ಪಿತೃಗಳಾದ ದಕ್ಷಕಾಶ್ಯಪಾದಿಗಳಿಗೆ ಪಿತಾಆಗಿರುವುದರಿಂದ ಚತುರ್ಮುಖನು ಪಿತಾಮಹನಾದನು, ಆಚತುರ್ಮುಖನಿಗೂ ಪರಮಾತ್ಮನು ಪಿತಾ(ತಂದೆ) ಆಗಿರುವುದರಿಂದ (ನೀನು) ಪ್ರಜೆಗಳಿಗೆ ಪ್ರಪಿತಾಮಹನು. ॥೩೮೫॥

(ಗೀ॥ ವಿ॥) ತ್ವಂ- ನೀನು, ವಾಯುಃ- ಬಲಾತ್ಮಕನಾಗಿಯೂ ಸರ್ವಜ್ಞನಾಗಿಯೂ ಆಗಿರುವುದರಿಂದ ವಾಯುಶಬ್ದವಾಚ್ಯನು. ವಾಯ್ವಂತರ್ಗನೆಂದರ್ಥವು. ಯಮಃ- ಸರ್ವ ನಿಯಾಮಕನಾದುದರಿಂದ ಯಮಶಬ್ದವಾಚ್ಯನು, ಯಮಾಂತರ್ಗತನು. ಅಗ್ನಿಃ- ಅಗ್ರಪೂಜಾರ್ಹನಾಗಿರುವುದರಿಂದ ಅಗ್ನಿಶಬ್ದವಾಚ್ಯನು, ಅಗ್ನ್ಯಂತರ್ಗತನು. ವರುಣಃ- ವೃಣುತೇಭಕ್ತಾನಿತಿವರುಣಃ, ಎಂಬದಾಗಿ ಭಕ್ತರನ್ನು ಸ್ವೀಕರಿಸುತ್ತಾನೆಂಬ ಕಾರಣದಿಂದ ವರುಣಶಬ್ದವಾಚ್ಯನು. ವರುಣಾಂತರ್ಗತನು. ಶಶಾಂಕಃ- ಶಶಿಎಂದರೆ ಅಂತ್ಯಸುಖವು. ಅದರಿಂದ ಅಂಕಿತನು ಏಂಬ ಕಾರಣದಿಂದ ಶಶಾಂಕ ಶಬ್ದವಾಚ್ಯನು, ಚಂದ್ರಾಂತರ್ಗತನು. ಪ್ರಜಾಪತಿಃ- ಪ್ರಜಾಪಾಲಕನಾದುದರಿಂದ ಪ್ರಜಾಪತಿಶಬ್ದವಾಚ್ಯನು. ಬ್ರಹ್ಮಾಂತರ್ಗತನು. ಪ್ರಪಿತಾಮಹಶ್ಚ- ಸರ್ವಪಿತಾಮಹನಾದ ಚತುರ್ಮುಖನಿಗೂ ತಂದೆಯಾಗಿರುವುದರಿಂದ ಪ್ರಪಿತಾಮಹನಾಗಿರುವನು. ಈ ಅರ್ಥಗಳಿಗೆ "ವಾಯುರ್ಬಲ ಜ್ಞಾನಯೋಗಾಚ್ಛಶಾಂಕೋನ್ತ್ಯಸುಖಾಂಕಿತಃ । ಇಂದ್ರಸ್ಸಪರಮೈಶ್ವರ್ಯಾದಿತಿನಾನಾಭಿಧೋಹರಿಃ,, ಎಂಬದಾಗಿ ಶ್ರೀಮದಾಚಾರ್ಯರಿಂದ ಗೀತಾ ತಾತ್ಪರ್ಯದಲ್ಲುದಹರಿಸಲ್ಪಟ್ಟವಚನವು. ... ... ॥೩೯॥

ಶ್ಲೋ॥ ನಮೋನಮಸ್ತೇಸ್ತುಸಹಸ್ರಕೃತ್ವಃ ಪುನಶ್ಚಭೂಯೋಪಿನಮೋನಮಸ್ತೇ ।೩೯॥ ನಮಃಪುರಸ್ತಾದಥಪೃಷ್ಠತಸ್ತೇನಮೋಸ್ತುತೇಸರ್ವತಏವಸರ್ವ ॥೩೯೫॥

ಪ॥ ನಮೋನಮಃ- ತೇ- ಅಸ್ತು- ಸಹಸ್ರಕೃತ್ವಃ- ಪುನಃ- ಚ- ಭೂಯಃ-

ಅಪಿ- ನಮೋನಮಃ- ತೇ ||೩೯|| ನಮಃ- ಪುರಸ್ತಾತ್- ಅಥ- ಪೃಷ್ಠತಃ- ತೇ- ನಮಃ- ಅಸ್ತು- ತೇ- ಸರ್ವತಃ- ಏವ- ಸರ್ವ|| ||೩೯||

ಅ|| ಸರ್ವ- ಸರ್ವಭೂತಾತ್ಮನಾದ ಎಲೈ ಸ್ವಾಮಿಯೇ! ತೇ-ನಿನಿಗೋಸ್ಕರ, ಸಹಸ್ರಕೃತ್ವಃ- ಸಾವಿರಸಲವಾಗಿ, ನಮೋನಮಃ- ನಮಸ್ಕಾರವು. ಅಸ್ತು- ಆಗಲಿ, ಪುನಶ್ಚ- ತಿರಿಗಿಯು,ತೆ- ನಿನಿಗೋಸ್ಕರ, ನಮಃ- ನಮಸ್ಕಾರವು. ಭೂಯೋಪಿ- ತಿರಿಗಿಯೂ, ತೇ- ನಿನಿಗೋಸ್ಕರ, ನಮಃ- ನಮಸ್ಕಾರವು. ಅಥ- ಅನಂತರದಲ್ಲಿ, ಪುರಸ್ತಾತ್- ನಿನ್ನಮುಂಭಾಗಕ್ಕೆ, ನಮಃ- ನಮಸ್ಕಾರವು. ತೇ- ನಿನ್ನ, ಸರ್ವತ ಏವ- ಸರ್ವ ಪ್ರದೇಶಗಳಿಗೂ, ನಮಃ- ನಮಸ್ಕಾರವು, ಅಸ್ತು- ಆಗಲಿ. ಈಪ್ರಕಾರವಾಗಿ ಅತ್ಯದ್ಭುತಾಕಾರನಾದ ಭಗವಂತನನ್ನುನೋಡಿ ಸಂತೋಷದಿಂದ ತೆರೆಯಲ್ಪಟ್ಟ ಕಣ್ಣುಗಳುಳ್ಳ ಅರ್ಜುನನು ಅತ್ಯಂತವಾದ ಭಯದಿಂದ ನಮ್ರ (ಬಗ್ಗಿದವ)ನಾಗಿ ಸರ್ವಪ್ರದೇಶಗಳಲ್ಲಿಯೂ ನಮಸ್ಕರಿಸಿದನೆಂದರಿಯಬೇಕು, ... ||೩೯||

(ಶಂ|| ಭಾ||) ಪರಮಾತ್ಮನಿಗೆ ಯೆಷ್ಟು ನಮಸ್ಕಾರಗಳಂ ಮಾಡಿದರೂ ಅರ್ಜುನನು ತನಿಗಿರುವ ಶ್ರದ್ಧಾಭಕ್ತ್ಯತಿಶಯದಿಂದ ತೃಪ್ತಿಯಂಹೊಂದದೇ ಇರುವುದರಿಂದ ಆಗಾಗ್ಯೆ ನಮಸ್ಕಾರಗಳಂ ಮಾಡುತ್ತಾನೆಂದರಿಯಬೇಕು. ... ... ||೩೯||

ಶ್ಲೋ|| ಅನಂತವೀರ್ಯಾಮಿತವಿಕ್ರಮಸ್ತ್ವಂಸರ್ವಂಸಮಾ
ಪ್ನೋಷಿತತೋಸಿಸರ್ವಃ || ||೪೦||

ಪ|| ಅನಂತವೀರ್ಯಾಮಿತವಿಕ್ರಮಃ- ತ್ವಂ- ಸರ್ವಂ- ಸಮಾಪ್ನೋಷಿ- ತತಃ- ಅಸಿ- ಸರ್ವಃ ||

(ರಾ|| ಭಾ||) ಅನಂತವೀರ್ಯಾಮಿತವಿಕ್ರಮಃ- ಅಪರಿಚ್ಛೇದ್ಯ (ಅಳವಿಡಲಶಕ್ಯ)ವಾದ ವೀರ್ಯವೂ ಅಪರಿಮಿತವಾದ ವಿಕ್ರಮವೂ ವುಳ್ಳ, ತ್ವಂ- ನೀನು, ಸರ್ವಂ- ಚೇತನಾಚೇತನಾತ್ಮಕವಾದ ಸಮಸ್ತ ವಸ್ತುವನ್ನೂ, ಸಮಾಪ್ನೋಷಿ- ಆತ್ಮವಾಗಿ ವ್ಯಾಪಿಸಿಕೊಂಡಿರುತ್ತೀ. ತತಃ- ಶರೀರಭೂತವಾದ ವಸ್ತುವಿನಲ್ಲಿಯೂ ನೀನು ಆತ್ಮನಾಗಿವ್ಯಾಪಿಸಿಕೊಂಡಿರುವುದರಿಂದ, ಸರ್ವಃ- ಸಮಸ್ತವೂ ನೀನೆಆಗಿರುತ್ತೀ. ಯಾವ

ಕಾರಣದಿಂದ ನೀನು ಸಮಸ್ತವಾದ ಚೇತನಾಚೇತನ ವಸ್ತು ಸಮೂಹ ವನ್ನು ಆತ್ಮವಾಗಿ ವ್ಯಾಪಿಸಿಕೊಂಡಿರುತ್ತೀಯೊ ಆಕಾರಣದಿಂದಲೇ ಸ ಮಸ್ತವಾದ ಚೇತನಾಚೇತನ ಸಮೂಹವೂ ನಿನಗೆ ಶರೀರವಾಗಿರುತ್ತ ಪ್ರಕಾರವಾಗಿರುವುದರಿಂದ ಸರ್ವ ಪ್ರಕಾರನಾದ ನೀನೆ ಸಮಸ್ತಶಬ್ದ ಗಳಿಗೂ ವಾಚ್ಯನಾಗಿರುವಿ ಎಂದರ್ಥವು. ಈ ಶರೀರಾತ್ಮಭಾವದಿಂದಲೆ ಶರೀರಭೂತ ಚೇತನಾಚೇತನ ವಾಚಕಗಳಾದ ಸಚ್ಛಬ್ದವೇನು, ಅಸ ಚ್ಛಬ್ದವೇನು, ಅಕ್ಷರಶಬ್ದವೇನು, ತತ್ಪರಶಬ್ದವೇನು, ವಾಯು ಯ ಮಾಗ್ನಿ ವರುಣ ಶಶಾಂಕಾದಿ ಶಬ್ದಗಳೇನು, ಇವುಗಳನ್ನು ಸ್ವಾಮಿ ಯಲ್ಲಿ ಪ್ರಯೋಗಿಸಿರುವುದು. ಸಾಮಾನಾಧಿಕರಣ್ಯದ ಗುರ್ತನ್ನೂ ಮತ್ತು ಸಮಸ್ತ ಶಬ್ದಗಳೂ ಆಯಾ ಪ್ರಕಾರಗಳಂ ಮುಂದೆ ಮಾಡಿ ಕೊಂಡು ಪರಮಾತ್ಮನಿಗೆ ವಾಚಕಗಳಾಗುವ ಪ್ರಕಾರವನ್ನೂ ಏಳನೇ ಅಧ್ಯಾಯದಲ್ಲಿ "ಮಯಿ ಸರ್ವಮಿದಂಪ್ರೋತಂ,, ಎಂಬೀ ವ್ಯಾಖ್ಯಾನ ದಲ್ಲಿ ತೋರಿಸಿರುವೆವು. ... ... ॥೪೦॥

(ಗೀ॥ವಿ॥) ಇಲ್ಲಿ "ಸರ್ವಃ,, ಎಂಬುವುದಾಗಿ ಹೇಳಿರುವುದಕ್ಕೂ ಶ್ರುತಿಯಲ್ಲಿ "ಸರ್ವಂಖಲ್ವಿದಂಬ್ರಹ್ಮ,, ಎಂಬುವುದಾಗಿ ಹೇಳಿರುವು ದಕ್ಕೂ ಸರ್ವವೂ ಬ್ರಹ್ಮವೆಂಬುವ ಅರ್ಥವನ್ನರಿಯದೆ ಸರ್ವಾಶ್ರಯವು ಬ್ರಹ್ಮವೆಂದರಿಯಬೇಕು.ಸರ್ವಶಬ್ದವಾಚ್ಯನುಬ್ರಹ್ಮನೆಂದರ್ಥವು॥೪೦॥

ಶ್ಲೋ॥ ಸಖೇತಿಮತ್ವಾಪ್ರಸಭಂಯದುಕ್ತಂ ಹೇಕೃಷ್ಣ
ಹೇಯಾದವಹೇಸಖೇತಿ । ಅಜಾನತಾಮಹಿಮಾನಂತವೇ
ದಂಮಯಾಪ್ರಮಾದಾತ್ಪ್ರಣಯೇನವಾಪಿ ॥ ॥೪೧॥

ಶ್ಲೋ॥ ಯಚ್ಚಾಪಹಾಸಾರ್ಥಮಸತ್ಕೃತೋಽಸಿ ವಿಹಾ
ರಶಯ್ಯಾಸನಭೋಜನೇಷು ।ಏಕೋಥವಾಪ್ಯಚ್ಯುತತ್ಸಮ
ಕ್ಷಂತತ್ಕ್ಷಾಮಯೇತ್ವಾಮಹಮಪ್ರಮೇಯಂ ॥ ೪೨ ॥

ಪ॥ ಸಖಾ- ಇತಿ-ಮತ್ವಾ-ಪ್ರಸಭಂ-ಯತ್-ಉಕ್ತಂ- ಹೇಕೃಷ್ಣ - ಹೇಯಾದವ-ಹೇಸ ಖ-ಇತಿ।ಅಜಾನತಾ-ಮಹಿಮಾನಂ-ತವ-ಇಮಂ-ಮಯಾ-ಪ್ರಮಾದಾತ್-ಪ್ರಣಯೇನ-ವಾ- ಅಪಿ ॥ ಯತ್- ಚ- ಅಪಹಾಸಾರ್ಥಂ- ಅಸತ್ಕೃತಃ- ಅಪಿ- ವಿಹಾರಶಯ್ಯಾಸನಭೋಜ ನೇಷು । ಏಕಃ- ಅಥವಾ- ಅಪಿ- ಅಚ್ಯುತ- ತತ್- ಸಮಕ್ಷಂ - ತತ್ - ಕ್ಷಾಮಯೇ- ತ್ವಾಂ- ಅಹಂ- ಅಪ್ರಮೇಯಂ ॥

ಅ॥ ಹೇ ಅಚ್ಯುತ- ನಾಶರಹಿತನಾದ ಎಲೈ ಸ್ವಾಮಿಯೆ, ತವ-ನಿನ್ನ, ಇಮಂ ಮಹಿಮಾನಂ- ಅನಂತವೀರ್ಯತ್ವ ಅಮಿತವಿಕ್ರಮತ್ವ ಸರ್ವಾಂತರಾತ್ಮತ್ವ ಸರ್ವಸ್ರಷ್ಟ್ರತ್ವಾದಿ ರೂಪವಾದ ಈಮಹಿಮೆಯನ್ನು,(ಈಪದಗಳ ಅರ್ಥಗಳನ್ನು ಹಿಂದಿನ ಶ್ಲೋಕದಲ್ಲಿ ನೋಡಬಹುದು) ಅಜಾನತಾ-ತಿಳಿಯದೇ ಇರುವ,ಮಯಾ-ನನ್ನಿಂದ,ಪ್ರಮಾದಾತ್-ಅಜ್ಞಾನದಿಂದಲಾದರೂ, ಪ್ರಣಯೇನವಾಪಿ- ಚಿರಪರಿಚಯದಿಂದುಂಟಾದಸ್ನೇಹದಿಂದಲಾದರೂ,ಸಖೇತಿಮತ್ವಾ-ನನ್ನ ಮಿತ್ರನೆಂದು ನೆನೆಸಿಕೊಂಡು, ಹೇಕೃಷ್ಣ-ಎಲೈಕೃಷ್ಣನೇ! ಹೇ ಯಾದವ-ಎಲೈ ಯಾದವನೇ, ಹೇ ಸಖ-ಎಲೈ ಸ್ನೇಹಿತನೇ, ಇತಿ-ಎಂಬೀ ಪ್ರಕಾರವಾಗಿ,(ತ್ವಯಿ-ನಿಮ್ಮ ವಿಷಯದಲ್ಲಿ ) ಪ್ರಸಭಂ - ವಿನಯ ವಿಲ್ಲದೆ ಕೇವಲ ಅಲಕ್ಷ್ಯಮಾಡಿ, (ಶಂ) ಸ್ವಲ್ಪವೂ ಯೋಚಿಸದೇ ತಿರಸ್ಕರಿಸಿ, ಯದುಕ್ತಂ-ಯಾವದು ಹೇಳಲ್ಪಟ್ಟಿತೋ, ಅಪಹಾಸಾರ್ಥಂ-ಪರಿಹಾಸಕ್ಕಾಗಿ, ವಿಹಾರಶಯ್ಯಾಸನ ಭೋಜನೇಷು-ಕ್ರೀಡಾಸಮಯಗಳಲ್ಲಿಯೂ ಮಲಗುವ ಕಾಲಗಳಲ್ಲಿಯೂ ಸಮವಾಗಿ ಕೂತುಕೊಂಡಿರುವ ಸಮಯಗಳಲ್ಲಿಯೂ, ಏಕಪಂಕ್ತಿಯಾಗಿ ಭೋಜನ ಮಾಡುವ ಕಾಲಗಳಲ್ಲಿಯೂ, ಏಕಃ-ಒಬ್ಬನಾಗಿರುವ ಏಕಾಂತ ಸಮಯದಲ್ಲಿಯೂ, (ಗೀ॥ ವಿ) ಸರ್ವೋತ್ತಮನಾಗಿದ್ದರೂ, (ಸತ್ಸಮಕ್ಷಮುತ-ಕೆಲವು ಹಿರಿಯರು ಇರುವ ಕಾಲದಲ್ಲಿಯಾದರೂ,)ತತ್ಸಮಕ್ಷಮಪಿ-ಅನೇಕರಿರುವ ಕಾಲದಲ್ಲಿಯಾದರೂ, (ಗೀ॥ವಿ) ತತ್-ಆ ಅಪರಾಧವನ್ನು ಕುರಿತು, ಸಮಕ್ಷಂ- ನಿಮ್ಮ ಎದುರಾಗಿಯೇ, ಕ್ಷಾಮಯೆ-ಕ್ಷಮೆಯಂ ಪ್ರಾರ್ಥಿಸುವೆನು.)ಅಸತ್ಕೃತೋಽಸೀತಿಯತ್-ಬ್ರಹ್ಮಾದಿ ದೇವತೆಗಳ ಸತ್ಕಾರಗಳಿಗೂ ಅರ್ಹರಾದ ನೀವು ನನ್ನಿಂದ ಸತ್ಕರಿಸಲ್ಪಡದೇ ಅವಮತಿಸಲ್ಪಟ್ಟಿರುವರೆಂಬುವುದು ಯಾವದುಂಟೊ, ತತ್-ಅವೆಲ್ಲವನ್ನು ಕುರಿತು,ಅಪ್ರಮೇಯಂತ್ವಾಂ-ಚಿಂತಿಸಲಶಕ್ಯವಾದ ಪ್ರಭಾವಮುಳ್ಳ ನಿಮ್ಮನ್ನು, ಅಹಂ - ನಿಮಗೆ ಶಿಷ್ಯನಾಗಿಯೂ ನಿಮ್ಮನ್ನು ಶರಣ ಹೊಂದಿರುವಂತವನಾಗಿಯೂ ಇರುವ ನಾನು, ಕ್ಷಾಮಯೇ-ಕ್ಷಮೆಯಂ ಪ್ರಾರ್ಥಿಸುವೆನು. ಇಲ್ಲಿ " ಸಖೇತಿಮತ್ವಾ " ಎಂಬುವ ಸ್ಥಲದಲ್ಲಿ (ಹೇಸಖ - ಇತಿ - ಎಂಬದಾಗಿ ಪದಚ್ಛೇದವು. ಆ ರೀತಿಯಾಗಿ ಮಾಡಿದರೆ ಹೇ ಸಖ ಇತಿ ಎಂಬದಾಗಿ ಸಂಧಿ ಬರಬೇಕಾಗಿ

ದ್ದರೂ ಇಲ್ಲಿ ಹೇ ಸಖೇತಿ ಎಂಬುವ ಸಂಧಿಯು ಆರ್ಷ ಪ್ರಯೋಗದಿಂದ ಬಂದಿರುವುದೆಂದರಿಯಬೇಕು. ॥೪೧॥೪೨॥

ತಾ॥ ಎಲೈ ಅಚ್ಯುತನೇ! ಅಳವಿಡಲಶಕ್ಯವಾದ ವೀರ್ಯವೂ ಪರಾಕ್ರಮವೂ ಮತ್ತು ಇದೇ ಮೊದಲಾದ ಅನೇಕ ಗುಣಗಳಿಂದೊಪ್ಪಿರುವ ನಿನ್ನ ಪ್ರಭಾವವನ್ನರಿಯದೆ ನಾನು ಅಜ್ಞಾನದಿಂದಲೂ ಅಧಿಕ ಪರಿಚಯದಿಂದಲೂ ನಿನ್ನನ್ನು ಸ್ನೇಹಿತನೆಂಬದಾಗಿ ತಿಳಿದು ಎಲೈ ಕೃಷ್ಣನೇ? ಎಲೈ ಯಾದವನೇ? ಎಲೈ ಸಖನೇ! ಎಂಬೀರೀತಿಯಾಗಿ ಸ್ವಲ್ಪವೂ ವಿನಯವಿಲ್ಲದೆ ಕರಿಯುತಲಿದ್ದೆನು. ಎಲೈ ಸರ್ವಸ್ವಾಮಿಯೇ? ಸರ್ವಪ್ರಕಾರದಿಂದಲೂ ಸನ್ನಸತ್ಕಾರಕ್ಕೆ ಅರ್ಹನಾದ ನಿನ್ನನ್ನು ಕುರಿತು ಈ ರೀತಿಯಾಗಿ ಕರಿಯುತ ಅಪರಾಧ ಪಟ್ಟಿರುವೆನಲ್ಲವೆ? ಇಷ್ಟುಮಾತ್ರವಲ್ಲದೆ ಮಲಗುವ ಕಾಲದಲ್ಲಿಯೂ ವಿಹಾರಾರ್ಥವಾದ ಸಂಚಾರ ಕಾಲದಲ್ಲಿಯೂ ಏಕಾಸನದಲ್ಲಿ ಸಮವಾಗಿ ಕೂತುಕೊಂಡಿರುವ ಕಾಲದಲ್ಲಿಯೂ ಏಕಪಂಕ್ತಿಯಾಗಿ ಭೋಜನ ಮಾಡುವ ಕಾಲಗಳಲ್ಲಿಯೂ ನಾನು ಮಾಡಿರುವ ಅಪರಾಧಗಳಿಗೆ ಸಂಖ್ಯೆಯೇ ಇಲ್ಲವು. ಆದುದರಿಂದ ಮಾಡಲ್ಪಟ್ಟ ಸರ್ವ ಪ್ರಕಾರಗಳಾದ ಅಪರಾಧಗಳಂ ಕ್ಷಮಿಸಬೇಕೆಂದು ಪ್ರಾರ್ಥಿಸುವೆನು. ... ... ॥೪೧॥೪೨॥

ಶ್ಲೋ॥ ಪಿತಾಸಿಲೋಕಸ್ಯಚರಾಚರಸ್ಯತ್ವಮಸ್ಯಪೂಜ್ಯಶ್ಚ
ಗುರುರ್ಗರೀಯಾನ್ । ನತ್ವತ್ಸಮೋಸ್ತ್ಯಭ್ಯಧಿಕಃಕುತೋ
ನ್ಯೋಲೋಕತ್ರಯೇಪ್ಯಪ್ರತಿಮಪ್ರಭಾವ॥ ॥೪೩॥

ಪ॥ ಪಿತಾ-ಅಸಿ-ಲೋಕಸ್ಯ-ಚರಾಚರಸ್ಯ-ತ್ವಂ-ಅಸ್ಯ-ಪೂಜ್ಯಃ-ಚ-ಗುರುಃ-ಗರೀಯಾನ್। ನ-ತ್ವತ್ಸಮಃ-ಅಸ್ತಿ-ಅಭ್ಯಧಿಕಃ- ಕುತಃ-ಅನ್ಯಃ-ಲೋಕತ್ರಯೇ-ಅಪಿ-ಅಪ್ರತಿಮಪ್ರಭಾವ ॥

ಅ॥ ಹೇ ಅಪ್ರತಿಮಪ್ರಭಾವ-ಎಲೈ ಅನ್ಯಾದೃಶವಾದ ಪ್ರಭಾವಶಾಲಿಯಾದ ಪರಮಪುರುಷನೆ, ತ್ವಂ-ನೀನು, ಚರಾಚರಸ್ಯ-ಜಂಗಮಸ್ಥಾವರಾತ್ಮಕಗಳಾದ, ಅಸ್ಯಲೋಕಸ್ಯ-ಈ ಪ್ರಪಂಚಕ್ಕೆ, ಪಿತಾ-ತಂದೆಯಾಗಿಯೂ, ಪೂಜ್ಯಶ್ಚ-ಪೂಜಾರ್ಹನಾಗಿಯೂ, ಗುರುಃ-ಗುರುವಾಗಿಯೂ,

ಗರೀಯಾನ್-ಗುರುವಿಗಿಂತಲೂ ಶ್ರೇಷ್ಠನಾಗಿಯೂ, (ಶಂ॥ ಗೀ॥ವಿ॥) ಗುರುರ್ಗರೀಯಾನ್-ಶ್ರೇಷ್ಠನಾದ ಗುರುವಾಗಿಯೂ.(ರಾ) ಗರೀಯಾನ್-ಪೂಜ್ಯತಮನು. ಅಸಿ-ಆಗಿರುತ್ತಿ, ಲೋಕತ್ರಯೇಪಿ-ಮೂರು ಲೋಕಗಳಲ್ಲಿಯೂ, ತ್ವತ್ಸಮೋನಾಸ್ತಿ - ನಿನಿಗೆ ಸಮವಾಗಿರುವಂತವರ್ಯಾರೂ ಇಲ್ಲವು, ಅಭ್ಯಧಿಕ ಅನ್ಯಃಕುತಃ - ನಿನಿಗಿಂತಲೂ ಅಧಿಕನಾದ ಬೇರೊಬ್ಬನು ಎಲ್ಲಿರುವನು. ... ... ॥೪೩॥

(ರಾ। ಭಾ॥) ಹಿಂದಿನ ಶ್ಲೋಕದಿಂದ ಪರಮಾತ್ಮನಲ್ಲಿ ಅರ್ಜುನನು ಅಪರಾಧ ಕ್ಷಮಾಪಣವನ್ನು ಪ್ರಾರ್ಥಿಸಿದನು. ಈ ಪ್ರಕಾರವಾಗಿ ಪ್ರಾರ್ಥನ ಮಾಡಿದ ಮಾತ್ರದಲ್ಲಿಯೇ ನಾನು ಕ್ಷಮಿಸುವೆನೆಂಬದಾಗಿ ಹೇಳಲಿಲ್ಲವಾದುದರಿಂದ ನನಿಗಿಂತಲೂ ಅನ್ಯರು ಯಾರಾದರೂ ಇದ್ದರೆ ಅವರಲ್ಲಿ ಹೋಗಿ ಕ್ಷಮೆಯಂ ಪ್ರಾರ್ಥಿಸೆಂಬ ಭಗವದಭಿಪ್ರಾಯವಂ ಅರ್ಜುನನು ತಾನೇ ಚಿಂತಿಸಿ ಲೋಕತ್ರಯದಲ್ಲಿಯೂ ಇಂತವನು ಯಾರೂ ಇಲ್ಲವೆಂದು ವಿಜ್ಞಾಪಿಸುತ್ತಾನೆಂದರಿಯಬೇಕು. ಇಂತವರು ಇವನಿಗೆ ಸಮಾನರಾಗಿರುವರೆಂಬದಾಗಿ ನಿದರ್ಶನವಂ ತೋರಿಸಲಸಾಧ್ಯವಾದ ಪ್ರಭಾವ ಮುಳ್ಳ ಎಲೈ ಸ್ವಾಮಿಯೇ ! ಚರಾಚರಾತ್ಮಕವಾದ ಈ ಲೋಕಕ್ಕೆ ನೀನು ಉತ್ಪಾದಕನಾದ ತಂದೆಯಾಗಿರುವೀ. ಈ ಲೋಕಕ್ಕೆ ನೀನು ಪೂಜ್ಯನಾಗಿರುವಿ ಎಂದರೆ ಸವನತ್ರಯಾದಿಗಳಾದ ಸರ್ವಕರ್ಮಗಳಿಂದಲೂ ಸಮಾರಾಧ್ಯನಾಗಿರುವೀ ಯೆಂದಭಿಪ್ರಾಯವು. ಮತ್ತು ಪೂಜ್ಯತಮನಾದ ಅಂತರವಾಗಿರುವ ಅಜ್ಞಾನಾಂಧಕಾರವನ್ನು ಹೋಗಲಾಡಿಸುವ ಗುರುವಾಗಿಯೂ ಆಗಿರುತ್ತಿ.ಕೃತಕವೆಂತಲೂ ಅಕೃತಕವೆಂತಲೂ ಕೃತಕಾ ಕೃತಕವೆಂತಲೂ ಪರ್ಪಟ್ಟಿರುವ ಈ ಲೋಕತ್ರಯದಲ್ಲಿಯೂ, ಅಥವಾ ಮೂರುವೇದಗಳಲ್ಲಿಯೂ ನಿನಿಗಿಂತಲೂ ಭಿನ್ನನಾಗಿರುವ ಕರುಣೆಯೇ ಮೊದಲಾದ ಗುಣಗಳಿಂದ ಪೂರ್ಣನಾದ ಪುರುಷನೇ ಇಲ್ಲವು. ಈ ಪ್ರಕಾರವಾಗಿರುವಲ್ಲಿ ನಿನಿಗಿಂತಲೂ ಅಧಿಕನಾದವನು ಯೆಲ್ಲುಂಟಾಗುವನೆಂದು ತಾತ್ಪರ್ಯವು. ... ॥೪೩॥

ಶ್ಲೋ॥ ತಸ್ಮಾತ್ಪ್ರಣಮ್ಯಪ್ರಣಿಧಾಯಕಾಯಂಪ್ರಸಾದಯೇತ್ವಾಮಹಮೀಶಮೀಡ್ಯಂ । ಪಿತೇವಪುತ್ರಸ್ಯಸ

ಖೇವಸಖ್ಯುಃಪ್ರಿಯಃ ಪ್ರಿಯಾಯಾರ್ಹಸಿದೇವಸೋಢುಂ॥
॥೪೪॥

ಪ॥ ತಸ್ಮಾತ್-ಪ್ರಣಮ್ಯ-ಪ್ರಣಿಧಾಯ-ಕಾಯಂ- ಪ್ರಸಾದಯೇ-ತ್ವಾಂ-ಅಹಂ-ಈಶಂ-ಈಡ್ಯಂ । ಪಿತಾ-ಇವ-ಪುತ್ರಸ್ಯ-ಸಖಃ-ಇವ-ಸಖ್ಯುಃ- ಪ್ರಿಯಃ-ಪ್ರಿಯಾಯ-ಅರ್ಹಸಿ-ದೇವ-ಸೋಢುಂ ॥

ಅ॥ ದೇವ-ಎಲೈ ಪರದೇವತೆಯಾದ ಸ್ವಾಮಿಯೇ, ತಸ್ಮಾತ್- ನೀವು ಸರ್ವಜನಗಳಿಗೂ ತಂದೆಯಾಗಿಯೂ ಪೂಜ್ಯರಾಗಿಯೂ ಕಾರುಣ್ಯಾದಿ ಗುಣಗಳಿಂದ ಸರ್ವೋತ್ಕೃಷ್ಟರಾಗಿಯೂ ಆಗಿರುವುದರಿಂದ, ಈಶಂ-ಸರ್ವನಿಯಂತಾವಾಗಿಯೂ, (ಎಲ್ಲರನ್ನು ಆಳುವಂತವನಾಗಿಯೂ ಎಂದರ್ಥವು) ಈಡ್ಯಂ-ಎಲ್ಲರಿಂದಲೂ ಸ್ತೋತ್ರಮಾಡಲಿಕ್ಕೆ ಅರ್ಹರಾಗಿಯೂ ಇರುವ, ತ್ವಾಂ-ನಿಮ್ಮನ್ನು, ಅಹಂ-ನಾನು, ಪ್ರಣಮ್ಯ-(ಅಂಜಲಿ ಬಂಧ ಪೂರ್ವಕವಾಗಿ ಮನೋಬುದ್ಧ್ಯಭಿಮಾನಗಳನ್ನು ನೈಚ್ಯಾನುಸಂಧಾನ ಪರವಾಗಿ ಮಾಡಿಕೊಂಡು) ನಮಸ್ಕರಿಸಿ, ಕಾಯಂ ಪ್ರಣಿಧಾಯಚ-ಎರಡು ಕೈಗಳನ್ನೂ ಎರಡು ಕಾಲುಗಳನ್ನೂ ಶಿರಸ್ಸನ್ನೂ ಧರಾತಲದಲ್ಲಿ ಬೀಳುವಂತೆ ಮಾಡಿ, (ಪ್ರಣಮ್ಯ ಪ್ರಣಿಧಾಯ ಕಾಯಂ, ಎಂಬುವುದರಿಂದ ಸಾಷ್ಟಾಂಗ ದಂಡವತ್ಪ್ರಣಾಮವಂ ಮಾಡಿದನೆಂಬೀಅರ್ಥವು ತಿಳಿಯಲ್ಪಡಬೇಕು)ಪ್ರಸಾದಯೇ-ನೀನು ಪ್ರಸನ್ನನಾಗಬೇಕೆಂದು ಪ್ರಾರ್ಥಿಸುವೆನು.ಪುತ್ರಸ್ಯ ಪಿತೇವ-ತನ್ನಮಗನು ಮೊದಲು ತಪ್ಪಿತವಂ ಮಾಡಿ ಅನಂತರದಲ್ಲಿ ವಿವೇಕಮುಳ್ಳವನಾಗಿ ನಮಸ್ಕರಿಸಿ ಪ್ರಾರ್ಥಿಸಿದರೇ ಆ ತಪ್ಪಿತಗಳನ್ನು ಅವನ ತಂದೆಯು ಹೇಗಾದರೆ ಕ್ಷಮಿಸುವನೊ ಅದರಂತೆಯೂ, ಸಖ್ಯುಸ್ಸಖೇವ-ತಪ್ಪಿತವನ್ನು ಮಾಡಿರುವ ಸ್ನೇಹಿತನು ಕೇಳಿಕೊಂಡರೆ ಅವನ ತಪ್ಪಿತಗಳನ್ನು ಅವನ ಸ್ನೇಹಿತನು ಹೇಗಾದರೆ ಕ್ಷಮಿಸುತ್ತಾನೆಯೊ ಅದರಂತೆಯೂ, ತ್ವಂ-ಪರಮಕರುಣಾಶಾಲಿಯಾದ ನೀನು, ಪ್ರಿಯಃ-ನನಿಗೆ ಪ್ರಿಯನಾಗಿರುವುದರಿಂದ, ಪ್ರಿಯಾಯ-ನಿಮಗೆ ಪ್ರಿಯನಾದ ನನಿಗೋಸ್ಕರವಾಗಿ, ಸೋಢುಮರ್ಹಸಿ-ಸಮಸ್ತಾಪರಾಧಗಳನ್ನೂ ಸಹಿಸಲರ್ಹರಾಗಿತ್ತೀರಿ. ॥೪೪॥

ತಾ॥ ಸರ್ವರಿಗೂ ತಂದೆಯಾಗಿಯೂಸರ್ವರಿಂದಲೂ ಪೂಜಿಸಲ್ಪಡುವಂತಾ ಗುರುವಾಗಿಯೂ ಕಾರುಣ್ಯಾದಿ ಗುಣಗಳಿಂದ ಸರ್ವಾಧಿಕರಾಗಿಯೂ

ನೀವಿರುವುದರಿಂದ ಸರ್ವ ಪ್ರಭುವಾದ ನಿಮ್ಮನ್ನು ನಮಸ್ಕರಿಸಿ ಪ್ರಾರ್ಥಿಸಿಕೊಳ್ಳುವೆನು. ತಪ್ಪಿತಸ್ಥನಾಗಿದ್ದರೂ ಮಗನು ನಮಸ್ಕರಿಸಿ ಕ್ಷಮೆಯಂ ಬೇಡಿದರೆ ಆ ತಪ್ಪಿತಗಳನ್ನು ತಂದೆಯಾದವನು ಹೇಗಾದರೆ ಕ್ಷಮಿಸುವನೋ ಅದರಂತೆಯೂ ಆ ಪ್ರಕಾರವೇ ಇಷ್ಟಮಿತ್ರನಾದ ಒಬ್ಬನು ಅಪರಾಧವಂ ಮಾಡಿ ಅದಕ್ಕೆ ಕ್ಷಮೆಯಂ ಪ್ರಾರ್ಥಿಸಿದರೆ ಆತಪ್ಪಿತಗಳನ್ನು ಸಖನು ಹೇಗಾದರೆ ಕ್ಷಮಿಸುವನೋ ಅದರಂತೆಯೂ ನನ್ನ ವಿಷಯದಲ್ಲಿ ವಿಶೇಷ ಕಟಾಕ್ಷವುಳ್ಳ ನೀವು ಪ್ರಿಯನಾದ ನನ್ನ ಸರ್ವಾಪರಾಧಗಳಂ ಕ್ಷಮಿಸಬೇಕೆಂದುಕೇಳಿಕೊಳ್ಳುವೆನೆಂದು ಭಾವವು. ॥೪೪॥

ಶ್ಲೋ॥ ಅದೃಷ್ಟಪೂರ್ವಂ ಹೃಷಿತೋಽಸ್ಮಿ ದೃಷ್ಟ್ವಾ
ಭಯೇನಚ ಪ್ರವ್ಯಥಿತಂಮನೋಮೇ।ತದೇವಮೇದರ್ಶ
ಯದೇವರೂಪಂ ಪ್ರಸೀದದೇವೇಶ ಜಗನ್ನಿವಾಸ॥ ೪೫॥

ಪ॥ ಅದೃಷ್ಟಪೂರ್ವಂ- ಹೃಷಿತಃ- ಅಸ್ಮಿ- ದೃಷ್ಟ್ವಾ- ಭಯೇನ- ಚ - ಪ್ರವ್ಯಥಿತಂ- ಮನಃ-ಮೇ। ತತ್- ಏವ- ಮೇ- ದರ್ಶಯ-ದೇವ-ರೂಪಂ- ಪ್ರಸೀದ-ದೇವೇಶ-ಜಗನ್ನಿವಾಸ॥

ಅ॥ ಅದೃಷ್ಟಪೂರ್ವಂ-ಯಾವಕಾಲದಲ್ಲಿಯೂನೋಡಲ್ಪಡದ(ಅತ್ಯದ್ಭುತವಾಗಿಯೂ ಅತ್ಯುಗ್ರವಾಗಿಯೂ ಇರುವ ತಮ್ಮ) ದಿವ್ಯರೂಪವನ್ನು, ದೃಷ್ಟ್ವಾ-ನೋಡಿ, ಹೃಷಿತೋಽಸ್ಮಿ - ಆನಂದವಂಹೊಂದಿರುವೆನು. ಭಯೇನ- (ಇನ್ನು ಮುಂದೆ ಇದಕ್ಕಿಂತಲೂ ಅಧಿಕವಾದದ್ದೇನುಂಟಾಗುವುದೋ ಎಂಬ) ಭಯದಿಂದ, ಮೇಮನಃ- ನನ್ನ ಮನಸ್ಸು, ಪ್ರವ್ಯಥಿತಂಚ-ಅತ್ಯಂತ ವ್ಯಾಕುಲಿತವಾಗಿಯೂ ಆಗಿರುವುದು. (ಆದುದರಿಂದ) ದೇವ-ಕ್ರೀಡಾಪರನಾದ ಸ್ವಾಮಿಯೇ? ತದೇವರೂಪಂ ಮೇದರ್ಶಯ- ( ನನ್ನ ಬಾಲ್ಯದಾರಭ್ಯ ಅನುಭೂತವಾಗಿರುವ ನಿನ್ನ ದಿವ್ಯ ಗೋಪಾಲ ರೂಪವು ಯಾವದುಂಟೋ) ಆ ರೂಪವನ್ನೇ ನನಗೆ ತೋರಿಸಬೇಕು. ದೇವೇಶ- ಬ್ರಹ್ಮಾದಿ ದೇವತೆಗಳಿಗೂ ಈಶನಾದ ಎಲೈ ಸ್ವಾಮಿಯೇ, ಜನ್ನಿವಾಸ- ಪ್ರಪಂಚಕ್ಕೆಲ್ಲವೂ ಆಶ್ರಯಭೂತನಾದ ಎಲೈ ಸ್ವಾಮಿಯೇ, ಪ್ರಸೀದ- ಪ್ರಸನ್ನನಾಗು. ।೪೫॥

ತಾ॥ ಯಾವಕಾಲದಲ್ಲಿಯೂ ಕಾಣಲ್ಪಡದ ನಿಮ್ಮ ಉಗ್ರವಾದ ವಿಶ್ವರೂಪವನ್ನು ಕಂಡು ಆನಂದಿಸಿದೆನು. ಮತ್ತು ಮುಂದೆ ಇನ್ನೂ ಏನಾಗುವುದೋ ಎಂಬದಾಗಿ ಭಯವನ್ನೂ ಹೊಂದಿರುವೆನು. ಆದುದರಿಂದ ನನಿಗೆ ಬಾಲ್ಯದಿಂದ ಅನುಭೂತವಾಗಿರುವ ದಿವ್ಯ ಗೋಪಾಲ ರೂಪವ್ಯಾವದುಂಟೋ ಅದನ್ನೆ ಈಗ ತೋರಿಸು. ದೇವೇಶನಾಗಿಯೂ ಸರ್ವ್ವ ಜಗದಾಧಾರ ಭೂತನಾಗಿಯೂ ಇರುವ ಎಲೈ ಸ್ವಾಮಿಯೇ ಪ್ರಸನ್ನನಾಗೆಂದು ತಾತ್ಪರ್ಯವು. ॥೪೫॥

ಶ್ಲೋ॥ ಕಿರೀಟಿನಂಗದಿನಂಚಕ್ರಹಸ್ತಮಿಚ್ಛಾಮಿತ್ವಾಂ
ದ್ರಷ್ಟುಮಹಂತಥೈವ । ತೇನೈವರೂಪೇಣ ಚತುರ್ಭುಜೇನ ಸಹಸ್ರಬಾಹೋ ಭವವಿಶ್ವಮೂರ್ತೇ॥ ॥೪೬॥

ಪ॥ ಕಿರೀಟಿನಂ- ಗದಿನಂ- ಚಕ್ರಹಸ್ತಂ - ಇಚ್ಛಾಮಿ - ತ್ವಾಂ- ದ್ರಷ್ಟುಂ- ಅಹಂ- ತಥಾ- ಏವ । ತೇನ - ಏವ- ರೂಪೇಣ- ಚತುರ್ಭುಜೇನ- ಸಹಸ್ರಬಾಹೋ- ಭವ- ವಿಶ್ವಮೂರ್ತೇ॥

ಅ॥ ತಥೈವ- ಪೂರ್ವದಲ್ಲಿ ನೋಡಿರುವಂತೆಯೇ, ತ್ವಾಂ- ನಿಮ್ಮನ್ನು, ಕಿರೀಟಿನಂ-ಕಿರೀಟವನ್ನು ಧರಿಸಿರುವಂತವನನ್ನಾಗಿಯೂ, ಗದಿನಂ_ಗದೆಯೆಂಬಆಯುಧವುಳ್ಳವನ್ನನಾಗಿಯೂ,ಚಕ್ರಹಸ್ತಂ- ಚಕ್ರಪಾಣಿಯನ್ನಾಗಿಯೂ, ( ಎಂದರೆ ಕೈಯ್ಯಲ್ಲಿ ಪಿಡಿದಿರುವ ಚಕ್ರಮುಳ್ಳವನನ್ನಾಗಿಯೂ ಎಂದರ್ಥವು) ದ್ರಷ್ಟುಂ-ನೋಡುವುದಕ್ಕೆ, ಅಹಂ- ನಾನು, ಇಚ್ಛಾಮಿ- ಇಚ್ಛೈಸುವೆನು. ಹೇ ಸಹಸ್ರಬಾಹೊ- ಎಲೈ ಅನೇಕ ತೋಳುಗಳುಳ್ಳವನೇ, ಹೇ ವಿಶ್ವಮೂರ್ತೇ- ಎಲೈ ಸರ್ವ್ವ ಪ್ರಪಂಚವನ್ನು ಶರೀರವಾಗಿ ವುಳ್ಳ ಸ್ವಾಮಿಯೇ, ಚತುರ್ಭುಜೇನ-ನಾಲ್ಕು ಭುಜಗಳೊಡನೆ ಕೂಡಿರುವ, ತೇನೈವರೂಪೇಣ - ಮೊದಲು ಪರಿಗ್ರಹೀತವಾಗಿರುವ ಆ ದಿವ್ಯಗೋಪಾಲ ರೂಪದೊಡನೆಯೇ, ಭವ-ದರ್ಶನವಂ ಕೊಡುವಂತವನಾಗು. ... ... ॥೪೬॥

(ರಾ॥ ಭಾ॥) ಎಲೈ ಸ್ವಾಮಿಯೇ ! ಪೂರ್ವದಂತೆಯೇ ಕಿರೀಟವುಳ್ಳವನಾಗಿಯೂ, ಗದಾಯುಧ ಧಾರಿಯಾಗಿಯೂ ಚಕ್ರಪಾಣಿಯಾಗಿಯೂ ಇರುವ ನಿನ್ನನ್ನು ಸೇವಿಸಲಪೇಕ್ಷಿಸುತೇನೆ. ಆದುದರಿಂದ ಸಹಸ್ರ ಬಾಹುವಾಗಿರುವ ಈ ವಿಶ್ವರೂಪವಂ ಮರೆಮಾಡಿ ಪೂರ್ವ

ದಂತೆ ಚತುರ್ಭುಜಯುಕ್ತವಾಗಿರುವ ದಿವ್ಯ ಗೋಪಾಲ ರೂಪವನ್ನೆ ಪರಿಗ್ರಹಿಸಿಕೊಳ್ಳೆಂದು ಭಾವವು. ॥೪೬॥

ಶ್ಲೋ॥ ಶ್ರೀಭಗವಾನುವಾಚ॥ ಮಯಾಪ್ರಸನ್ನೇನ ತವಾ
ರ್ಜುನೇದಂರೂಪಂಪರಂದರ್ಶಿತಮಾತ್ಮಯೋಗಾತ್।ತೇ
ಜೋಮಯಂವಿಶ್ವಮನಂತಮಾದ್ಯಂ ಯನ್ಮೇತ್ವದನ್ಯೇನ
ನದೃಷ್ಟಪೂರ್ವಂ॥ ... ... ॥೪೭॥

ಪ॥ ಶ್ರೀ ಭಗವಾನ್-ಉವಾಚ॥ ಮಯಾ- ಪ್ರಸನ್ನೇನ- ತವ-ಅರ್ಜುನ-ಇದಂ- ರೂಪಂ- ಪರಂ- ದರ್ಶಿತಂ- ಆತ್ಮಯೋಗಾತ್। ತೇಜೋಮಯಂ-ವಿಶ್ವಂ- ಅನಂತಂ- ಆದ್ಯಂ- ಯತ್- ಮೇ- ತತ್ವದನ್ಯೇನ-ನ- ದೃಷ್ಟಪೂರ್ವಂ॥

ಅ॥ ಶ್ರೀಭಗವಾನ್- ಶ್ರೀಕೃಷ್ಣಪರಮಾತ್ಮನು, ಉವಾಚ-ಹೇಳಿದನು. ಮೇ-ನನ್ನ, ಯತ್-ಯಾವರೂಪವು, ತೇಜೋಮಯಂ-ತೇಜಸ್ಸುಗಳರಾಶಿಯೋ, (ಶಂ) ತೇಜಃಪ್ರಚುರವಾಗಿರುವುದೊ,ವಿಶ್ವಂ-ಸಕಲಕ್ಕೂ ಆತ್ಮಭೂತವೊ, (ಗೀ॥ ವಿ) ಪರಿಪೂರ್ಣವಾಗಿರುವುದೋ, ಅನಂತಂ- ಆದಿಮಧ್ಯಾಂತ ರಹಿತವೊ, (ಗೀ॥ ವಿ॥) ಸರ್ವಪ್ರದೇಶಗಳಲ್ಲಿರುವುದೊ, (ಶಂ) ನಾಶರಹಿತವೊ, ಯತ್-ಯಾವರೂಪವು, ತ್ವದನ್ಯೇನದೃಷ್ಟಪೂರ್ವಂನ- ನಿನಗಿಂತಲೂ ಅನ್ಯನಾದ ಬೇರೊಬ್ಬನಿಂದ ಕಾಣಲ್ಪಡದೆ ಇರುವುದೊ, ಇದಂಪರಂರೂಪಂ- ಇಂತಹ ದಿವ್ಯ ಶರೀರವು, ಅರ್ಜುನ - ಎಲೈ ಅರ್ಜುನನೆ, ಪ್ರಸನ್ನೇನಮಯಾ- ನಿನ್ನಲ್ಲನುಗ್ರಹಮುಳ್ಳ ನನ್ನಿಂದ, ಆತ್ಮಯೊಗಾತ್ - (ರಾ) ನನ್ನ ಸತ್ಯಸಂಕಲ್ಪತ್ವಯೊಗದಿಂದ, (ಶಂ) ನನ್ನ ಈಶ್ವರ ಸಂಬಂಧವಾದ ಸಾಮರ್ಥ್ಯದಿಂದ, (ಗೀ॥ ವಿ) ನನ್ನ ಸ್ವರೂಪ ಸಾಮರ್ಥ್ಯದಿಂದ, ತವ - ನಿನಗೆ, ದರ್ಶಿತಂ-ತೋರಿಸಲ್ಪಟ್ಟಿತು. ॥೪೭॥

ತಾ॥ ಶ್ರೀಭಗವದ್ವಾಕ್ಯವು. ನನ್ನ ಯಾವ ದಿವ್ಯರೂಪವು ತೇಜೋರಾಶಿಯಾಗಿಯೂ, ಸಕಲಕ್ಕೂ ಆತ್ಮಭೂತವಾಗಿಯೂ ಆದಿಮಧ್ಯಾಂತ ರಹಿತವಾಗಿಯೂ ಸರ್ವಕ್ಕೂ ಕಾರಣ ಭೂತವಾಗಿಯೂ ಇರುವುದೊ, ಯಾವರೂಪವು ನಿನಗಿಂತಲೂ ಅನ್ಯನಾದ ಬೇರೊಬ್ಬನಿಂದ ನೋಡಲ್ಪಡದೆ ಇರುವುದೊ ಅಂತಹದಿವ್ಯರೂಪವು ಎಲೈ ಅರ್ಜುನನೆ!

ನಿನ್ನಲ್ಲನುಗ್ರಹವುಳ್ಳ ನನ್ನಿಂದ ನನ್ನ ಸತ್ಯಸಂಕಲ್ಪ ಯೋಗದಿಂದ ನಿನಿಗೆತೋರಿಸಲ್ಪಟ್ಟದೆಂದು ಭಾವವು, ॥೪೭॥

ಶ್ಲೋ॥ ನವೇದಯಜ್ಞಾಧ್ಯಯನೈರ್ನದಾನೈರ್ನಚಕ್ರಿ
ಯಾಭಿರ್ನತಪೋಭಿರುಗ್ರೈಃ । ಏವಂರೂಪಶ್ಶಕ್ಯಅಹಂ
ನೃಲೋಕೇದ್ರಷ್ಟುಂತ್ವದನ್ಯೇನ ಕುರುಪ್ರವೀರ ॥೪೮॥

ಪ॥ ನ- ವೇದಯಜ್ಞಾಧ್ಯಯನೈಃ- ನ- ದಾನೈಃ- ನ- ಚ- ಕ್ರಿಯಾಭಿಃ-ನ- ತಪೋಭಿಃ- ಉಗ್ರೈಃ । ಏವಂ- ರೂಪಃ- ಶಕ್ಯಃ- ಅಹಂ- ನೃಲೋಕೇ- ದ್ರಷ್ಟುಂ- ತ್ವದನ್ಯೇನ- ಕುರುಪ್ರವೀರ॥

ಅ॥ ಹೇಕುರುಪ್ರವೀರ-ಕುರುವಂಶದಲ್ಲಿ ಶ್ರೇಷ್ಠನಾದ ಎಲೈ ಅರ್ಜುನನೆ! ಏವಂರೂಪಃ- ಇಂತಹಯಥಾರ್ಥ ಸ್ವರೂಪದೊಡನೆ ಇರುವ, ಅಹಂ-ನಾನು, ನೃಲೋಕೆ- ಮನುಷ್ಯಲೋಕದಲ್ಲಿ, ತ್ವದನ್ಯೇನ- ಏಕಾಂತ ಭಕ್ತಿಯುಕ್ತರಾದ (ನಿನಿಗಿಂತಲೂ) ಅನ್ಯರಾದ ಬೇರೊಬ್ಬರಿಂದಲೂ, ವೇಡಯಜ್ಞಾಧ್ಯಯದೈಃ- ವೇದಾಧ್ಯಾಯನವು, ಯಜ್ಞಾನುಷ್ಠಾನವು,("ವೇದಮೇವಜಪೇನ್ನಿತ್ಯಂ,, ಎಂಬೀ ಪ್ರಮಾಣದಿಂದ ಸದಾಜಪಮಾಡುವಂತೆ ಹೇಳಲ್ಪಟ್ಟಿರುವ) ವೇದಪಾರಾಯಣವು, ಇವುಗಳಿಂದ;ದ್ರಷ್ಟುಂ- ನೋಡುವುದಕ್ಕೆ, ನಶಕ್ಯಃ- ಶಕ್ಯನಲ್ಲವು. ದಾನೈಃ- ಕಾಶೀಕಾಂಚ್ಯಾದಿದಿವ್ಯಕ್ಷೇತ್ರಗಳಲ್ಲಿಅರ್ಧೋದಯಮಹೋದಯ ಸೂರ್ಯಚಂದ್ರೋಪರಾಗ,ಮಾತಾಪಿತೃಮೃತಾಹಾದಿ ಶ್ರೇಷ್ಠಕಾಲಗಳಲ್ಲಿ ದರಿದ್ರಕುಟುಂಬಿಯಾದ ಬ್ರಹ್ಮವಿದಗ್ರೇಸರನಿಗೆ ಗೋದಾನ ಭೂದಾನ ತಿಲದಾನ ಅಶ್ವದಾನ ಗಜದಾನ ಕನ್ಯಾದಾನಾದಿ ಮಹಾದಾನಗಳಂ ಮಾಡುವುದರಿಂದಲೂ, ದ್ರಷ್ಟುಂ-ನೋಡುವುದಕ್ಕೆ, ನಶಕ್ಯಃ- ತಕ್ಕವನಲ್ಲವು, ಕ್ರಿಯಾಭಿಃ- ನಿತ್ಯನೈಮಿತ್ತಿಕ ಕರ್ಮಾನುಷ್ಠಾನಗಳಿಂದಲೂ, ದ್ರಷ್ಟುಂನಶಕ್ಯಃ- ಕಾಣಲ್ಪಡತಕ್ಕವನಲ್ಲವು. ಉಗ್ರೈಸ್ತಪೋಭಿಃ- ಅನುಷ್ಠಿಸಲಶಕ್ಯಗಳಾದ ಪಕ್ಷೋಪವಾಸಮಾಸೋಪವಾಸಾದಿ ತಪಸ್ಸುಗಳ ಆಚರಣೆಯಿಂದಲೂ, ದ್ರಷ್ಟುಂನಶಕ್ಯಃ- ಕಾಣಲ್ಪಡತಕ್ಕವನಲ್ಲವು. ॥೪೮॥

ತಾ॥ ಎಲೈ ಕುರುಶ್ರೇಷ್ಠನೇ ! ಮನುಷ್ಯಲೋಕದಲ್ಲಿ ನಿನಿಗಿಂತಲೂ ಇತರನಾದ ಪುರುಷನಿಂದಈ ವಿಶ್ವರೂಪಿಯಾದ ನಾನು ವೇದ ಯ

ಜ್ಞಶಾಸ್ತ್ರಾದಿಗಳ ಅಭ್ಯಾಸಾದಿಗಳಿಂದಲಾದರೂ ದಾನಗಳಿಂದಲಾದರೂ ಯಜ್ಞಾನುಷ್ಠಾನಗಳಿಂದಲಾದರೂ ಕ್ರೂರವಾದ ತಪಸ್ಸುಗಳಿಂದಲಾದರೂ ನೋಡಲಿಕ್ಕೆ ಸಾಧ್ಯನಾಗುವಂತವನಲ್ಲವು. ॥೪೮॥

ಶ್ಲೋ ॥ ಮಾತೇ ವ್ಯಥಾಮಾಚವಿಮೂಢಭಾವೋ ದೃಷ್ಟ್ವಾರೂಪಂ ಘೋರಮೀದೃಙ್ಮಮೇದಂ। ವ್ಯಪೇತಭೀಃ ಪ್ರೀತಮನಾಃ ಪುನಸ್ತ್ವಂತದೇವಮೇರೂಪ ಮಿದಂಪ್ರಪಶ್ಯ ॥ ... ... ... ॥೪೯॥

ಪ॥ ಮಾ- ತೇ- ವ್ಯಥಾ-ಮಾ- ಚ- ವಿಮೂಢಭಾವಃ- ದೃಷ್ಟ್ವಾ- ರೂಪಂ- ಘೋರಂ- ಈದೃಕ್- ಮಮ- ಇದಂ । ವ್ಯಪೇತಭೀಃ- ಪ್ರೀತಮನಾಃ- ಪುನಃ- ತ್ವಂ- ತತ್- ಏವ- ಮೇ- ರೂಪಂ- ಇದಂ- ಪ್ರಪಶ್ಯ॥

ಅ॥ ಘೋರಂ- ಭಯಂಕರವಾಗಿರುವ, ( ಗೀ॥ ವಿ ) ಸಂಹಾರ ಮಾಡುವ ರೂಪವಾದ, ಈದೃಕ್- ಈ ಪ್ರಕಾರವಾಗಿ ಅನೇಕ ಬಹೂದರ ವಕ್ತ್ರನೇತ್ರಮುಳ್ಳ, (ಎಂದರೆ ಅನೇಕಗಳಾದ ಭುಜಗಳೂ ಅನೇಕ ಮುಖಗಳೂ ಅನೇಕ ಕಣ್ಣುಗಳೂ ಉಳ್ಳ) ಮಮಇದಂರೂಪಂ- ನನ್ನ ಈ ದಿವ್ಯಮಂಗಳ ವಿಗ್ರಹ ವಿಶೇಷವನ್ನು ದೃಷ್ಟ್ವಾ - ನೋಡಿ, (ಸ್ಥಿತಸ್ಯ- ಎಂದು ಸೇರಿಸಿಕೊಳ್ಳಬೇಕು.) ಸ್ಥಿತಸ್ಯ- ಇರುತಲಿರುವ, ತೇ-ನಿನಗೆ, ವ್ಯಥಾ - ಭಯವ್ಯಸನಾದಿ ಮನೋವ್ಯಥೆಯೂ, ಮಾ- ಬೇಡವು, ವಿಮೂಢಭಾವಶ್ಚ-ಮೋಹವೂ, ಮಾ-ಬೇಡವು, ವ್ಯಪೇತಭೀಃ- ನಿರ್ಭಯನಾಗಿ, ಪ್ರೀತಮನಾಃ- ಸಂತೋಷದಿಂದಕೂಡಿರುವ ಮನಸ್ಸುಳ್ಳವನಾಗಿ, ತ್ವಂ- ನೀನು, ಪುನಃ- ತಿರಿಗಿಯೂ, ತದೇವಮೇರೂಪಂ- ಪೂರ್ವದಂತೇ ಸೌಮ್ಯವಾಗಿರುವ ಆನನ್ನ ಶರೀರವನ್ನೆ, ಪ್ರಪಶ್ಯ- ನೋಡುವಂತವನಾಗು. ... ... ॥೪೯॥

ತಾ॥ ಈ ಪ್ರಕಾರವಾಗಿ ಅನೇಕಗಳಾದ ಬಾಹೂದರ ವಕ್ತ್ರನೇತ್ರಗಳುಳ್ಳ ಭಯಂಕರವಾಗಿರುವ ಈನನ್ನ ದಿವ್ಯಮಂಗಳ ವಿಗ್ರಹ ವಿಶೇಷವನ್ನು ನೋಡುತಲಿರುವ ನಿನಗೆ ಭಯವ್ಯಸನಾದಿ ಮನೋವ್ಯಥೆಯೂ, ಮೋಹವೂ ಬೇಡವು. ನಿರ್ಭಯನಾಗಿಯೂ ಸಂತೋಷಮುಳ್ಳವನಾಗಿಯೂ ನೀನು ಪುನಶ್ಚ ಪೂರ್ವದಂತೆ ಸೌಮ್ಯವಾಗಿರುವ ನನ್ನ ಈ ದಿವ್ಯ ರೂಪವನ್ನು ನೋಡೆಂದು ತಾತ್ಪರ್ಯವು. ॥೪೯॥

ಶ್ಲೋ॥ ಸಂಜಯ ಉವಾಚ ॥ ಇತ್ಯರ್ಜುನಂ ವಾಸುದೇವ ಸ್ತಥೋಕ್ತ್ವಾ ಸ್ವಕಂರೂಪಂ ದರ್ಶಯಾಮಾಸ ಭೂಯಃ । ಆಶ್ವಾಸಯಾಮಾಸಚಭೀತಮೇನಂಭೂತ್ವಾಪುನ ಸ್ಸೌಮ್ಯವಪುರ್ಮಹಾತ್ಮಾ ॥ ॥೫೦॥

ಪ॥ ಸಂಜಯಃ- ಉವಾಚ ॥ ಇತಿ- ಅರ್ಜುನಂ- ವಾಸುದೇವಃ- ತಥಾ- ಉಕ್ತ್ವಾ ಸ್ವಕಂ- ರೂಪಂ- ದರ್ಶಯಾಮಾಸ - ಭೂಯಃ | ಆಶ್ವಾಸಯಾಮಾಸ- ಚ-ಭೀತಂ- ಏನಂ- ಭೂತ್ವಾ- ಪುನಃ- ಸೌಮ್ಯವಪುಃ- ಮಹಾತ್ಮಾ ॥

ಅ॥ ಸಂಜಯ ಉವಾಚ - ಸಂಜಯನು ಹೇಳಿದನು. ಮಹಾತ್ಮಾ-ಸತ್ಯಸಂಕಲ್ಪನಾಗಿರುವ, ವಾಸುದೇವಃ- ವಸುದೇವ ಕುಮಾರನಾದ ಶ್ರೀಕೃಷ್ಣನು, ಇತಿ ಈ ಪ್ರಕಾರವಾಗಿ, ಅರ್ಜುನಂ - ಅರ್ಜುನನನ್ನು ಕುರಿತು, ಉಕ್ತ್ವಾ-ಹೇಳಿ, ತಥಾ- ಹೇಳಿರುವ ಆ ಪ್ರಕಾರವಾಗಿಯೇ, ಭೂಯಃ-ತಿರಿಗಿಯೂ, ಸ್ವಕಂರೂಪಂ- ತನ್ನ ಚತುರ್ಭುಜವುಳ್ಳ ರೂಪವನ್ನು, ದರ್ಶಯಾಮಾಸ-ತೋರಿಸಿದನು. ಭೀತಮೇನಂ_ಅಪರಿಚಿತ ಮಹಾರೂಪ ದರ್ಶನದಿಂದಭಯಪಟ್ಟಿರುವ ಈ ಅರ್ಜುನನನ್ನು, ಪುನಃ-ತಿರಿಗಿಯೂ, ಸೌಮ್ಯವಪುರ್ಭೂತ್ವಾ- ಪರಿಚಿತ ಸೌಮ್ಯ ವಿಗ್ರಹವುಳ್ಳವನಾಗಿದ್ದುಕೊಂಡು, ಆಶ್ವಾಸಯಾಮಾಸಚ - ಸಮಾಧಾನವನ್ನೂ ಮಾಡಿದನು. ಈ ಶ್ರೀ ಕೃಷ್ಣ ಪರಮಾತ್ಮನಿಗೆ ಚತುರ್ಭುಜವುಳ್ಳ ದಿವ್ಯ ಶರೀರವೇ ಸ್ವಕೀಯರೂಪವು, ಕಂಸನಿಗಾಗಿ ಭಯಪಟ್ಟಿರುವ ದೇವಕೀ ವಸುದೇವರುಗಳ ಪ್ರಾರ್ಥನದಿಂದ ಕಂಸವಧ ಪರ್ಯಂತವಾಗಿ, ಈ ಚತುರ್ಭುಜ ರೂಪವನ್ನು ಮರೆಮಾಡಿಕೊಂಡಿದ್ದನು. ಕಂಸವಧಾನಂತರದಲ್ಲಿ ಆ ಚತುರ್ಭುಜ ರೂಪವೇ ಪ್ರಕಾಶಿತವಾಯಿತು. ಈ ಅರ್ಥವು “ ಜಾತೋಸಿದೇವದೇವೇಶ ಶಂಖಚಕ್ರಗದಾಧರ । ದಿವ್ಯ ರೂಪಮಿದಂದೇವ ಪ್ರಸಾದೇನೋಪಸಂಹರ॥ ಉಪಸಂಹರವಿಶ್ವಾತ್ಮನ್ ರೂಪಮೇತಚ್ಚತುರ್ಭುಜಂ ” ಇತ್ಯಾದಿ ಶ್ರೀ ವಿಷ್ಣು ಪುರಾಣ ವಚನಗಳಲ್ಲಿ ಸ್ಪಷ್ಟವಾಗಿರುವುದು. ದ್ವೇಷಿಯಾದ ಶಿಶುಪಾಲನಿಗೂ ಅನವರತ ಭಾವನಾವಿಷಯವಾಗಿರುವುದು ವಸುದೇವನಂದನನ ಈ ಚತು

ಭುಜವುಳ್ಳ ದಿವ್ಯರೂಪವೆಂತಲೇ " ಉದಾರ ಪೀವರಚತುರ್ಬಾಹುಂ ಶಂಖಗದಾಧರಂ,, ಎಂಬೀವಚನದಿಂದಲೂ ತಿಳಿಯಬರುವುದರಿಂದಇಲ್ಲಿ ಅರ್ಜುನನಿಂದಲೂ, " ತೇನೈವರೂಪೇಣ ಚತುರ್ಭುಜೇನ ,, ಎಂಬದಾಗಿ ಶ್ರೀಕೃಷ್ಣ ಪರಮಾತ್ಮನ ಚತುರ್ಭುಜವುಳ್ಳ ದಿವ್ಯ ರೂಪಸಂದರ್ಶನವೇ ಪ್ರಾರ್ಥಿಸಲ್ಪಟ್ಟಿತೆಂದರಿಯಬೇಕು. ॥೫೦॥

ತಾ॥ ಈ ಪ್ರಕಾರವಾಗಿ ಪಾಂಡುರಾಜ ಕುಮಾರನಾದ ಅರ್ಜುನನನ್ನು ಕುರಿತು ಶ್ರೀಭಗದ್ವ್ಯಾಸುದೇವನು ಹೇಳಿ ಪುನಃ ತನ್ನ ಚತುರ್ಭುಜವುಳ್ಳ ದಿವ್ಯ ರೂಪವನ್ನೇ ತೋರಿಸಿದನು. ಅಷ್ಟುಮಾತ್ರವಲ್ಲದೆ ಯಾವಾಗಲೂ ನೋಡಲ್ಪಡದ ಅತ್ಯದ್ಭುತವಾಗಿರುವ ರೂಪವನ್ನು ನೋಡಿ ಭಯಪಟ್ಟಿರುವ ಇವನನ್ನು (ತಾನುಪೂರ್ವರೂಪದೊಡನೆ ಸೇರಿಕೊಂಡು) ಪರಮಾತ್ಮನು ಸಮಾಧಾನ ಪಡಿಸಿದನೆಂದರಿಯಬೇಕು॥೫೦॥

ಶ್ಲೋ॥ ಅರ್ಜುನ ಉವಾಚ॥ ದೃಷ್ಟ್ವೇದಂ ಮಾನುಷಂರೂ
ಪಂತವಸೌಮ್ಯಂಜನಾರ್ದನ । ಇದಾನೀಮಸ್ಮಿಸಂವೃ
ತ್ತಸ್ಸಚೇತಾಃಪ್ರಕೃತಿಂಗತಃ॥ ॥೫೧॥

ಪ॥ ಅರ್ಜುನಃ- ಉವಾಚ ॥ ದೃಷ್ಟ್ವಾ- ಇದಂ- ಮಾನುಷಂ - ರೂಪಂ- ತವ- ಸೌಮ್ಯಂ- ಜನಾರ್ದನ! ಇದಾನೀಂ-ಅಸ್ಮಿ- ಸಂವೃತ್ತಃ- ಸಚೇತಾಃ- ಪ್ರಕೃತಿಂ- ಗತಃ॥

ಅ॥ ಈ ಪೂರ್ವರೂಪವನ್ನು ನೋಡಿ ಅರ್ಜುನನು ಹೇಳುತ್ತಾನೆ. ಜನಾರ್ದನ-ತನ್ನ ಆಶ್ರಿತರಿಗೆವಿರೋಧಿಯಾದ ಜನವನ್ನುಧ್ವಂಸಮಾಡುವ ಎಲೈ ಸ್ವಾಮಿಯೇ! ತವ- ನಿನ್ನ, ಸೌಮ್ಯಂ-ಶಾಂತಾಕಾರವಾದ, ಇದಂಮಾನುಷಂರೂಪಂ _ ಅನವಧಿಕಾತಿಶಯ ಸೌಂದರ್ಯಾದಿಯುಕ್ತವಾಗಿಯೂ ಮನುಷ್ಯಾಕಾರ ಯುಕ್ತವಾಗಿಯೂ ಇರುವ ದಿವ್ಯಮಂಗಳ ವಿಗ್ರಹವನ್ನು, ದೃಷ್ಟ್ವಾ-ಕಣ್ಣಿನಿಂದ ಸೇವಿಸಿ, ಇದಾನೀಂ-ಈಗತಾನೆ, ಸಚೇತಾಸ್ಸಂವೃತ್ತಃ- ಸ್ವಸ್ಥವಾದ ಮನಸ್ಸುಳ್ಳವನಾದೆನು. ಪ್ರಕೃತಿಂಗತಃ-ನಿಜಸ್ವಭಾವ ನಿಷ್ಠನಾಗಿಯೂ ಆದೆನು. ॥೫೧॥

ತಾ॥ ಈಪ್ರಕಾರವಾಗಿ ಪೂರ್ವದಂತಿರುವ ಶ್ರೀ ಭಗವದ್ರೂಪವನ್ನು ಕಂಡು ಅರ್ಜುನನು ವಿಜ್ಞಾಪಿಸುವನು. ಎಲೈ ಜನಾರ್ದನನೆ? ಈಗ ನನಗೆ ತೋರಿಸಿರುವ ಅಳವಿಲ್ಲದ ಅತಿಶಯ ಯುಕ್ತವಾದ ಲಾವಣ್ಯ ಸೌಂದರ್ಯ ಸೌಕುಮಾರ್ಯಾದಿ ಮೊದಲಾದವುಗಳಿಂದ ಕೂಡಿರುವ (ನಿ

ನಿಗೆ ಮಾತ್ರವೇ ಅಸಾಧಾರಣವಾದ ಅತ್ಯಂತ ಸೌಮ್ಯವಾಗಿರುವ) ಮ
ನುಷ್ಯಾಕಾರವುಳ್ಳ ಈದಿವ್ಯ ಮಂಗಳ ವಿಗ್ರಹವನ್ನು ಕಣ್ಣಿನಿಂದ
ಸೇವಿಸಿದ ಮೇಲೆತಾನೆ ನನಿಗೆ ಪ್ರಾಣವೂ ನಿಂತಿತು. ಪ್ರಜ್ಞೆಯೂ,
ಪ್ರಾಪ್ತವಾಯಿತು. ||೫೧||

ಶ್ಲೋ॥ ಶ್ರೀಭಗವಾನುವಾಚ ॥ ಸುದುರ್ದರ್ಶಮಿದಂರೂ
ಪಂದೃಷ್ಟವಾನಸಿಯನ್ಮಮ । ದೇವಾಅಪ್ಯಸ್ಯರೂಪ
ಸ್ಯ ನಿತ್ಯಂದರ್ಶನ ಕಾಂಕ್ಷಿಣಃ॥ ||೫೨||

ಪ॥ ಶ್ರೀ ಭಗವಾನ್ -ಉವಾಚ॥ಸುದುರ್ದರ್ಶಂ -ಇದಂ -ರೂಪಂ -ದೃಷ್ಟವಾನ್-ಅಸಿ-ಯ
ತ್ - ಮಮ-ದೇವಾಃ - ಅಪಿ - ಅಸ್ಯ - ರೂಪಸ್ಯ - ನಿತ್ಯಂ - ದರ್ಶನಕಾಂಕ್ಷಿಣಃ ||

ಅ॥ ಶ್ರೀಭಗವಾನುವಾಚ - ಈ ಪ್ರಕಾರವಾಗಿ ಮಾತನಾಡುತಲಿ
ರುವ ಅರ್ಜುನನ ವಾಕ್ಯವಂಕೇಳಿ ಶ್ರೀಕೃಷ್ಣನು ಹೇಳಿದನು. ಮಮ-
ನನ್ನ, ಯತ್-ಯಾವರೂಪನ್ನು,ದೃಷ್ಟವಾನಸಿ- ನೋಡಿರುವೆಯೊ, ತ
ದಿದಂರೂಪಂ- ಆ ಈರೂಪವು, ಸುದುರ್ದರ್ಶಂ- ಅತ್ಯಂತವಾಗಿ ಕಾಣ
ಲ್ಪಡತಕ್ಕದ್ದಲ್ಲವು. (ಶಂ) ಅತ್ಯಂತ ಪ್ರಯಾಸದಿಂದಲೂ ಕಾಣಲ್ಪಡದ
ರೂಪವು. (ಗೀ ॥ ವಿ) ಸುಖದಿಂದಲೂ ದುಃಖದಿಂದಲೂ ಕಾಣ
ಲ್ಪಡತಕ್ಕ ರೂಪವು. ದೇವಾಅಪಿ - ದೇವತೆಗಳೂ, ನಿತ್ಯಂ- ಯಾವಾಗ
ಲೂ, ಅಸ್ಯ ರೂಪಸ್ಯ- ಈ ರೂಪದ, ದರ್ಶನಕಾಂಕ್ಷಿಣಃ - ದರ್ಶನವ
ನ್ನಪೇಕ್ಷಿಸಿಕೊಂಡಿರುವರು. ... ... ||೫೨||

(ರಾ॥ ಭಾ॥ ) ಸಮಸ್ತವನ್ನು ಆಳುವಂತಾದ್ದಾಗಿಯೂಸರ್ವಾ
ಶ್ರಯವಾಗಿಯೂ ಸರ್ವಕಾರಣ ಭೂತವಾಗಿಯೂ ಇರುವನಮ್ಮ
ಯಾವ ರೂಪವನ್ನು ನೀನು ನೋಡಿರುವಿಯೋ, ಆ ಈರೂಪವು ಯಾ
ರಿಂದಲೂ ಕಾಣಲಶಕ್ಯವಾಗಿರುವುದು. ಬ್ರಹ್ಮಾದಿ ದೇವತೆಗಳೂ ಕೂ
ಡ ಈ ರೂಪವನ್ನು ಸರ್ವಕಾಲದಲ್ಲಿಯೂ ನೋಡಲಪೇಕ್ಷೆ ಯುಳ್ಳವರಲ್ಲ
ದೆ ನೋಡಿದವರು ಮಾತ್ರ ಯಾರೂ ಇಲ್ಲವು. ||೫೨||

ಶ್ಲೋ॥ನಾಹಂವೇದೈರ್ನತಪಸಾನದಾನೇನನಚೇಜ್ಯಯಾ।
ಶಕ್ಯಏವಂ ವಿಧೋದ್ರಷ್ಟುಂ ದೃಷ್ಟವಾನಸಿ ಮಾಂಯ
ಥಾ ॥ ೫೩॥ ಭಕ್ತ್ಯಾತ್ವನನ್ಯಯಾ ಶಕ್ಯಃ ಅಹಮೇವಂ

ವಿಧೋಽರ್ಜುನ। ಜ್ಞಾತುಂದ್ರಷ್ಟುಂಚತತ್ತ್ವೇನ ಪ್ರವೇ ಷ್ಟುಂಚ ಪರಂತಪ ॥ ॥೫೪॥

ಪ॥ ನ- ಅಹಂ- ವೇದೈಃ- ನ- ತಪಸಾ- ನ- ದಾನೇನ- ನ- ಚ- ಇಜ್ಯಯಾ | ಶಕ್ಯಃ- ಏವಂವಿಧಃ- ದ್ರಷ್ಟುಂ- ದೃಷ್ಟವಾನ್- ಅಸಿ- ಮಾಂ- ಯಥಾ ॥ ಭಕ್ತ್ಯಾ-ತು- ಅನನ್ಯಯಾ- ಶಕ್ಯಃ-ಅಹಂ- ಏವಂವಿಧಃ- ಅರ್ಜುನ। ಜ್ಞಾತುಂ- ದ್ರಷ್ಟುಂ-ಚ- ತತ್ತ್ವೇನ- ಪ್ರವೇಷ್ಟುಂ-ಚ- ಪರಂತಪ ॥ ... ... —

(ಅ॥ ರಾ॥ ಭಾ॥) ಮಾಂ - ನನ್ನನ್ನು, ಯಥಾದೃಷ್ಟವಾನಸಿ- ಹೇಗಾದರೆ ನೀನು ನೋಡಿರುತ್ತೀಯೋ, ಏವಂವಿಧಃ- ಇಂತಹನಾದ, ಅಹಂ-ನಾನು, ವೇದೈಃ-(ಒಬ್ಬರಿಗೆ ಅಧ್ಯಯನ ಮಾಡಿಸುವುದೆಂತಲೂ ಅರ್ಥ ಪರ್ಯಾಲೋಚನವನ್ನು ಮಾಡಿಸುವುದೆಂತಲೂ ತಾನಾಗಿ ಅಧ್ಯಯನಮಾಡುವುದೆಂತಲೂ ತಾನು ಆಚಾರ್ಯನಲ್ಲಿ ಅರ್ಥಶ್ರವಣ ಮಾಡುವುದೆಂತಲೂ ಏರ್ಪಟ್ಟಿರುವ ಭಕ್ತಿ ರಹಿತವಾದ) ವೇದಗಳಿಂದಲಾದರೂ, ದ್ರಷ್ಟುಂನಶಕ್ಯಃ- ಕಾಣಲ್ಪಡತಕ್ಕವನಲ್ಲವು. ತಪಸಾದ್ರಷ್ಟುಂನಶಕ್ಯಃ- ಶರೀರ ಪ್ರಯಾಸ ಸಾಧ್ಯವಾದ ತಪಸ್ಸಿನಿಂದಲೂ ಕಾಣಲ್ಪಡತಕ್ಕವನಲ್ಲವು. ದಾನೇನದ್ರಷ್ಟುಂನಶಕ್ಯಃ- (ನ್ಯಾಯಾರ್ಜಿತವಾದ ತನ್ನ ಸ್ವತ್ತನ್ನು ಸತ್ಪಾತ್ರದಲ್ಲಿ ಕೊಡುವುದೆಂಬ ) ದಾನದಿಂದಲಾದರೂ ಕಾಣಲ್ಪಡತಕ್ಕವನಲ್ಲವು. ಇಜ್ಯಯಾದ್ರಷ್ಟುಂನಶಕ್ಯಃ- ಯಜ್ಞಾನುಷ್ಠಾನದಿಂದಲಾದರೂ ಕಾಣಲ್ಪಡತಕ್ಕವನಲ್ಲವು. ಪರಂತಪ- ಶತ್ರುಸಂತಾಪಕನಾದ, ಅರ್ಜುನ-ಎಲೈ ಅರ್ಜುನನೇ! ಅನನ್ಯಯಾಭಕ್ತ್ಯಾತು- ದೇವತಾಂತರ ಸಂಬಂಧವಿಲ್ಲದ ಪರಭಕ್ತಿಯಿಂದಲೆ, ಏವಂವಿಧೋಹಂ- ಇಂತಹ ದಿವ್ಯರೂಪವುಳ್ಳ ನಾನು, ತತ್ತ್ವೇನಜ್ಞಾತುಂ- ಯಥಾವತ್ತಾಗಿ ತಿಳಿಯುವುದಕ್ಕೂ, ತತ್ತ್ವೇನದ್ರಷ್ಟುಂ- ಯಥಾವತ್ತಾಗಿ ಪ್ರತ್ಯಕ್ಷದಿಂದ ನೋಡುವುದಕ್ಕೂ, ತತ್ತ್ವತಃಪ್ರವೇಷ್ಟುಂಚ- ಸಾಯುಜ್ಯಾಂತರನಾಗಿರುವ ಸಕಲ ಗುಣವಿಭೂತಿ ವಿಶಿಷ್ಟವಾದ ಭಗವದನುಭವವೇನು, ಅದರಿಂದುಂಟಾಗುವ ನಿತ್ಯ ಕೈಂಕರ್ಯವೇನು, ಇವುಗಳ ಪರ್ಯಂತವಾಗಿ ಪ್ರವೇಶಿಸುವುದಕ್ಕೂ, ಶಕ್ಯಃ - ತಕ್ಕವನಾಗಿಯೇ ಇರುವೆನು. ... ... ... ॥೫೩॥೫೪॥

(ಶಂ) ಅನನ್ಯಯಾ-ಸರ್ವೇಂದ್ರಿಯಗಳಿಗೂ ಶ್ರೀ ವಾಸುದೇವನಲ್ಲದೇ ಬೇರೆ ಯಾರೂ ವಿಷಯವಲ್ಲವೆಂಬ ಅಪೃಥಗ್ಭೂತವಾದ, (ಎಂದರೆ ಅಭೇದವಾದ, ) ಪ್ರವೇಷ್ಟುಂಚ - ಮೋಕ್ಷವನ್ನು ಹೊಂದುವುದಕ್ಕೂ. ॥೫೪॥

(ಗೀ॥ ವಿ॥) ಅನನ್ಯಯಾ- ಅನ್ಯರಿಗೆ ಸಾಧಾರಣವಾಗದ, ಪ್ರವೇಷ್ಟುಂಚ- ಸಾಯುಜ್ಯಹೊಂದುವುದಕ್ಕೂ. ॥೫೪॥

(ಶಂ॥ ಗೀ॥ ವಿ॥ ಈವ್ಯಾಖ್ಯಾನಗಳಲ್ಲಿ ಅನನ್ಯಯಾಭಕ್ತ್ಯಾತು ತತ್ವೇನಜ್ಞಾತುಂದ್ರಷ್ಟುಂಪ್ರವೇಷ್ಟುಂಚಶಕ್ಯಃ - ಎಂಬೀ ಅನ್ವಯಕ್ರಮವುಸ್ವೀಕೃತವಾಗಿರುವುದಲ್ಲದೆ (ರಾ॥ಭಾ॥) ಪ್ರಕಾರವಾಗಿ ತತ್ವೇನಜ್ಞಾತುಂ, ತತ್ವೇನದ್ರಷ್ಟುಂ, ತತ್ವೇನ ಪ್ರವೇಷ್ಟುಂಚ, ಎಂಬದಾಗಿಪ್ರತಿಶಬ್ದಗಳಿಗೂ ತತ್ವೇನ ಎಂಬ ಪದದ ಸಂಬಂಧವಂ ಸ್ವೀಕರಿಸಲಿಲ್ಲವೆಂದರಿಯಬೇಕು.) ... ... *

ಶ್ಲೋ ॥ಮತ್ಕರ್ಮಕೃನ್ಮತ್ಪರಮೊ ಮದ್ಭಕ್ತಸ್ಸಂಗವರ್ಜಿತಃ। ನಿರ್ವೈರಸ್ಸರ್ವಭೂತೇಷು ಯಸ್ಸಮಾಮೇತಿ ಪಾಂಡವ॥ ॥೫೫॥

ಪ॥ ಮತ್ಕರ್ಮಕೃತ್- ಮತ್ಪರಮಃ- ಮದ್ಭಕ್ತಃ- ಸಂಗವರ್ಜಿತಃ । ನಿರ್ವೈರಃ- ಸರ್ವಭೂತೇಷು- ಯಃ- ಸಃ- ಮಾಂ- ಏತಿ- ಪಾಂಡವ॥ ...

( ಅ॥ ರಾ॥ ಭಾ॥ ) ಹೇ ಪಾಂಡವ-ಎಲೈ ಅರ್ಜುನನೇ, ಯಃ-ಯಾವನಾದರೆ, ಮತ್ಕರ್ಮಕೃತ್ - ವೇದಾಧ್ಯಯನಾದಿ ಸರ್ವ ಕರ್ಮಗಳನ್ನೂ ನಮಗೆ ಆರಾಧನರೂಪಗಳಾಗಿ ಮಾಡುತ್ತಾನೆಯೊ, ಮತ್ಪರಮಃ-ಸರ್ವಾರಂಭಗಳಿಗೂ ನಾವೇ ಪರಮೋದ್ದೇಶ್ಯರೆಂಬಜ್ಞಾನವುಳ್ಳವನಾಗಿರುತ್ತಾನೆಯೋ, ಮದ್ಭಕ್ತಃ- ನಾನೇ ಅವನಿಗೆ ಅತ್ಯಂತ ಪ್ರಿಯನಾಗಿರುವುದರಿಂದ ನಮ್ಮ ಕೀರ್ತನಸ್ತುತಿ ಧ್ಯಾನಾರ್ಚನ ಪ್ರಣಾಮಾದಿಗಳಂ ಬಿಟ್ಟರೆ ಆತ್ಮಧಾರಣವಂ ಮಾಡಲಶಕ್ತನಾಗಿರುವುದರಿಂದ ಅವುಗಳನ್ನೇ ಪ್ರಯೋಜನವಾಗಿ ಎಣಿಸಿಕೊಂಡು ಅಂತಹಕೀರ್ತನಸ್ತುತಿ ಧ್ಯಾನಾದಿಗಳನ್ನೇವಮಾಡುತ್ತಾನೆಯೊ,ಸಂಗವರ್ಜಿತಃ-ನಮ್ಮನ್ನೇ ಪ್ರಿಯನಾಗಿ ಸ್ವೀಕರಿಸಿರುವುದರಿಂದ ಇತರ ಸಂಗವನ್ನು ಸಹಿ

ಸದೆಬಿಟ್ಟಿರುತ್ತಾನೆಯೋ, ಸರ್ವಭೂತೇಷುನಿರ್ವೈರಃ - ( ನಮ್ಮಲ್ಲಿ ನಿತ್ಯವಾಗಿ ಸೇರಿರುವಿಕೆಯನ್ನೇ ಸುಖವಾಗಿಯೂ ನಮ್ಮೊಡನೆ ಸೇರದೇ ಇರುವಿಕೆಯನ್ನೇ ದುಃಖವಾಗಿಯೂ ತಿಳಿದಿರುವಂತವನಾಗಿರುವುದರಿಂದ (ತನಗುಂಟಾಗುವ ದುಃಖವೆಲ್ಲವೂ ತಾನು ಮಾಡಿರುವ ಅಪರಾಧ ಮೂಲಕವೆಂದು ತಿಳಿದಿರುವಂತವನಾಗಿರುವುದರಿಂದಲೂ, ಸರ್ವ ಭೂತಗಳೂ ಪರಮ ಪುರುಷನಿಗೆ ಪರಾಧೀನಗಳಾಗಿರುವುವೆಂದುಅನುಸಂಧಾನ ಮಾಡುವುದರಿಂದಲೂ) ಸರ್ವ ಭೂತಗಳಲ್ಲಿಯೂ ದ್ವೇಷವಿಲ್ಲದವನಾಗಿರುತ್ತಾನೆಯೋ, ಸಃ- ಅಂತವನು, ಮಾಂ- ನನ್ನನ್ನು, ಏತಿ- ( ಅವಿದ್ಯಾದ್ಯಶೇಷ ದೋಷಗಳನ್ನು ಬಿಟ್ಟು ನಮ್ಮನ್ನೇ ನಿತ್ಯವಾಗಿ ಅನುಭವಿಸುವಂತೆ)ಹೊಂದುತ್ತಾನೆ. ... ... ||೫೫||

(ಶಂ|| ಭಾ||) ಮದ್ಭಕ್ತಃ-ಸರ್ವ ಪ್ರಕಾರದಿಂದಲೂ ಏಕವಿಧವಾದ ನಂಬಿಕೆಯೊಡನೆ ಸಂತೋಷದಿಂದ ಯಾವಾಗಲೂ ನನ್ನನ್ನು ಪೂಜಿಸುವಂತವನು, ಸಂಗವರ್ಜಿತಃ-ತನ್ನ ಪುತ್ರಮಿತ್ರ ಕಳತ್ರಾದಿ ಬಂಧು ಭೋಗಾದಿಗಳಲ್ಲಿ ಪ್ರೀತಿ ಸ್ನೇಹಗಳಂಬಿಟ್ಟವನು, ನಿರ್ವೈರಃ-ತನಗೆ ವಿರೋಧಿಯಾಗಿರುವಂತವನಲ್ಲಿಯೂ ದ್ವೇಷವಿಲ್ಲದವನು. ||೫೫||

(ಗೀ|| ವಿ||) ಮತ್ಪರಮಃ- ನಾನೇ ಸರ್ವೋತ್ತಮನೆಂದು ತಿಳಿದಿರುವಂತವನು, ಸಂಗ ವರ್ಜಿತಃ- ಫಲಾಪೇಕ್ಷಾರಹಿತನು ||೫೫||

(ಶ್ರೀ)ದೇವೈರಪಿಸುದುರ್ದರ್ಶಂ ತಪೋಜ್ಞಾನಾದಿಕೋಟಿಭಿಃ| ಭಕ್ತ್ಯಾಯುಭಗವಾನೇವಂವಿಶ್ವರೂಪ ಮದರ್ಶಯತ್||ಅನೇಕ ಕೋಟಿ ತಪಸ್ಸುಗಳಿಂದಲೂ, ಅನೇಕ ಕೋಟಿ ಜ್ಞಾನಾನುಷ್ಠಾನಗಳಿಂದಲೂ ಕೂಡ ದೇವತೆಗಳಿಂದಲೂ ನೋಡಲಶಕ್ಯವಾದ(ಈ ಅಧ್ಯಾಯದಲ್ಲಿ ಪ್ರತಿಪಾದಿತವಾಗಿರುವ) ವಿಶ್ವರೂಪವನ್ನು ತನ್ನ ಚರಣಾರ ವಿಂದಗಳಲ್ಲಿ ಭಕ್ತಿಯುಳ್ಳಅರ್ಜುನನಿಗೆ ಶ್ರೀ ಕೃಷ್ಣನು ತೋರಿಸಿದನೆಂದು ತಾತ್ಪರ್ಯವು.



## ಅದ್ವೈತ ಸಿದ್ಧಾಂತಿಗಳ ಈ ಅಧ್ಯಾಯದ ಸಂಗ್ರಹಶ್ಲೋಕವು.

ಶ್ಲೋ॥ ಮಾನುಷ್ಯಂಮನ್ಯಸೇಚೇನ್ಮಯಿತದಿದಮಯೆ
ಭೂರ್ಭುವಸ್ಸ್ವರ್ಮಹಾಂತ ಸ್ಸ್ವೀಕಾರಂ ವೈಭವಂಚಾಭ
ಯಮಮೃತಗತಿಂ ದ್ರಷ್ಟುಮಿಚ್ಛಾಸ್ತಿತೇಚೇತ್ | ತತ್ರ
ಶ್ರೀರಾತ್ರಿವರ್ಗಂನಿಹತಮಿಹಮಯಾ ದತ್ತಯಾದಿವ್ಯದೃ
ಷ್ಟ್ಯಾ ಬ್ರಹ್ಮಾದೀನೇವದೇವಾನಿತಿ ಯದುಪತಿನಾಪ್ರೋ
ಕ್ತಮೇಕಾದಶೇಽಸ್ಮಿನ್॥ ... ॥೧೧॥

ತಾ॥ ನಾನು ಅನ್ಯರಂತೆ ಕರ್ಮಬದ್ಧನೆಂತಲೂ ಮನುಷ್ಯಮಾತ್ರನೆಂತಲೂ ನೀನು ನೆನೆಸಿರುವಿಯೊ ಏನೊ, ಆ ರೀತಿಯಾಗಿ ತಿಳಿಯಬೇಡ. ಅತಿಮಾನುಷವಾಗಿಯೂ ಆಶ್ಚರ್ಯಕರವಾಗಿಯೂ ಇರುವ ನನ್ನ ದಿವ್ಯರೂಪವನ್ನು ತೋರಿಸುವೆನು ನೋಡು; ನನ್ನಿಂದತೋರಿಸಲ್ಪಡುವ ಅಂತಹ ದಿವ್ಯರೂಪವನ್ನು ನೀನು ಮಾಂಸಮಯವಾದ ಕಣ್ಣಿನಿಂದ ನೋಡುವುದಕ್ಕಾಗುವುದಿಲ್ಲವಾದುದರಿಂದ ಅದಕ್ಕಾಗಿ ದಿವ್ಯಚಕ್ಷುಸ್ಸನ್ನು ಕೊಡುವೆನು, ಅಂತಹ ದಿವ್ಯರೂಪವು ಭೂಲೋಕದ ಮೊದಲು ಸತ್ಯಲೋಕಪರ್ಯಂತವಾಗಿ ವ್ಯಾಪಿಸಿ (ಸರ್ವತ್ರಪರಿಪೂರ್ಣವಾಗಿ) ರುವುದು: ಆ ಪರಮಾತ್ಮನ ವಿಶ್ವರೂಪದಲ್ಲಿ ಬ್ರಹ್ಮಾದಿ ಸಮಸ್ತ ದೇವತೆಗಳಿಂದ ಕೌರವರೆಲ್ಲರೂ ನನ್ನಿಂದ ಹತರಾಗಿರುವಂತೆ ಕಾಣಲ್ಪಡುವರು. ಅಂತಹ ರೂಪವೇ ವಿಶ್ವರೂಪ ವೆನ್ನಲ್ಪಡುವುದು. ಆದುದರಿಂದ ಅಂತಹ ರೂಪವನ್ನು ಅರ್ಜುನನಿಗೆ ಈ ಹನ್ನೊಂದನೇ ಅಧ್ಯಾಯದಲ್ಲಿ ತೋರಿಸಿರುವನೆಂದು ಹೇಳಲ್ಪಟ್ಟಿತು. ... ... ॥೧೧॥

## ಶ್ರೀಮದ್ಯಾಮುನಾಚಾರ್ಯರಿಂದ ಸಂಗ್ರಹಿಸಲ್ಪಟ್ಟ ೧೧ನೇ ಅಧ್ಯಾಯದ ಶ್ರೀಮದ್ಗೀತಾರ್ಥಸಂಗ್ರಹ ಶ್ಲೋಕವು.

ಶ್ಲೋ॥ ಏಕಾದಶೇಸ್ವಯಾಥಾತ್ಮ್ಯಸಾಕ್ಷಾತ್ಕಾರಾವಲೋಕನಂ । ತತ್ವಮುಕ್ತಂವಿದಿಪ್ರಾಪ್ತ್ಯೋರ್ಭಕ್ತ್ಯೇಕೋಪಾಯತಾತಥಾ ॥

ತಾ॥ ಈ ಹನ್ನೊಂದನೇ ಅಧ್ಯಾಯದಲ್ಲಿ ಸಮಸ್ತ ಕಲ್ಯಾಣ ಗುಣವಿಭೂತಿ ಯುಕ್ತವಾಗಿರುವ ತಮ್ಮ ಸ್ವರೂಪವನ್ನು ಶ್ರವಣ ಮಾಡಿದ ಪ್ರಕಾರವಾಗಿಯೇ ಸಾಕ್ಷಾತ್ಕರಿಸಬೇಕೆಂಬ ಅಪೇಕ್ಷೆಯುಳ್ಳ ಅರ್ಜುನನಿಗೆ ತಮ್ಮ ದಿವ್ಯರೂಪ ಸಾಕ್ಷಾತ್ಕಾರವಂ ಮಾಡಲಿಕ್ಕೆ ಸಾಧನವಾದ ದಿವ್ಯ ಚಕ್ಷುಸ್ಸನ್ನು ಕೊಟ್ಟು ತಮ್ಮ ಸ್ವರೂಪ ಸಾಕ್ಷಾತ್ಕಾರವನ್ನು ಮಾಡಿಸಿದ ಪ್ರಕಾರವೂ ತಮ್ಮನ್ನು ಯಥಾವತ್ತಾಗಿ ತಿಳಿಯುವುದಕ್ಕೂ ಯಥಾವತ್ತಾಗಿ ಸಾಕ್ಷಾತ್ಕರಿಸುವುದಕ್ಕೂ ಅಂತಹ ಪರಮಾತ್ಮನಾದ ತನ್ನನ್ನು ಹೊಂದುವುದಕ್ಕೂ ಭಕ್ತಿಯೇ ಸಾಧನವೆಂದು ಉಪದೇಶಿಸಿದ ಪ್ರಕಾರವೂ ನಿರೂಪಿತವಾಯಿತೆಂದರಿಯಬೇಕು.॥೧೫॥

---

## ಶ್ರೀಮನ್ನಿಗಮಾನ್ತ ಮಹಾದೇಶಿಕರಿಂದ ಅನುಗೃಹೀತವಾದ ಶ್ರೀಮದ್ಗೀತಾರ್ಥ ಸಂಗ್ರಹಗಾಥೆಯು.

ಮೂ॥ ಎಲ್ಲಾಂತನಕ್ಕುರುಮಾಯಿಲಂಗುಂಪಕ್ಕೈತಾನುರೈತ್ತು, ಚೊಲ್ಲಾಲರಿಂದದು ಶೋರಾಮಃ ಕಂಡಿಡವೇಂಡುಮೆನ್ನ, ಪಿಲ್ಲಾಳನುಕ್ಕನ್ನುಮಯ್ಕ್ಕಣ್‌ಕೊಡುತ್ತಿತ್ತುವೇರುಮುಂಡೊ, ನಲ್ಲಾರ್‌ಕಳ್‌ಕಾಣ್ಬರೆನ್ನುನ್ನಪಿನ್ನಾನೆಂಗಳ್‌ನಾಯಕನೆ ॥ ... ॥೧೨॥

ಟೀ॥ ಈ ಹನ್ನೊಂದನೇ ಅಧ್ಯಾಯಾರ್ಥಗಳನ್ನೊಂದು ಶ್ಲೋಕದಿವ ಸಂಗ್ರಹಿಸಿ ತೋರಿಸುತ್ತಾರೆ. ಎಂಗಳ್-ನಮ್ಮಗಳ, ನಾಯಕನ-

ನಾಯಕನು, ಅಸ್ಮದಾದಿ ಪ್ರಾಣಿವರ್ಗವನ್ನು ಆಳುವಂತವನಾದ ಶ್ರೀಕೃಷ್ಣನೆಂದರ್ಥವು. ಎಲ್ಲಾವ್-ಸರ್ವವಸ್ತುಗಳೂ,ತನಕ್ಕು-ಸರ್ವವನ್ನಾಳುವ ತನಿಗೆ, ಉರುವಾಯ್-ರೂಪವಾಗಿ,ಶರೀರವಾಗಿ ಎಂದರ್ಥವು. ಇಲಂಗುಂವಕ್ಕೈ-ಪ್ರಕಾಶಿಸುವ ಪ್ರಕಾರವನ್ನು, ತಾಣ್-ತಾನೆ, ಉರೈತ್ತು, ಉಪದೇಶಿಸಿ, ಇದಕ್ಕೆ ನವಿನ್ನಾಣ್ ಎಂಬುವುದರೊಡನೆ ಅನ್ವಯುವು. ಇದರಿಂದ ೧೦ನೇ ಅಧ್ಯಾಯಾರ್ಥವನ್ನನುವಾದ ಮಾಡಿತೆಂದರಿಯಬೇಕು. ಶೊಲ್ಲಾಲ್- ಮಾತುಗಳಿಂದ, ಅರಿಂದದು-ಪೂರ್ವಾಧ್ಯಾಯದಲ್ಲಿ ಭಗವದುಪದೇಶದಿಂದ ತಿಳಿಯಲ್ಪಟ್ಟ ಆವಿಭೂತ್ಯಾದಿ ಯೋಗವನ್ನು ಎಂದರ್ಥವು. ಶೋರಾಮಲ್-ಬಿಡದೆ, ಕಂಡಿಡವೇಂಡುಮ್-ಸಾಕ್ಷಾತ್ಕರಿಸಲೇಬೇಕು, "ಯೋಗೇಶ್ವರತತೋಮೇತ್ವಂದರ್ಶಯಾತ್ಮಾನಮವ್ಯಯಂ ,, (೧೧॥೪॥) ಎಂಬುವ ಪ್ರಕರಣದಲ್ಲಿ (ಅವ್ಯಯಂ) ಎಂಬುವ ಪದವು ಕ್ರಿಯಾವಿಶೇಷಣವು. ಭಾಷ್ಯದಲ್ಲಿಯೂ "ತ್ವಾಂ ಸಕಲಂಮೇದರ್ಶಯೇತ್ಯರ್ಥಃ,, ಎಂಬದಾಗಿ ವ್ಯಾಖ್ಯಾನಮಾಡಲ್ಪಟ್ಟಿರುವ ಪ್ರಕಾರವಾಗಿ ಭಗವದ್ವಿಭೂತ್ಯಾದಿ ಯೋಗವನ್ನು ಸ್ವಲ್ಪವೂ ನ್ಯೂನವಾಗದೆ ಸಾಕ್ಷಾತ್ಕರಿಸಬೇಕೆಂದರ್ಥವು. ಎನ್ನ-ಈ ಪ್ರಕಾರವಾಗಿ ಪ್ರಾರ್ಥಿಸುವಂತವನಾದ, ವಿಲ್ಲಾಳನುಕ್ಕು -ಧನುರ್ಧಾರಿಯಾದ ಅರ್ಜುನನಿಗೆ,ಇಲ್ಲಿ ಅರ್ಜುನನನ್ನು ಧನುರ್ಧಾರಿಯಾದ ಎಂಬ ವಿಶೇಷಣದಿಂದ ಪ್ರಸಿದ್ಧ ಪಡಿಸಿರುವುದು ಆ ಅರ್ಜುನನನ್ನು ಧೀರತರನೆಂದು ತೋರ್ಪಡಿಸುವುದಕ್ಕಾಗಿ ಎಂದರಿಯಬೇಕು. ಇದರಿಂದ ಭಗವದ್ರೂಪಕ್ಕೆ ಧೀರತರನಾದ ಅರ್ಜುನನೂ " ಧೃತಿಂನವಿಂದಾಮಿಶಮಂಚವಿಷ್ಣೋ,, (೧೧॥ ೨೪॥) ಎಂಬೀರೀತಿಯಿಂದಕ್ಷುಭಿತನಾಗುವಂತೆ ಭೀಷಣತ್ವವು ಸೂಚಿತವಾಯಿತು. ಅನ್ನು-ಆವನು ಪ್ರಾರ್ಥಿಸಿದ ಕಾಲದಲ್ಲಿ, ಮೆಯ್ಕ್ಕಣ್-ಸತ್ಯನೇತ್ರವನ್ನು, ಭಗವದ್ರೂಪವನ್ನು ಯಥಾವತ್ತಾಗಿ ಗ್ರಹಿಸಲನುಕೂಲವಾದ ದಿವ್ಯಚಕ್ಷುಸ್ಸನ್ನು ಎಂದರ್ಥವು. ಕೊಡುತ್ತು-ಕೊಟ್ಟು, ಇದಕ್ಕೆ ನವಿನ್ನಾಣ್ ಎಂಬ ಕ್ರಿಯಾಪದದೊಡನೆ ಅನ್ವ

ಯವು, ಈಪ್ರಕಾರವಾಗಿ ಸಂಗ್ರಹ ಶ್ಲೋಕದಪೂರ್ವಾರ್ಧವನ್ನು ಹೇಳಿ ಇನ್ನು ಮುಂದೆ ಭಗವದ್ಜ್ಞಾನದರ್ಶನ ಪ್ರಾಪ್ತಿಗಳಿಗೆ ಏಕಾಂತಿಕಾತ್ಯಂತಿಕ ಭಗವದ್ಭಕ್ತ್ಯೇಕಲಭ್ಯತ್ವ ರೂಪವಾದ ಉತ್ತರಾರ್ಧವನ್ನು ಹೇಳುತ್ತಾರೆ. ಅದು-ಈ ಜ್ಞಾನಾದಿ ಸಾಧನವು, ವೇದಾದ್ಯ-ಭಕ್ತಿವ್ಯತಿರಿಕ್ತವಾಗಿಯೂ, ಉಂಡೋ-ಉಂಟಾಗುವುದೋ? "ನಾಹಂ ವೇದೈರ್ನತಪಸಾನದಾನೇನ ನಚೇಜ್ಯಯಾ, ಶಕ್ಯಏವಂ ವಿಧೋದ್ರಷ್ಟುಂ ದೃಷ್ಟವಾನಸಿ ಮಾಂಯಥಾ,,ಭಕ್ತ್ಯಾತ್ವನನ್ಯಯಾಶಕ್ಯಃ, ( ೧೧ ॥ ೫೩ ॥ ) ಎಂಬೀ ಪ್ರಕಾರವಾಗಿ ಭಕ್ತಿರಹಿತವಾದಪ್ರವಚನ ತಪೋದಾನಾದಿಗಳು ಭಗವದ್ಜ್ಞಾನ ಸಾಧನಗಳಾಗಲಾರವೆಂದರ್ಥವು. ಕಾಣ್ಬರ್-ಸಾಕ್ಷಾತ್ಕರಿಸುವರು, ಎನ್ನುವ - ಈ ಪ್ರಕಾರವಾಗಿಯೂ, ನವಿನ್ನಾಣ್-ಉಪದೇಶಿಸಿದನು. ... ॥೧೮॥

ಇತಿ ಶ್ರೀಮದ್ಗೀತಾರ್ಥಸಾರೇ ಏಕಾದಶಾಧ್ಯಾಯಃ.

ಶ್ರೀ ಕೃಷ್ಣಾಯ ಪರಮಾತ್ಮನೇನಮಃ.



ಶ್ರೀಃ.

## ಶ್ರೀಕೃಷ್ಣಾಯ ಪಾರ್ಥಸೂತಾಯನಮಃ.

## ಶ್ರೀಮದ್ಗೀತಾರ್ಥಸಾರೇ ದ್ವಾದಶಾಧ್ಯಾಯಃ.

---

ಅರ್ಜುನ ಉವಾಚ ॥ ಏವಂಸತತಯುಕ್ತಾಯೇಭಕ್ತಾ ಸ್ತ್ವಾಂಪರ್ಯುಪಾಸತೇ । ಯೇಚಾಪ್ಯಕ್ಷರಮವ್ಯಕ್ತಂತೇ ಷಾಂಕೇಯೋಗವಿತ್ತಮಾಃ ॥ ... ॥೧॥

ಪ॥ ಅರ್ಜುನಃ-ಉವಾಚ॥ ಏವಂ-ಸತತಯುಕ್ತಾಃ-ಯೇ-ಭಕ್ತಾಃ-ತ್ವಾಂ-ಪರಿ-ಉಪಾಸತೇ । ಯೇ-ಚ-ಅಪಿ-ಅಕ್ಷರಂ-ಅವ್ಯಕ್ತಂ-ತೇಷಾಂ-ಕೇ-ಯೋಗವಿತ್ತಮಾಃ ॥

ಅ॥ ಏವಂ-ಈ ಪ್ರಕಾರವಾಗಿ, ಸತತಯುಕ್ತಾಃ-ಯಾವಾಗಲೂ ಸಾವಧಾನಚಿತ್ತರಾಗಿರುವ, ಯೇಭಕ್ತಾಃ- ಯಾವ ಭಕ್ತರು, ತ್ವಾಂ-ನಿಮ್ಮನ್ನು, ಪರ್ಯುಪಾಸತೇ-ಉಪಾಸನೆ ಮಾಡುತ್ತಾರೆಯೋ,ಯೆಚ-ಮತ್ತೆ ಯಾರಾದರೆ, ಅವ್ಯಕ್ತಂ-ಇಂದ್ರಿಯಗಳಿಗೆ ವಿಷಯವಾಗದ, ಅಕ್ಷರಂ-ಅಕ್ಷರವನ್ನು, ಉಪಾಸತೇ-ಉಪಾಸನ ಮಾಡುತ್ತಾರೆಯೊ, ತೇಷಾಂ-ಅವರುಗಳಲ್ಲಿ, ಕೇ-ಯಾರು, ಯೊಗವಿತ್ತಮಾಃ-ಯಥಾವತ್ತಾಗಿ ಯೊಗವಂ ತಿಳಿದವರು.

(ಶಂ॥ ಭಾ॥) ಎರಡನೇ ಅಧ್ಯಾಯ ಮೊದಲು ಹತ್ತನೇ ಅಧ್ಯಾಯಾನ್ತವಾದ ಒಂಭತ್ತಧ್ಯಾಯಗಳಿಂದ ಅಕ್ಷರ ಶಬ್ದವಾಚ್ಯನೂ ಪರಮಾತ್ಮನೂ ಸರ್ವವಿಶೇಷಣ (ಧರ್ಮ)ಶೂನ್ಯನೂ ಆಗಿರುವ ಪರಬ್ರಹ್ಮನ ಉಪಾಸನವು ಭೋಧಿಸಲ್ಪಟ್ಟಿತು. (ಎಂದರೆ ನಿರ್ಗುಣೋಪಾಸನವು ಹೇಳಲ್ಪಟ್ಟಿತೆಂದರ್ಥವು) ಸಮಸ್ತ ಯೊಗೈಶ್ವರ್ಯಜ್ಞಾನ ಶಕ್ತಿಯುಕ್ತವಾದಸತ್ವಮೂರ್ತಿಯೂ ಸರ್ವೇಶ್ವರನೂ ಆದ ನಿನ್ನ ಉಪಾಸನವು ಅಲ್ಲಲ್ಲಿ ಉಪದೇಶಿಸಲ್ಪಟ್ಟಿರುವುದು. ವಿಶ್ವರೂಪಾಧ್ಯಾಯದಲ್ಲಿ ಸಮಸ್ತ ಜಗತ್ಸ್ವರೂಪನೂ ಆದ್ಯನೂ (ಮೊದಲನೇವನೂ) ಸರ್ವೇಶ್ವರನೂ ಆದ ನಿನ್ನ ವಿಶ್ವರೂಪವು ಉಪಾಸನಾರ್ಥವಾಗಿಯೇ ನಿನ್ನಿಂದ ನನಗೆ ತೋರಿಸಲ್ಪಟ್ಟಿತು.ಆ ಪ್ರಕಾರವಾಗಿ ತೋರಿಸಿ "ಮತ್ಕರ್ಮಕೃತ್,,(೧೧।೫೫) ಇತ್ಯಾದಿ ವಾಕ್ಯಗಳನ್ನು ಹೇಳಿರುವುದರಿಂದ ಈಗ ಪೂರ್ವೋಕ್ತವಾದ ಸಗುಣ ನಿರ್ಗುಣವೆಂಬ ಉಪಾಸನಾದ್ವಯದಲ್ಲಿ ಯಾವದು ಶ್ರೇಷ್ಠವೊ ಅದಂ ತಿಳಿದುಕೊಳ್ಳಲಪೇಕ್ಷಿಸಿ ಅರ್ಜುನನು ಪ್ರಶ್ನೆಮಾಡುತ್ತಾನೆ. ಎಲೈ ಶ್ರೀಕೃಷ್ಣನೇ ! ವಿಶ್ವರೂಪಾಧ್ಯಾಯದ ಕಡೆ ಶ್ಲೋಕದಲ್ಲಿ

ನೀನು ಹೇಳಿರುವಂತೆ ಸರ್ವಕಾಲದಲ್ಲಿಯೂ ಭಗವದ್ವಿಷಯಕವಾದಕರ್ಮ ಗಳನ್ನು ಅತ್ಯಂತ ಶ್ರದ್ಧಾಯುಕ್ತರಾಗಿ ಮಾಡುವಂತವರಾಗಿಯೂ ಬೇರೆಗತಿಯಿಲ್ಲವೆಂಬದಾಗಿ ನಿನ್ನನ್ನೇ ನಂಬಿಕೊಂಡಿರುವಂತವರಾಗಿಯೂ ಇರುವ(ವಿಶ್ವರೂಪಾಧ್ಯಾಯದಲ್ಲಿ ನಿನ್ನಿಂದ ತೋರಿಸಲ್ಪಟ್ಟ ವಿಶ್ವರೂಪ ವನ್ನು ಧ್ಯಾನಮಾಡುವುದರಿಂದ)ಭಕ್ತರೆಂಬಸಗುಣೋಪಾಸಕರಲ್ಲಿಯೂ, ಸಮಸ್ತಾಪೇಕ್ಷೆಗಳಂ ಬಿಟ್ಟು ಸರ್ವಕರ್ಮಸನ್ಯಾಸವಂ ಮಾಡಿ ಸಮಸ್ತ ವಿಶೇಷಣ ಶೂನ್ಯವಾಗಿರುವುದರಿಂದ ಇಂದ್ರಿಯಗಳಿಗೆ ಗೋಚರವಾಗ ದೆ ಇರುವ ಅಕ್ಷರ ಶಬ್ದವಾಚ್ಯವಾದ ಪರಬ್ರಹ್ಮವನ್ನು ಧ್ಯಾನ ಮಾಡುವಂತಹ ನಿರ್ಗುಣೋಪಾಸಕರಲ್ಲಿಯೂ, ಸವಿಶೇಷವಾಗಿ(ಚ ನ್ನಾಗಿ) ಯೋಗವಂ (ಭಗವದುಪಾಸನವನ್ನು)ತಿಳಿದವರು ಯಾರೆಂದು ಹೇಳಲ್ಪಡುವರೊ ಅವರಂ ಬೋಧಿಸೆಂದು ಅರ್ಜುನನು ಪರಮಾತ್ಮನಂ ಕುರಿತು ಪ್ರಶ್ನೆಮಾಡಿರುವುದಾಗಿ ತಿಳಿಯಬೇಕು. ... ॥೧॥

(ರಾ॥ಭಾ॥)ಪ್ರಸಕ್ತವಾದಭಕ್ತಿಯೋಗಕ್ಕೆ ಶ್ರೈಷ್ಠ್ಯಾದಿಕವುಹೇ ಳಲ್ಪಡುವುದೆಂಬದಾಗಿ ದ್ವಾದಶಾಧ್ಯಾಯಾರ್ಥಗಳ ಸಂಗತಿ ಪ್ರದರ್ಶನ ಕ್ಕಾಗಿ ಪೂರ್ವಾಧ್ಯಾಯಾರ್ಥಗಳನ್ನನುವಾದ ಮಾಡಿ ಭಕ್ತಿಯೊಗ ಪ್ರಕ ರಣದಲ್ಲಿ ವಿಶ್ವರೂಪ ಪ್ರದರ್ಶನವಂ ಮಾಡಿರುವ ಸಂದರ್ಭವನ್ನೂ ಅರ್ಥಾತ್ ವಿಶದಪಡಿಸುತ್ತಾರೆಂದರಿಯಬೇಕು. ಭಕ್ತಿಯೊಗ ನಿಷ್ಠ ರಿಂದ ಹೊಂದಲ್ಪಡತಕ್ಕವನಾಗಿಯೂ ಪರಬ್ರಹ್ಮನಾಗಿಯೂ ಜ್ಞಾನ ಶಕ್ತ್ಯಾದಿ ಕಲ್ಯಾಣ ಗುಣನಿಧಿಯಾಗಿಯೂ ಇರುವ ಶ್ರೀಮನ್ನಾರಾಯ ಣನ ನಿರಂಕುಶೈಶ್ವರ್ಯವನ್ನು (ತಡೆಯಿಲ್ಲದ ಐಶ್ವರ್ಯವನ್ನು) ಕಾಣಲಪೇ ಕ್ಷಿಸಿದ ಅರ್ಜುನನಿಗೆ, ಎಣೆಯಿಲ್ಲದ ಅತಿಶಯವಂ ಹೊಂದಿರುವ ಕಾರುಣ್ಯ ಔದಾರ್ಯ ಸೌಶೀಲ್ಯಾದಿ ಗುಣಗಳಿಗೆ ಸಮುದ್ರನಾಗಿಯೂ ಇರುವ ಭಗ ವಂತನಿಂದ ಯಥಾವಸ್ಥಿತವಾದ ತನ್ನ ಐಶ್ವರ್ಯವೂ ದರ್ಶಿತವಾಯಿತು. ಮತ್ತು ಯಥಾವತ್ತಾಗಿ ಪರಮಾತ್ಮನನ್ನು ತಿಳಿಯುವುದಕ್ಕೂ ಪ್ರತ್ಯ ಕ್ಷವಾಗಿ ನೋಡುವುದಕ್ಕೂ ಆ ಪರಮಾತ್ಮನನ್ನು ಹೊಂದುವುದಕ್ಕೂ ಆ ಪರಮಾತ್ಮನಂ ಬಿಟ್ಟರೇ ಬೇ ಗತಿಯಿಲ್ಲವೆಂಬದಾಗಿರುವ ಏಕಾಂತಿ ಕಾತ್ಯಂತಿಕ ಭಕ್ತಿಯೊಂದೇ ಸಾಧನವಾಗಿರುವುದೆಂತಲೂ ಹೇಳಲ್ಪ

ಟ್ಟಿತು. ಈಗ ಆತ್ಮ ಪ್ರಾಪ್ತಿಗೆ ಸಾಧನವಾದ ಆತ್ಮೋಪಾಸನಕ್ಕಿಂತಲೂ ಭಕ್ತಿರೂಪವಾದ ಭಗವದುಪಾಸನವು ತನ್ನಿಂದಾಗಬೇಕಾದಫಲವನ್ನು ಪ್ರಯಾಸವಿಲ್ಲದೇ ಶೀಘ್ರದಲ್ಲಿಕೊಡುವುದರಿಂದಲೂ ಸುಖೋಪಾದಾನವಾಗಿರುವುದರಿಂದಲೂ ಶ್ರೇಷ್ಠವೆಂಬದಾಗಿಯೂ,ಭಗವದುಪಾಸನೋಪಾಯವು ಈ ವಿಧವಾಗಿರುವುದೆಂತಲೂ,ಅದರಲ್ಲಿ ಶಕ್ತಿ ಇಲ್ಲದವನಿಗೆ ಅಕ್ಷರವೆಂಬ ಆತ್ಮನಲ್ಲಿ ನಿಷ್ಠೆ ಇರಬೇಕೆಂತಲೂ, ಮತ್ತು ಅವನಿಗೆ ಬೇಕಾದ ವಿಷಯಗಳು ಇವು ಎಂತಲೂ, ಪ್ರತಿಪಾದಿಸಲ್ಪಡುವುದು. ಭಗವದುಪಾಸಕನಶ್ರೈಷ್ಠ್ಯವು, "ಯೋಗಿನಾಮಪಿ ಸರ್ವೇಷಾಂ ಮದ್ಗತೇನಾಂತರಾತ್ಮನಾ । ಶ್ರದ್ಧಾವಾನ್ ಭಜತೇಯೋಮಾಂಸಮೇಯುಕ್ತತಮೋಮತಃ,, (೬॥೪೭) ಎಂಬೀ ಸ್ಥಲದಲ್ಲಿ ಹೇಳಲ್ಪಟ್ಟಿತು. ಏವಂ-ಪೂರ್ವಾಧ್ಯಾಯದ ಕಡೇ ಶ್ಲೋಕದಲ್ಲಿ ಉಪದೇಶಿಸಿರುವ ಪ್ರಕಾರವಾಗಿ, ಸತತಯುಕ್ತಾಃ- ನಿಮ್ಮನ್ನು ಪರಮಪ್ರಾಪ್ಯವಾಗಿ ನೆನೆಸಿಕೊಂಡು, ಯೇಭಕ್ತಾಃ-ಯಾವಭಕ್ತರಾದರೆ, ತ್ವಾಂ- ಸಕಲ ವಿಭೂತಿಯುಕ್ತರಾಗಿಯೂ ಅನವಧಿಕಾತಿಶಯ ಸೌಂದರ್ಯ ಸೌಶೀಲ್ಯ ಸಾರ್ವಜ್ಞ್ಯ ಸತ್ಯಸಂಕಲ್ಪತ್ವಾದ್ಯನಂತಗುಣ ಸಾಗರರಾಗಿಯೂ ಇರುವ ನಿಮ್ಮನ್ನು, ಪರ್ಯುಪಾಸತೆ- ಪರಿಪೂರ್ಣವಾಗಿ ಉಪಾಸನೆ ಮಾಡುತ್ತಾರೆಯೋ, ಅವ್ಯಕ್ತಂ- ಕಣ್ಣು ಮೊದಲಾದ ಇಂದ್ರಿಯಗಳಿಂದ ಪ್ರಕಾಶಿಸಲ್ಪಡದಸ್ವರೂಪಮುಳ್ಳ, ಅಕ್ಷರಂ- ಸ್ವರೂಪವಿಕಾರವಿಲ್ಲದ ಜೀವಾತ್ಮಸ್ವರೂಪವನ್ನು,ಯೇಚ-ಯಾರಾದರೆ, ಉಪಾಸತೆ-ಉಪಾಸನಮಾಡುತ್ತಾರೆಯೋ, ತೇಷಾಂ- ಈ ಯರಡುಬಗೆ ಯವರಲ್ಲಿ, ಕೆಯೋಗವಿತ್ತಮಾಃ-ತಮ್ಮಗಳಿಗೆ ಅಪೇಕ್ಷಿತವಾದ ಫಲವನ್ನು ಶೀಘ್ರವಾಗಿಸಾಧಿಸಿಕೊಡುವ ಉಪಾಯವನ್ನು ತಿಳಿದವರು ಯಾರು. "ಭವಾಮಿನ ಚಿರಾತ್ಪಾರ್ಥ,, (೧೨॥೭) ಎಂಬೀಶ್ಲೋಕದಲ್ಲಿಯು ಶೀಘ್ರವಾಗಿ ತನಗಪೇಕ್ಷಿತವಾದ ಫಲವಂ ಹೊಂದುವಿಕೆಯೆ ಯೋಗವಿತ್ತ್ವಮತ್ವ ವೆಂಬದಾಗಿ ವ್ಯಕ್ತವಾಗಿರುವುದರಿಂದ " ಕೇಯೋಗವಿತ್ತಮಾಃ,,ಎಂಬುವುದಕ್ಕೆ ತಮ್ಮಗಳಿಗಭಿಮತವಾದ ಫಲವನ್ನು ಶೀಘ್ರವಾಗಿ ಹೊಂದು ವಂತವರು ಯಾರೆಂಬೀ ಅರ್ಥವೇಸಿದ್ಧವಾಗಿರುವುದು. ... ... ॥೧॥

(ಮ॥ ಭಾ॥) ಈ ಶ್ಲೋಕದ ಪೂರ್ವಾರ್ಧವು ಪರಮಾತ್ಮನಾದ ನಾರಾಯಣನನ್ನು ಕುರಿತದ್ದೆಂತಲೂ ಉತ್ತರಾರ್ಧವು ಶ್ರೀದೇವಿಯಾದ ಲಕ್ಷ್ಮೀದೇವಿಯನ್ನು ಕುರಿತದ್ದೆಂತಲೂ ತಿಳಿಯಬೇಕು, ಯೇ- ಯಾರಾದರೆ, ತ್ವಾಂ- ಪರಬ್ರಹ್ಮನಾದ ನಿನ್ನನ್ನು ಪಾಸನೆ ಮಾಡುತ್ತಾರೆಯೊ, ಯೇಚ-ಯಾರಾದರೆ, ಅವ್ಯಕ್ತ ಮಕ್ಷರಂ-ಅವ್ಯಕ್ತಾಕ್ಷರ ಶಬ್ದಗಳಿಂದ ಹೇಳಲ್ಪಡುವ ಶ್ರೀ ಲಕ್ಷ್ಮೀದೇವಿಯನ್ನು ಉಪಾಸನೆ ಮಾಡುತ್ತಾರೆಯೊ, ಇವರಲ್ಲಿ ಯಾರು ಶ್ರೇಷ್ಠರೆಂಬದಾಗಿ ಅರ್ಜುನನ ಪ್ರಶ್ನೆಯು. ಅವ್ಯಕ್ತಾಕ್ಷರ ಶಬ್ದಗಳು ಶ್ರೀಲಕ್ಷ್ಮೀದೇವಿಗೆ ಹೇಗೆ ವಾಚಕಗಳಾಗುವುವೆಂದರೆ “ ಇಂದ್ರಿಯೇಭ್ಯಃ ಪರಾಹ್ಯರ್ಥಾ ಅರ್ಥೇಭ್ಯಶ್ಚ ಪರಂಮನಃ । ಮನಸಸ್ತುಪರಾಬುದ್ಧಿರ್ಬುದ್ಧೇಃಪರತಸ್ಮಾತ್ಮಃ॥ಮಹತಃಪರಮವ್ಯಕ್ತ ಮವ್ಯಕ್ತಾತ್ಪುರುಷಃಪರಃ । ಪುರುಷಾನ್ನಪರಂ ಕಿಂಚಿತ್ಸಾಕಾಷ್ಠಾಸಾಪರಾಗತಿಃ,, ಎಂಬೀಉಪನಿಷದ್ವಾಕ್ಯವೆ ಇದಕ್ಕೆ ಪ್ರಮಾಣವಾಗಿರುವುದೆಂದರಿಯಬೇಕು. ಇಂದ್ರಿಯಗಳಿಗಿಂತಲೂ ಅನುಭವಿಸಲ್ಪಡುವ ವಿಷಯಗಳು ಶ್ರೇಷ್ಠಗಳು, ಅವುಗಳಿಗಿಂತಲೂ ಮನಸ್ಸು ಶ್ರೇಷ್ಠವು, ಅದಕ್ಕಿಂತಲೂ ಬುದ್ಧಿಯು ಶ್ರೇಷ್ಠವು, ಬುದ್ಧಿಗಿಂತಲೂ ಚತುರ್ಮುಖ ಬ್ರಹ್ಮದೇವರು ಶ್ರೇಷ್ಠರು, ಅವರಿಗಿಂತಲೂ ಅವ್ಯಕ್ತ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು ಶ್ರೇಷ್ಠಳು, ಆ ಅವ್ಯಕ್ತಶಬ್ದವಾಚ್ಯೆಯಾದ ಲಕ್ಷ್ಮೀದೇವಿಗಿಂತಲೂಪುರುಷಶಬ್ದವಾಚ್ಯನಾದ ನಾರಾಯಣನು ಶ್ರೇಷ್ಠನು, ಆನಾರಾಯಣನಿಗಿಂತಲೂ ಶ್ರೇಷ್ಠವಾದ ವಸ್ತುವು ಯಾವದೂ ಇಲ್ಲವು,ಆನಾರಾಯಣನೇ ಎಲ್ಲರಿಗಿಂತಲೂ ಶ್ರೇಷ್ಠನು, ಶ್ರೇಷ್ಠವಾದ ಗತಿಯೂಅವನೆಂತಲೇ ಈ ಕಠೋಪನಿಷದ್ವಾಕ್ಯತಾತ್ಪರ್ಯವು. ಈ (ಕಠೋಪನಿಷತ್, ೩॥೧೦॥೧೧॥) ಶ್ರುತಿಯಲ್ಲಿ ಹೇಳಲ್ಪಡುವ ಅವ್ಯಕ್ತ ಶಬ್ದವು ಶ್ರೀಲಕ್ಷ್ಮೀದೇವಿಯನ್ನೇಹೇಳುವುದರಿಂದ ಹಿಂದೇನಾವುನು ಅದಕ್ಕನುಸಾರವಾಗಿಯೆ ಇಲ್ಲಿ ಲಕ್ಷ್ಮೀ ಉಪಾಸಕರೆಂಬದಾಗಿ ವ್ಯಾಖ್ಯಾನ ಮಾಡಿರುವೆವು, ಆದರೆ ಈ ಲಕ್ಷ್ಮೀ ಉಪಾಸನವಿಂದ ಮೋಕ್ಷವುಂಟಾಗುವುದೋ? ಎಂದರೆ ಅದಕ್ಕುತ್ತರವು. ಕಠೋಪನಿಷತ್ತಿನಲ್ಲಿ “ನಿಚಾಯ್ಯತಂ ಮೃತ್ಯುಮುಖಾತ್ಪ್ರಮುಚ್ಯತೇ,,

ಎಂತಲೂ, ಋಗ್ವೇದದಲ್ಲಿ“ಶ್ರಿಯಂವಸಾನಾ ಅಮೃತತ್ವಮಾಯನ್,, ಎಂತಲೂ, ಸಾಮವೇದದಲ್ಲಿ ಅಗ್ನಿವೇಶ್ಯಶಾಖೆಯಲ್ಲಿ “ಉಪಾಸ್ಯತಾಂ,, ಎಂತಲೂ ಇರುವುದರಿಂದ ಈ ಮೊದಲಾದ ವಾಕ್ಯಗಳಿಂದಅವ್ಯಕ್ತ ಶಬ್ದವಾಚ್ಯಳಾದ ಶ್ರೀ ಲಕ್ಷ್ಮೀದೇವಿಯ ಉಪಾಸನವು ಮೋಕ್ಷಸಾಧನವೆಂದುಉಪದಿಷ್ಟವಾಗಿರುವುದು. ಮತ್ತು ಋಗ್ವೇದದಲ್ಲಿ“ಚತುಷ್ಕಪದರ್ಾ-ಚತುಶ್ಶಿಖಂಡಾ-ಅಹಂರುದ್ರೇಭ್ಯಃ-ಯಂಕಾಮಯೇ-ಅಹಂರುದ್ರಾಯ-ಎಂಬಿದೇ ಮೊದಲಾದ ಭಾಗಗಳಿಂದಲೂ ಲಕ್ಷ್ಮೀದೇವಿಗೇ ಸಕಲ ದೇವತೆಗಳಿಗಿಂತಲೂ ಉತ್ತಮತ್ವವೂ ಮಹಿಮೆಯೂ ಹೇಳಲ್ಪಟ್ಟಿರುವುದರಿಂದಲೂ, ಯಜುರ್ವೇದ ಗತವಾದ “ಅಂಭಸ್ಯಪಾರೆ,, ಎಂಬುವ ಉಪನಿಷತ್ತಿನ “ತ್ವಯಾಜುಷ್ಟಾಋಷಿರ್ಭವತಿದೇವಿ,, ಎಂಬೀ ವಾಕ್ಯದಿಂದ ಶ್ರೀ ಲಕ್ಷ್ಮೀದೇವಿಯ ಉಪಾಸನವು ಪ್ರತಿಪಾದಿಸಲ್ಪಟ್ಟಿರುವುದರಿಂದಲೂ ಶ್ರೀ ಮಹಾಲಕ್ಷ್ಮೀದೇವಿಯ ಉಪಾಸನವೂ ಮೋಕ್ಷಸಾಧನ ಭೂತವೆಂತಲೇ ತಿಳಿಯಬೇಕು. “ಅಕ್ಷರಾತ್ಪರತಃ ಪರಃ,, ಎಂಬೀ ವಾಕ್ಯದಲ್ಲಿ, ಅಕ್ಷರಾತ್-ಶ್ರೀ ಲಕ್ಷ್ಮೀದೇವಿಗಿಂತಲೂ, ಪರಃ-ನಾರಾಯಣನು ಶ್ರೇಷ್ಠನೆಂದು ಹೇಳಲ್ಪಟ್ಟಿರುವುದರಿಂದ ಅಕ್ಷರ ವೆಂಬುವುದು ಶ್ರೀ ಮಹಾಲಕ್ಷ್ಮಿಯೆಂತಲೇ ತಿಳಿಯಬೇಕು. * ||೧||

(ಶ್ರೀ) ನಿರ್ಗುಣೋಪಾಸನಸ್ಯೈವಂ ಸಗುಣೋಪಾಸನಸ್ಯಚ। ಶ್ರೇಯಃಕತರದಿತ್ಯೇವಂ ನಿರ್ಣೇತುಂದ್ವಾದಶೋದ್ಯಮಃ ॥ ನಿರ್ಗುಣ ಸಗುಣೋಪಾಸನಗಳಲ್ಲಿ ಯಾವದು ಶ್ರೇಷ್ಠವಾಗಿರುವುದೋ ಅದನ್ನು ನಿರ್ಣಯಿಸಿ ಹೇಳುವುದಕ್ಕಾಗಿ (೧೨) ನೇ ಅಧ್ಯಾಯವುಪ್ರವೃತ್ತವಾಯಿತೆಂದರಿಯಬೇಕು. ಅದು ಹೇಗೆಂದರೆ, “ಮತ್ಕರ್ಮಕೃತ್,, (೧೧॥ ೫೫॥) “ಕೌಂತೇಯ ಪ್ರತಿಜಾನೀಹಿ,, (೯॥ ೩೧॥)ಇವುಗಳಿಂದ ಭಕ್ತಿನಿಷ್ಠೆಯೊಡನೆ ಕೂಡಿರುವಂತವನು ಶ್ರೇಷ್ಠನೆಂತಲೂ, ಆ ಪ್ರಕಾರವೆ “ತೇಷಾಂಜ್ಞಾನೀನಿತ್ಯಯುಕ್ತಃ,,(೭॥ ೧೭॥) “ಸರ್ವಂಜ್ಞಾನಪ್ಲವೇನೈವ,, (೪॥೩೬॥) ಇವುಗಳಿಂದ ಜ್ಞಾನನಿಷ್ಠೆಯುಳ್ಳವನು ಶ್ರೇಷ್ಠನೆಂತಲೂ ಹೇಳಲ್ಪಟ್ಟಿರುವುದು.ಈ ದ್ವಿವಿಧರಾದನಿಷ್ಠರೂ ಶ್ರೇಷ್ಠರಾ

ಗಿದ್ದರೂ ಸಗುಣ ನಿರ್ಗುಣೋಪಾಸಕರಲ್ಲಿ ಯಾರು ಶ್ರೇಷ್ಠರೆಂದು ಅಲ್ಲ ರ್ಜುನನು ಪ್ರಶ್ನೆ ಮಾಡುತ್ತಾನೆಂದರಿಯಬೇಕು. ಸತತಯುಕ್ತಾಃ-ಸತ್ಕರ್ಮಗಳನ್ನನುಷ್ಠಿಸಿ ಫಲಾಪೇಕ್ಷೆ ಇಲ್ಲದೆ ಭಗವದರ್ಪಣವಂ ಮಾಡುವ ಯಾವ ಭಕ್ತರಾದರೆ, ತ್ವಾಂ - ವಿಶ್ವರೂಪಿಯಾಗಿಯೂ ಸರ್ವಜ್ಞರಾಗಿಯೂ ಸರ್ವಶಕ್ತರಾಗಿಯೂ ಇರುವ ಸಗುಣ ಬ್ರಹ್ಮವಾದ ನಿಮ್ಮನ್ನು, ಪರ್ಯುಪಾಸತೆ-ಉಪಾಸನೆ ಮಾಡುತ್ತಾರೆಯೊ, ಯೇಚಾಪಿ-ಯಾರಾದರೆ, ಅವ್ಯಕ್ತಂ-ಅಪ್ರತ್ಯಕ್ಷವಾದ, ಅಕ್ಷರಂ - ನಿರ್ಗುಣ ಬ್ರಹ್ಮವನ್ನು, ಪರ್ಯುಪಾಸತೆ-ಉಪಾಸನೆ ಮಾಡುತ್ತಾರೆಯೊ, ತೇಷಾಂ-ಅವರುಗಳ ಮಧ್ಯದಲ್ಲಿ, ಕೇ-ಯಾರು, ಯೊಗವಿತ್ತಮಾಃ-ಅಧಿಕವಾಗಿಯೋಗವನ್ನು ತಿಳಿದವರು. ಅವರಲ್ಲಿ ಯಾರು ಶ್ರೇಷ್ಠರೆಂದಭಿಪ್ರಾಯವು ॥೧॥

ಶ್ಲೋ ॥ ಶ್ರೀಭಗವಾನುವಾಚ ॥ ಮಯ್ಯಾವೇಶ್ಯ ಮನೋ
ಯೇಮಾಂನಿತ್ಯಯುಕ್ತಾಉಪಾಸತೇ । ಶ್ರದ್ಧಯಾಪರ
ಯೋಪೇತಾಸ್ತೇಮೇಯುಕ್ತತಮಾ ಮತಾಃ ॥ ॥೨॥

ಪ॥ ಶ್ರೀಭಗವಾನ್-ಉವಾಚ॥ ಮಯಿ-ಆವೇಶ್ಯ-ಮನಃ-ಯೇ-ಮಾಂ-ನಿತ್ಯಯುಕ್ತಾಃ-ಉಪಾಸತೆ । ಶ್ರದ್ಧಯಾ - ಪರಯಾ - ಉಪೇತಾಃ-ತೇ-ಮೆ - ಯುಕ್ತತಮಾಃ-ಮತಾಃ ॥ ... ... ... *

ಅ॥ ಶ್ರೀಭಗವಾನುವಾಚ॥ ಶ್ರೀಕೃಷ್ಣನು ಹೇಳಿದನು. ಯೇ-ಯಾರಾದರೆ, ಮಯಿ-ನನ್ನಲ್ಲಿ, ಮನಃ-ಮನಸ್ಸನ್ನು, ಆವೇಶ್ಯ-ಇಟ್ಟು, ಪರಯಾ-ಶ್ರೇಷ್ಠವಾದ, ಶ್ರದ್ಧಯಾ-ಶ್ರದ್ಧೆಯಿಂದ, (ವಿಶ್ವಾಸದಿಂದ) ಉಪೇತಾಃ-ಕೂಡಿದವರಾಗಿ, ನಿತ್ಯಯುಕ್ತಾಃ-ನಿತ್ಯವಾಗಿ ಯೋಗವುಳ್ಳವರಾಗಿರುತ್ತಾರೆಯೊ, (ಶಂ) "ಮತ್ಕರ್ಮಕೃತ್,, (೧೧॥ ೫೫॥) ಎಂಬುವ ಶ್ಲೋಕದಲ್ಲಿ ಹೇಳಿರುವ ಪ್ರಕಾರವಾಗಿ ನನ್ನಲ್ಲಿ ಯಾವಾಗಲೂ ನಿಷ್ಠೆಯುಳ್ಳವರಾಗಿ, (ರಾ) ಯಾವಾಗಲೂ ನನ್ನಲ್ಲಿಯೇ ಇರಬೇಕೆಂಬ ಅಪೇಕ್ಷೆಯುಳ್ಳವರಾಗಿ, (ಗೀ॥ ವಿ) ಕರ್ಮಯೋಗಧ್ಯಾನಯೋಗಗಳಿಂದ ಕೂಡಿದವರಾಗಿ, (ಇರುತ್ತಾರೆಯೊ ತೇ-ಅವರು, ಯುಕ್ತತಮಾಃ-ಅತ್ಯಂತವಾಗಿ ಯೋಗದಲ್ಲಿ ತೀರಿದವರೆಂಬದಾಗಿ, ಮೇ-ನನಿಗೆ, ಮತಾಃ-ಸಮ್ಮತರಾಗಿರುವರು. ... ... ॥೨॥

(ಶಂ॥ ಭಾ॥) ಎಲೈ ಅರ್ಜುನನೇ ! ಸರ್ವಾಪೇಕ್ಷೆಗಳನ್ನು ಬಿಟ್ಟ ವರಾಗಿಯೂ, ಅಕ್ಷರ ಶಬ್ದವಾಚ್ಯವಾದ ನಿರ್ಗುಣ ಬ್ರಹ್ಮವನ್ನು ಉಪಾಸನೆ ಮಾಡುವಂತವರಾಗಿಯೂ ಇರುವ ಬ್ರಹ್ಮನಿಷ್ಠರಿರಲಿ,ಅವ ರನ್ನು ಕುರಿತು ಹೇಳಬೇಕಾದ ಅಂಶಗಳನ್ನು ಮುಂದೇ ವಿವರಿಸುವೆನು. ಪ್ರಕೃತದಲ್ಲಿ ಸಗುಣೋಪಾಸಕರನ್ನು ಕುರಿತು ಹೇಳುವೆನು ಕೇಳು; ಸರ್ವೇಶ್ವರನೂ ವಿಶ್ವರೂಪನೂ ಆಗಿರುವ ನನ್ನಲ್ಲಿ ಮನಸ್ಸನ್ನು ನಿರಂ ತರವಾಗಿ ನಿಲ್ಲಿಸಿ ನನ್ನಲ್ಲಿ ಭಕ್ತಿಯುಳ್ಳವರಾಗಿ ಸಮಸ್ತರಾದ ಯೋಗೇ ಶ್ವರರಿಗೂ ಅಧೀಶ್ವರನಾಗಿಯೂ ಸರ್ವಜ್ಞನಾಗಿಯೂ ಸಮಸ್ತ ದುಃಖ ಗಳಿಗೂ ಕಾರಣಗಳಾಗಿ ಅಂಧಕಾರವೆನ್ನಲ್ಪಡುವ ಅಜ್ಞಾನದ್ದೆಶೆಯಿಂದುಂ ಟಾಗುವರಾಗ ದ್ವೇಷಾದಿಗಳಿಲ್ಲದವನಾಗಿಯೂ ಇರುವ ನನ್ನನ್ನು ಹಿಂ ದನೇ ಅಧ್ಯಾಯದ ಕಡೇ ಶ್ಲೋಕದಲ್ಲಿ ಹೇಳಿರುವ ಪ್ರಕಾರವಾಗಿ ಭಗ ವದರ್ಪಣ ಬುದ್ಧಿಯಿಂದ ಸಕಲ ಕರ್ಮಗಳನ್ನಾಚರಿಸುತಾ ಅತ್ಯಂತ ವಿ ಶ್ವಾಸದೊಡನೆ ಕೂಡಿದವರಾಗಿ ಭಜನ ಮಾಡುವಂತವರು ನಿರಂತರವೂ ನನ್ನಲ್ಲಿ ಅಚಂಚಲವಾಗಿ ಮನಸ್ಸನ್ನಿಡುತಾ ಅಹೋರಾತ್ರಗಳನ್ನು ಕಳೆಯುತ್ತಾರಾದುದರಿಂದ ಉಪಾಸಕರಲ್ಲಿ ಅಂತವರು ಯುಕ್ತತ ಮ ರೆಂಬದಾಗಿ ಕೊಂಡಾಡಲ್ಪಡುವುದು ಯುಕ್ತವಾಗಿಯೇ ಇರುವುದೆಂದ ಭಿಪ್ರಾಯವು. ... ... ॥೨॥

(ರಾ॥ ಭಾ॥) ಯಾರಾದರೆ ಮನಸ್ಸನ್ನು ಅತ್ಯರ್ಥ ಪ್ರೀತಿಯು ಕೆಯಿಂದ ನನ್ನಲ್ಲಿಯೇ ಪ್ರವೇಶಮಾಡಿಸಿ ಅಧಿಕವಾದ ಪ್ರಾಪ್ಯತ್ವರೆ ಯಿಂದ ಕೂಡಿದವರಾಗಿಯೂ ಸಾಧನ ದಶೆಯಲ್ಲಿ ಹೇಗೋ ಅದರಂತೇ ಸಾಧ್ಯ(ಫಲ)ದಶೆಯಲ್ಲಿಯೂ ನಮ್ಮೊಡನೆನಿತ್ಯಸಂಶ್ಲೇಷವನ್ನು ಇಚ್ಛಿಸು ವಂತವರಾಗಿಯೂ ನನ್ನನ್ನು ಪಾಸನೆ ಮಾಡುತ್ತಾರೆಯೊ(ಎಂದರೆಫಲಾ ಪೇಕ್ಷಿಯಾದ ಮನಸ್ಸನ್ನು ಫಲಭೂತನಾದ ನನ್ನಲ್ಲಿಯೇ ಇಟ್ಟು ಉಪಾ ಸನ ಮಾಡುತ್ತಾರೆಯೊ ಎಂದರ್ಥವು) ಅಂತವರು ಆಯಾಸವಿಲ್ಲದೆ ಅತಿ ಶೀಘ್ರಕಾಲದಲ್ಲಿ ನನ್ನನ್ನು ಹೊಂದುವಂತವರಾದುದರಿಂದ ಅತ್ಯಂತ ವಾಗಿ ಮೋಕ್ಷೋಪಾಯವಂ ತಿಳಿದವನೆಂದು ನಿಶ್ಚಯಿಸಲ್ಪಟ್ಟಿರುವರು. ॥೨॥

(ಗೀ॥ ವಿ॥) ಯುಕ್ತತಮಾಃ-ಇಷ್ಟಾನಿಷ್ಟಹರ್ಷ ಶೋಕಗಳಂ ಬಿಟ್ಟು ವ್ಯಸನವಿಲ್ಲದೇ ಸಮಚಿತ್ತರಾಗಿರುವರು. ॥೨॥

ಶ್ಲೋ॥ ಯೇತ್ವಕ್ಷರ ಮನಿರ್ದೇಶ್ಯ ಮವ್ಯಕ್ತಂ ಪರ್ಯುಪಾಸತೇ । ಸರ್ವತ್ರಗ ಮಚಿಂತ್ಯಂಚ ಕೂಟಸ್ಥ ಮಚಲಂ ಧ್ರುವಂ ॥೩॥ ಸನ್ನಿಯಮ್ಯೇಂದ್ರಿಯಗ್ರಾಮಂ ಸರ್ವತ್ರ ಸಮಬುದ್ಧಯಃ । ತೇಪ್ರಾಪ್ನುವಂತಿ ಮಾಮೇವ ಸರ್ವಭೂತಹಿತೇರತಾಃ ॥ ... ॥೪॥

ಪ॥ ಯೇ-ತು-ಅಕ್ಷರಂ-ಅನಿರ್ದೇಶ್ಯಂ-ಅವ್ಯಕ್ತಂ-ಪರಿ-ಉಪಾಸತೇ। ಸರ್ವತ್ರಗಂ-ಅಚಿಂತ್ಯಂ-ಚ-ಕೂಟಸ್ಥಂ- ಅಚಲಂ-ಧ್ರುವಂ ॥ ಸನ್ನಿಯಮ್ಯ-ಇಂದ್ರಿಯಗ್ರಾಮಂ-ಸರ್ವತ್ರ-ಸಮಬುದ್ಧಯಃ । ತೇ-ಪ್ರಾಪ್ನುವಂತಿ-ಮಾಂ-ಏವ-ಸರ್ವಭೂತಹಿತೇ-ರತಾಃ॥

ಅ॥ ಇಂದ್ರಿಯಗ್ರಾಮಂ-ಇಂದ್ರಿಯಗಳ ಸಮೂಹವನ್ನು, ಸನ್ನಿಯಮ್ಯ-ಸನಿರಾಚೀನವಾಗಿ ಅಡಗಿಸಿ,ಸರ್ವತ್ರ-ಸಮಸ್ತದಲ್ಲಿಯೂ, ಸಮಬುದ್ಧಯಃ-ಸಮಬುದ್ಧಿಯುಳ್ಳವರಾಗಿಯೂ, (ಶಂ) ಇಷ್ಟಾನಿಷ್ಟಗಳಲ್ಲಿ ಹರ್ಷಶೋಕಗಳಿಲ್ಲದೆ ಸಮಬುದ್ಧಿಯುಳ್ಳವರಾಗಿಯೂ, ಸರ್ವಪ್ರಾಣಿಗಳಿಗೂ ಹಿತವನ್ನೇ ಅಪೇಕ್ಷಿಸುವಂತವರಾಗಿಯೂ ಇರುವ, ಯೇತು-ಯಾರಾದರೆ, ಅನಿರ್ದೇಶ್ಯಂ-ವಾಕ್ಕಿಗೆ ಗೋಚರವಾಗದೆಯೂ, ಅವ್ಯಕ್ತಂ-ಕಣ್ಣಿನಿಂದ ಕಾಣಲಸಾಧ್ಯವಾಗಿಯೂ, ಅಚಿಂತ್ಯಂ-ಮನಸ್ಸಿನಿಂದ ಚಿಂತಿಸಲಾಗದೆಯೂ, ಕೂಟಸ್ಥಂ-ಮಾಯಾ ಪ್ರಪಂಚಕ್ಕೆ ಆಧಾರ ಭೂತವಾಗಿಯೂ, ಅಚಲಂ-ಚಲಿಸದೆಯೂ, ಧ್ರುವಂ-ಶಾಶ್ವತವಾಗಿಯೂ, ಸರ್ವತ್ರಗಂಚ-ಸರ್ವವಸ್ತುವಿನಲ್ಲಿಯೂ ವ್ಯಾಪಿಸಿಯೂ ಇರುವ, ಅಕ್ಷರಂ-ನಿರ್ಗುಣ ಬ್ರಹ್ಮವನ್ನು, ಪರ್ಯುಪಾಸತೇ-ಉಪಾಸನೆ ಮಾಡುತ್ತಾರೆಯೋ, ತೇಮಾಮೇವ ಪ್ರಾಪ್ನುವಂತಿ-ಅವರು ನನ್ನನ್ನೇ ಹೊಂದುತ್ತಾರೆ. (ಈ ಪ್ರತಿಪದ ಟೀಕೆಯು ಅದ್ವೈತ ಸಿದ್ಧಾಂತಾನುಸಾರವಾಗಿಯೇ ಬರೆಯಲ್ಪಟ್ಟಿರುವುದೆಂದರಿಯಬೇಕು.) ॥೩॥೪॥

(ಶಂ॥ ಭಾ॥) ಅನ್ಯರಾದ ನಿರ್ಗುಣೋಪಾಸಕರು ಯುಕ್ತತಮರಲ್ಲವೊ ? ಎಂದರೆ ಅವರನ್ನು ಯುಕ್ತತಮರಲ್ಲವೆಂದು ಹೇಳಕೂಡದು. ಅಂತವರಂ ಕುರಿತು ಹೇಳುವೆನು ಕೇಳು. ಎಲೈ ಅರ್ಜುನನೇ ! ಸಮಸ್ತೇಂದ್ರಿಯಗಳನ್ನು ಸ್ವಾಧೀನ ಮಾಡಿಕೊಂಡು ಇಷ್ಟಾನಿಷ್ಟಪ್ರಾಪ್ತಿಗಳಲ್ಲಿ ಏಕರೀತಿಯಾಗಿರುವಂತವರಾಗಿಯೂ ಸಮಸ್ತ ಪ್ರಾಣಿಗಳಿಗೂ ಶ್ರೇಯಸ್ಸುಂಟಾಗಬೇಕೆಂದಪೇಕ್ಷಿಸುವಂತವರಾಗಿಯೂ ಇರುವ ಉಪಾಸಕರು (೨॥೧೮) ನೇ ಶ್ಲೋಕದಲ್ಲಿ ಹೇಳಿರುವಂತೆ( ಯಾವ ಪ್ರಮಾಣದಿಂದಲೂ ತಿಳಿಯಲಶಕ್ಯವಾಗಿರುವುದರಿಂದ ಇಂಥಾದ್ದೆಂಬದಾಗಿ ಶಬ್ದಗಳಿಂದ ನಿರ್ದೇಶಿಸಿ ಹೇಳುವುದಕ್ಕೆ ಅಶಕ್ಯವಾಗಿಯೂ, ಆಕಾಶದಂತೆ ಸರ್ವಕಾಲಗಳಲ್ಲಿಯೂ ಸರ್ವವ್ಯಾಪನಶೀಲವಾಗಿಯೂ, “ಯತೋವಾಚೋನಿವರ್ತಂತೆ,, ಇತ್ಯಾದಿ ತೈತಿರೀಯ ಶ್ರುತಿಪ್ರಕಾರವಾಗಿ ಮನಸ್ಸಿನಿಂದಲೂ ಕೂಡ ಇಂಥಾದ್ದೆಂದರಿಯಲು ಸಾಧ್ಯವಲ್ಲದೆಯೂ, ಅವಿದ್ಯಾದ್ಯನೇಕ ಸಂಸಾರಗಳಿಗೆ ಬೀಜವಾಗಿಯೂ “ಮಾಯಾಂತು ಪ್ರಕೃತಿಂ ವಿದ್ಯಾನ್ಮಾಯಿನಂತು ಮಹೇಶ್ವರಂ॥ ಮಮಮಾಯಾದುರತ್ಯಯಾ,, ಇತ್ಯಾದಿ ಪ್ರಮಾಣಗಳಿಂದ ಮಾಯಾವ್ಯಾಕೃತಾದಿ ಶಬ್ದವಾಚ್ಯತ್ವೇನ ಪ್ರಸಿದ್ಧವಾಗಿಯೂ ಇರುವ ಮಾಯೆಗೆ ಅಧ್ಯಕ್ಷವಾಗಿಯೂ ನಿಶ್ಚಲವಾಗಿಯೂ ಇರುವ ಅಕ್ಷರ ಶಬ್ದವಾಚ್ಯವಾದ ಪರಬ್ರಹ್ಮವನ್ನು ಉಪಾಸನೆ ಮಾಡುವಂತರವರು ನಿರ್ಗುಣೋಪಾಸಕರು ಇವರು ಬ್ರಹ್ಮಸಾಯುಜ್ಯವನ್ನು ಹೊಂದುವ ವಿಷಯದಲ್ಲಿ ಸ್ವಲ್ಪವೂ ಸಂಶಯವಿಲ್ಲವು. ಉಪಾಸನವೆಂದರೆ, ಉಪ-ಸಮೀಪದಲ್ಲಿ, ಆಸನಂ-ಇರುವಿಕೆಯು, ಎಂಬದಾಗಿ ಅವಯವಾರ್ಥವು, ಶಾಸ್ತ್ರಾನುಸಾರವಾಗಿ ತಾನು ಉಪಾಸನೆ ಮಾಡಬೇಕಾದ ವಸ್ತುವನ್ನು(ಮನಸ್ಸಿನಿಂದಲಕ್ಷ್ಯಭ್ಯಾಸ ಮೂಲಕವಾಗಿ) ಸಮೀಪಿಸಿ ತೈಲಧಾರೆಯಂತೆ ಅವಿಚ್ಛಿನ್ನವಾದ ಜ್ಞಾನದೊಡನೆ ಸರ್ವಕಾಲದಲ್ಲಿಯೂ ಸ್ವಸ್ವರೂಪವನ್ನನುಭವಿಸುವಿಕೆಯೇ ಉಪಾಸನವೆನ್ನಲ್ಪಡುವುದು. ಹೊರಗೆ ಗುಣಯುಕ್ತವಾಗಿಯೂ ಒಳಗೆ ದೋಷಯುಕ್ತವಾಗಿಯೂ ಇರುವುದಂ ಕೂಟವೆನ್ನುವರು. ಕೂಟರೂಪವು, ಕೂಟ ಸಾಕ್ಷ್ಯವೆಂಬಿದೇ ಮೊದಲಾದ

ಶಬ್ದಗಳಿಂದ ಈ ಅರ್ಥವ ನ್ನೂಹಿಸಿಕೊಳ್ಳಬಹುದು. ಅವಿದ್ಯಾದ್ಯನೇಕ ಸಂಸಾರ ಬೀಜ ಭೂತವಾಗಿಯೂ ಅಂತರ್ದೋಷ ಯುಕ್ತವಾಗಿಯೂ ಮಾಯಾವ್ಯಾಕೃತಾದಿ ಶಬ್ದವಾಚ್ಯವಾಗಿಯೂ ಇರುವ ಮಾಯೆಯು ಕೂಟವೆನ್ನಲ್ಪಡುವುದು. ಅಂತಹ ಮಾಯೆಗೆ ಅಧಿಷ್ಠಾನವಾಗಿರುವುದರಿಂದಲಾದರೂ (ಅಥವಾ) ಕೂಟ-ರಾಶಿಯಂತೆ ಇರುವುದರಿಂದಲಾದರೂ ಬ್ರಹ್ಮವು ಕೂಟಸ್ಥವೆನ್ನಲ್ಪಡುವುದು. ||೩||೪||

(ಗೀ|| ವಿ||) ಅವ್ಯಕ್ತ ಶಬ್ದವಾಚ್ಯಳಾದ ಶ್ರೀ ಲಕ್ಷ್ಮೀದೇವಿಯ ಉಪಾಸನವು ಮೋಕ್ಷ ಸಾಧನ ವೆಂಬದಾಗಿ "ಶ್ರಿಯಂವಸಾನಾಅಮೃತತ್ವಮಾಯನ್,, ಇತ್ಯಾದಿ ಶ್ರುತಿಗಳು ಮೊರೆಇಡುತ್ತವೆ. ಅರೀತಿಯಾಗಿಯೇ "ನಾನ್ಯಃಪಂಥಾವಿದ್ಯತೇ ಅಯನಾಯ,, ಇತ್ಯಾದಿ ಶ್ರುತಿಗಳು ಪರಮಾತ್ಮೋಪಾಸನವು ಮೋಕ್ಷಸಾಧನವೆಂಬದಾಗಿ ಹೇಳುವುವು. ಈ ಪರಮಾತ್ಮೋಪಾಸಕರಿಗೂ ಲಕ್ಷ್ಮೀ ಉಪಾಸಕರಿಗೂ ಫಲದಲ್ಲಿ ಸಾಮ್ಯವಾದಮೇಲೆ ಲಕ್ಷ್ಮೀಉಪಾಸಕರಿಗಿಂತಲೂ ಪರಮಾತ್ಮೋಪಾಸಕರಿಗೆ "ಮಯ್ಯಾವೇಶ್ಯಮನೋಯೇಮಾಂನಿತ್ಯಯುಕ್ತಾ ಉಪಾಸತೇ| ಶ್ರದ್ಧಯಾಪರಯೋಪೇತಾಸ್ತೇಮೇಯುಕ್ತತಮಾಮತಾಃ,, ಎಂಬೀ ಹಿಂದಿನ ಶ್ಲೋಕದಲ್ಲಿ ಹೇಳಿರುವಂತೆ ಶ್ರೈಷ್ಠ್ಯವು ಹೇಗೆ ಪ್ರಾಪ್ತವಾಗುವುದು ? ಎಂಬೀ ಶಂಕಾ ಸಮಾಧಾನಾರ್ಥವಾಗಿ ಲಕ್ಷ್ಮೀದೇವಿಯ ಉಪಾಸಕರಿಗೆ "ಶ್ರಿಯಂವಸಾನಾ,, ಇತ್ಯಾದಿ ಪ್ರಮಾಣಬಲದಿಂದ ಮೋಕ್ಷಫಲವು ಸಿದ್ಧವಾಗಿದ್ದರೂ ಪರಮಾತ್ಮೋಪಾಸಕರಿಗೆ ಉತ್ತಮತ್ವದಲ್ಲಿ ನಿಮಿತ್ತವಿರುವುದರಿಂದ ಅವರೇ ಶ್ರೇಷ್ಠರೆಂಬದಾಗಿ ಈ (೩|| ೪||) ನೇ ಶ್ಲೋಕಗಳಿಂದ ವ್ಯಕ್ತಪಡಿಸುತ್ತಾನೆಂದರಿಯಬೇಕು.

ಯೇತು- ಯಾರಾದರೆ, ಅಕ್ಷರಂ- ನಾಶವಿಲ್ಲದ, ಅನಿರ್ದೇಶ್ಯಂ- ಸೂಕ್ಷ್ಮವಾಗಿರುವುದರಿಂದ ಕಾಣಲ್ಪಡದ, ಅವ್ಯಕ್ತಂ- ಪ್ರಸಿದ್ಧವಾದವ್ಯಕ್ತಿವೆ ಇರುವುದರಿಂದಲೂ ಜಗತ್ತಿಗೆ ಉಪಾದಾನಕಾರಣವಾದ ಪ್ರಕೃತಿಗೆ ಅಭಿಮಾನಿಯಾಗಿರುವುದರಿಂದಲೂ ಅವ್ಯಕ್ತವೆನ್ನಲ್ಪಡುವ, ಸರ್ವತ್ರಗಂ- ಸರ್ವದೇಶಗಳಲ್ಲಿಯೂ ವ್ಯಾಪಿಸಿರುವ, ಅಚಿಂತ್ಯಂ- ಅನೇಕ

ಗುಣಗಳಿಂ ದೊಪ್ಪಿರುವುದರಿಂದ ಚಿಂತಿಸಲಶಕ್ಯವಾದ, ಕೂಟಸ್ಥಂ-ಅ ವ್ಯಾಕೃತಾಕಾಶದಲ್ಲಭಿಮಾನಿಯಾಗಿರುವ, ಅಚಲಂ - ತನ್ನ ಸ್ಥಾನ ದಿಂದ ಚಲಿಸದೇಇರುವ, ಧ್ರುವಂ - ವಿಕಾರಶೂನ್ಯವಾಗಿರುವ ಶ್ರೀ ಲಕ್ಷ್ಮೀತತ್ವವನ್ನು, ಇಂದ್ರಿಯಗ್ರಾಮಂ ಸನ್ನಿಯಮ್ಯ- ಇಂದ್ರಿಯ ಗಳನ್ನು ವಿಷಯಗಳ ದಶೆಯಿಂದ ಹಿಂದಕ್ಕೆ ತಿರಿಗಿಸಿ, (ವಿಷಯಾಂತರ ಗಳಲ್ಲಿ ಇಂದ್ರಿಯಗಳನ್ನು ಬಿಡದೇ ನಿರೋಧಿಸಿ ಎಂದರ್ಥವು.) ಸರ್ವತ್ರ ಸಮಬುದ್ಧಯಃ- ಒಳ್ಳೇದಾದ ಸಮ ಜ್ಞಾನವುಳ್ಳವರಾಗಿಯೂ, ಸರ್ವ ಭೂತಹಿತೇರತಾಃ- ಸರ್ವಭೂತಗಳಿಗೂ ಹಿತವನ್ನೇ ಮಾಡಬೇಕೆಂಬ ಅಪೇಕ್ಷೆಯುಳ್ಳವರಾಗಿಯೂ, ಪರ್ಯುಪಾಸತೇ- ವಿಷ್ಣುಭಕ್ತಿಯೇನು, ವಿಷ್ಣುವಿಷಯವಾದ ಶ್ರದ್ಧೆಯೇನು, ವಿಷ್ಣು ಸರ್ವೋತ್ತಮತ್ವಜ್ಞಾನ ವೇನು, ಇವುಗಳಿಂದ ಕೂಡಿದವರಾಗಿ ಲಕ್ಷ್ಮೀಉಪಾಸನವನ್ನು ಮಾಡು ತ್ತಾರೆಯೊ, ತೇ- ಅವರು, ಮಾಮೇವ- ನನ್ನನ್ನೇ, ಪ್ರಾಪ್ನುವಂತಿ- ಹೊಂದುತ್ತಾರೆ. ಇಲ್ಲಿ ಅವ್ಯಕ್ತಶಬ್ದವಾಚ್ಯಳಾದ ಲಕ್ಷ್ಮೀದೇವಿಯು ವಿಶೇಷಣಗಳಿಂದಲೇ ಶ್ರೀಲಕ್ಷ್ಮೀದೇವಿಯ ಉಪಾಸನವು ಕಷ್ಟಸಾ ಧ್ಯವೆಂದು ಬೋಧಿತವಾಗಿರುವುದರಿಂದ ( ಪರಮಾತ್ಮೋಪಾಸನದಲ್ಲಿ ಇಂತಹ ಕಷ್ಟವಿಲ್ಲವಾದ್ದರಿಂದ) ಪರಮಾತ್ಮೋಪಾಸಕರು ಶ್ರೇಷ್ಠ ರೆಂದಭಿಪ್ರಾಯವು. ||೩||೪||

(ಶಂ|| ಆ||) ಮಂದಪ್ರಜ್ಞರಾದ ಮುಮುಕ್ಷುಗಳಿಗೆ ಸಗುಣ ಬ್ರಹ್ಮೋಪಾಸನದಲ್ಲಿ ಪ್ರವೃತ್ತಿ ಯುಂಟಾಗುವುದಕ್ಕಾಗಿ "ತೇಮೇ ಯುಕ್ತತಮಾಮತಾಃ,,(೧೨| ೨||) ಎಂಬೀ ಶ್ಲೋಕದಲ್ಲಿ ಕರ್ಮನಿಷ್ಠ ರನ್ನು ಸ್ತೋತ್ರಮಾಡಿ ಈಗ ಪರಮಾತ್ಮಸ್ವರೂಪವನ್ನೂ ಸಾಧಕರಿಗೆ ಅವಶ್ಯಾಪೇಕ್ಷಿತವಾದ ಸಾಧನ ಸಂಪತ್ತಿಯನ್ನೂ, ಪ್ರತಿಪಾದಿಸು ವಂತವನಾಗಿ ನಿರ್ಗುಣೋಪಾಸಕರಿಗೆ ಯುಕ್ತತಮತ್ವವನ್ನೂ, ಈ ಉಪಾಸನಕ್ಕೆ ಸಾಕ್ಷಾನ್ಮೋಕ್ಷೈಕ ಫಲ ಸಾಧನತ್ವವನ್ನೂ (ಫಲಸಿ ದ್ಧಿಯುಂಟಾಗುವುದಂ ಪ್ರಕಾಶಪಡಿಸುವುದರಿಂದ ಉಪಾಸನವು ಸ್ವತ ಸಿದ್ಧವಾಗುವುದೆಂದೆಣಿಸಿ) ಬ್ರಹ್ಮಜ್ಞಾನಿಗಳಿಗೆ ಬ್ರಹ್ಮೋಪಾಸನಾಫಲ ವನ್ನೂ ಉಪದೇಶಿಸುತ್ತಾನೆಂದರಿಯಬೇಕು. ||೩|| ೪||

ಶ್ಲೋ॥ ಕ್ಲೇಶೋಧಿಕತರಸ್ತೇಷಾಮವ್ಯಕ್ತಾಸಕ್ತಚೇತ
ಸಾಂ।ಅವ್ಯಕ್ತಾಹಿಗತಿರ್ದುಃಖಂದೇಹವದ್ಭಿರವಾಪ್ಯತೇ॥೫॥

ಪ॥ ಕ್ಲೇಶಃ- ಅಧಿಕತರಃ- ತೇಷಾಂ- ಅವ್ಯಕ್ತಾಸಕ್ತಚೇತಸಾಂ । ಅವ್ಯಕ್ತಾ-ಹಿ-ಗತಿಃ-ದುಃಖಂ- ದೇಹವದ್ಭಿಃ- ಅವಾಪ್ಯತೇ ॥

ಅ॥ ಅವ್ಯಕ್ತಾಸಕ್ತಚೇತಸಾಂ- (ಶಂ) ನಿರ್ಗುಣ ಬ್ರಹ್ಮವಿಷಯು ವಾದ ಮನೋನಿಷ್ಠೆಯುಳ್ಳ, (ಗೀ॥ ವಿ॥) ಲಕ್ಷ್ಮೀದೇವಿಯಲ್ಲಿ ಮನೊ ನಿಷ್ಠೆಯುಳ್ಳ, (ರಾ) ಜೀವಾತ್ಮಸ್ವರೂಪ ವಿಷಯುವಾದ ಮನೋನಿಷ್ಠೆ ಯುಳ್ಳ, ತೇಷಾಂ- ಆ ಉಪಾಸಕರಿಗೆ, ಕ್ಲೇಶಃ- ಪ್ರಯಾಸವು, ಅಧಿಕ ತರಃ- ಅತ್ಯಂತಾಧಿಕವಾಗಿರುವುದು. ಹಿ- ಯೇತಕ್ಕೆಂದರೆ? ಅ ವ್ಯಕ್ತಾ- ಅವ್ಯಕ್ತವಿಷಯುವಾದ, ಗತಿಃ- ನಿಷ್ಠೆಯು, ದೇಹವದ್ಭಿಃ- ದೇಹಾತ್ಮಾಭಿಮಾನಿಗಳಿಂದ, ದುಃಖಂ- ಪ್ರಯಾಸದಿಂದ, ಅವಾಪ್ಯತೇ- ಹೊಂದಲ್ಪಡುವುದು. ... ... ॥೫॥

(ಶಂ॥ ಭಾ॥) ಆದರೆ ಸರ್ವೋತ್ತಮವಾದ ನಿರ್ಗುಣೋಪಾಸನ ವಂಮಾಡದೆ ಕೆಲವರು ಸಗುಣೋಪಾಸನಾನಿಷ್ಠರಾಗಲೂ ಕಾರಣವೇ ನು? ಎಂಬೀ ಶಂಕಾಸಮಾಧಾನವೇ ಈಶ್ಲೋಕದಿಂದಲೂ ಹೇಳಲ್ಪ ಡುವುದು. ದೇಹಾದಿಗಳಲ್ಲಭಿಮಾನವುಳ್ಳವರು ಅಕ್ಷರ ಶಬ್ದ ವಾಚ್ಯ ವಾದ ಬ್ರಹ್ಮದೊಡನೆ ಐಕ್ಯವನ್ನು ಹೊಂದುವುದು ಅತಿ ಪ್ರಯಾಸ ಸಾಧ್ಯವಾಗಿರುವುದರಿಂದ ಕೆಲವರು ನಿರ್ಗುಣೋಪಾಸನವಂಬಿಟ್ಟು ಸಗುಣ ಬ್ರಹ್ಮೋಪಾಸನದಲ್ಲಿಯೆ ಆಸಕ್ತರಾಗಿರುವರೆಂದರಿಯಬೇಕು. ಅಕ್ಷರೋಪಾಸಕರು ಹೇಗೆ ಇರುವರೊ ಅದಂ ಮುಂದೆ ವಿವರಿಸು ತ್ತಾರೆ. (ಆದರೆ ಸಗುಣೋಪಾಸಕರಿಗೆಮಾತ್ರ ಉಪಾಸನದಲ್ಲಿ ಪ್ರಯಾಸವಿಲ್ಲವೊ ಎಂದರೆ ಅವರಿಗೂ ಶ್ರಮವೇನೊ ಉಂಟಾಗಿಯೆ ಇದ್ದರೂ ನಿರ್ಗುಣೋಪಾಸಕರು ದೇಹಾಭಿಮಾನವನ್ನು ಅತ್ಯಂತ ವಾಗಿ ಬಿಡಬೇಕಾಗಿರುವುದರಿಂದ ಶ್ರಮವು ಅತ್ಯಧಿಕವೆಂದಭಿಪ್ರಾ ಯವು. ... ... ॥೫॥

(ರಾ॥ ಭಾ॥) ಯೇತು- ಯಾರಾದರೆ, ಇಂದ್ರಿಯಗ್ರಾಮಂ ಸನ್ನಿಯಮ್ಯ- ಚಕ್ಷುರಾದೀಂದ್ರಿಯ ಸಮೂಹಗಳೆಲ್ಲವನ್ನೂ ತಮ್ಮ

ತನ್ಮಾತ್ರಗಳ ವ್ಯಾಪಾರಗಳ ದೆಸೆಯಿಂದ ನಿವೃತ್ತಿಸಿಕೊಂಡು, ಸರ್ವತ್ರಸಮಬುದ್ಧಯಃ- ದೇವತಿರ್ಯಙ್ಮನುಷ್ಯಸ್ಥಾವರರೂಪಗಳಾಗಿಯೂ ಒಂದಕ್ಕೊಂದು ಅತ್ಯಂತ ವಿಷಮಾಕಾರಗಳಾಗಿಯೂ ಇರುತಲಿರುವ ಸಮಸ್ತ ದೇಹಗಳಲ್ಲಿಯೂ ಇರುವ ಜೀವಾತ್ಮರೆಲ್ಲರೂ ಜ್ಞಾನವೆಂಬ ಏಕಾಕಾರವುಳ್ಳವರಾಗಿರುವುದರಿಂದ ಆಜೀವಾತ್ಮ ಸ್ವರೂಪಗಳೆಲ್ಲವೂ ಸಮಾನಗಳೆಂಬೀಜ್ಞಾನವುಳ್ಳವರಾಗಿಯೂ, ಸರ್ವಭೂತಹಿತೇರತಾಃ- ಆಕಾರಣದಿಂದಲೇ ಸರ್ವ ಪ್ರಾಣಿಗಳಿಗೂ ಅಹಿತಾ ಚರಣದಲ್ಲಿ ರುಚಿಯಿಲ್ಲದವರಾಗಿಯೂ, ಅನಿರ್ದೇಶ್ಯಂ- ದೇವಾದಿ ದೇಹಗಳಿಗಿಂತಲೂ ಭಿನ್ನವಾಗಿರುವುದರಿಂದ ದೇವಾದಿ ಶಬ್ದಗಳಿಂದ ವ್ಯವಹರಿಸಲ್ಪಡತಕ್ಕದ್ದಾಗಿಯೂ, ಅವ್ಯಕ್ತಂ- ಆಕಾರಣದಿಂದಲೇ ಕಣ್ಣು ಮೊದಲಾದ ಇಂದ್ರಿಯಗಳಿಂದ ಪ್ರಕಾಶಿಸಲ್ಪಡತಕ್ಕದ್ದಲ್ಲವಾಗಿಯೂ, ಸರ್ವತ್ರಗಮಚಿಂತ್ಯಂಚ- ದೇವಾದಿದೇಹಗಳಲ್ಲಿ ಎಲ್ಲಿದ್ದರೂ ಆ ಯಾ ರೂ ಪ ಗ ಳಿಂ ದ ಆ ದೇ ವಾದಿದೇಹಗಳಿಗಿಂತಲೂ ಪೃಥಕ್ಕಾಗಿರುವುದೆಂದು ಚಿಂತಿಸ ಲಶಕ್ಯವಾಗಿಯೂ, ಕೂಟಸ್ಥಂ- ಆದೇವಾದ್ಯಸಾಧಾರಣಾಕಾರಗಳೊಡನೆ ಸಂಬಂಧಿಸದೇ ಇರುವುದರಿಂದ ಸರ್ವ ಸಾಧಾರಣವಾಗಿಯೂ, ಅಚಲಂ- ಹಾಲು ಮೊಸರಿನಂತೆ ಪರಿಣಾಮವಂ ಹೊಂದುವರೀತಿಯಿಂದ ಪರಿಣಾಮವಂ ಹೊಂದುವುದಿಲ್ಲವಾದುದರಿಂದ ತನ್ನ ಅಸಾಧಾರಣಾಕಾರದ್ದೆಸೆಯಿಂದ ಯಾವಾಗಲೂ ಚಲಿಸದೇ ಇರುವಂತಾದ್ದಾಗಿಯೂ, ಧ್ರುವಂ- ಆದುದರಿಂದಲೇ ನಿತ್ಯವಾಗಿಯೂ ಇರುವ, ಅಕ್ಷರಂ- ಜೀವಾತ್ಮಸ್ವರೂಪವನ್ನು, ಪರ್ಯುಪಾಸತೆ- ಚೆನ್ನಾಗಿ ಉಪಾಸನೆಮಾಡುತ್ತಾರೆಯೊ,ತೆ- ಅವರೂ, ಮಾಂ- ನನ್ನಂತೆ ಸಂಸಾರ ಸಂಬಂಧವಿಲ್ಲದಿರುವ ಜೀವಾತ್ಮಸ್ವರೂಪವನ್ನು, ಪ್ರಾಪ್ನುವಂತ್ಯೇವ- ಹೊಂದಲೇಹೊಂದುತ್ತಾರೆ. ಮತ್ತೇನಂದರೆ? ಅವ್ಯಕ್ತಾಸಕ್ತಚೇತಸಾಂ- ಜೀವಾತ್ಮಸ್ವರೂಪೋಪಾಸನದಲ್ಲಿಯೆ ಆಸಕ್ತವಾದ ಮನಸ್ಸುಳ್ಳ, ತೇಷಾಂ- ಆಅಧಿಕಾರಿಗಳಿಗೆ, ಕ್ಲೇಶ ಅಧಿಕತರಃ- ಶ್ರಮವು ಅತ್ಯಂತಾಧಿಕವಾಗಿರುವುದು. ಅದು ಯೇತಕ್ಕೆಂದರೆ? ಅವ್ಯಕ್ತಾಹಿಗತಿಃ- ಆಜೀವಾತ್ಮವಿಷಯಕವಾದ ಮನೋವೃತ್ತಿಯು, ದೇಹವದ್ಭಿಃ- ದೇಹವೇ ಆತ್ಮವೆಂಬದಾಗಿ ನೆನೆಸಿ

ರುವ ದೇಹಾತ್ಮಾಭಿಮಾನಿಗಳಿಂದ, ದುಃಖಂಹಿಅವಾಪ್ಯತೇ- ದುಃಖಪಟ್ಟಲ್ಲದೇ ಹೊಂದಲ್ಪಡುವುದು. ಮುಕ್ತಸ್ವರೂಪವು ಪರಮಪುರುಷನೊಡನೆ ಸಮವಾಗಿರುವುದೆನ್ನುವ ವಿಷಯವನ್ನು "ಮಮಸಾಧರ್ಮ್ಯಮಾಗತಾಃ,, (೧೪॥೨) ಎಂಬದಾಗಿ ಮುಂದೆ ವಿವರಿಸುತ್ತಾರಲ್ಲವೆ. ಶ್ರುತಿಯೂ,, ನಿರಂಜನಃ ಪರಮಂಸಾಮ್ಯಮುಪೈತಿ,, ಎಂಬದಾಗಿ ಪರಮ ಸಾಮ್ಯವನ್ನೇ ಹೇಳಿರುತ್ತದೆ. ಆ ಪ್ರಕಾರವೇ ಅಕ್ಷರ ಶಬ್ದದಿಂದ ಹೇಳಲ್ಪಟ್ಟ ಮುಕ್ತಾತ್ಮ ಸ್ವರೂಪಕ್ಕಿಂತಲೂ ಪರಬ್ರಹ್ಮವು ಭಿನ್ನಪಟ್ಟಿರುವ ವಿಷಯವು "ಕೂಟಸ್ಥೋಕ್ಷರಉಚ್ಯತೇ॥ಉತ್ತಮಃ ಪುರುಷಸ್ತ್ವನ್ಯಃ ಪರಮಾತ್ಮೇತ್ಯುದಾಹೃತಃ,, (೧೫॥೧೬) ಎಂಬದಾಗಿ ಮುಂದೆ ವಿವರಿಸುತ್ತಾರೆಂದರಿಯಬೇಕು. ॥೩॥೪॥೫॥

(ಮ॥ಭಾ॥)ಸರ್ವೇಂದ್ರಿಯನಿಗ್ರಹವು, ಸರ್ವತ್ರಸಮಬುದ್ಧಿಯು, ಸರ್ವಭೂತಹಿತ ಪರತೆಯು, ಸದಾಚಾರವು, ದೃಢವಾದ ವಿಷ್ಣುಭಕ್ತಿಯು, ಎಂಬಿದೇ ಮೊದಲಾದ ಸಾಧನಗಳಿಲ್ಲದೇ ಶ್ರೀದೇವಿಯು ಪ್ರಸನ್ನಳಾಗುವುದಿಲ್ಲವಾದುದರಿಂದ ಶ್ರೀದೇವಿಯ ಉಪಾಸನವು ಅತಿಪ್ರಯಾಸಸಾಧ್ಯವೆಂದರಿಯಬೇಕು. ... ॥೫॥

(ಗೀ॥ ವಿ॥) ವಿಷ್ಣುಸಂಬಂಧವಿಲ್ಲದೆ ಶ್ರೀದೇವಿಯನ್ನು ಮಾತ್ರವೆ ಪ್ರತ್ಯೇಕವಾಗಿ ಉಪಾಸನಮಂ ಮಾಡಿಅದರಿಂದ ವಿಷ್ಣುವಂ ಹೊಂದುವುದು ಅತ್ಯಂತ ಪ್ರಯಾಸ ಮಾಗಿರುವುದು. ಏತಕ್ಕೆಂದರೇ; ಇಂದ್ರಿಯ ನಿಗ್ರಹವೇ ಮೊದಲಾದವುಗಳು ಅಪೇಕ್ಷಿತವಾಗಿರುವುದರಿಂದ ಅತಿಪ್ರಯಾಸವೆಂದರಿಯಬೇಕು. ... ॥೫॥

ಶ್ಲೋ॥ಯೇತು ಸರ್ವಾಣಿ ಕರ್ಮಾಣಿ ಮಯಿಸನ್ನ್ಯಸ್ಯ ಮ
ತ್ಪರಾಃ।ಅನನ್ಯೇನೈವ ಯೋಗೇನ ಮಾಂಧ್ಯಾಯಂತಉ
ಪಾಸತೇ।೬।ತೇಷಾಮಹಂಸಮುದ್ಧರ್ತಾ ಮೃತ್ಯುಸಂಸಾ
ರಸಾಗರಾತ್ । ಭವಾಮಿನಚಿರಾತ್ಪಾರ್ಥಮಯ್ಯಾವೇಶಿತ
ಚೇತಸಾಂ ॥ ... ... ॥೭॥

ಪ॥ ಯೇ-ತು-ಸರ್ವಾಣಿ-ಕರ್ಮಾಣಿ- ಮಯಿ-ಸನ್ನ್ಯಸ್ಯ-ಮತ್ಪರಾಃ ।ಅನನ್ಯೇನ-ಏವ-ಯೋಗೇನ-ಮಾಂ-ಧ್ಯಾಯಂತಃ - ಉಪಾಸತೇ । ತೇಷಾಂ-ಅಹಂ-ಸಮುದ್ಧರ್ತಾ-ಮೃ

ತ್ಯುಸಂಸಾರ ಸಾಗರಾತ್ |ಭವಾಮಿ-ನಚಿರಾತ್-ಪಾರ್ಥ-ಮಯಿ-ಆವೇಶಿತಚೇತಸಾಂ||

ಅ|| ಯೇತು-ಯಾರಾದರೆ, ಸರ್ವಾಣಿ ಕರ್ಮಾಣಿ-ಸಕಲ ಕರ್ಮಗಳನ್ನು, ಮಯಿ-ನನ್ನಲ್ಲಿ, ಸನ್ನಸ್ಯ-ಸಮರ್ಪಣೆಮಾಡಿ, ಮತ್ಪರಾಃ-(ಶಂ) ನಾನೇ ಉತ್ತಮವಾದ ಗತಿ ಎಂದು ನೆನೆಸಿರುವಂತವರಾಗಿ, (ರಾ) ಮುಖ್ಯವಾಗಿ ಹೊಂದಲ್ಪಡತಕ್ಕವನು ನಾನೇ ಎಂದು ತಿಳಿದಿರುವಂತವರಾಗಿ, ಅನನ್ಯೇನೈವಯೋಗೇನ-(ಶಂ) ವಿಶ್ವರೂಪಿಯಾದ ನನ್ನನ್ನು ವಿನಾಬೇರೊಬ್ಬರನ್ನು ಆಶ್ರಯಿಸದೇ ಇರುವ ಸಮಾಧಿಯಿಂದ, (ರಾ)ಪ್ರಯೋಜನಾಂತರ ಶೂನ್ಯವಾಗಿರುವ ಭಕ್ತಿಯೋಗದಿಂದ,ಮಾಂಧ್ಯಾಯಂತಃ-ನನ್ನನ್ನು ಧ್ಯಾನಿಸುವಂತರಾಗಿ, ಉಪಾಸತೇ-ಉಪಾಸನೆ ಮಾಡುತ್ತಾರೆಯೊ, ಮಯಿ-ನನ್ನಲ್ಲಿ, ಆವೇಶಿತ ಚೇತಸಾಂತೇಷಾಂ-ಇಡಲ್ಪಟ್ಟ ಮನಸ್ಸುಳ್ಳ ಅವರುಗಳ, (ವಿಷಯದಲ್ಲಿ) (ಮ) ಏಕಾಂತ ಭಕ್ತಿಯುಳ್ಳ ಅವರುಗಳ, (ವಿಷಯದಲ್ಲಿ) ಹೇ ಪಾರ್ಥ-ಎಲೈ ಅರ್ಜುನನೇ ? ಮೃತ್ಯು ಸಂಸಾರಸಾಗರಾತ್- (ಶಂ|| ಶ್ರೀ) ಮೃತ್ಯುವಿನೊಡನೆ ಕೂಡಿರುವ ಸಂಸಾರವೆಂಬ ಸಮುದ್ರದ ದಶೆಯಿಂದ, (ರಾ) ನನ್ನನ್ನು ಹೊಂದುವುದಕ್ಕೆ ವಿರೋಧಿಯಾದ ಸಂಸಾರವೆಂಬ ಸಮುದ್ರದ ದಶೆಯಿಂದ, ಅಹಂ-ನಾನು, ಸಮುದ್ಧರ್ತಾ- ಉದ್ಧರಿಸುವಂತವನಾಗಿ, ಭವಾಮಿ-ಆಗುವೆನು. ||೬||೭||

(ರಾ|| ಭಾ||) ಪರಮಾತ್ಮೋಪಾಸಕರು ಮಾತ್ರವೇ ಯುಕ್ತತಮರೆನ್ನುವ ವಿಷಯವನ್ನು ವಿಶದವಾಗಿ ಹೇಳುತ್ತಾರೆ. ಯಾರಾದರೆ ದೇಹಧಾರಣಾರ್ಥವಾಗಿ ಮಾಡಬೇಕಾದ ಕೆಲವುಲೌಕಿಕಕರ್ಮಗಳನ್ನೂ, ಯಾಗದಾನತಪೋಹೋಮಾದಿ ವೈದಿಕ ಕರ್ಮಗಳನ್ನೂ, ಸಂಧ್ಯಾವಂದನಾದಿ ಕಾರಣಗಳೊಡನೆಯೂ ಸ್ವರ್ಗಾದಿ ಫಲೋದ್ದೇಶ್ಯಗಳೊಡನೆಯೂ ನನ್ನಲ್ಲರ್ಪಿಸಿ ನನ್ನನ್ನೇ ಮಹಾಫಲವನ್ನಾಗಿತಿಳಿದುಬೇರೊಂದನ್ನೂ ಅಪೇಕ್ಷಿಸದೆ ನನ್ನನ್ನೇ ಧ್ಯಾನಿಸುತಾ ಉಪಾಸನೆ ಮಾಡುತ್ತಾರೆಯೊ (ಎಂದರೆ ಧ್ಯಾನ-ಅರ್ಚನ-ಪ್ರಣಾಮ-ಸ್ತುತಿ-ಕೀರ್ತನವೇ ಮೊದಲಾದವುಗಳನ್ನು ಸ್ವಯಂಭೋಗ್ಯವಾಗಿಯೂ ಪರಮ ಪ್ರಾಪ್ಯಕ್ಕೆ ಸಮವಾಗಿಯೂ ಮಾಡುತಾಬರುತ್ತಾರೆಯೊ)ಅಂತವರನ್ನು, ನನ್ನ ಪ್ರಾಪ್ತಿಗೆ

ವಿರೋಧಿಯಸಾಗಿರುವುದರಿಂದ ಮೃತ್ಯುಭೂತವಾದ ಸಂಸಾರ ಸಮುದ್ರ ದಿಂದ ಬಹುಶೀಘ್ರಕಾಲದಲ್ಲಿ ಬಿಡಿಸುವೆವು. ||೬||೭||

(ಗೀ|| ವಿ||) ಅವ್ಯಕ್ತ ಶಬ್ದವಾಚ್ಯಳಾದ ಲಕ್ಷ್ಮೀದೇವಿಯು ಉ ಪಾಸನವಂತೇ ಭಗವದುಪಾಸನವು ಪ್ರಯಾಸ ಸಾಧ್ಯವಲ್ಲವೆಂಬುವುದಂ ತೋರಿಸುತ್ತಾರೆಂದರಿಯಬೇಕು. ಯೇತು-ಯಾರಾದರೆ, ಸರ್ವಾಣಿ ಕರ್ಮಾಣಿ ಸಕಲ ಕರ್ಮಗಳನ್ನೂ, ಮಯಿ ಸನ್ನ್ಯಸ್ಯ- (ಸರ್ವಸ್ವತಂತ್ರ ನಾದ ಹರಿಯೇ ನನ್ನಲ್ಲಿನ್ನುಕೊಂಡು ತನ್ನ ಪೂಜಾದಿಕವಾದ ಕರ್ಮಗ ಳನ್ನು ತನ್ನ ಅಧೀನನಾದ ಕರ್ತೃ ಆಗಿರುವ ನನ್ನಿಂದ ಮಾಡಿಸುತ್ತಾನೆ ಎಂಬ ಅನುಸಂಧಾನದೊಡನೆ) ನನ್ನಲ್ಲರ್ಪಿಸಿ, ಮತ್ಪರಾಃ- ನಾನೇಸ ರ್ವೋತ್ತಮನೆಂದರಿತವರಾಗಿ, ಅನನ್ಯೇನೈವ ಯೋಗೇನ-ಭಗವದಧೀನ ವೆಂತಲೂ ಭಗವತ್ಪರಿವಾರ ವೆಂತಲೂ ತಿಳಿದು ಲಕ್ಷ್ಮೀ ಬ್ರಹ್ಮಾದಿ ಗಳ ಧ್ಯಾನ ಯೋಗದಿಂದ, ಮಾಂಧ್ಯಾಯಂತಃ-ನನ್ನ ವಿಷಯವಾದ ಧ್ಯಾನವಂ ಮಾಡುವಂತವರಾಗಿಯೇ, ಉಪಾಸತೇ-ಉಪಾಸನ ಮಾ ತ್ತಾರೆಯೊ, ಹೇ ಪಾರ್ಥ-ಎಲೈ ಅರ್ಜುನನೆ,ಮಯಿ-ನನ್ನಲ್ಲಿ, ಆವೇಶಿ ಚೇತಸಾಂ-ಇಡಲ್ಪಟ್ಟ ಮನಸ್ಸುಳ್ಳ,ತೇಷಾಂ- ಲಕ್ಷ್ಮೀಪತಿತ್ವಾದಿ ರ ಪದಿಂದ ನನ್ನ ಪೂಜೆಯನ್ನು ಮಾಡುವ ಅನನ್ಯ ಭಕ್ತರಿಗೆ, ಮೃತ್ಯು ಸಂಸಾರ ಸಾಗರಾತ್- ಮೃತ್ಯುವಿನೊಡನೆ ಕೂಡಿರುವ ಸಂಸಾರವೆಂಬ ಸಮುದ್ರ ದೆಳಯಿಂದ ನಚಿರಾತ್- ಶೀಘ್ರದಿಂದಲೇ, ಅಹಂ- ನಾನು ಸಮುದ್ಧರ್ತಾಭವಾಮಿ- ಉದ್ಧರಿಸುವಂತವ ನಾಗುವೆನು, ಲಕ್ಷ್ಮೀದೇ ವಿಯನ್ನು ಉಪಾಸನ ಮಾಡುವಂತವನು ಮೊದಲೇ ಸ್ವೋತ್ತಮತ್ವ ದಿಂದ ಪರಮಾತ್ಮೋಪಾಸನೆಯನ್ನು ಮಾಡಬೇಕು. ಲಕ್ಷ್ಮೀಪತಿತ್ವ ರೂಪ ದಿಂದ ಪರಮಾತ್ಮೋಪಾಸನವಂ ಮಾಡುವಂ ತವನು (ಎಂದರೆ ಶ್ರೀದೇವಿಯೊಡನೆ ಭಗವದುಪಾಸನವಂ ಮಾ ಡಿದರೆ ಇಬ್ಬರ ಪರಮ ಪ್ರಸಾದದಿಂದ) ಶೀಘ್ರದಲ್ಲಿ ಮೋಕ್ಷವಂ ಹೊಂ ದುತ್ತಾನೆ. ಪ್ರತ್ಯೇಕವಾಗಿ ಅವ್ಯಕ್ತೋಪಾಸನವಂ ಮಾಡುವ ಪಕ್ಷದಲ್ಲಿ ಯೊ ಎಂದರೆ ಮೊದಲು ಸ್ವಲ್ಪಕಾಲಪರ್ಯಂತವೂ ಭಗವದುಪಾಸನವಂ ಮಾಡಿ ಅನಂತರದಲ್ಲಿ ಪ್ರತ್ಯೇಕವಾಗಿ ಲಕ್ಷ್ಮೀದೇವಿಯನ್ನುಪಾಸಿಸಿ

ಪುನಶ್ಚ ಶ್ರೀದೇವಿಯೊಡನೆ ಭಗವದುಪಾಸನವು ನಿರಂತರವಾಗಿ ಮಾಡಬೇಕಾಗಿರುವುದು. ಅನಂತರ ಮೋಕ್ಷಪ್ರಾಪ್ತಿಯೆಂಬದಾಗಿ ಮೋಕ್ಷಪ್ರಾಪ್ತಿ ವಿಷಯದಲ್ಲಿ ವಿಲಂಬ ಮುಂಟಾಗುವುದೆಂತಲೂ, ಭಗವದುಪಾಸನವು ಶೀಘ್ರದಲ್ಲಿಯೇ ಮೋಕ್ಷಫಲಪ್ರಾಪಕವಾಗಿರುವುದರಿಂದ ಅಧಿಕತಮವೆಂತಲೂ ಹೇಳಿದಂತೇ ಆಯಿತು. ಈ ಅರ್ಥವು "ವಿಷ್ಣುನಾ ಸಹಿತಾ ಧ್ಯಾತಾ ದೇವೀ ತುಷ್ಟಿಂಪರಾಂವ್ರಜೇತ್,, ಇತ್ಯಾದಿಗಳಿಂದಲೂ ಸಿದ್ಧವಾಗಿರುವುದು. ಮತ್ತು ಅವ್ಯಕ್ತೋಪಾಸನ ಪರವಾದ ೩॥೪॥ನೇ ಶ್ಲೋಕಗಳಲ್ಲಿರುವ ಪರ್ಯುಪಾಸತೆ, ಎಂಬ ಪದದಿಂದಲೂ, ಪರಮಾತ್ಮೋಪಾಸನ ಪರವಾದ ಈ ಶ್ಲೋಕದಲ್ಲಿರುವ ಉಪಾಸತೆ, ಎಂಬಪದದಿಂದಲೂ, ಅವ್ಯಕ್ತೋಪಾಸನವು ಕಷ್ಟಸಾಧ್ಯವೆಂತಲೂ ಪರಮಾತ್ಮನ ಉಪಾಸನವು ಅಷ್ಟುಪ್ರಯಾಸ ಸಾಧ್ಯವಲ್ಲವೆಂತಲೂ ಬೋಧಿತವಾಯಿತೆಂದರಿಯಬೇಕು. ... ॥೭॥೩॥

ಶ್ಲೋ ॥ ಮಯ್ಯೇವ ಮನಆಧತ್ಸ್ವ ಮಯಿಬುದ್ಧಿಂ ನಿ
ವೇಶಯ । ನಿವಸಿಷ್ಯಸಿ ಮಯ್ಯೇವ ಅತಊರ್ಧ್ವಂನ
ಸಂಶಯಃ ॥ ... ... ॥V॥

ಪ॥ ಮಯಿ- ಏವ- ಮನಃ- ಆಧತ್ಸ್ವ- ಮಯಿ- ಬುದ್ಧಿಂ- ನಿವೇಶಯ । ನಿವಸಿಷ್ಯಸಿ- ಮಯಿ- ಏವ- ಅತಃ-ಊರ್ಧ್ವಂ- ನ- ಸಂಶಯಃ ॥

ಅ॥ರಾ॥ಭಾ॥ ಮಯ್ಯೇವ ಮನ ಆಧತ್ಸ್ವ- (ಅತಿಶಯಿತ ಪುರುಷಾರ್ಥರೂಪವಾಗಿರುವುದರಿಂದಲೂ ಸುಲಭವಾಗಿರುವುದರಿಂದಲೂ ಶೀಘ್ರದಿಂದಲೇ ಹೊಂದಲ್ಪಡತಕ್ಕದ್ದಾಗಿರುವುದರಿಂದಲೂ ) ನನ್ನಲ್ಲಿಯೆ ಮನಸ್ಸನ್ನು ನಿಲ್ಲಿಸುವಂತವನಾಗು. ಮಯಿ ಬುದ್ಧಿಂ ನಿವೇಶಯ- ನಾನೇ ಪರನು ಪ್ರಾಪ್ಯನೇಂಬುವ ಅಧ್ಯವಸಾಯವಂಮಾಡು. ಅತ ಊರ್ಧ್ವಮೇವ- ನಾನೇ ಪರಮಪ್ರಾಪ್ಯ ನೆನ್ನುವ ಅಧ್ಯಾವಸಾಯದೊಡನೇ ನನ್ನಲ್ಲಿಯೇ ಮನಸ್ಸನ್ನಿಟ್ಟಮೇಲೆ ಮಯಿನಿವಸಿಷ್ಯಸಿ - ನನ್ನಲ್ಲಿ ವಾಸಮಾಡುತ್ತೀ ಎಂದಭಿಪ್ರಾಯವು. ... ॥V॥

(ಶಂ॥ಭಾ॥) ಪರಮಾತ್ಮೋಪಾಸನವು ಯಾವಕಾರಣದಿಂದ ಶ್ರೇಷ್ಠವಾದ ಮೋಕ್ಷಫಲಪ್ರಾಪಕವಾಗಿರುವುದು ಆಕಾರಣದಿಂದ ಮೋ

ಕ್ಷರನಿಷ್ಠೆಯುಳ್ಳವರು ಭಗವನ್ನಿಷ್ಠೆಯಲ್ಲಿ ಪ್ರಯತ್ನಿಸಬೇಕೆಂದುಪದೇಶಿಸುತ್ತಾನೆಂದರಿಯಬೇಕು. ಎಲೈ ಅರ್ಜುನನೇ! ನೀನು ಸಂಕಲ್ಪವಿಕಲ್ಪಾತ್ಮಕ ವಾದ ಮನಸ್ಸನ್ನೂ ನಿಶ್ಚಯಾತ್ಮಕವಾದ ಬುದ್ಧಿಯನ್ನೂ (ಇತರವಿಷಯಗಳಲ್ಲಿಪ್ರವರ್ತಿಸದಂತೆಮಾಡಿ, ವಿಶ್ವರೂಪನೂ ಸರ್ವೇಶ್ವರನೂ ಆದ ನನ್ನಲ್ಲಿಯೇ ಇರುವಂತವನಾಗು. ಅದರಿಂದೇನಾಗುವುದೆಂದರೆ ನೀನು ಈಶರೀರವಂ ಬಿಟ್ಟಮೇಲೆ ನನ್ನಲ್ಲಿಯೆ ಇರುವಂತವನಾಗುತ್ತೀ. ಎಂದರೆ ಬ್ರಹ್ಮಸ್ವರೂಪನಾಗುವೀಎಂದರ್ಥವು. ಈವಿಷಯದಲ್ಲಿ ಸಂಶಯಪಡಬೇಡ. ॥೮॥

(ಗೀ॥ವಿ॥) ಮಯಿ ಬುದ್ಧಿಂನಿವೇಶಯ - ನನ್ನ ವಿಷಯವಾದ ಜ್ಞಾನಸಂಪಾದನೆಯಂ ಮಾಡುವಂತವನಾಗು. ಅತ ಊರ್ಧ್ವಂ - (ಶಂ॥ ಶ್ರೀ॥) ಈ ಶರೀರವು ಹೋದಮೇಲೆ, (ರಾ॥ ಶ್ರೀ॥ ವಿ॥) ಅದಕ್ಕೆ ಅನಂತರದಲ್ಲಿ, ಮಯ್ಯೇವನಿವಸಿಷ್ಯಸಿ- (ಶಂ॥ಶ್ರೀ) ನನ್ನ ಸ್ವರೂಪನಾಗುತ್ತೀ, (ಗೀ॥ ವಿ॥) ನಿರ್ದುಃಖನಾಗಿಯೂ ಆನಂದಾನುಭವರೂಪನಾಗಿಯೂ ಇರುವನನ್ನ ರೂಪವನ್ನು ಹೊಂದುತ್ತೀ ಎಂದರ್ಥವು, ಎಂಬೀಪ್ರಕಾರದಿಂದ ಪದಾರ್ಥ ಭೇದಗಳನ್ನರಿಯಬೇಕು. ॥೮॥

ಶ್ಲೋ ॥ ಅಥಚಿತ್ತಂಸಮಾಧಾತುಂನಶಕ್ನೋಷಿಮಯಿ
ಸ್ಥಿರಂ । ಅಭ್ಯಾಸಯೋಗೇನ ತತೋ ಮಾಮಿಚ್ಛಾಪ್ತುಂ
ಧನಂಜಯ ॥ ... ... ॥೯॥

ಪ॥ ಅಥ-ಚಿತ್ತಂ-ಸಮಾಧಾತುಂ-ನ-ಶಕ್ನೋಷಿ-ಮಯಿ-ಸ್ಥಿರಂ। ಅಭ್ಯಾಸಯೋಗೇನ-ತತಃ-ಮಾಂ-ಇಚ್ಛ-ಆಪ್ತುಂ-ಧನಂಜಯ॥

ಅ॥ ಹೇ ಧನಂಜಯ-ಎಲೈ ಅರ್ಜುನನೆ, ಚಿತ್ತಂ-ಮನಸ್ಸನ್ನು, ಮಯಿ-ನನ್ನಲ್ಲಿ, ಸ್ಥಿರಂ-ಸ್ಥಿರವಾಗಿ, ಸಮಾಧಾತುಂ-ನಿಲ್ಲಿಸುವದಕ್ಕಾಗಿ, ನಶಕ್ನೋಷಿ-ಸಮರ್ಥನಾಗದಿದ್ದರೆ, ಅಥ (ತಾ) ಹಾಗಿದ್ದರೆ, ತತಃ-ಅನಂತರದಲ್ಲಿ, ಅಭ್ಯಾಸ ಯೋಗೇನ-ಅಭ್ಯಾಸವೆಂಬ ಯೋಗದಿಂದ, ಮಾಂ-ನನ್ನನ್ನು, ಆಪ್ತುಂ-ಹೊಂದುವದಕ್ಕೆ, ಇಚ್ಛ-ಇಚ್ಛಿಸುವಂತವನಾಗು. ॥೯॥

(ಶ್ರೀ) ಚಂಚಲವಾದ ಮನಸ್ಸನ್ನು ಎಳೆದು ಭಗವಂತನಲ್ಲಿ ನಿಲ್ಲಿಸುವದೆಂಬ ಅಭ್ಯಾಸಯೋಗದಿಂದ ನನ್ನನ್ನು ಹೊಂದುವದಕ್ಕೆ ಇಚ್ಛಿಸು-ಎಂದಭಿಪ್ರಾಯವು. ... ... ॥೯॥

(ರಾ॥ ಭಾ॥) ಎಲೈ ಅರ್ಜುನನೇ! ಶೀಘ್ರವಾಗಿಯೇ ಮೊದಲು ನನ್ನಲ್ಲಿ ನಿಶ್ಚಲವಾಗಿ ಮನಸ್ಸನ್ನಿಡುವುದಕ್ಕೆ ಸಮರ್ಥನಾಗದೇ ಹೋದ ಯೆ ಆದರೆ ಆವಾಗ ಸ್ವಭಾವಿಕಾನವಧಿಕಾತಿಶಯ ಸೌಂದರ್ಯ ಸೌ ಶೀಲ್ಯ ಸರ್ವಜ್ಞತ್ವಾದಿಕಲ್ಯಾಣ ಗುಣನಿಧಿಯಾಗಿಯೂ, ನಿಖಿಲ ಹೇ ಯ ಪ್ರತ್ಯನೀಕರಾಗಿಯೂ ಇರುವ ನಮ್ಮಲ್ಲಿ ಅಳವಿಲ್ಲದ ಪ್ರೇಮಗರ್ಭ ವಾಗಿರುವ ಸ್ಮರಣರೂಪವಾದ ಅಭ್ಯಾಸಯೋಗದಿಂದ ಸ್ಥಿರವಾದ ಚಿ ತ್ತ ಸಮಾಧಾನವಂ ಹೊಂದಿ ನಮ್ಮನ್ನು ಹೊಂದುವುದಕ್ಕೆ ಇಚ್ಛಿಸೆಂ ದುತಾತ್ಪರ್ಯವು. ॥೯॥

(ತಾ॥ ಚಂ॥) ಶಬ್ದಾದಿ ವಿಷಯ ವಾಸನೆಗಳಿಂದ ಯೆಳೆಯಲ್ಪ ಟ್ಟ ಮನಸ್ಸುಳ್ಳವನಿಗೆ ಯಾವಾಗಲೂ ಅತ್ಯಂತವಾಗಿಕಾಣಲ್ಪಡದ ನಿ ಮ್ಮಲ್ಲಿ ಹೇಗೆತಾನೆ ಮನಸ್ಸನ್ನು ಸ್ಥಿರವಾಗಿಡಬಹುದೆಂಬ ಅರ್ಜು ನನ ಸಂದೇಹ ಪರಿಹಾರಾರ್ಥವಾಗಿ ಈ ಶ್ಲೋಕವು ಪ್ರವೃತ್ತವಾಯಿ ತೆಂದರಿಯಬೇಕು. ॥೯॥

ಶ್ಲೋ॥ ಅಭ್ಯಾಸೇಪ್ಯಸಮರ್ಥೋಸಿ ಮತ್ಕರ್ಮ ಪರಮೋ
ಭವ । ಮದರ್ಥಮಪಿ ಕರ್ಮಾಣಿ ಕುರ್ವನ್ಸಿದ್ಧಿಮವಾ
ಪ್ಸ್ಯಸಿ ॥ ... ... ... ॥೧೦॥

ಪ॥ ಅಭ್ಯಾಸೇ- ಅಪಿ- ಅಸಮರ್ಥಃ- ಅಸಿ- ಮತ್ಕರ್ಮಪರಮಃ- ಭವ । ಮದ ರ್ಥಂ- ಅಪಿ- ಕರ್ಮಾಣಿ- ಕುರ್ವನ್- ಸಿದ್ಧಿಂ- ಅವಾಪ್ಸ್ಯಸಿ ॥

ಅ॥ ಅಭ್ಯಾಸೇಪಿ-ಅಭ್ಯಾಸದಲ್ಲಿಯೂ, ಅಸಮರ್ಥೋಸಿ- ಅಸಮ ರ್ಥನಾಗಿದ್ದರೆ, ಮತ್ಕರ್ಮಪರಮಃ- ನನ್ನ ಕೈಂಕರ್ಯಗಳಲ್ಲಿಯೇ ಆಸಕ್ತ ನಾಗಿ, ಭವ-ಆಗು. ಮದರ್ಥಂ- ನನಗಾಗಿ, ಕರ್ಮಾಣಿ - ಕರ್ಮಗಳನ್ನು, ಕುರ್ವನ್ನಪಿ-ಮಾಡುತಾಬಂದರೂ, ಸಿದ್ಧಿಂ- ಸಿದ್ಧಿಯನ್ನು, ಅವಾಪ್ಸ್ಯ ಸಿ- ಹೊಂದುತ್ತೀ. ॥೧೦॥

(ಶಂ ॥ ಭಾ ॥) ಅಭ್ಯಾಸಯೋಗವನ್ನವಲಂಬಿಸುವುದಕ್ಕೂ ನೀ ನು ಅಸಮರ್ಥನಾಗಿದ್ದರೆ ನನ್ನನ್ನುದ್ದೇಶಿಸಿ ನನ್ನ ಪ್ರೀತಿಗೋಸ್ಕರ ತಪೋ ದಾನವ್ರತಗಳೆಂಬಕರ್ಮಗಳಂಮಾಡುತಲಿರುವಂಥವನಾಗು. ಆರೀತಿಯಾ ಗಿಕರ್ಮಗಳನ್ನು ಮಾಡುತಾಬಂದರೂ ಕ್ರಮವಾಗಿ ಚಿತ್ತಶುದ್ಧಿಯಂ

ಹೊಂದಿ ಅದರಿಂದ ಬ್ರಹ್ಮಜ್ಞಾನವಂ ಸಂಪಾದಿಸಿ ಅದರಿಂದ ಮೋಕ್ಷವೂ, ನಿನಿಗೆ ಲಬ್ಧವಾಗುವುದು. ... ... ॥೧೦

(ರಾ ॥ ಭಾ॥ ) ಚಿರಾಭ್ಯಸ್ತವಾಗಿಯೂ, ಪ್ರತ್ಯಕ್ಷ ಪರಾಗಿಯೂ ಶ್ರೇಷ್ಠರಿಂದ ಹೊಂದಲ್ಪಡತಕ್ಕದ್ದಾಗಿಯೂ, ತನಿಗೆಅತ್ಯಂತಭೋಗ್ಯಭೂತಗಳಾಗಿಯೂ, ಇರುವ ವಿಷಯಗಳಲ್ಲಾ ಸಕ್ತವಾದ ಮನಸ್ಸುಳ್ಳವನಿಗೆ ಆ ಮನಸ್ಸನ್ನು ಆ ವಿಷಯಗಳದೆಶೆಯಿಂದ ಹಿಂದಕ್ಕೆ ನಿವೃತ್ತಿ ಮಾಡಿಸುವುದು ಅಶಕ್ಯವಾಗಿರುವುದು. ಮತ್ತು ತಮ್ಮ ತಮ್ಮ ಗಳ ಕರ್ಮಾನುಗುಣವಾಗಿಯೇ ವಾಸನೆ ಯುಂಟಾಗಿ ಅದಕ್ಕನುಗುಣವಾಗಿಯೇ ಕರ್ಮವು,ಹೀಗಿರುವಲ್ಲಿ ನಿನ್ನ ವಿಷಯವಾದ ಅಭ್ಯಾಸವು ಅತ್ಯಂತ ಕಷ್ಟಸಾಧ್ಯವಾಗಿರುವುದು. ಆದುದರಿಂದ ಗುಣಗಳುಳ್ಳವನಾಗಿಯೂಪರಿಶುದ್ಧನಾಗಿಯೂ ಇದ್ದರೂ ನಿನ್ನಲ್ಲಿ ಅಭ್ಯಾಸವೆಂಬುವುದು ಅಶಕ್ಯವಾಗಿಯೇ ಇರುವುದರಿಂದ ಪೂರ್ವಶ್ಲೋಕದಲ್ಲಿ ಹೇಳಲ್ಪಟ್ಟ "ಅಭ್ಯಾಸ ಯೋಗೇನ ತತೋಮಾಮಿಚ್ಛಾಪ್ತುಂಧನಂಜಯ,, ಎಂಬೀ ಉಪದೇಶವು ನಿರರ್ಥಕವಲ್ಲವೇ? ಎಂಬಶಂಕಾಸಮಾಧಾನಕ್ಕಾಗಿಪರಿಚಿತವಾಗಿಯೂಸಜಾತೀಯವಾಗಿಯೂ ಇರುವಅಭ್ಯಾಸೋಪಾಯವು ಈಶ್ಲೋಕದಿಂದುಪದೇಶಿಸಲ್ಪಡುವುದೆಂದರಿಯಬೇಕು. ಇಂತಹ ಸ್ಮೃತ್ಯಭ್ಯಾಸವಂ ಮಾಡುವುದರಲ್ಲಿ ಯೂನೀನು ಅಶಕ್ತನಾಗಿದ್ದರೆ ನಮಗೆ ಪ್ರೀತಿ ಹೇತುಗಳಾದ ( ನನಿಗೆ ಒಂದುದೇವರಸ್ಥಾನಕಟ್ಟಿಸುವುದು, ಆರಾಧನಾರ್ಥಮಾದಪುಷ್ಪತುಲಸೀಮೊದಲಾದವುಗಳಿಂದ ಕೂಡಿದ ನಂದನವನನಿರ್ಮಾಣವಂಮಾಡಿಸುವುದು,ಭಗವತ್ಸನ್ನಿಧಿಯಲ್ಲಿದೀಪವನ್ನು ಹತ್ತಿಸುವುದು, ಭಗವದಾಲಯವನ್ನು ಸಾರಿಸುವುದು,ದಿವ್ಯತೀರ್ಥಮಂತ್ರದುಪ್ರೋಕ್ಷಿಸುವುದು, ಪುಷ್ಪಗಳನ್ನು ತರುವುದು, ಭಗವದಾರಾಧನದಲ್ಲಿ ಪ್ರವರ್ತಿಸುವುದು, ಭಗವನ್ನಾಮ ಸಂಕೀರ್ತನವಂ ಮಾಡುವುದು,ಭಗವತ್ಪ್ರದಕ್ಷಿಣಸ್ತುತಿನಮಸ್ಕಾರಾದಿಗಳಂಮಾಡುವುದು,ಯೆಂಬೀಮೊದಲಾದ)ಭಗವತ್ಕೈಂಕರ್ಯಗಳನ್ನೇಅತ್ಯಂತಪ್ರೀತಿಯಿಂದ (ಅಂತಹಕೈಂಕರ್ಯಗಳಂಮಾಡುವುದೇಪರಮ ಪ್ರಯೋಜನವೆಂದು ನೆನಸಿ ) ಮಾಡುತಲಿರುವಂತವನಾಗು.ನಮಗೆ ಪ್ರಿಯಗಳಾದ ಹಿಂದೇ ವಿವರಿಸಿರುವ ಕಾರ್ಯಗಳನ್ನು ಮಾಡಿಕೊಂ

ಮ ಬಂದರೂ ಹಿಂದೇ ಹೇಳಿರುವ ಅಭ್ಯಾಸ ಯೋಗದಿಂದ ನನ್ನಲ್ಲಿ ಸ್ಥಿರವಾದ ಮನಸ್ಸ್ಥಿತಿಯನ್ನು ಹೊಂದಿ ನನ್ನನ್ನು ಹೊಂದುವುದೆಂಬ ಸಿದ್ಧಿಯನ್ನು ಹೊಂದುತ್ತೀ ಎಂದು ಭಾವವು. ‖೧೦‖

(ಶ್ರೀ) ಮತ್ಕರ್ಮಪರಮಃ-ಏಕಾದಶ್ಯುಪವಾಸವು, ವ್ರತಾನುಷ್ಠಾನವು, ನಾಮ ಸಂಕೀರ್ತನವೇ ಮೊದಲಾದ ಕರ್ಮಗಳು ಶ್ರೇಷ್ಠಗಳೆಂದು ತಿಳಿದು. (ಶಂ) ನನಿಗಾಗಿ ಮಾಡಬೇಕಾದ ಕರ್ಮಗಳನ್ನು ಮುಖ್ಯವಾಗಿ ಅನುಷ್ಠಿಸುವಂತವನಾಗಿ, ಸಿದ್ಧಿಂ-(ಶಂ)ಅಂತಃಕರಣ ಶುದ್ಧಿರೂಪವಾದ ಶುದ್ಧಿಯನ್ನು, ಎಂಬೀ ಪದಗಳಿಗೆ ಮಾತ್ರ ಅರ್ಥಭೇದವಂ ತಿಳಿಯಬೇಕು. ‖೧೦‖

ಶ್ಲೋ॥ ಅಥೈತದಪ್ಯಶಕ್ತೋಽಸಿ ಕರ್ತುಂಮದ್ಯೋಗಮಾ
ಶ್ರಿತಃ॥ಸರ್ವಕರ್ಮಫಲತ್ಯಾಗಂತತಃಕುರುಯತಾತ್ಮವಾನ್॥೧೧॥

ಪ॥ ಅಥ-ಏತತ್-ಅಪಿ-ಅಶಕ್ತಃ-ಅಸಿ-ಕರ್ತುಂ-ಮದ್ಯೋಗಂ-ಆಶ್ರಿತಃ। ಸರ್ವಕರ್ಮಫಲತ್ಯಾಗಂ-ತತಃ-ಕುರು-ಯತಾತ್ಮವಾನ್ ‖

ಅ॥ ಅಥ-ಅನಂತರದಲ್ಲಿ, ಏತದಪಿ-ಇದನ್ನೂ, ಕರ್ತುಂ-ಅನುಷ್ಠಿಸುವುದಕ್ಕೆ, ಅಶಕ್ತೋಽಸಿ-ಅಶಕ್ತನಾಗಿದ್ದರೆ, ತತಃ-ಅನಂತರದಲ್ಲಿ, ಮದ್ಯೋಗಮಾಶ್ರಿತಃ - ನನ್ನ ಯೋಗವನ್ನು ಆಶ್ರಯಿಸಿದವನಾಗಿ, (ಶಂ॥ ಮಾಡುತಲಿರುವ ಸಕಲ ಕರ್ಮಗಳನ್ನೂ ನನ್ನಲ್ಲಿ ಸಮರ್ಪಣೆಯಂ ಮಾಡುವುದು ‘ ಮದ್ಯೋಗ , ವೆನ್ನಲ್ಪಡುವುದು, ಅದನ್ನಾಶ್ರಯಿಸಿದವನಾಗಿ, ಯತಾತ್ಮವಾನ್-ನಿಶ್ಚಯಾತ್ಮಕವಾದ ಮನಸ್ಸುಳ್ಳವನಾಗಿ, ಸರ್ವಕರ್ಮಫಲತ್ಯಾಗಂ-ಸರ್ವಕರ್ಮಗಳ ಫಲಗಳಂ ಭಗವದರ್ಪಣವಂ ಮಾಡುವುದೆಂಬ ತ್ಯಾಗವನ್ನು, ಕುರು-ಮಾಡು. * ‖೧೧‖

(ಶಂ ‖ ಭಾ ‖ ) ಆ ಪ್ರಕಾರವಾಗಿ ಕರ್ಮಗಳನ್ನು ಅನುಷ್ಠಿಸುವ ಕಾಲದಲ್ಲಿ ಕರ್ತೃತ್ವಾದ್ಯಭಿಮಾನವನ್ನು ನಿನ್ನಲ್ಲಾರೋಪಿಸಿಕೊಳ್ಳದೆ ನೀನು ಮಾಡುವ ಸಮಸ್ತ ಕರ್ಮಗಳ ಫಲಗಳನ್ನು ನನಿಗರ್ಪಿಸಿ ಮನೋನಿಗ್ರಹ ಪೂರ್ವಕವಾಗಿ ಯಥಾ ಶಕ್ತಿ ಕರ್ಮಗಳನ್ನಾಚರಿಸುತ ದೃಷ್ಟಾದೃಷ್ಟ ಫಲಗಳಲ್ಲಿ ನನಿಗೆ ಅಪೇಕ್ಷೆಯಿಲ್ಲವು, ನನಿಗೆ ಸರ್ವೇಶ್ವರನೇ ಗತಿ ಎಂಬದಾಗಿ ನನ್ನಲ್ಲಿಯೇ ಭಾರವನ್ನಿಟ್ಟರೆ ನನ್ನ ಅನುಗ್ರ

ಹದಿಂದ ಕೃತಾರ್ಥನಾಗಿ ಸಂಸಾರ ತರಣವಂ ಮಾಡುವೀ ಯೆಂದಭಿ ಪ್ರಾಯವು. ||೧೧||

( ರಾ|| ಭಾ|| ) ಅಥೈತದಪ್ಯಶಕ್ತೋಽಸಿ ಕರ್ತುಂ ಮದ್ಯೋಗಮಾಶ್ರಿತಃ - ನನ್ನ ಗುಣಾನುಸಂಧಾನ ಪರನಾಗಿ, ಇನ್ನು ಮುಂದೇ ಪ್ರತಿಪಾದಿತವಾದಮದೇಕ ಪ್ರಿಯತ್ವಾಕಾರವುಳ್ಳ ಭಕ್ತಿಯೋಗವನ್ನು ಪ್ರಾಪ್ತಿಸಾಧನವನ್ನಾಗಿ ಆಶ್ರಯಿಸಿ ಅಂತಹ ಭಕ್ತಿಯೋಗಕ್ಕೆ ಪೋಷಕವೆಂಬದಾಗಿ ಹೇಳಲ್ಪಡಬಹುದಾದ ಈ ಕರ್ಮಗಳನ್ನು ಕೂಡ ಅನುಷ್ಠಿಸುವುದಕ್ಕೆ ಅಶಕ್ತನಾಗಿದ್ದರೆ, ತತಃ-ಆವಾಗ, ಯತಾತ್ಮವಾನ್- ಸ್ವಾಧೀನವಾದ ಮನಸುಳ್ಳವನಾಗಿ, ಸರ್ವಕರ್ಮಫಲತ್ಯಾಗಂಕುರು- ಜೀವಾತ್ಮಸ್ವಭಾವಾನುಸಂಧಾನ ರೂಪವಾಗಿಯೂ, ಪರಮ ಭಕ್ತಿಯನ್ನುಂಟುಮಾಡತಕ್ಕದ್ದಾಗಿಯೂ ಮೊದಲನೇ ಷಟ್ಕದಲ್ಲಿ ಹೇಳಲ್ಪಟ್ಟದ್ದಾಗಿಯೂ ಇರುವ ಅಕ್ಷರ ಯೋಗವನ್ನು ಅವಲಂಬಿಸಿ ಅದಕ್ಕೆ ಉಪಾಯವಾಗಿ ಅನುಷ್ಠಿಸುವ ಸರ್ವಕರ್ಮಗಳಫಲಗಳನ್ನು ನನ್ನಲ್ಲಿ ಸಮರ್ಪಣೆಮಾಡು. ಆ ಪ್ರಕಾರವಾಗಿ ಫಲಾಪೇಕ್ಷೆಯಂಬಿಟ್ಟು ನನ್ನ ಆರಾಧನ ರೂಪವಾಗಿ ಅನುಷ್ಠಿಸಲ್ಪಡುವ ಕರ್ಮದಿಂದ ಸಿದ್ಧಿಸುವ ಆತ್ಮಧ್ಯಾನದಿಂದ ಅವಿದ್ಯಾದಿಕವಾದ ಸಮಸ್ತ ಮರೆಗಳು ನಿವೃತ್ತವಾಗಿ ನನಗೆ ಶೇಷಭೂತನಾಗಿರುವಿಕೆಯೆ ಸ್ವರೂಪವಾಗಿ ವುಳ್ಳ ಜೀವಾತ್ಮನ ಸಾಕ್ಷಾತ್ಕಾರಮುಂಟಾದರೆ ನನ್ನಲ್ಲಿ ಪರಭಕ್ತಿಯು ತಾನಾಗಿಯೇ ಉಂಟಾಗುವುದು. ಇಲ್ಲಿ ಕರ್ಮಯೋಗಕ್ಕೆ ಭಕ್ತಿಯೋಗಸಾಧನತ್ವವನ್ನು ಮುಂದೇ ಅಷ್ಟಾದಶಾ (೧೮ನೇ) ಧ್ಯಾಯದಲ್ಲಿ "ಸ್ವಕರ್ಮಣಾತಮಭ್ಯರ್ಚ್ಯ ಸಿದ್ಧಿಂ ವಿಂದತಿಮಾನವಃ ,, ( ೧೮||೪೬) ಎಂಬುವುದಂ ಮೊದಲು ಮಾಡಿಕೊಂಡು " ವಿಮುಚ್ಯನಿರ್ಮಮಶ್ಶಾಂತೋ ಬ್ರಹ್ಮಭೂಯಾಯಕಲ್ಪತೇ । ಬ್ರಹ್ಮಭೂತಃಪ್ರಸನ್ನಾತ್ಮಾ ನಶೋಚತಿನಕಾಂಕ್ಷತಿ || ಸಮಸ್ಸರ್ವೇಷುಭೂತೇಷು ಮದ್ಭಕ್ತಿಂಲಭತೇಪರಾಂ ,, (೧೮||೫೪)ಎಂಬಿದುವರೆಗೂ ಉಪದೇಶಿಸುತ್ತಾನೆಂದರಿಯಬೇಕು. (ತಾ|| ಚಂ||) ಇದರಿಂದ ಈ ಅಧ್ಯಾಯಾರಂಭದಲ್ಲಿ " ಯೇಚಾಪ್ಯಕ್ಷರಮವ್ಯಕ್ತಂ ,, ಎನ್ನಲ್ಪಡುವ ಅಕ್ಷರಯೋಗವು ಅಕ್ಷರಶಬ್ದ ವಾಚ್ಯನಾದ ಆತ್ಮನ ಸಾ

ಕ್ಷಾತ್ಕಾರವನ್ನುಂಟುಮಾಡಿದ ನಂತರದಲ್ಲಿ ಪರಭಕ್ತಿಯನ್ನುಂಟುಮಾಡಿ ತದ್ದ್ವಾರಾ ಪರಮಾತ್ಮ ಪ್ರಾಪ್ತಿಯನ್ನೇ ಉಂಟುಮಾಡುವುದೆಂದು ಸಿದ್ಧವಾಯಿತು. ಪ್ರಥಮ ಷಟ್ಕದಲ್ಲಿ ಹೇಳಲ್ಪಟ್ಟ ಅಕ್ಷರಯೋಗವೇ ಇಲ್ಲಿಯೂ ಸ್ಪಷ್ಟವಾಗಿ ಹೇಳಲ್ಪಟ್ಟಿತೆಂದರಿಯಬೇಕು. ಆದರೆ ಲೋಕದಲ್ಲಿ ಅಶಕ್ತನನ್ನು ಕುರಿತು ಯಾವದು ಉಪದೇಶಿಸಲ್ಪಡುವುದೋ ಅದಕ್ಕೆಸಮಾನಫಲವುಳ್ಳ ಸಾಧನಾಂತರೋಪದೇಶವೆ ಕಾಣಲ್ಪಡುವುದು. ಹೇಗಾದರೆ ಅವಗಾಹನಸ್ನಾನದಲ್ಲಿ ಅಶಕ್ತನಾಗಿರುವ ಕ್ಷತ್ರವನಿಗೆಆ ಅವಗಾಹನ ಸ್ನಾನ ಫಲವಂ ಕೊಡುವ ಮಾಂತ್ರಮಾನಸ ಸ್ನಾನಾದಿಗಳು ವಿಧಿಸಲ್ಪಟ್ಟಿರುವವೊ ಅದರಂತೆಇಲ್ಲಿ ಕರ್ಮಾನುಷ್ಠಾನಾಶಕ್ತನಿಗೆ ಮೋಕ್ಷಸಾಧನತ್ವೇನ ಸುಲಭಸಾಧ್ಯವಾದ ಕರ್ಮಗಳನ್ನೆ ವಿಧಿಸಬೇಕಲ್ಲದೇ ಅಕ್ಷರ ಯೋಗವೆ ಪರಭಕ್ತಿದ್ವಾರಾ ಮೋಕ್ಷಸಾಧನವಾಗಿರುವುದೆಂಬೀ ಅಂಶವು ಉಚಿತವಾಗಿಲ್ಲವು. ಮತ್ತು ಬೇರೊಂದು ಪ್ರದೇಶದಲ್ಲಿಯೂ ಕ್ರಿಯಾಯೋಗಕ್ಕೆ ಸಾಕ್ಷಾನ್ಮೋಕ್ಷಸಾಧನತ್ವವು “ ಮೋಕ್ಷಕಾರಣಮವ್ಯಕ್ತಮಚಿಂತ್ಯಮಪರಿಗ್ರಹಂ । ತಮಾರಾಧ್ಯಜಗನ್ನಾಥಂ ಕ್ರಿಯಾಯೋಗೇನಮುಚ್ಯತೆ,, ಎಂಬೀರೀತಿಯಿಂದ ಸ್ಫುಟವಾಗಿ ಪ್ರತಿಪಾದಿಸಲ್ಪಟ್ಟಿರುವುದೆಂದರೆ? ಕರ್ಮಯೋಗಕ್ಕೆ ಭಕ್ತಿಸಾಧನತ್ವವು ಅನೇಕ ಪ್ರದೇಶಗಳಲ್ಲಿ ಪ್ರತಿಪಾದಿಸಲ್ಪಟ್ಟಿರುವುದು ಮಾತ್ರವಲ್ಲದೇ ಈ ೧೮ ನೇ ಅಧ್ಯಾಯದಲ್ಲಿಯೂ ಮುಂದೆ ಹೇಳಲ್ಪಡುವ ಅಂಶವನ್ನು ಸ್ವಕರ್ಮಣಾತಮಭ್ಯರ್ಚ್ಯ,, ( ೧೮॥ ೪೬॥ ) ಎಂಬಿದೇ ಮೊದಲಾದವುಗಳಿಂ ಜ್ಞಾಪಕ ಪಡಿಸುತ್ತಾನೆಂದರಿಯಬೇಕು. ಮತ್ತು ಈ ಕ್ರಮವು ಬೇರೊಂದು ಕಡೆಯಲ್ಲಿಯೂ ಸ್ಫುಟವಾಗಿ ಪ್ರತಿಪಾದಿಸಲ್ಪಟ್ಟಿರುವುದು. “ ತತ್ರಚಿತ್ತಂಸಮಾವೇಷ್ಟುಂ ನಶಕ್ನೋತಿಭವಾನ್ಯದಿ । ತದಭ್ಯಾಸಪರಸ್ತಸ್ಮಿನ್ಕುರುಯೋಗಂದಿವಾಽನಿಶಂ ॥ ತತ್ರಾಪ್ಯಸಾಮರ್ಥ್ಯವತಃಕ್ರಿಯಾಯೋಗೋಮಹಾತ್ಮನಃ ॥ ಬ್ರಹ್ಮಣಾಯಸ್ಸಮಾಖ್ಯಾತಸ್ತತ್ಪರಸ್ಸತತಂಭವ ॥ ಕರೋಷಿಯಾನಿ ಕರ್ಮಾಣಿದೇವದೇವೇಜಗತ್ಪತೌ । ಸಮರ್ಪಯಸ್ವಭದ್ರಂತೇತತಃ ಕರ್ಮಪ್ರಹಾಸ್ಯಸಿ ॥ ಪ್ರಧಾನಂ ಕಾರಣಂ ಯೋಗೋ ವಿಮುಕ್ತೇರ್ದ್ವಿಜೇಶ್ವರ । ಕ್ರಿಯಾಯೋಗಶ್ಚ ಯೋಗಸ್ಯ

ಪರಮಂತ್ರಸ್ಯಸಾಧನಂ ,, ಈ ಪ್ರಮಾಣಗಳಿಂದ ಮುಂದೆಹೇಳಲ್ಪಡುವ ಫಲವು ಕರ್ಮಯೋಗವನ್ನೇ ಕಾರಣವಾಗಿ ಉಳ್ಳದ್ದಾಗಿರುವುದೆಂದರಿಯಬೇಕು. ... ... ||೧೧||

(ಗೀ|| ವಿ||) ಏತದಪಿ-ಸಮುಕ್ತವಾದ ಜಪಾರ್ಚನವೆ ಮೊದಲಾದ ವಿಷ್ಣುಸಂಬಂಧವಾದ ಕರ್ಮಗಳನ್ನು, ಅಥಕರ್ತುಮಶಕ್ತೋಸಿ-ಅನುಷ್ಠಿಸಲಶಕ್ತನಾದರೆ, ತತಃ-ತರುವಾಯು,ಮದ್ಯೋಗಮಾಶ್ರಿತಃ-ಅನ್ಯದೇವತೆಗಳಂ ಕುರಿತು ಕರ್ಮಾನುಷ್ಠಾನವಂ ಮಾಡಿ ಅದಂ ನನಗರ್ಪಣೆಮಾಡುವುದೆಂಬ ಯೋಗವನ್ನಾಶ್ರಯಿಸಿ, ಯತಾತ್ಮವಾನ್-ಮನೋನಿಗ್ರಹವಂ ಮಾಡಿ,ಸರ್ವ ಕರ್ಮಫಲತ್ಯಾಗಂ-ಸಮಸ್ತ ಕರ್ಮಗಳ ಫಲತ್ಯಾಗವನ್ನು, ಕುರು-ಮಾಡು,ಯಾವಪ್ರಕಾರದಿಂದಲಾದರುನನ್ನನ್ನು ಉಪಾಸನೆ ಮಾಡಬೇಕೆಂದಭಿಪ್ರಾಯವು. ||೧೧||

ಶ್ಲೋ|| ಶ್ರೇಯೋಹಿಜ್ಞಾನಮಭ್ಯಾಸಾಜ್ಜ್ಞಾನಾದ್ಧ್ಯಾ
ನಂವಿಶಿಷ್ಯತೇ | ಧ್ಯಾನಾತ್ಕರ್ಮಫಲತ್ಯಾಗಸ್ತ್ಯಾಗಾಚ್ಛಾಂ
ತಿರನಂತರಂ || ... ... ||೧೨||

ಪ|| ಶ್ರೇಯಃ-ಹಿ-ಜ್ಞಾನಂ-ಅಭ್ಯಾಸಾತ್-ಜ್ಞಾನಾತ್-ಧ್ಯಾನಂ-ವಿಶಿಷ್ಯತೇ | ಧ್ಯಾನಾತ್-ಕರ್ಮಫಲತ್ಯಾಗಃ-ತ್ಯಾಗಾತ್-ಶಾಂತಿಃ-ಅನಂತರಂ ||

(ಅ|| ರಾ|| ಭಾ||) ಅಭ್ಯಾಸಾತ್ ಜ್ಞಾನಂಹಿಶ್ರೇಯಃ-ಅತ್ಯಂತಪ್ರೀತಿಯೊಡನೆ ಸೇರದೆ ಕಠಿನರೂಪವಾಗಿರುವ ಸ್ಮೃತ್ಯಭ್ಯಾಸಕ್ಕಿಂತಲೂ ಜೀವಾತ್ಮ ಸ್ವರೂಪಾನುಸಂಧಾನ ಮೂಲವಾಗಿ ಪ್ರಾಪ್ತವಾದ ಆ ಆತ್ಮಸ್ವರೂಪದ ಸಾಕ್ಷಾತ್ಕಾರವೆಂಬ ಜ್ಞಾನವೇ ಆತ್ಮಹಿತದಲ್ಲಿ ಶ್ರೇಷ್ಠವಾಗಿರುವುದು. ಜ್ಞಾನಾದ್ಧ್ಯಾನಂ ವಿಶಿಷ್ಯತೇ-ಅಂತಹ ಆತ್ಮಸ್ವರೂಪ ಸಾಕ್ಷಾತ್ಕಾರವುಂಟಾಗದ ಕಾಲದಲ್ಲಿ ಅದಕ್ಕೆ ಸಾಧನವಾದ ಆತ್ಮಧ್ಯಾನವೆ ಆತ್ಮಹಿತದಲ್ಲಿ ಶ್ರೇಷ್ಠವಾಗಿರುವುದು. ಧ್ಯಾನಾತ್ಕರ್ಮಫಲತ್ಯಾಗಃ-ಅಂತಹ ಆತ್ಮಧ್ಯಾನವು ನಿಷ್ಪನ್ನವಾಗದ ಮೇಲೆ ಅಂತಹ ಧ್ಯಾನಕ್ಕೆ ಉಪಾಯವಾಗಿಯೂ ಫಲತ್ಯಾಗಯುಕ್ತವಾಗಿಯೂ ಇರುವ ಕರ್ಮಾನುಷ್ಠಾನವೇ ಆತ್ಮಹಿತದಲ್ಲಿ ಶ್ರೇಷ್ಠವಾಗಿರುವುದು. ತ್ಯಾಗಾದನಂತರಂ ಶಾಂತಿಃ-ಆ ಪ್ರಕಾರವಾಗಿ ಫಲಾಪೇಕ್ಷೆಯಂ ಬಿಟ್ಟ

ಅನುಷ್ಠಿಸುವ ಕರ್ಮಕ್ಕನಂತರವೇ ಸಮಸ್ತ ಪಾಪ ನಿವೃತ್ತಿಯಾಗುವು ದರಿಂದ ಆತ್ಮಜ್ಞಾನಯೋಗ್ಯತಾ ಪಾದಕವಾಗಿರುವಮನಃ ಪ್ರಸನ್ನ ತಾರೂಪವಾದಶಾಂತಿಯುಂಟಾಗುವುದು. ಆರೀತಿಯಿಂದ ಶಾಂತಿ ಯುಂ ಟಾದಮೇಲೆ ಆತ್ಮಧ್ಯಾನವು ಕೈಕೂಡುವುದು. ಆ ಆತ್ಮಧ್ಯಾನ ದಿಂದ ಆತ್ಮ ಸಾಕ್ಷಾತ್ಕಾರವೂ ಅದರಿಂದ ಪರಭಕ್ತಿಯೂ ಉಂಟಾ ಗುವುದು. ಆದುದರಿಂದ ಭಕ್ತಿಯೋಗಾಭ್ಯಾಸದಲ್ಲಿ ಅಶಕ್ತನಿಗೆ ಆತ್ಮ ನಿಷ್ಠೆಯೇ ಶ್ರೇಷ್ಠವೆಂದರಿಯಬೇಕು. ಅಂತಹಆತ್ಮನಿಷ್ಠನಿಗೆ ಮ ನಶ್ಶಾಂತಿಯುಂಟಾಗದಮೇಲೆ ಆ ನಿಷ್ಠೆ ಯುಂಟಾಗುವುದಕ್ಕಾಗಿ ಜ್ಞಾ ನಗರ್ಭವಾಗಿಯೂ ಫಲಾಭಿಸಂಧಿ ರಹಿತವಾಗಿಯೂ ಇರುವ ಕರ್ಮದಲ್ಲಿ ನಿಷ್ಠೆಯೇ ಒಳ್ಳೇದೆಂದಭಿಪ್ರಾಯವು.

(ಶಂ॥ ಭಾ॥) ಈಗ ಸರ್ವಕರ್ಮಫಲತ್ಯಾಗವು ಕೊಂಡಾಡಲ್ಪ ಡುವುದು. ಸ್ವಾಭಾವಿಕವಾಗಿ ಅವಿವೇಕಿಯಾದ್ದುಕೊಂಡು ಜ್ಞಾನೋ ತ್ಪತ್ತಿಯನ್ನುಂಟು ಮಾಡಿಕೊಳ್ಳುವುದಕ್ಕೆ ಕಾಮಕ್ರೋಧಾದಿಗಳನ್ನು ಬಿಡದೆ ಶಾಸ್ತ್ರಾಭ್ಯಾಸಾದಿಗಳಂ ಮಾಡುವುದಕ್ಕಿಂತಲೂ ಸ್ವಾಭಾವಿ ಕವಾಗಿ ಸದ್ವೃತ್ತಿ ಯುಂಟಾಗಿರುವ ಅವಸ್ಥೆಯು ಶ್ರೇಷ್ಠವಾಗಿರುವು ದು. ಆಅವಸ್ಥೆಗಿಂತಲೂ ಶಾಸ್ತ್ರಗಳನ್ನಾಶ್ರಯಮಾಡಿಯೂ ಯು ಕ್ತಿಗಳನ್ನಾಶ್ರಯಮಾಡಿಯೂ ತತ್ವವಿಚಾರಣೆಮಾಡುವುದೆಂಬ ಜ್ಞಾ ನವು ಶ್ರೇಷ್ಠವೆಂದರಿಯಬೇಕು. ಅಂತಹ ಶಾಸ್ತ್ರಕ್ಕಿಂತಲೂ ಸ ದ್ಗುರುದ್ವಾರಾ ಶಾಸ್ತ್ರಶ್ರವಣಮಂ ಮಾಡುವುದು ಶ್ರೇಷ್ಠವು. ಅಂ ತಹ ಶ್ರವಣಕ್ಕಿಂತಲೂ ಶ್ರವಣಾದಿಗಳೊಡಕೂಡಿದ ಧ್ಯಾನಾಭ್ಯಾ ಸವು ಶ್ರೇಷ್ಠವು. ಅಂತಹ ಧ್ಯಾನಕ್ಕಿಂತಲೂಹಿಂದಿನಶ್ಲೋಕದಲ್ಲಿ ಹೇಳಲ್ಪಟ್ಟ ಕರ್ಮಫಲತ್ಯಾಗವು ಶ್ರೇಷ್ಠವೆಂಬದಾಗಿ ಕೊಂಡಾಡಲ್ಪ ಟ್ಟಿರುವುದು. ಆ ಪ್ರಕಾರವಾಗಿದ್ದರೂ ಮೇಲೆ ಹೇಳ ಲ್ಪಟ್ಟ ಶಾಸ್ತ್ರಾಭ್ಯಾಸ ಜ್ಞಾನಧ್ಯಾನಗಳೆಂಬ ಮೋಕ್ಷೋಪಾಯಗ ಳನ್ನು ಅವಲಂಬಿಸಲಶಕ್ತನಾಗಿದ್ದರೆ ಸರ್ವ ಕರ್ಮ ಫಲತ್ಯಾಗವು ಅಂ ತವನಿಗೆ ಶ್ರೇಯಸ್ಕರವಾಗಿರುವುದಲ್ಲದೆ ಜ್ಞಾನಮಾತ್ರಸಾಧ್ಯವಾದಶಾಂ ತಿಯನ್ನು (ಮೋಕ್ಷವನ್ನು) ಕೊಡಲಾರದೆಂಬದಾಗಿ ಉಪದೇಶಿಸಿರು ವಂತೆ ತೋರುತ್ತದೆ. ಆದುದರಿಂದ ಶಾಸ್ತ್ರಾಭ್ಯಾಸಾದಿ ಸಾಧನಾನು

ಷ್ಠಾನಗಳಿಲ್ಲದೆ ಕರ್ಮಫಲತ್ಯಾಗವಂ ಮಾಡಿದರೂ ವಾಸ್ತವವಾಗಿಶಾಂತಿ ಯುಂಟಾಗುವುದಕ್ಕೆ ಸಾಧನವಿಲ್ಲದಿದ್ದರೂ ಅಂತಹ ಸಾಧನಾನುಷ್ಠಾನದಲ್ಲಿ ಶಕ್ತನಾದರೆ ಕರ್ಮಫಲ ತ್ಯಾಗವನ್ನುಮಾಡಿದಪಕ್ಷದಲ್ಲಿಶಾಂತಿ ಯುಂಟಾಗುವುದೆಂದು ಹೇಳುವುದರಿಂದ ಈ ಶ್ಲೋಕದಲ್ಲಿ ಸರ್ವಕರ್ಮ ಫಲತ್ಯಾಗದ ಸ್ತೋತ್ರವೇ ಮಾಡಲ್ಪಡುವುದೆಂದು ತಿಳಿಯಬರುತದೆ.

ಆದರೆ ಸರ್ವಕರ್ಮ ಫಲತ್ಯಾಗವು ಯಾವಾಗಲಾದರೂ ಶಾಂತಿಯು ನ್ನುಂಟುಮಾಡುವುದರಿಂದಲ್ಲವೆ ಆ ಪ್ರಕಾರವಾಗಿ ಸ್ತುತಿಸಲ್ಪಡುವುದು ಯುಕ್ತವಾಗಿರುವುದು. ಕರ್ಮಫಲತ್ಯಾಗ ಸಾಮಾನ್ಯದಲ್ಲಿ ಅಂತಹಸಾಮರ್ಥ್ಯವೇ ಇಲ್ಲದಿದ್ದರೇ ಹೇಗೆ ಸ್ತುತಿಸಲ್ಪಡಬಹುದು ? ಎಂಬ ಶಂಕಾಸಮಾಧಾನವಂ ಕೇಳು ಹೇಳುವೆನು. ಬ್ರಾಹ್ಮಣನಾದ ಅಗಸ್ತ್ಯ ಮಹರ್ಷಿಯು ಸಮುದ್ರಪಾನವಂ ಮಾಡಿರುವುದನ್ನಾಶ್ರಯಿಸಿ ತತ್ಸಾಧರ್ಮ್ಯದಿಂದ ಈಗಲೂ ಬ್ರಾಹ್ಮಣ್ಯವುಳ್ಳವರೆಲ್ಲರೂ ಹೇಗಾದರೆ ಸ್ತುತಿಸಲ್ಪಡುತ್ತಾರೆಯೊ ಆರೀತಿಯಾಗಿಯೆ "ಯಥಾಸರ್ವೇ ಪ್ರಮುಚ್ಯಂತೆ,, ಎಂಬೀಶ್ರುತಿವಾಕ್ಯದಲ್ಲಿ ಕರ್ಮಫಲತ್ಯಾಗವಂ ಮಾಡಿ ಧ್ಯಾನನಿಷ್ಠನಾದ ಜ್ಞಾನಿಯಾದವನಿಗೆ ತತ್‌ಕ್ಷಣವೇ ಶಾಂತಿ ಯುಂಟಾಗುವುದೆಂದು (ಜೀವನ್ಮುಕ್ತಸ್ಥಿತಿಯು ಅಥವಾ ಮೋಕ್ಷವು ಉಂಟಾಗುವುದೆಂದು) ಹೇಳಲ್ಪಟ್ಟಿರುವುದರಿಂದ ಇಲ್ಲಿ ಅಜ್ಞಪ್ರಾಜ್ಞ ವಿವಕ್ಷೆಯಿಲ್ಲದೆ ಕರ್ಮ ಫಲತ್ಯಾಗ ಸಾಮಾನ್ಯಮಾತ್ರಕ್ಕೇನೆ ಶ್ರೇಷ್ಠ್ಯವಂಹೇಳಿ ಸ್ತೋತ್ರ ಮಾಡಿರುವುದಾಗಿ ತಿಳಿಯಬೇಕು.

ಆದರೆ ಮೇಲೆ ಉದಹರಿಸಿರುವ ಶ್ರುತಿಯಲ್ಲಿ ಸರ್ವಕಾಮಗಳನ್ನು ಬಿಡಬೇಕೆಂಬದಾಗಿ ಹೇಳಿರುವದುಮಾತ್ರವಲ್ಲದೆ ಸರ್ವ ಕರ್ಮ ಫಲತ್ಯಾಗವು ಹೇಳಲ್ಪಡಲಿಲ್ಲವೆಂದರೆ ಶ್ರೌತಸ್ಮಾರ್ತಾದಿ ಸರ್ವಕರ್ಮಗಳ ಫಲಗಳೇ ಸರ್ವಕಾಮ ಶಬ್ದದಿಂದ ಹೇಳಲ್ಪಟ್ಟಿರುವುದರಿಂದ ಪ್ರತ್ಯೇಕವಾಗಿ ಸರ್ವ ಕರ್ಮ ಫಲತ್ಯಾಗವಂ ಹೇಳಬೇಕಾಗಿಲ್ಲವು. ಆದುದರಿಂದ ಫಲಾಪೇಕ್ಷೆಯಿಲ್ಲದೆ ಮಾಡಲ್ಪಡುವ ಕರ್ಮಯೋಗವು ಚಿತ್ತಶುದ್ಧಿ ಎಂಬ ಶ್ರೇಯಸ್ಸನ್ನುಂಟುಮಾಡುವುದೆಂಬದಾಗಿ ಗ್ರಹಿಸತಕ್ಕದ್ದು.

ಇಲ್ಲಿ ಜೀವೇಶ್ವರರಿಗೆ ಭೇದಕಲ್ಪನವಂ ಮಾಡಿಯೇ ವಿಶ್ವರೂಪಿನಾದ ಈಶ್ವರನಲ್ಲಿ ಮನಸ್ಸಮಾಧಾನ ರೂಪವಾದ ಯೋಗವನ್ನೂ ಈಶ್ವರ ಪ್ರೀತಿನಿಮಿತ್ತವಾಗಿ ಭಗವದರ್ಪಣ ಬುದ್ಧಿಯಿಂದ ಕರ್ಮಗಳನ್ನೂ ಆಚರಿಸಬೇಕೆಂತಲೂ ಉಪದೇಶಿಸಲ್ಪಟ್ಟಿರುವುದೆಂದರಿಯಬೇಕು. ಅಭೇದಬುದ್ಧಿಯುಳ್ಳ ಅಕ್ಷರ ಬ್ರಹ್ಮೋಪಾಸಕನಿಗೆ ಕರ್ಮಯೋಗಾಚರಣವು ಸಿದ್ಧಿಸಲಾರದು, ಕರ್ಮಯೋಗಿಯಾದವನಿಗೆ ಅಪರೋಕ್ಷೋಪಾಸನವೂ ಸಂದರ್ಭಿಸಲಾರದು. ಅದು ಹೇಗೆಂದರೆ? “ತೇಪ್ರಾಪ್ನುವಂತಿಮಾಮಾಮೇವ,, (೧೨॥ ೪) ಎಂಬದಾಗಿ ಅಕ್ಷರೋಪಾಸಕನಿಗೆ ಕೈವಲ್ಯ (ಬ್ರಹ್ಮತ್ವ) ಪ್ರಾಪ್ತಿವಿಷಯದಲ್ಲಿ ಸ್ವಾತಂತ್ರ್ಯವು ಹೇಳಲ್ಪಟ್ಟಿರುವುದು. “ತೇಷಾಮಹಂಸಮುದ್ಧರ್ತಾ,, (೧೨॥೭॥)ಎಂಬದಾಗಿ ಅಕ್ಷರಬ್ರಹ್ಮೋಪಾಸಕರಿಗಿಂತಲೂ ಅನ್ಯರಾದವರಿಗೆಈಶ್ವರನು ಕ್ರಮವಾಗಿ ಮೋಕ್ಷಪ್ರಾಪಕನಾಗಬೇಕಲ್ಲದೆ ಅವರಿಗೆ ಸ್ವಾತಂತ್ರ್ಯವಿಲ್ಲದೇ ಯಿರುವುದರಿಂದ ಅಂತವರಿಗೆ ಪಾರತಂತ್ರ್ಯವೇ ಹೇಳಲ್ಪಟ್ಟಿರುವುದು. ಇಲ್ಲಿ ಪ್ರಸ್ತುತವಾದ ಸಮುದ್ಧರಣವು ಭೇದದೃಷ್ಟಿಯುಳ್ಳವರಂಕುರಿತು ಹೇಳಬಹುದಲ್ಲದೆ ಅಭೇದೋಪಾಸಕರಿಗೆಂಬದಾಗಿ ಹೇಳಲಸಾಧ್ಯವು. ಏತಕ್ಕೆಂದರೆ? ಅಕ್ಷರೋಪಾಸಕರು ಅಕ್ಷರವೆನ್ನಲ್ಪಡುವ ಬ್ರಹ್ಮಸ್ವರೂರಲ್ಲವೆ? ಅಂತವರ ವಿಷಯದಲ್ಲಿ (ಈಶ್ವರಕರ್ತೃಕವಾದ) ಸಮುದ್ಧರಣವಂ ಹೇಗೆ ಹೇಳಬಹುದು? ಮತ್ತು ಲೋಕದಲ್ಲಿ ಒಬ್ಬನು ತಾನು ಪ್ರಭುವೆಂಬುವುದನ್ನು ಚೆನ್ನಾಗಿ ತಿಳಿದಿದ್ದರೂ ಆಕಾಲದಲ್ಲಿಯೇ ತಾನು ದಾಸನಾಗಿರುತ್ತೇನೆಂಬುವುದಂ ತಿಳಿಯುವುದು ಅಸಂದರ್ಭವಲ್ಲವೆ?ಸ್ವಾಮಿತ್ವದಾ ಸತ್ವರೂಪವಾದ ಧರ್ಮಗಳು ಪರಸ್ಪರ ವಿರುದ್ಧಗಳಾದ್ದರಿಂದ ಏಕಕಾಲದಲ್ಲಿ ಈ ಯರಡು ಧರ್ಮಗಳು ಒಬ್ಬನಲ್ಲಿ ಸಂಗತಗಳಾಗಲಾರವೆಂದಭಿಪ್ರಾಯವು. ಆದುದರಿಂದ ಅದರಂತೆ ಕರ್ಮಯೋಗಾಕ್ಷರೋಪಾಸನೆಗಳೂ ಪರಸ್ಪರ ವಿರುದ್ಧಗಳಾಗದೆ ಹೋದರೆ ಅರ್ಜುನನಿಗೆ ಅತ್ಯಂತ ಹಿತವನ್ನುಂಟುಮಾಡಬೇಕೆಂಬದಾಗಿ ಉದ್ದೇಶಿಸಿರುವ ಶ್ರೀಕೃಷ್ಣಮೂರ್ತಿಯು ಭೇದಬುದ್ಧಿಯೊಡನೆ ಕೂಡಿರುವ ಕರ್ಮಯೋಗವನ್ನೂ ಅಕ್ಷರೋಪಾಸನವೆನ್ನಲ್ಪಡುವ ಸ್ವಸ್ವರೂಪಾನುಭವವನ್ನೂ ಏಕ

ಕಾಲದಲ್ಲಿ ಮಾಡಬಹುದೆಂಬದಾಗಿಯೋ ಉಪದೇಶಿಸಬಹುದಾದುದರಿಂದ ಸಮಸ್ತ ಕೋರಿಕೆಗಳನ್ನು ಬಿಟ್ಟವರೂ ಸ್ವಸ್ವರೂಪಾನುಭವನ್ನು ಪಡೆದನ್ನಾಗಿ ತಿಳಿದವರೂ ಅಕ್ಷರಶಬ್ದವಾಚ್ಯವಾದ ಪರಬ್ರಹ್ಮವನ್ನು ಧ್ಯಾನಿಸುವಂತವರೂ ಆಗಿರುವ, ಸನ್ನ್ಯಾಸಿಗಳಿಗಿವು ಇರಬೇಕೆಂದು ಸಾಕ್ಷನ್ಮೋಕ್ಷ ಸಾಧನಗಳಾದ ಧರ್ಮಗಳನ್ನುಪದೇಶಿಸುವೆನು ಕೇಳೆಂಬದಾಗಿಯೋ " ಅದ್ವೇಷ್ಟಾಸರ್ವಭೂತಾನಾಂ,, ಎಂಬದಾಗಿ ಈ ಅಧ್ಯಾಯದ ಮುಂದಿನ ಶ್ಲೋಕವನ್ನಾರಂಭಿಸಿ ಉಪದೇಶಿಸ ಲಿಚ್ಛೈಸಿದನೆಂ ದರಿಯಲ್ಪಡುವುದು. (ಇದರಿಂದ ಅರ್ಜುನನು ಅಭೇದೋಪಾಸನ ಯೋಗ್ಯವಾದ ಸ್ಥಿತಿಯಂ ಹೊಂದುವುದಕ್ಕೆ ಒರಲಿಲ್ಲ ವೆಂಬದಾಗಿ ಭಗವದಭಿಪ್ರಾಯವಿರುವಂತೆ ತೋರುವದು. ಆ ಧರ್ಮಗಳಲ್ಲಿ ಕೆಲವು ಕರ್ಮಯೋಗಿಗಳಲ್ಲಿಯೂ ಕೂಡ ಇರತಕ್ಕದ್ದಾಗಿರುವುದೆಂದರೆ, ಆರೀತಿಯಾಗಿದ್ದರೂ ಬಾಧೆಯಿಲ್ಲವು, ಆವುದರಿಂದ ಅಪ್ರಾಮತ್ತು ಕೆಲವು ಸುಗುಣಗಳೂ ಕೂಡಿಯಿರದೇ ಹೋದರೆ ಸ್ವಸ್ವರೂಪಾನುಭವಾವಸ್ಥೆಯನ್ನು ಪಡೆಯಲಾರದಾದುದರಿಂದ ಅಕ್ಷರೋಪಾಸನವು ಸರ್ವೋತ್ತಮವೆಂತಲೂ ಸಾಕ್ಷಾನ್ಮೋಕ್ಷ ಸಾಧನವೆಂತಲೂ ತಿಳಿಯಬರುತ್ತದೆ. ॥೧೨॥

(ಮ ॥ ಭಾ ॥) ಕೇವಲವಾಗಿ ಜ್ಞಾನವಿಲ್ಲದೆ ಮಾಡುವ ಅಭ್ಯಾಸಕ್ಕಿಂತಲೂ ಅಭ್ಯಾಸ ಸಹಿತವಾದ ಜ್ಞಾನವು ಶ್ರೇಷ್ಠವು, ಧ್ಯಾನಕ್ಕಿಂತಲೂ ಅಪರೋಕ್ಷಜ್ಞಾನವು ಶ್ರೇಷ್ಠವು. ಈ ಅಪರೋಕ್ಷಜ್ಞಾನದಿಂದಲೇ ಮೋಕ್ಷಪ್ರಾಪ್ತಿ ಯುಂಟಾಗುವುದು. ಅವುಗಳಿಗೆಲ್ಲವೂ ಅದಿಕಾರಣವಾಗಿರುವುದು ನಿಷ್ಕಾಮಕರ್ಮಾನುಷ್ಠಾನವಂ ಮಾಡಿ ಭಗವದರ್ಪಣವಂ ಮಾಡುವುದೆಂಬ ತ್ಯಾಗವೇ ಮೋಕ್ಷಸಾಧನವೆಂದಾಗಿ ಸ್ತುತಿಯಾಗಿ ಹೇಳಲ್ಪಟ್ಟಿರುವದು. " ತಯೋಸ್ತು ಕರ್ಮ ಸನ್ನ್ಯಾಸಾತ್ " ಎಂಬೀ ಶ್ಲೋಕದಲ್ಲಿಯೂ, ಅದಕ್ಕೆ ಮುಂದಿನ ಎರಡು ಶ್ಲೋಕಗಳಲ್ಲಿಯೂ, ಅಶಕ್ತನ ವಿಷಯವಾಗಿ ಹೇಳಲ್ಪಟ್ಟಿರುವುದು. ಅದು ಹೇಗೆಂದರೆ: ಕರ್ಮಫಲತ್ಯಾಗವೇ ಮೋಕ್ಷಸಾಧನವೆಂದರೆ ಪೂರ್ವೋಕ್ತವಾದ ಗೀತಾವಾಕ್ಯಗಳಿಗೆ ವಿರೋಧ ಬರುವುದು, ಅದರಿಂದ ಅಶಕ್ತನಿಗೆ ಸಾಫಲ್ಯವನ್ನೂ ವಿಶ್ವಾಸವನ್ನೂ ಉಂಟುಮಾಡುವುದಕ್ಕಾಗಿ ಕರ್ಮಫಲತ್ಯಾ

ಗವು ಮೋಕ್ಷಸಾಧನ ವೆಂಬದಾಗಿ ಹೇಳಲ್ಪಟ್ಟಿರುವುದೆಂದರಿಯ ಬೇಕು. ... ... ... ||೧೨||

ಶ್ಲೋ || ಅದ್ವೇಷ್ಟಾ ಸರ್ವಭೂತಾನಾಂ ಮೈತ್ರಃ ಕರುಣಏವ ಚ | ನಿರ್ಮಮೋ ನಿರಹಂಕಾರಸ್ಸಮದುಃಖ ಸುಖಃಕ್ಷಮೀ ||೧೩|| ಸಂತುಷ್ಟಸ್ಸತತಂ ಯೋಗೀ ಯತಾತ್ಮಾ ದೃಢನಿಶ್ಚಯಃ | ಮಯ್ಯರ್ಪಿತಮನೋಬುದ್ಧಿರ್ಯೋಮದ್ಭಕ್ತ ಸ್ಸಮೇಪ್ರಿಯಃ|| ... ||೧೪||

ಪ|| ಅದ್ವೇಷ್ಟಾ - ಸರ್ವಭೂತಾನಾಂ - ಮೈತ್ರಃ- ಕರುಣಃ-ಏವ-ಚ-ನಿರ್ಮಮಃ-ನಿರಹಂಕಾರಃ-ಸಮದುಃಖಸುಖಃ- ಕ್ಷಮೀ||ಸಂತುಷ್ಟಃ-ಸತತಂ - ಯೋಗೀ-ಯತಾತ್ಮಾ-ದೃಢನಿಶ್ಚಯಃ| ಮಯಿ-ಅರ್ಪಿತಮನೋ ಬುದ್ಧಿಃ -ಯಃ - ಮದ್ಭಕ್ತಃ-ಸಃ-ಮೇ-ಪ್ರಿಯಃ||

ಅ || ಸರ್ವ ಭೂತಾನಾಂ - ಸರ್ವಪ್ರಾಣಿಗಳಿಗೂ,ಅದ್ವೇಷ್ಟಾ-ದ್ವೇಷವಂ ಮಾಡದವನಾಗಿಯೂ, (ಶಂ) ತನಿಗೆದುಃಖವನ್ನುಂಟುಮಾಡಿದರೂ ಅಂತವನಲ್ಲಿ ದ್ವೇಷವಿಲ್ಲದವನು ಅದ್ವೇಷ್ಟಾ ಎನ್ನಲ್ಪಡುವನು. ಸಕಲ ಭೂತಗಳನ್ನು ತನ್ನಾತ್ಮವನ್ನಾಗಿನೋಡವುದರಿಂದ ದ್ವೇಷಿಸುವ ಕಾರಣ ವಿಲ್ಲವೆಂದು ಭಾವವು.(ಶ್ರೀ)ಉತ್ತಮರಾದವರಲ್ಲಿಯೂದ್ವೇಷವಿಲ್ಲ ದಸ್ವ ಭಾವವಿಲ್ಲದವನಾಗಿ, (ರಾ) ತನಿಗೆ ಉಪಕಾರಿಯು, ಅಪಕಾರಿಯು, ದ್ವೇಷಿಯು,ಎಂಬೀ ತ್ರಿವಿಧರಲ್ಲಿಯೂ ದ್ವೇಷವಿಲ್ಲದವನು.ಏತಕ್ಕಂದರೆ? ತನ್ನ ಕರ್ಮಾನುಸಾರವಾಗಿಪರಮಾತ್ಮ ನಿಂದ ಪ್ರೇರಿತರಾಗಿ ಉಪಕಾರಾ ಪಕಾರ ದ್ವೇಷಗಳನ್ನು ಮಾಡುತ್ತಾರಲ್ಲದೆ ತಾವೇ ಸ್ವತಂತ್ರಿಸಿ ಮಾಡುವುದಿಲ್ಲ ವಾದುದರಿಂದ ಇವರಲ್ಲ ಪರಾಧವಿಲ್ಲ ವೆಂಬದಾಗಿ ತಿಳಿಯುತ್ತಾರಾದುದರಿಂದ ಅವರಲ್ಲಿ ದ್ವೇಷವಂ ಮಾಡುವುದಿಲ್ಲವೆಂದರ್ಥವು.

ಮೈತ್ರಃ-(ಶಂ)ಮಿತ್ರನಾಗಿರುವಂತವನಾಗಿಯೂ, (ಶ್ರೀ) ತನಿಗೆ ಸಮಾನರಾದವರಲ್ಲಿ ಪ್ರೀತಿ ಯುಳ್ಳವನಾಗಿಯೂ, (ರಾ) ದ್ವೇಷಿಗಳಾಗಿಯೂ, ಉಪಕಾರ ಮಾಡು ವಂತವರಾಗಿಯೂ ಇರುವ ಸರ್ವಭೂತಗಳಲ್ಲಿಯೂ,ಮೈತ್ರಬುದ್ಧಿಯನ್ನು ಮಾಡುವಂತವನಾಗಿಯೂ,(ಗೀ|ವಿ) ಒಬ್ಬನಿಗುಂಟಾಗುವ ಆಪತ್ತನ್ನು ಕೇಳಿ ಆ ಆಪತ್ತುಗಳ ದಶೆಯಿಂದ ಅವನನ್ನು ರಕ್ಷಿಸುವಂತವನಾಗಿಯೂ, ಕರುಣ ಏವಚ-(ಶಂ)ದುಃಖಿತ

ರಾದವರಲ್ಲಿ ಕೃಪಾಶಾಲಿಯಾಗಿಯೂ, ಸರ್ವ ಭೂತಗಳಿಗು ಅಭಯಪ್ರದನಾದ ಸನ್ಯಾಸಿ ಎಂದರ್ಥವು. (ಶ್ರೀ) ತನಿಗಿಂತಲೂ ತಾಳ್ಮೆಪಟ್ಟವರಲ್ಲಿ ಕರುಣೆಯುಳ್ಳವನಾಗಿಯೂ, (ರಾ) ದ್ವೇಷಿಗಳಾಗಲೀ ಉಪಕಾರಿಗಳಾಗಲೀ ಯಾರಾದರೂ ದುಃಖಿತರಾದರೆ ಅಂತವರಲ್ಲಿ ಕರುಣೆಯನ್ನು ಮಾಡುವಂತವನಾಗಿಯೂ, (ಗೀ॥ ವಿ) ಯಾವಾಗಲೂ ಸರ್ವರಲ್ಲಿಯೂ ದಯಾಶಾಲಿ ಯಾಗಿಯೂ, ನಿರ್ಮಮಃ - ಮಮತಾಶೂನ್ಯನಾಗಿಯೂ, (ರಾ) ದೇಹೇಂ ದ್ರಿಯಗಳಲ್ಲಿಯೂ,ದೇಹಾನು ಬಂಧಿಗಳಾದ ಪುತ್ರಮಿತ್ರ ಕಳತ್ರಾದಿ ಬಂಧು ವರ್ಗದಲ್ಲಿಯೂ ನನ್ನದು ನನ್ನವರು ಎಂಬೀ ಮಮತಾಶೂನ್ಯನಾಗಿಯೂ,(ಗೀ ॥ ವಿ) ತನ್ನ ದೆಂಬೀ ಸ್ವಾತಂತ್ರ್ಯ ಬುದ್ಧಿರಹಿತನಾಗಿಯೂ, ನಿರಹಂಕಾರಃ-ಅಹಂಕಾರರಹಿತನಾಗಿಯೂ, (ರಾ) ದೇಹವೇ ಆತ್ಮನೆಂಬೀ ಅಭಿಮಾನ ಶೂನ್ಯನಾಗಿಯೂ, (ಗೀ॥ವಿ) ತನ್ನಲ್ಲಿಲ್ಲದ ಗುಣಗಳನ್ನು ತನ್ನಲ್ಲಿರುವದಾಗಿನೆನೆಸಿಕೊಂಡು ಅಜ್ಞಾನವ ಹೊಂದದವನು. ... ...

ಸಮ ದುಃಖ ಸುಖಃ - (ಶ್ರೀ) ಅನ್ಯರ ಸುಖದುಃಖಗಳನ್ನು ತನಿಗೆ ಪ್ರಾಪ್ತವಾಗಿರುವಂತೆ ನೆನೆಯುತಲಿರುವಂತವ ನಾಗಿಯೂ, (ಶಂ ॥ ರಾ ) ಸುಖಪ್ರಾಪ್ತಿಯಲ್ಲಿ ಸಂತೋಷವು ದುಃಖ ಪ್ರಾಪ್ತಿಯಲ್ಲಿ ಶೋಕವೂ ಇಲ್ಲದವನಾಗಿಯೂ, (ಗೀ॥ವಿ) ವಿಷಯಸಂಬಂಧ ಮಾದಸುಖವು ಯಾವನಿಗೆ ದುಃಖಕ್ಕೆ ಸಮಾನವಾಗಿಧೆಯೊ ಅಂತವನು ಸಮ ದುಃಖಸುಖನು. ... ...

ಕ್ಷಮೀ - ಕ್ಷಮಾ ಗುಣವುಳ್ಳವನಾಗಿಯೂ,(ಶಂ)ತನಿಗೆದುಃಖವನ್ನುಂಟು ಮಾಡಿದವನಲ್ಲಿಯೂ, ವಿಕಾರವಿಲ್ಲದವನಾಗಿಯೂ, (ರಾ) ವಿಷಯ ಸಂಬಂಧಗಳಿಂದ ಅನಿಷ್ಟಗಳು ಪ್ರಾಪ್ತಗಳಾದರೂ ಮನೋ ವಿಕಾರಗಳಿಲ್ಲದವನು. ... ...

ಸತತಂ-ಸರ್ವಕಾಲದಲ್ಲಿಯೂ, ಸಂತುಷ್ಟಃ - ಸಂತೋಷವುಳ್ಳವನಾಗಿಯೂ, (ಶ್ರೀ) ದೊರುಕಿದರೆ ಸಂತೋಷವೂ ದೊರಕದಿದ್ದರೆ ದುಃಖವೂ ಇಲ್ಲದೆ ಸದಾ ತೃಪ್ತಿ ಯುಳ್ಳವನಾಗಿಯೂ, (ಶಂ) ದೇಹ ಧಾರಣಾರ್ಥವಾಗಿ ಪ್ರಾಪ್ತವಾದದ್ದು ಸ್ವಲ್ಪವಾದರೂ ಅದೇಸಾಕೆಂಬ

ತೃಪ್ತಿಯೂ ದೊರಕಿದ್ದು ಒಳ್ಳೆ ದಾದರೂ ಕೆಟ್ಟದಾದರೂ ಸರಿಯೇ, ಇಷ್ಟಾದರೂ ದೊರಕಿತಲ್ಲವೆ ವೆಂಬ ಸಂತೋಷ ವುಳ್ಳವನಾಗಿಯೂ, (ರಾ) ಅಪ್ರಯತ್ನದಿಂದದೇಹ ಧಾರಣಾರ್ಥವಾಗಿ ಎಷ್ಟು ಪ್ರಾಪ್ತವಾ ಯಿತೊ ಅದರಲ್ಲಿಯೆ ತೃಪ್ತಿ ಪಡುವಂತವನಾಗಿಯೂ, (ಗೀ॥ವಿ) ತೃಪ್ತಿ ಪಡುವಂತವನಾಗಿಯೂ, ... ...

ಯೋಗೀ-(ಶಂ) ಚಿತ್ತಸಮಾಧಾನವುಳ್ಳವನಾಗಿಯೂ,(ಶ್ರೀ) ಅ ಪ್ರಮತ್ತಃ - ಪ್ರಮಾದ ರಹಿತ ನಾಗಿಯೂ,(ರಾ) ಪ್ರಕೃತಿ ಗಿಂತಲೂ ಅನ್ಯವಾದ ತನ್ನ ಸ್ವರೂಪಾನು ಸಂಧಾನದಲ್ಲಿರುವಂತವ ನಾಗಿಯೂ, (ಗೀ ॥ ವಿ) ಕರ್ಮವು, ಧ್ಯಾನವು, ಎಂಬೀ ಜ್ಞಾನೋಪಾಯ ವುಳ್ಳವ ನಾಗಿಯೂ, ... ... ...

ಯತಾತ್ಮಾ -ಅಡಕ್ಕ ವುಳ್ಳ ಸ್ವಭಾವ ಶಾಲಿಯಾಗಿಯೂ, (ರಾ ॥ ಗೀ॥ ವಿ) ಮನಸ್ಸನ್ನು ವಿಷಯಗಳಲ್ಲಿ ಪ್ರವೃತ್ತಿಸದಂತೆ ತನ್ನ ಸ್ವಾಧೀನದಲ್ಲಿಟ್ಟಿರುವಂತವನಾಗಿಯೂ, ... ...

ದೃಢ ನಿಶ್ಚಯಃ - ದೃಢವಾದನನ್ನ ಸ್ವರೂಪ ನಿಶ್ಚಯವು ಳ್ಳವನಾಗಿಯೂ, (ಶಂ) ಆತ್ಮ ತತ್ವ ನಿಶ್ಚಯದಲ್ಲಿ ದಾರ್ಢ್ಯ ವುಳ್ಳವ ನಾಗಿಯೂ, (ರಾ)ವೇದಾಂತ ಶಾಸ್ತ್ರಾರ್ಥ ಗಳಲ್ಲಿ ದೃಢವಾದನಂಬಿಕ ವುಳ್ಳವನಾಗಿ ಆಪ್ರಕಾರವಾಗಿ ಅನುಷ್ಠಿಸುವಂತವ ನಾಗಿಯೂ, (ಗೀ॥ವಿ)ಅಪ್ರಮಾಣ ವೆಂಬ ಸಂದೇಹ ವಿಲ್ಲದ ತತ್ವ ನಿಶ್ಚಯ ವುಳ್ಳವ ನಾಗಿಯೂ, ... ... ...

ಮಯಿ - ನನ್ನಲ್ಲಿ, ಅರ್ಪಿತ ಮನೊ ಬುದ್ಧಿಃ - ಸಮರ್ಪಿಸಲ್ಪಟ್ಟ ಮನೋಬುದ್ಧಿಗಳುಳ್ಳವನಾಗಿಯೂ, ಇರುವ (ರಾ) ಫಲಾಪೇಕ್ಷೆಯಿಲ್ಲದೆ ನ ನ್ನಿಂದನುಷ್ಠಿಸಲ್ಪಟ್ಟಕರ್ಮಗಳಿಂದಆರಾಧಿಸಲ್ಪಟ್ಟಭಗವದ್ವಾಸುದೇವ ನು ನನಗೆ ಆತ್ಮ ದರ್ಶನವನ್ನುಂಟು ಮಾಡುವ ನೆಂಬೀ ಮನೊ ನಿಶ್ಚ ಯ ಬುದ್ಧಿಗಳುಳ್ಳವನು. ಮದ್ಭಕ್ತಃ - ನನ್ನ ಭಕ್ತನು, (ರಾ) ಕ ರ್ಮಯೊಗದಿಂದ ನನ್ನ ನ್ನಾರಾಧಿಸುವ ಭಕ್ತನು, ಯಃ - ಯಾವ ನೊ, ಸಮೇಪ್ರಿಯಃ - ಅತನನು ನನಗೆ ಅತ್ಯಂತ ಪ್ರಿಯನಾಗಿ ರುವನು. ... ... ॥೧೪॥

ಶ್ಲೋ॥ ಯಸ್ಮಾನ್ನೋದ್ವಿಜತೇಲೋಕೋಲೋಕಾನ್ನೋದ್ವಿಜ
ತೇಚಯಃ | ಹರ್ಷಾಮರ್ಷಭಯೋದ್ವೇಗೈರ್ಮುಕ್ತೋಯು
ಸ್ಸಚಮೇಪ್ರಿಯಃ॥ ... ... ॥೧೫॥

ಪ ॥ ಯಸ್ಮಾತ್ - ನ - ಉದ್ವಿಜತೇ - ಲೋಕಃ - ಲೋಕಾತ್-ನ-ಉದ್ವಿಜತೆ ಚ-ಯಃ| ಹರ್ಷಾಮರ್ಷ ಭಯೋದ್ವೇಗೈಃ-ಮುಕ್ತಃ - ಯಃ- ಸಃ- ಚ- ಮೇ-ಪ್ರಿಯಃ॥

ಅ॥ಯಸ್ಮಾತ್-ಯಾವ ಮನುಷ್ಯನದೆಶೆಯಿಂದ,(ಶಂ)ಯಾವಸನ್ಯಾಸಿಯ ದಶೆಯಿಂದ, ಲೋಕಃ - ಜನವು, ನೋದ್ವಿಜತೆ- ಭಯ ಪಡುವುದಿಲ್ಲವೋ, (ಶ್ರೀ॥ಶಂ) ಭಯವು ಪ್ರಾಪ್ತವಾಗುವುದೆಂಬ ವ್ಯಾಕುಲವಂ ಹೊಂದುವುದಿಲ್ಲವೋ, ಲೋಕಾತ್- ಜನಗಳ ದಶೆಯಿಂದ, ಯೋನೋದ್ವಿಜತೇಚ-ಭಯವಂ ಹೊಂದುವದಿಲ್ಲವೋ, ಹರ್ಷಾ ಮರ್ಷ ಭಯೋದ್ವೇಗೈಃ - ಹರ್ಷಃ- (ಶಂ) ಇಷ್ಟಪ್ರಾಪ್ತಿಯಿಂದುಟಾಗುವ ರೋಮಾಂಚವೇನು, ಆನಂದ ಬಾಷ್ಪ ವೇನು, ಇವೆ ಮೊದಲಾದವುಗಳಿಂದ ಅರಿಯತಕ್ಕ ಮನೋವಿಕಾಸವು, (ಶ್ರೀ) ಉತ್ಸಾಹವು. ಅಮರ್ಷಃ-ಕೋಪವು, (ಗೀ ॥ ವಿ) ಮದದಿಂದ ಅಧರ್ಮ ದಲ್ಲಿ ಪ್ರವೇಶಿಸುವುದು ಅಮರ್ಷವು. (ಶ್ರೀ) ಅನ್ಯರಿಗೆ ಲಾಭ ವುಂಟಾದರೆ ಆದನ್ನು ಸಹಿಸದ ಸ್ವಭಾವವು ಅಮರ್ಷ ವೆನ್ನಲ್ಪಡುವುದು, ಭಯ-ಭಯವು, ಉದ್ವೇಗೈಃ- ( ಶ್ರೀ ) ಭಯವೆ ಮೊದಲಾದವುಗಳಿಂದುಂಟಾಗುವ ಮನೋ ವ್ಯಾಕುಲವು ಉದ್ವೇಗವೆನ್ನಲ್ಪಡುವುದು. (ಗೀ॥ ವಿ) ಮನಃಕಂಪವು. ಇವುಗಳಿಂದ, ಯಃ -ಯಾವನಾದರೆ, ಮುಕ್ತಃ-ಬಿಡಲ್ಪಟ್ಟಿರುವನೋ, ಸಚ - ಅಂತವನೆ, ಮೇ -ನನಗೆ, ಪ್ರಿಯಃ-ಇಷ್ಟನಾದವನು.॥೧೫॥

(ರಾ॥ಭಾ॥) ಯಸ್ಮಾಲ್ಲೋಕೋನೋದ್ವಿಜತೆ- ಯಾವಕರ್ಮಯೋಗನಿಷ್ಠನ ದೆಶೆಯಿಂದ ಲೋಕವು ದುಃಖಪಡುವುದಿಲ್ಲವೋ, ಯಾವನಾದರೆ ಲೋಕವು ತನ್ನಿಂದ ದುಃಖಿಸುವಂತೆ ಒಂದುಕಾರ್ಯವನ್ನೂ ಮಾಡುವುದಿಲ್ಲವೋ ಎಂದರ್ಥವು. ಲೋಕಾಚ್ಚಯೋನೋದ್ವಿಜತೆ- ಜನಗಳ ದೆಶೆಯಿಂದಲೂ ಯಾವನಾದರೆ ದುಃಖವಂ ಹೊಂದುತ್ತಿದ್ದಿಲ್ಲವೋ, ಅವನು ಯಾರಿಗೂ ವಿರೋಧಿಯಾದವನಲ್ಲವೆಂಬ ನಿಶ್ಚಯದಿಂದ ಯಾವಮನು

ಷ್ಯನನ್ನು ಕುರಿತು ಜನವು ವ್ಯಸನಹೇತುವಾದ ಕಾರ್ಯವನ್ನು ಮಾಡುವು ದಿಲ್ಲವೋ ಎಂದರ್ಥವು. ಯಃ- ಯಾವನು, ಹರ್ಷಾಮರ್ಷಭಯೋದ್ವೇಗೈರ್ಮುಕ್ತಃ- ಆದುದರಿಂದ ಒಬ್ಬನನ್ನು ಕುರಿತು ಸಂತೋಷದಿಂದಲೂ ಒಬ್ಬನನ್ನು ಕುರಿತು ಕೋಪದಿಂದಲೂ ಒಬ್ಬನನ್ನು ಕುರಿತು ಭಯದಿಂದಲೂ ಒಬ್ಬನನ್ನು ಕುರಿತು ವ್ಯಸನದಿಂದಲೂ ಬಿಡಲ್ಪಟ್ಟಿರುವನೋ, ಸಚ- ಅವನೂ, ಮೇ- ನನಿಗೆ, ಪ್ರಿಯಃ-ಪ್ರೀತಿಪಾತ್ರನು. ॥೧೫॥

(ತಾತ್ಪರ್ಯವು.) ಯಾವ ಮನುಷ್ಯನ ದೆಶೆಯಿಂದ ಜನಗಳು ಭಯವಂ ಹೊಂದುವುದಿಲ್ಲವೋ, ಜನಗಳ ದೆಶೆಯಿಂದ ಯಾವನಾದರೆ ಭಯವಂಹೊಂದುವುದಿಲ್ಲವೋ, ಸಂತೋಷಕೋಪ ಭಯವುಸೋವ್ಯಾಕುಲಾದಿಗಳಿಂದ ಬಿಡಲ್ಪಟ್ಟಿರುವಂತವನ್ಯಾವನೊ ಅಂತವನೂ ನನಿಗೆ ಪ್ರೀತಿಪಾತ್ರನಾಗಿರುವನೆಂದು ತಾತ್ಪರ್ಯವು. ॥೧೫॥

ಶ್ಲೋ॥ ಅನಪೇಕ್ಷಶ್ಶುಚಿರ್ದಕ್ಷಉದಾಸೀನೊಗತವ್ಯಧಃ । ಸರ್ವಾರಂಭಪರಿತ್ಯಾಗೀಯೋಮದ್ಭಕ್ತಸ್ಸಮೇಪ್ರಿಯಃ॥೧೬॥

ಪ॥ ಅನಪೇಕ್ಷಃ- ಶುಚಿಃ- ದಕ್ಷಃ- ಉದಾಸೀನಃ- ಗತವ್ಯಧಃ । ಸರ್ವಾರಂಭಪರಿತ್ಯಾಗೀ- ಯಃ- ಮದ್ಭಕ್ತಃ- ಸಃ- ಮೇ- ಪ್ರಿಯಃ॥

ಅ॥ ಅನಪೇಕ್ಷಃ- (ಶಂ) ದೇಹೇಂದ್ರಿಯಾದಿಗಳಲ್ಲಿ ಆಸಕ್ತಿಯಿಲ್ಲದವನು,] (ಶ್ರೀ) ತನ್ನ ಪ್ರಯತ್ನವಿಲ್ಲದೆ ಪ್ರಾಪ್ತವಾದ ವಸ್ತುಗಳಲ್ಲಿಯೂ ಕೂಡ ಅಪೇಕ್ಷಾಶೂನ್ಯನು, (ಗೀ॥ ವಿ॥) ಭಗವತ್ಪ್ರೀತಿಯನ್ನುಹೊಂದ ಬೇಕೆಂಬುವುದಲ್ಲದೆ ಅನ್ಯ ವಿಷಯಗಳಲ್ಲಾಸಕ್ತಿರಹಿತನು, ಶುಚಿಃ- ಪರಿಶುದ್ಧನು, (ಶಂ॥ ಶ್ರೀ॥ ಗೀ॥ ವಿ) ಅಂತರ್ಬಹಿಶ್ಚ ಪರಿಶುದ್ಧನಾದವನು, ಎಂದರೆ ಕಾಮ ಕ್ರೋಧಾದಿ ರೂಪಗಳಾದ ಅಂತರ ಮಾಲಿನ್ಯಗಳನ್ನೂ ದೈಹಿಕವಾದ ಬಾಹ್ಯಮಾಲಿನ್ಯಗಳನ್ನೂ ಹೋಗಲಾಡಿಸಿಕೊಂಡವನು, ದಕ್ಷಃ- (ಶಂ) ಸಮಯಸ್ಫೂರ್ತಿಯುಳ್ಳವನು, ಯಾವಕಾಲದಲ್ಲಿ ಯಾವಕಾರ್ಯಗಳಂ ಮಾಡಬೇಕೊ. ಆದಕ್ಕನುರೂಪವಾದಸಾಮರ್ಥ್ಯವುಳ್ಳವನೆಂದರ್ಥವು- (ಗೀ॥ ವಿ॥) ಭಗವತ್ಪ್ರೀತ್ಯರ್ಥಕವಾದ ಕರ್ಮಗಳಂ ಮಾಡುವುದರಲ್ಲಿ ಜಾಗರೂಕನು, ಉದಾಸೀನಃ- (ಶಂ) ಮಿತ್ರಾದಿಗಳಲ್ಲಿಯೂ ಪಕ್ಷಪಾತ ವಿಲ್ಲದವನು,

(ಗೀ॥ ವಿ॥) ಜನಗಳು ತನಗುಪಕಾರಗಳಂ ಮಾಡಿದರೂ ಅಪಕಾರಗಳಂ ಮಾಡಿದರೂ ಆಯೆರಡರಲ್ಲಿಯೂ ಉಪೇಕ್ಷಕನಾಗಿರುವಂತವನೂ, ಗತವ್ಯಥಃ- ಮನೋವ್ಯಾಧಿ ರಹಿತನು, (ಶಂ) ಭಯವಿಲ್ಲದವನು, (ಗೀ॥ ವಿ)ಅನ್ಯರಿಂದ ಮಾಡಲ್ಪಟ್ಟ ಅಪರಾಧಗಳಿಂದ ಮನೋವ್ಯಾಕುಲವಂ ಹೊಂದದವನು, ಸರ್ವಾರಂಭ ಪರಿತ್ಯಾಗೀ- ಸಕಲ ಪ್ರಯತ್ನಗಳನ್ನು ಬಿಟ್ಟವನೂ ಆಗಿರುವ,(ಶಂ) ಇಹಪರವಿಷಯಂಗಳಂ ಕುರಿತು ಕಾಮ್ಯಕರ್ಮಗಳನ್ನು ಬಿಟ್ಟವನೂ, (ಶಂ) ದೃಷ್ಟಾದೃಷ್ಟ ವಸ್ತುಗಳನ್ನುದ್ದೇಶಿಸಿ ಪ್ರಯತ್ನವಂ ಮಾಡದವನೂ, (ಗೀ॥ ವಿ॥) ವಿಷ್ಣುಸಂಬಂಧ ರಹಿತವಾದ ಕರ್ಮಗಳನ್ನು ಬಿಟ್ಟವನೂ,(ಅಥವಾ)ಸಕಲ ಕರ್ಮಗಳನ್ನೂ ಭಗವದರ್ಪಣವಂಮಾಡಿದವನೂ, ಆದಃಮದ್ಭಕೊ ಯಃ-ಇಂತಹಗುಣವುಳ್ಳ ನನ್ನ ಭಕ್ತನು ಯಾವನೊ, ಸಃ- ಅವನು, ಮೆ-ನನಿಗೆ, ಪ್ರಿಯಃ- ಪ್ರೀತಿಪಾತ್ರನು. ॥೧೬॥

(ರಾ॥ ಭಾ) ಯಾವನಾದರೆ ಆತ್ಮವ್ಯತಿರಿಕ್ತವಾದ ಸಮಸ್ತ ವಸ್ತುವರ್ಗದಲ್ಲಿಯೂ ಅಪೇಕ್ಷಾರಹಿತನಾಗಿಯೂ, ತನ್ನ ವರ್ಣಾಶ್ರಮಾನುಗುಣವಾಗಿ ಶಾಸ್ತ್ರದಿಂದ ನಿಷೇಧಿಸಲ್ಪಡದ ಅನ್ನಾದಿಗಳಿಂದ ಶರೀರ ಪೋಷಣವಂ ಮಾಡುವಂತವನಾಗಿಯೂ, ತನ್ನ ವರ್ಣಾಶ್ರಮಾನುಗುಣವಾದ ಕರ್ಮಾನುಷ್ಠಾನದಲ್ಲಿ ಸಮರ್ಥನಾಗಿಯೂ, ಶಾಸ್ತ್ರೀಯ ಕ್ರಿಯಾಕಲಾಪಗಳನ್ನು ತಾನನುಷ್ಠಿಸುವ ಕಾಲದಲ್ಲಿ ಅವರ್ಜನೀಯಗಳಾದ ಶೀತೋಷ್ಣಾದಿಗಳಿಂದ ದುಃಖಿಸದವನಾಗಿಯೂ, ಶಾಸ್ತ್ರೀಯ ಕರ್ಮಗಳಿಗೆ ಬಹಿರ್ಭೂತವಾದ ಕರ್ಮಾರಂಭಗಳನ್ನು ಅತ್ಯಂತವಾಗಿ ಬಿಟ್ಟವನಾಗಿಯೂ ಈ ಪ್ರಕಾರವಾಗಿದ್ದುಕೊಂಡು ಕರ್ಮಯೋಗದಿಂದ ನನ್ನನ್ನು ಭಜಿಸುವಂತವ ನಾಗಿಯೂ ಯಾವನಿರುತ್ತಾನೆಯೋ ಅಂತವನು ನನ್ನ ಪ್ರೀತಿ ಪಾತ್ರನೆಂದು ತಿಳಿಯಬೇಕು. ॥೧೬॥

ಶ್ಲೋ॥ ಯೋನಹೃಷ್ಯತಿನದ್ವೇಷ್ಟಿ ನಶೋಚತಿನಕಾಂ
ಕ್ಷತಿ । ಶುಭಾಶುಭ ಪರಿತ್ಯಾಗೀಭಕ್ತಿಮಾನ್ಯಸ್ಸ ಮೇ
ಪ್ರಿಯಃ ॥ ... ... ॥೧೭॥

ಪ॥ ಯಃ- ನ- ಹೃಷ್ಯತಿ- ನ- ದ್ವೇಷ್ಟಿ- ನ- ಶೋಚತಿ- ನ- ಕಾಂಕ್ಷತಿ । ಶುಭಾಶುಭ ಪರಿತ್ಯಾಗೀ- ಭಕ್ತಿಮಾನ್- ಯಃ- ಸಃ- ಮೇ- ಪ್ರಿಯಃ ॥

ಅ॥ ಯಃ-ಯಾವನಾದರೆ, (ರಾ) ಯಾವ ಕರ್ಮಯೋಗಿಯು, ನಹೃಷ್ಯತಿ- (ಇಷ್ಟವಾದದ್ದನ್ನು ಹೊಂದಿದರೂ) ಸಂತೋಷಿಸುವು ದಿಲ್ಲವೋ, (ರಾ) ಸಂತೋಷಿಸುವುದಕ್ಕೆ ಕಾರಣವೂ ಇಷ್ಟವೂ ಆದ ವಸ್ತುಗಳನ್ನು ಹೊಂದಿದರೂ ಸಂತೋಷಿಸದವನಾಗಿಯೂ, (ಗೀ॥ವಿ) ತನ್ನ ದೇಹವಿರುವ ವರೆಗೂ ಭಗವಂತನನ್ನು ಬಿಟ್ಟು ಅನ್ಯವಸ್ತುಗಳ ಲ್ಲಿ ಸಂತೋಷ ವಿಲ್ಲದವನಾಗಿಯೂ, ನದ್ವೇಷ್ಟಿ- ( ಅನಿಷ್ಟವುಂಟಾ ದರೂ) ದ್ವೇಷಿಸುವುದಿಲ್ಲವೋ, ನಶೋಚತಿ- (ಇಷ್ಟವಾದ ವಸ್ತುವು ನಷ್ಟವಾದರೂ) ದುಃಖಿಸುವುದಿಲ್ಲವೋ, ( ರಾ ) ಪುತ್ರಮಿತ್ರ ಕಳ ತ್ರಾದಿ ವಿಯೋಗದಲ್ಲಿಯೂ ದುಃಖಿಸುವುದಿಲ್ಲವೋ, ನಕಾಂಕ್ಷತಿ-ತನಿಗೆ ಅಪೇಕ್ಷಿತವಾಗಿರುವುದೆಂಬದಾಗಿ ಯಾವ ವಸ್ತುವನ್ನೂ ಅಪೇಕ್ಷಿಸುವು ದಿಲ್ಲವೋ, (ರಾ) ಯಾವ ವಸ್ತುವು ನಾಶವನ್ನು ಹೊಂದಿದರೆ ತನಿಗೆ ದುಃಖ ವುಂಟಾಗುವುದೋ ಅದು ನಾಶಹೊಂದದೇ ಇರಬೇಕೆಂಬದಾ ಗಿ ಅಪೇಕ್ಷಿಸುವುದಿಲ್ಲವೋ, ( ಗೀ॥ ವಿ ) ಜ್ಞಾನ ಭಕ್ತಿ ವೈರಾಗ್ಯಗಳಿಗೆ ಅನ್ಯವಾದವುಗಳನ್ನಪೇಕ್ಷಿಸುವುದಿಲ್ಲವೋ, ಯಃ - ಯಾವನಾದರೆ, ಶುಭಾಶುಭ ಪರಿತ್ಯಾಗೀ - ಶುಭಾಶುಭಗಳಲ್ಲಿ ಸಂಬಂಧ ಶೂನ್ಯನೋ, (ರಾ) ಪಾಪದಂತೆ ಪುಣ್ಯವೂ ಬಂಧ ಹೇತುವಾಗಿರುವುದರಿಂದ ಪಾಪ ಪುಣ್ಯಗಳೆಂಬೀ ಎರಡನ್ನೂ ಬಿಟ್ಟಿರುತ್ತಾನೆಯೋ, (ಗೀ॥ವಿ) ಜ್ಞಾನಭ ಕ್ತಿವೈರಾಗ್ಯಗಳಿಗೆ ಬಹಿರ್ಭೂತವಾದ ಶುಭಾಶುಭಗಳನ್ನು ಬಿಟ್ಟಿರುತ್ತಾ ನೆಯೋ, ಭಕ್ತಿಮಾನ್-ನನ್ನಲ್ಲಿ ಭಕ್ತಿಶಾಲಿಯಾದ, ಸಃ-ಅವನು, ಮೆ- ನನಿಗೆ, ಪ್ರಿಯಃ- ಪ್ರೀತಿಪಾತ್ರನು. ॥೧೭॥

(ತಾತ್ಪರ್ಯವು) ಯಾವನಾದರೆ ಸಂತೋಷದ್ವೇಷ ವ್ಯಸನಾದಿಗ ಳಿಲ್ಲದವನಾಗಿ ಶುಭಾಶುಭಗಳಲ್ಲಿ ಸಂಬಂಧವನ್ನಿಟ್ಟುಕೊಳ್ಳದೆ ನಮ್ಮಲ್ಲಿ ಭಕ್ತಿಯನ್ನು ಮಾಡುತ್ತಾನೆಯೋ ಅಂತವನು ನಮಿಗೆ ಪ್ರೀತಿಪಾತ್ರ ನಾಗಿರುವನು. ॥೧೭॥

ಶ್ಲೋ॥ ಸಮಶ್ಶತ್ರೌಚ ಮಿತ್ರೇಚ ತಥಾಮಾನಾವಮಾ
ನಯೋಃ । ಶೀತೋಷ್ಣ ಸುಖದುಃಖೇಷು ಸಮಸ್ಸಂಗವಿ
ವರ್ಜಿತಃ ॥ ೧೮ ॥ ತುಲ್ಯನಿಂದಾಸ್ತುತಿರ್ಮೌನೀ ಸಂತು

ಷ್ಟೋಯೇನಕೇನಚಿತ್ | ಅನಿಕೇತಸ್ಸ್ಥಿರಮತಿರ್ಭಕ್ತಿ
ಮಾನ್ಮೇಪ್ರಿಯೋನರಃ || ... ||೧೯||

ಪ || ಸಮಃ-ಶತ್ರೌ-ಚ-ಮಿತ್ರೇ-ಚ-ತಥಾ-ಮಾನಾಪಮಾನಯೋಃ | ಶೀತೋಷ್ಣ ಸುಖದುಃಖೇಷು-ಸಮಃ-ಸಂಗವಿವರ್ಜಿತಃ || ತುಲ್ಯನಿಂದಾಸ್ತುತಿಃ-ಮೌನೀ-ಸಂತುಷ್ಟಃ-ಯೇನಕೇನಚಿತ್ | ಅನಿಕೇತಃ-ಸ್ಥಿರಮತಿಃ-ಭಕ್ತಿಮಾನ್-ಮೇ-ಪ್ರಿಯಃ-ನರಃ ||

(ಅ|| ರಾ|| ಭಾ||) ಶತ್ರೌಚಮಿತ್ರೇಚಸಮಃ- ಶತ್ರುಮಿತ್ರರುಗಳು ಸನ್ನಿಹಿತರಾದರೆ ಶತ್ರುವಿನಲ್ಲಿ ದ್ವೇಷವೂ ಮಿತ್ರರಲ್ಲಿ ಸ್ನೇಹವೂ ಇಲ್ಲದವನಾಗಿಯೂ, ತಥಾಮಾನಾಪಮಾನಯೋಸ್ಸಮಃ - ಆ ಪ್ರಕಾರವೇ ಒಬ್ಬನು ಗೌರವ ಮಾಡಿದರೂ ಒಬ್ಬನು ಅಪಮಾನಿಸಿದರೂ ಆನಂದ ಕೋಪಗಳಿಲ್ಲದವನಾಗಿಯೂ, ಶೀತೋಷ್ಣ ಸುಖದುಃಖೇಷುಸಮಃ- ಸಂಗವಿವರ್ಜಿತಃ - ಗ್ರೀಷ್ಮಕಾಲದಲ್ಲಿ ಅವಶ್ಯಾಪೇಕ್ಷಿತಗಳಾದ ಶೀತಲವಾದ ನೀರು ಮಂದ ಮಾರುತವು ಚಂದ್ರಿಕೆಯು, ಚಂದನವು ಇವೇ ಮೊದಲಾದ ವಸ್ತುಗಳು ಪ್ರಾಪ್ತವಾದರೂ, ಈ ವಸ್ತುಗಳೇ ಹೇಮಂತ ಶಿಶಿರರ್ತುಗಳಲ್ಲಿ ಸನ್ನಿಹಿತವಾದರೂ, ಮತ್ತು ಹೇಮಂತ ಶಿಶಿರರ್ತುಗಳಲ್ಲಿ ಅವಶ್ಯಾನುಭಾವ್ಯಗಳಾದ ಆಗಂತುಕವಾದವು ಅಗ್ನಿಖಂಡಗಳಿಂದೊಪ್ಪಿದ ಹಸಂತಿಕೆಯು, ಪಚ್ಚಕರ್ಪೂರವೇ ಮೊದಲಾದವುಗಳಿಂದ ಕೂಡಿದ ಚಂದನವೂ ಚಿತ್ರಕಂಬಳಿ ಮೊದಲಾದ ಶೀತನಿವಾರಕವಾದ ವಸ್ತುಗಳು ಪ್ರಾಪ್ತವಾದರೂ ಮತ್ತು ಈ ವಸ್ತುಗಳೇ ಗ್ರೀಷ್ಮಕಾಲಗಳಲ್ಲಿ ಪ್ರಾಪ್ತವಾದರೂ ಇವುಗಳಿಂದುಂಟಾಗುವ ಸುಖದುಃಖಗಳಲ್ಲಿ ಮನೋವಿಕಾರ ಹೊಂದದವನಾಗಿಯೂ, ತುಲ್ಯನಿಂದಾಸ್ತುತಿಃ- ತನ್ನನ್ನು ಒಬ್ಬರು ನಿಂದಿಸಿದರೆ ಅದರಲ್ಲಿ ಕೋಪ ದುಃಖಗಳಿಲ್ಲದವನಾಗಿಯೂ ತನ್ನನ್ನು ಒಬ್ಬರು ಹೊಗಳಿದರೆ ಅದರಲ್ಲಿ ಸ್ನೇಹವೂ ಆನಂದವೂ ಇಲ್ಲದವನಾಗಿಯೂ, ಮೌನೀ- (ಲೋಕದಿಂದ ತನಗೆ ಯಾವ ಪ್ರಯೋಜನವೂ ಇಲ್ಲವಾದುದರಿಂದ ಯೋಗಿಗಳೂ ಆತ್ಮಧ್ಯಾನ ಕರಣಾಗಾರವು ದರಿಂದಲೂ ವಿಹಿತ ಕರ್ಮಾನುಷ್ಠಾನಾಂಗವಾದ ಮಂತ್ರಗಳು ನಾಮಗಳು ಇವುಗಳಲ್ಲದೆ ಅನ್ಯಶಬ್ದಗಳಲ್ಲಿ) ಮೌನವ್ರತ ಯುಕ್ತನಾಗಿಯೂ, ಯೇನಕೇನಚಿತ್ಸಂತುಷ್ಟಃ-ತನ್ನ ಪ್ರಯತ್ನವಿಲ್ಲದೆ ಯಾವುದು ಪ್ರಾಪ್ತವಾದರೂ ಅದರಿಂದಲೇ ಸಂತೋಷವುಳ್ಳವನಾಗಿಯೂ, ಅನಿ

ಕೇತಸ್ಸ್ಥಿರಮತಿಃ-ಆತ್ಮನಲ್ಲಿಯೇಸ್ಥಿರಪಟ್ಟ ಬುದ್ಧಿಯುಳ್ಳವನಾಗಿರುವ ದರಿಂದ ಒಳ್ಳೇಗೃಹವು, ಉದ್ಯಾನವನವು ಮೊದಲಾದವುಗಳಲ್ಲಿಆಸಕ್ತಿ ಇಲ್ಲದವನಾಗಿಯೂ, ಭಕ್ತಿಮಾನ್- ಈರೀತಿಯಾಗಿದ್ದುಕೊಂಡು ಕರ್ಮ ಯೋಗಾನುಷ್ಠಾನವೆಂಬ ಭಕ್ತಿಯುಳ್ಳವನಾಗಿರುವ, ನರಃ- ಅಧಿಕಾರಿ ಯಾದವನು, ಮೇಪ್ರಿಯಃ-ನನ್ನ ಪ್ರೀತಿಪಾತ್ರನಾಗಿರುವನು. ಪೂರ್ವ ದಲ್ಲಿ "ಅದ್ವೇಷ್ಟಾಸರ್ವಭೂತಾನಾಂ,,(೧೨॥ ೧೩॥)ಇತ್ಯಾದಿ ಶ್ಲೋಕ ಗಳಲ್ಲಿ ಸಾಮಾನ್ಯವಾಗಿ ಶತ್ರುಮಿತ್ರರು ದೂರಸ್ಥರಾಗಿದ್ದರೂ ಅವರಲ್ಲಿ ದ್ವೇಷಾದಿಗಳಿಲ್ಲದೇ ಇರುವಿಕೆಯನ್ನು ಸಾಧಿಸಿದರು. ಈ ಶ್ಲೋಕ ದಲ್ಲಿ ಆಶತ್ರುಮಿತ್ರಾದಿಗಳುಸಮೀಪಸ್ಥರಾಗಿದ್ದರೂ ಸಮಚಿತ್ತನಾಗಿರುವಿ ಕೆಯೆಂಬ ಅದಕ್ಕಿಂತಲೂ ಅತಿರಿಕ್ತವಾದ ವಿಶೇಷವು ಹೇಳಲ್ಪಟ್ಟಿತು ಆದುದರಿಂದ ಪುನರುಕ್ತಿ ಇಲ್ಲವು. ॥೧೮॥೧೯॥

(ಗಿ॥ ವಿ॥) ಸಂಗವಿವರ್ಜಿತಃ- ಫಲಾಪೇಕ್ಷೆಯಿಲ್ಲದವನು. ತುಲ್ಯನಿಂದಾಸ್ತುತಿಃ- ಸ್ತುತಿಯನ್ನು ನಿಂದೆಯಂತೆ ಭಾವಿಸುವಂತವನು. ಮೌನೀ- (ಶಂ) ಸಂಯತವಾಕ್- ವಾಕ್ಕನ್ನು ಅಡಗಿಸಿಕೊಂಡವನು, ಅನಿಕೇತಃ- ಯಾವಾಗಲೂ ವಾಸಮಾಡುವುದಕ್ಕೆ ಒಂದೇ ಪ್ರದೇಶ ವನ್ನು ಯೇರ್ಪಡಿಸಿಕೊಳ್ಳದವನು (ಗೀ॥ ವಿ॥) ಅ-ವಿಷ್ಣುವು, ನಿಕೇತಃ- ವಾಸಸ್ಥಾನವು, ಎಂದರೆ ವಿಷ್ಣುವನ್ನೇ ವಾಸಸ್ಥಾನವನ್ನಾಗಿ ಹೊಂದಿ ರುವಂತವನು. ಸ್ಥಿರಮತಿಃ - (ಶಂ)ಪರಮಾತ್ಮವಿಷಯದಲ್ಲಿ ಸ್ಥಿರವಾದ ಮನಸ್ಸುಳ್ಳವನು. (ಗೀ॥ ವಿ॥) ಕುತರ್ಕದಿಂದ ಚಲಿಸದ ಮನಸ್ಸುಳ್ಳ ವನು. ॥೧೮॥೧೯॥೨೦॥

(ತಾತ್ಪರ್ಯವು) ಶತ್ರುಮಿತ್ರರಲ್ಲಿಯೂಮಾನಾಪಮಾನಗಳಲ್ಲಿಯು ಶೀತೋಷ್ಣ ಸುಖದುಃಖಗಳಲ್ಲಿಯು ಸಮವಾಗಿರುವಂತವನೂ, ಒಂ ದರಲ್ಲಿಯೂಆಸಕ್ತಿ ಇಲ್ಲದವನೂ,ನಿಂದಾಸ್ತುತಿಗಳಲ್ಲಿ ಸಮಚಿತ್ತನಾಗಿರು ವಂತವನೂ, ಯಾವದು ಪ್ರಾಪ್ತವಾದರೂ ಅದ್ದರಲ್ಲಿಸಂತೋಷಹೊಂ ದುವ ಸ್ವಭಾವಮುಳ್ಳವನೂ, ಸ್ಥಿರವಾದ ವಾಸಸ್ಥಾನವಿಲ್ಲದವನೂ, ಸ್ಥಿ ರಬುದ್ಧಿಯುಳ್ಳವನೂ ಆದ ಮಾನವನು ನನ್ನ ಪ್ರೀತಿಗೆ ಪಾತ್ರನಾಗಿ ರುವನು. ॥೧೮॥೧೯॥

ಶ್ಲೋ॥ ಯೇತುಧರ್ಮ್ಯಾಮೃತಮಿದಂಯಥೋಕ್ತಂಪರ್ಯು

ಪಾಸತೇ | ಶ್ರದ್ಧಧಾನಾಮತ್ಪರಮಾಭಕ್ತಾ, ಸ್ತೇತೀವ
ಮೇಪ್ರಿಯಾಃ ॥ ... ॥೨೦॥

ಪ॥ ಯೇ- ತು- ಧರ್ಮ್ಯಾಮೃತಂ- ಇದಂ- ಯಥೋಕ್ತಂ - ಪರಿ - ಉಪಾಸತೇ| ಶ್ರದ್ಧಧಾನಾಃ-ಮತ್ಪರಮಾಃ- ಭಕ್ತಾಃ- ತೇ- ಅತೀವ- ಮೇ- ಪ್ರಿಯಾಃ ॥

ಅ॥ ಯೇತು- ಯಾರಾದರೆ, ಶ್ರದ್ಧಧಾನಾಃ- ಶ್ರದ್ಧಾಳುಗಳಾಗಿಯೂ, ಮತ್ಪರಮಾಃ- ನನ್ನನ್ನೇ ಮುಖ್ಯವಾದ ಗತಿಯೆಂಬದಾಗಿ ನಂಬಿಕೊಂಡಿರುವಂತವರಾಗಿಯೂ, ಯಥೋಕ್ತಂ- ಪೂರ್ವೋಕ್ತವಾದ, ಧರ್ಮ್ಯಾಮೃತಂ- ಧರ್ಮದಿಂದ ಬಿಡಲ್ಪಡದೆಯೂ ಅಮೃತಪ್ರಾಯವೂ ಆಗಿರುವ, ಇದಂ-ಇಭಕ್ತಿಯೊಗವನ್ನು, ಪರ್ಯುಪಾಸತೇ-ಉಪಾಸನೆ ಮಾಡುತ್ತಾರೆಯೊ, ತೇ- ಅಂತಹ, ಭಕ್ತಾಃ-ಭಕ್ತರು, ಮೇ-ನನಗೆ, ಅತೀವ- ಅತ್ಯಂತವಾಗಿ, ಪ್ರಿಯಾಃ-ಇಷ್ಟರು. ॥೨೦॥

(ಶಂ॥ ಭಾ॥) "ಅದ್ವೇಷ್ಟಾಸರ್ವಭೂತಾನಾಂ,, ಎಂಬೀ ೧೩ನೇ ಶ್ಲೋಕವನ್ನು ಮೊದಲು ಮಾಡಿಕೊಂಡು, ಅಕ್ಷರಶಬ್ದ ವಾಚ್ಯನಾದ ಪರಬ್ರಹ್ಮವನ್ನುಉಪಾಸನೆಮಾಡುವಂತವರಾಗಿಯೂ,ಸಮಸ್ತಾಪೇಕ್ಷೆಗಳನ್ನು ಬಿಟ್ಟವರಾಗಿಯೂ ಬ್ರಹ್ಮಾನುಭವ ನಿಷ್ಠರಾಗಿಯೂ ಇರುವಂತ ಸನ್ಯಾಸಿಗಳ ಧರ್ಮಗಳು ಉಪದೇಶಿಸಲ್ಪಟ್ಟಿರುವುವು. ಉಪದೇಶಿಸಲುಉಪಕ್ರಾಂತವಾದಈಧರ್ಮಗಳು ಉಪಸಂಹಾರ ಮಾಡಲ್ಪಡುವುವು.

ಈ ಅಧ್ಯಾಯದ (೧೩) ನೇ ಶ್ಲೋಕದಮೊದಲು ತಿಳಿಸಲ್ಪಟ್ಟಿರುವುದಾಗಿಯೂ ಅಮೃತವೆನ್ನಲ್ಪಡುವ ಮೋಕ್ಷವನ್ನುಂಟುಮಾಡತದ್ದಾಗಿಯೂ ಇರುವ (ಬ್ರಹ್ಮಜ್ಞಾನಿ) ಧರ್ಮಗಳನ್ನು ಅವಲಂಬಿಸಿ ಅವುಗಳಲ್ಲಿ ವಿಶ್ವಾಸಶಾಲಿಗಳಾಗಿ ಅಕ್ಷರಾತ್ಮವೆನ್ನಲ್ಪಡುವ ನನ್ನನ್ನೇ ಸರ್ವೋತ್ತಮಗತಿ ಎಂಬದಾಗಿ ತಿಳಿದಿರುವಂತವರಾಗಿ ಪರಮಾರ್ಥಜ್ಞಾನನಿಷ್ಠೆಯಲ್ಲಿರುವ ಸನ್ಯಾಸಿಗಳು " ಪ್ರಿಯೋಹಿಜ್ಞಾನಿನೋತ್ಯರ್ಥಂ,, (೭। ೧೭॥) ಎಂಬೀಶ್ಲೋಕದಲ್ಲಿ ಹೇಳಿರುವಂತೆ ನನಗತ್ಯಂತವಾಗಿ ಇಷ್ಟರಾಗಿರುವರು. ಎಂದರೆ ಮೋಕ್ಷಪ್ರಾಪಕಗಳಾದ ಈಧರ್ಮಗಳನ್ನು ಕ್ರಮವಾಗಿ ಅನುಷ್ಠಿಸುವಂತವರು ಭಗವಂತನಾದ ವಿಷ್ಣುವೆಂಬಪರಮೇಶ್ವರನಾದ ನನಗೆ ಅತ್ಯಂತ ಪ್ರೀತಿ ಪಾತ್ರರಾಗಿರುವರು. ಆದು

ದರಿಂದ ಬ್ರಹ್ಮಸಾಯುಜ್ಯವಂ ಹೊಂದುವ್ರದಕ್ಕೆ ಮುಖ್ಯಸಾಧನ
ವಾದ ಸಗುಣೋಪಾಸನಾಸಿದ್ಧಿಯನ್ನು ಹೊಂದಬೇಕೆಂಬ ಅಭಿಪ್ರಾ
ಯವುಳ್ಳ ವಿವೇಕಿಗಳು ಅತ್ಯಂತ ಶ್ರದ್ಧೆಯೊಡನೆ ಈಧರ್ಮಗಳನ್ನನು
ಷ್ಠಿಸಬೇಕೆಂದಭಿಪ್ರಾಯವು. ‖೨೦‖

(ಆ॥ ಗಿ॥) ಈಪ್ರಕಾರವಾಗಿ ಮಧ್ಯಮ ಷಟ್ಕದಲ್ಲಿ ಸೋಪಾಧಿಕ
ಬ್ರಹ್ಮಾಭಿಧ್ಯಾನ ಪರಿಪಾಕದಿಂದ ನಿರುಪಾಧಿಕ ಬ್ರಹ್ಮವನ್ನು ಅನು
ಸಂಧಾನ ಮಾಡುವಂತವನಾಗಿಯೂ "ಅದ್ವೇಷ್ಟಾ ಸರ್ವಭೂತಾನಾಂ,,
೧೨॥ ೧೩॥) ಇತ್ಯಾದಿ ಧರ್ಮ ವಿಶಿಷ್ಟನಾಗಿಯೂ ಇರುವ, ಮುಖ್ಯಾಧಿ
ಕಾರಿಯಾದವನಿಗೆ ಶ್ರವಣಾದ್ಯಾವೃತ್ತಿಯಿಂದ ತತ್ವ ಸಾಕ್ಷಾತ್ಕಾರ
ಮುಂಟಾಗುವುದರಿಂದ ಮೋಕ್ಷಪ್ರಾಪ್ತಿ ಯಾಗುವ್ರದೆಂತಲೂ, ಆದು
ದರಿಂದ ಅದಕ್ಕೆ ಹೇತುಭೂತವಾದ ವಾಕ್ಯಾರ್ಥ ಬುದ್ಧಿವಿಷಯತ್ವ
ಯೋಗ್ಯವಾಗಿರುವ ತತ್ಪದಾರ್ಥವು ಅನುಸಂಧಿಸಬೇಕೆಂಬದಾಗಿಯೂ
ಪ್ರತಿಪಾದಿಸಲ್ಪಟ್ಟಿತೆಂದರಿಯಬೇಕು. ‖೨೦‖

(ರಾ॥ಭಾ॥) ಯೇತು- ಯಾರಾದರೆ, ಧರ್ಮ್ಯಾಮೃತಮಿದಂ- ಫ
ಲಾನುಗುಣ ಸಾಧನವಾದ ಈ ಭಕ್ತಿಯೋಗವನ್ನು, ಯಥೋಕ್ತಂ-
"ಮಯ್ಯಾವೇಶ್ಯಮನೋಯೇಮಾಂ,, (೧೨॥೨॥) ಇತ್ಯಾದಿ ಶ್ಲೋಕಗ
ಳಿಂದ ನಾವು ಹೇಳಿರುವಂತೆ, ಪರ್ಯುಪಾಸತೇ-ಅನುಷ್ಠಿಸುತ್ತಾರೆಯೊ,
ಶ್ರದ್ಧಧಾನಾಃ- ನಮ್ಮ ವಾಕ್ಯಗಳಲ್ಲಿ ವಿಶ್ವಾಸವಿಟ್ಟು ಫಲದಲ್ಲಿ ತ್ವರೆ
ಯುಳ್ಳವರಾಗಿಯೂ, ಮತ್ಪರಮಾಃ- ನಮ್ಮನ್ನೇ ಪರಮಪ್ರಾಪ್ಯವಾ
ಗಿಹೊಂದಿರುವಂತವರಾಗಿಯೂ, ಭಕ್ತಾಃ- ವ್ಯವಸ್ಥಿತವಾದ ಭಕ್ತಿಯೊ
ಗದಲ್ಲಿ ನಿಷ್ಠೆಯುಳ್ಳವರಾಗಿಯೂ ಇರುವ, ತೇ- ಆ ಮೋಕ್ಷಾಧಿಕಾರಿಗ
ಳು, ಅತೀವ- ಅತ್ಯಂತವಾಗಿ, ಮೇ-ನಮಗೆ, ಪ್ರಿಯಾಃ- ಪ್ರೀತಿಪಾತ್ರ
ರಾಗಿರುವರು. ‖೨೦‖

(ತಾ॥ ಚಂ॥) ಈ ಅಧ್ಯಾಯಾರಂಭದಲ್ಲಿ ಪ್ರಶ್ನಪೂರ್ವಕವಾಗಿ
ಭಕ್ತಿಯೋಗ ನಿಷ್ಠನಿಗೆ ಅಕ್ಷರ ನಿಷ್ಠನೆಂಬ ಆತ್ಮೋಪಾಸಕನಿಗಿಂ
ತಲೂ ಶ್ರೈಷ್ಠ್ಯವು ಹೇಳಲ್ಪಟ್ಟಿತು. ಅನಂತರದಲ್ಲಿ ಭಕ್ತಿಯೋಗದ
ಲ್ಲ ಶಕ್ತನಾದವನಿಗೆ ಯಾವದು ಉಪಾಯವು? ಎಂಬೀ ಪ್ರಸಂಗದಿಂದ
ಅಕ್ಷರ ನಿಷ್ಠೆಯು ಪರಂಪರೆಯಾಗಿ ಭಕ್ತಿಯೋಗ ಸಾಧಕವೆಂಬೀ ಅಂ

ಕವೂ ಅದಕ್ಕಪೇಕ್ಷಿತವಾದ ಗುಣಗಳೂ ಹೇಳಲ್ಪಟ್ಟವು. ಈಗ ಈ ಅಧ್ಯಾಯಾರಂಭದಲ್ಲಿ ಪ್ರಶ್ನೆಮಾಡಲ್ಪಟ್ಟ ವಿಷಯಗಳಿಗೆ ಯಾವ ಪ್ರತ್ಯುತ್ತರವು ಹೇಳಲ್ಪಟ್ಟಿತೋ ಅದನ್ನೇ ಈ ಶ್ಲೋಕದಲ್ಲಿ ನಿಗಮನ (ವಿಸ್ತೃತವಾದ ವಿಷಯವನ್ನು ಸಂಗ್ರಹವಾಗಿ ಹೇಳಿ ಪೂರ್ತಿ) ಮಾಡುತ್ತಾರೆಂದರಿಯಬೇಕು. ಅಲ್ಲಿ ಕೆಲವರು “ಅದ್ವೇಷ್ಟಾ ಸರ್ವಭೂತಾನಾಂ,, (೧೨॥ ೧೩॥) ಇತ್ಯಾದಿಗಳಿಂದ ಯಾವ ಧರ್ಮಗಳು ಉಪದೇಶಿಸಲ್ಪಟ್ಟವೊ ಅವುಗಳೆ “ಯೇತು ಧರ್ಮ್ಯಾಮೃತಮಿದಂ,, (೧೨॥ ೨೦) ಎಂಬೀಶ್ಲೋಕದಿಂದ ಉಪಸಂಹಾರ ಮಾಡಲ್ಪಡುವುವೆಂಬದಾಗಿ ವ್ಯಾಖ್ಯಾನಮಾಡಿರುತ್ತಾರೆ. ಅದು ಯುಕ್ತವಲ್ಲವು. ಅದು ಹೇಗೆಂದರೆ“ಮಯ್ಯಾವೇಶ್ಯ ಮನೋಯೇಮಾಂ,, (೧೨॥ ೧೨॥) ಎಂಬ ಶ್ಲೋಕಕ್ಕೂ ಈ ಶ್ಲೋಕಕ್ಕೂ ಏಕಾರ್ಥವೇ ಕಾಣಲ್ಪಡುವುದು. “ ಮಯ್ಯಾವೇಶ್ಯಮನೋಯೇಮಾಂ ನಿತ್ಯಯುಕ್ತಾ ಉಪಾಸತೇ । ಶ್ರದ್ಧಯಾ ಪರಯೋಪೇತಾಸ್ತೇಮೇ ಯುಕ್ತತಮಾಮತಾಃ,, (೧೨॥ ೨॥) ಎಂಬ ಶ್ಲೋಕದಲ್ಲಿ ನಿತ್ಯಯುಕ್ತಾಃ, ಎಂಬದಾಗಿ ಹೇಳಲ್ಪಟ್ಟ ಅರ್ಥವೆ ಇಲ್ಲಿ, ‘ಮತ್ಪರಮಾಃ, ಎಂಬ ಪದದಿಂದ ಹೇಳಲ್ಪಟ್ಟಿತು. ಅಲ್ಲಿ ‘ಶ್ರದ್ಧಯಾಪರಯಾ, ಎಂಬದಾಗಿ ಹೇಳಲ್ಪಟ್ಟ ಅರ್ಥವೆ ಅಲ್ಲಿ ‘ಶ್ರದ್ಧಧಾನಾ, ಎಂಬ ಪದದಿಂದ ಸಂಗ್ರಹೀತವಾಯಿತು. ಅಲ್ಲಿ“ತೇಮೇಯುಕ್ತತಮಾಃ,,ಎಂಬದಾಗಿ ಹೇಳಲ್ಪಟ್ಟ ಅರ್ಥದ ಫಲಿತಾಂಶವಾಗಿಯೇ ಇಲ್ಲಿ ‘ಭಕ್ತಾಸ್ತೇತೀವಮೇಪ್ರಿಯಾಃ, ಎಂಬದಾಗಿ ಹೇಳಲ್ಪಟ್ಟಿರುತ್ತದೆ. ಆದುದರಿಂದ ಆ ಅರ್ಥವೆ ಇಲ್ಲಿಯೂ ಸಂಗೃಹೀತವಾಯಿತು. ಆದುದರಿಂದಲೆ ಪ್ರಕಾರಾಂತರವಾಗಿ ಅನ್ಯರು ಮಾಡಿರುವ ವ್ಯಾಖ್ಯಾನವು ಆಯುಕ್ತವೆಂದರಿಯಬೇಕು.

ಆದರೆ “ಚತುರ್ವಿಧಾಭಜಂತೇಮಾಂಜನಾಸ್ಸುಕೃತಿನೋಽರ್ಜುನ । ಆರ್ತೋಜಿಜ್ಞಾಸುರರ್ಥಾರ್ಥೀಜ್ಞಾನೀಚ ಭರತರ್ಷಭ,, (೭॥ ೧೬॥) ಎಂಬ ಶ್ಲೋಕದಲ್ಲಿ ಹೇಳಲ್ಪಟ್ಟವರೆಲ್ಲರೂ ಭಕ್ತರಾಗಿರುವಲ್ಲಿ ಇಲ್ಲಿ, ಭಕ್ತಾಸ್ತೇತೀವಮೇಪ್ರಿಯಾಃ, ಎಂಬದಾಗಿ ಅವರಿಗೇನೆ ಭಕ್ತತ್ವವನ್ನು ಹೇಳಿ ಪರಮಾತ್ಮನಾದ ತನಗೆ ಅಂತವರು ಅತ್ಯಂತ ಪ್ರಿಯರೆಂಬದಾಗಿ ಹೇಳಬಹುದೋ ? ಈ ಪ್ರಕಾರವಾಗಿ ಹೇಳಿದರೆ ಸಪ್ತಮಾಧ್ಯಾಯದಲ್ಲಿ ಹೇಳಲ್ಪಟ್ಟವರು ಭಕ್ತರಲ್ಲವೆಂತಲೂ ಭಗವತ್ಪ್ರಿಯರಲ್ಲವೆಂತಲೂ ಹೇಳಿ

ದಂತೆ ಆಗುವುದರಿಂದ ಪೂರ್ವಾಪರ ಗ್ರಂಥವಿರೋಧವೂ ಬರುವುದಿಲ್ಲವೊ? ಎಂದರೆ ಇಲ್ಲಿ ಯಾವ ವಿರೋಧವೂ ಇಲ್ಲವು. ಸಪ್ತಮಾಧ್ಯಾಯ ಲಕ್ಷಿತರಾತ ಆರ್ತಜಿಜ್ಞಾಸು ಅರ್ಥಾರ್ಥಿಗಳೆಂಬೀ ತ್ರಿವಿಧರಿಗೂ ಭಕ್ತತ್ವವಿರುವುದೆಂಬೀ ಅಂಶವನ್ನು ಇಲ್ಲಿಯೂ ಪ್ರಸಿದ್ಧ ಪಡಿಸುವುದಕ್ಕಾಗಿಯೆ 'ತೇಭಕ್ತಾಃ, ಎಂಬದಾಗಿ ಇಲ್ಲಿನ ಭಕ್ತರು ಪೂರ್ವೋಕ್ತ ಭಕ್ತರಿಗಿಂತಲೂ ವಿಲಕ್ಷಣರೆಂಬದಾಗಿ ವಿಶೇಷಿಸಲ್ಪಟ್ಟಿರುವರು. ಆದರೆ ಎಲ್ಲರೂ ಭಕ್ತರಾಗಿಯೂ ಭಗವತ್ಪ್ರಿಯರಾಗಿಯೂ ಇರುವಲ್ಲಿ ಇಲ್ಲಿ ಪ್ರಕೃತರಾದ ಭಕ್ತರಿಗೆ ಮಾತ್ರ ವೈಲಕ್ಷಣ್ಯವನ್ನು ಹೇಳುವುದಕ್ಕೆ ಯೇನು ಕಾರಣವೆಂದರೆ? ಅದನ್ನು ವಿವರಿಸುವೆವು. ಆರ್ತಜಿಜ್ಞಾಸು ಅರ್ಥಾರ್ಥಿಗಳಿಗೆ ಭಗವತ್ಪ್ರಿಯತ್ವ ಮುಂಟಾಗುವುದಕ್ಕೆ ಆ ಭಕ್ತರಲ್ಲಿರುವ ಉದಾರತ್ವವೆ ಕಾರಣವು. ಈ ಅರ್ಥವು "ಉದಾರಾಸ್ಸರ್ವಏವೈತೆ,, (೭॥ ೧೮॥) ಎಂಬದಾಗಿ ಪೂರ್ವವೆ ವಿವರಿಸಲ್ಪಟ್ಟಿತು. "ಇವರೆಲ್ಲರೂ ಮಹಾ ಉದಾರರು. ನಮ್ಮಲ್ಲಿ ಸ್ವಲ್ಪ ಫಲವನ್ನಾದರೂ ಗ್ರಹಿಸಿ ದಾತೃತ್ವ ಪ್ರಸಿದ್ಧಿಯನ್ನು ನನಿಗುಂಟುಮಾಡಿದ ಮಹಾ ವದಾನ್ಯರು,, ಎಂಬದಾಗಿ ಆದಕ್ಕೆ ಅರ್ಥವು. ಇಲ್ಲಿ ಭಕ್ತಾಸ್ತೇತೀವಮೇಪ್ರಿಯಾಃ, ಎಂಬುವುದರಿಂದ ಇಲ್ಲಿನ ಭಕ್ತರು ತನಿಗೆ ಅತ್ಯಂತ ಪ್ರಿಯರೆನ್ನುವುದಕ್ಕೆ ತನಿಗಭಿಮತವಾದ ಅಂತರಾತ್ಮತ್ವ ಪ್ರಯುಕ್ತವಾದ ವೈಲಕ್ಷಣ್ಯವೆ ಕಾರಣವಾಗಿರುವುದು. ಈ ಅರ್ಥವು ಸಪ್ತಮಾಧ್ಯಾಯದಲ್ಲಿಯೂ "ತೇಷಾಂ ಜ್ಞಾನೀ ನಿತ್ಯಯುಕ್ತ ಏಕಭಕ್ತಿರ್ವಿಶಿಷ್ಯತೆ। ಪ್ರಿಯೊಹಿಜ್ಞಾನಿನೊತ್ಯರ್ಥಮಹಂಸಚಮಮಪ್ರಿಯಃ॥ ಜ್ಞಾನೀತ್ವಾತ್ಮೈವಮೇಮತಂ॥ ,, ಎಂಬದಾಗಿ ವಿವರಿಸಲ್ಪಟ್ಟಿರುತ್ತದೆ. ಆದುದರಿಂದ ಸರ್ವರಿಗೂ ಭಕ್ತತ್ವವಿರುವುದೆಂದು ಹೇಳುವುದಕ್ಕೆ ಯಾವ ಕೊರತೆಯೂ ಇಲ್ಲವು. ॥೨೦॥

(ಶ್ರೀ)ಧರ್ಮ್ಯಾಮೃತಂ ಎಂಬದಾಗಿ ಈಮಾತವು.ಈಧರ್ಮಗಳ್ಯಾವವೆಂದರೆ "ಅದ್ವೇಷ್ಟಾಸರ್ವಭೂತಾನಾಂ,,(೧೨॥೧೩॥)ಇತ್ಯಾದಿಯಾಗಿರ್ನೇಶ್ಲೋಕದವರೆಗೂ ಹೇಳಲ್ಪಟ್ಟವುಗಳೆಂತಲೇ ತಿಳಿಯಬೇಕು. ಈಧರ್ಮಗಳು ಮೋಕ್ಷಕಾರಣಗಳಾಗಿರುವುದರಿಂದಅಮೃತವೆನ್ನಲ್ಪಟ್ಟಿರುವುವು. ದುಃಖಮವ್ಯಕ್ತವರ್ತ್ಮ ತದ್ಬಹುವಿಘ್ನಮತೋಬುಧಃ।ಸುಖಂಕೃಷ್ಣ

ಪದಾಂಭೋಜಭಕ್ತಿಸತ್ಪಥಮಾಭಜೇತ್॥ ನಿರ್ಗುಣೋಪಾಸನಮಾರ್ಗವು ಬಹು ಕಷ್ಟಸಾಧ್ಯವಾಗಿಯೂ ಬಹುವಿಘ್ನಪ್ರತಿಹತಿಯುಳ್ಳದ್ದಾಗಿಯೂ ಇರುವುದರಿಂದ ಅಶಕ್ಯವೆಂದೆಣಿಸಿ ವಿವೇಕಿಯಾದವನು ಶ್ರೀಕೃಷ್ಣಚರಣಾರವಿಂದ ಭಕ್ತಿಮಾರ್ಗವು ಸುಖವಾಗಿ ಮೋಕ್ಷಪ್ರಾಪಕವಾಗಿರುವುದೆಂದು ತಿಳಿದು ಅದನ್ನಾಶ್ರಯಿಸಬೇಕು. ॥೨೦॥

(ಗೀ॥ ವಿ॥) "ಅದ್ವೇಷ್ಟಾ ಸರ್ವಭೂತಾನಾಂ,,(೧೩॥೧೪॥) ಇತ್ಯಾದಿ ಶ್ಲೋಕಗಳಲ್ಲಿ ಅದ್ವೇಷಾದಿ ಧರ್ಮಗಳು ಪ್ರತ್ಯೇಕ ಪ್ರತ್ಯೇಕವಾಗಿ ಯಾವವು ಹೇಳಲ್ಪಟ್ಟಿರುವುವೊ ಅವೆಲ್ಲವೂ ಭಗವತ್ಪ್ರೀತಿ ಮಾತ್ರ ಸಾಧನಗಳಾಗಿರುವುವೆಂದು "ಸ ಮೇ ಪ್ರಿಯಃ-ಸಚಮೇಪ್ರಿಯಃ ,, ಇತ್ಯಾದಿಗಳಿಂದ ಹೇಳಲ್ಪಟ್ಟಿತೆಂದರಿಯಬೇಕು. ಆಶ್ಲೋಕಗಳಲ್ಲಿ ಹೇಳಿರುವ ಸರ್ವಧರ್ಮಗಳೂಯಾವಅಧಿಕಾರಿಯಲ್ಲಿಸೇರಿರುವುವೊ ಅಂತವನು ತನಿಗೆಅಂತ್ಯಂತಪ್ರೀತಿಪಾತ್ರನೆಂಬದಾಗಿ ಪೂರ್ವೋಕ್ತವಾದ ಅರ್ಥಗಳನ್ನು ಸೇರಿಸಿಹೇಳುತ್ತಾನೆಂದರಿಯಬೇಕು. ಧರ್ಮ್ಯಮೃತಂ- (ಮ॥ ಗೀ॥ ವಿ॥) ಧರ್ಮಃ-ಧಾರಕತ್ವಾದ್ಧರ್ಮೋವಿಷ್ಣುಃ- ವಿಷು ವಿಷಯವಾಗಿರುವುದರಿಂದ ಇದು ಧರ್ಮ್ಯವೆಂತಲೂ, ಮೃತಂ ಎಂದರೆ ಮರಣವು, ಮರಣವೇ ಮೊದಲಾದ ಸಕಲ ದುಃಖಗಳನ್ನು ಹೋಗಲಾಡಿಸಿ ಮುಕ್ತಿಯನ್ನು ಕೊಡುವುದರಿಂದ ಅಮೃತವೆಂತಲೂ ಹೇಳಲ್ಪಟ್ಟಿರುವುದು. ಮತ್ಪರಮಾಃ- ನನ್ನನ್ನೇ ಸರ್ವೋತ್ತಮನೆಂದರಿತವರು. ॥೨೦॥

(ಅದ್ವೈತಸಿದ್ಧಾಂತಾನುಸಾರವಾಗಿ)
ಈಅಧ್ಯಾಯಾರ್ಥಗಳನ್ನೊಂದುಶ್ಲೋಕದಿಂದ
ಸಂಗ್ರಹಿಸುತ್ತಾರೆ.

ನಾನಾವಿಕ್ಷೇಪವಿಘ್ನೈರುಪಹತಮನಸಾ ಲಂಬಶೂನ್ಯೇ
ನಚಾಽವ್ಯಕ್ತ್ಯೈಕ್ಯೇ ಪಾಪ್ತುಮೇಕೇಪಿದಧತಿ ಸುಚಿರಂ
ಲೌಕಿಕಾಚಾರ್ಯತ್ರೋಽನ್ಯೇ। ಭಕ್ತಿಂಯೋಗೇಶ್ವರಾಣಾಮಪಿ
ಪರಮಗುರೌ ಕಾರ್ಯತ್ರೇಸ್ವಾತ್ಮಲಬ್ಧ್ಯೈತತ್ರೈ ಶೇಷಾ ವರ
ಮ್ಯಾಂಪಿಶಮೇಸುಭಿತಿತಂದ್ವಾದಶಾಧ್ಯಾಯಮಧ್ಯೇ ।೧೨।

(ತಾತ್ಪರ್ಯವು) ಕೆಲವರು ಅನೇಕವಿಧಗಳಾದ ವಿಷಯ ಪ್ರವೃತ್ತಿಗಳೇನು ತದ್ವಿಷಯವಾದ ಸಂಕಲ್ಪ ವಿಕಲ್ಪಗಳೇನು, ಎಂಬೀ ವಿಘ್ನಗಳಿಂದ ಚಂಚಲವಾಗಿಯೂ, ಲಕ್ಷ್ಯವಸ್ತುವಿಲ್ಲದ್ದಾಗಿಯೂ ಇರುವ ಮನಸ್ಸನ್ನು (ಗುರೂಪದೇಶ ದ್ವಾರಾಗ್ರಹಿಸಲ್ಪಟ್ಟ ಮಾರ್ಗಪ್ರಕಾರವಾಗಿ ಅಭ್ಯಾಸಮಾಡಿ ಅದರಿಂದ) ಸ್ವಾಧೀನ ಪಡಿಸಿಕೊಂಡು ಅವ್ಯಕ್ತಾಕ್ಷರ ಶಬ್ದಗಳಿಂದ ಹೇಳಲ್ಪಡುವ ಬ್ರಹ್ಮಸ್ವರೂಪ ಧ್ಯಾನವಂ ಮಾಡುವರು. ಮತ್ತೆ ಕೆಲವರು ಮೋಕ್ಷಪ್ರಾಪ್ತಿಗಾಗಿ ಯೋಗಿಗಳಿಗೆ ಸಿದ್ಧಿಯನ್ನುಂಟುಮಾಡುವ ಪರಮಾತ್ಮನಲ್ಲಿ ಗುರೂಪದೇಶ ಪ್ರಕಾರವಾಗಿ ನಿರಂತರ ಭಕ್ತಿಯಂ ಮಾಡುವರು. ಈ ಎರಡು ವಿಧಗಳಾದ ಮಾರ್ಗಗಳಿಗಿರುವ ತಾರತಮ್ಯವನ್ನು ಶ್ರೀ ಕೃಷ್ಣಸ್ವಾಮಿಯು ಅರ್ಜುನನಿಗೆ ಉಪದೇಶಿಸಿದನೆಂಬದಾಗಿ ಈ ಅಧ್ಯಾಯವು ವಿಶದ ಪಡಿಸುವುದೆಂದರಿಯಬೇಕು. ... ... ||೧೨||

ಶ್ರೀಮದ್ಯಾಮುನಾಚಾರ್ಯರಿಂದ ಅನುಗ್ರಹಿಸಲ್ಪಟ್ಟ
ಶ್ರೀಮದ್ಗೀತಾರ್ಥ ಸಂಗ್ರಹಶ್ಲೋಕವು.

ಭಕ್ತೇಶ್ಶ್ರೈಷ್ಠ್ಯ ಮುಪಾಯೋಕ್ತಿರಶಕ್ತಸ್ಯಾತ್ಮನಿಷ್ಠತಾ | ತತ್ಪ್ರಕಾರಾಸ್ತ್ವತಿಪ್ರೀತಿ ರ್ಭಕ್ತೇದ್ವಾದಶ ಉಚ್ಯತೇ|| ... ... ||೧೬||

ಈ ಅಧ್ಯಾಯಾರ್ಥಗಳನ್ನೊಂದು ಶ್ಲೋಕದಿಂದ ಸಂಗ್ರಹಿಸುತ್ತಾರೆ. ಭಕ್ತೇಶ್ಶ್ರೈಷ್ಠ್ಯಂ - ಅನಂತರದಲ್ಲಿ ಆತ್ಮಪ್ರಾಪ್ತಿ ಸಾಧನ ಭೂತವಾದ ಆತ್ಮೋಪಾಸನಕ್ಕಿಂತಲೂ ಭಕ್ತಿರೂಪವಾದ ಭಗವದುಪಾಸನಕ್ಕೆ ತನ್ನ ಫಲಸಾಧನ ವಿಷಯದಲ್ಲಿ ಶೈಘ್ರ್ಯದಿಂದಲೂ ಸುಕರವಾಗಿರುವುದರಿಂದಲೂ ಶ್ರೈಷ್ಠ್ಯವೂ; ಭಗದುಪಾಸನೋಪಾಯವೂ; ಭಗವದುಪಾಸನದಲ್ಲಿ ಅಶಕ್ತನಾದವನಿಗೆ ಆತ್ಮನಿಷ್ಠೆಯೂ, ಆ ಅಕ್ಷರೋಪಾಸನ ಪ್ರಕಾರಗಳೂ; ಭಕ್ತಿಯುಳ್ಳವರು ಪರಮಾತ್ಮನಿಗೆ ಅತ್ಯಂತ ಪ್ರೀತಿಪಾತ್ರರೆಂಬೀ ಅರ್ಥವೂ; ಈ ೧೨ನೇ ಅಧ್ಯಾಯದಲ್ಲುಪದಿಷ್ಟವಾಯಿತೆಂದರಿಯಬೇಕು. ... ||೧೬||

ಶ್ರೀಮನ್ನಿಗಮಾನ್ತ ಮಹಾದೇಶಿಕರಿಂದ
ಅನುಗೃಹೀತವಾದ (೧೨) ನೇ ಅಧ್ಯಾಯಾರ್ಥ
ಸಂಗ್ರಾಹಕವಾದ ಶ್ರೀಮದ್ಗೀತಾರ್ಥಸಂಗ್ರಹ
ಗಾಥೆಯು,

ಮೂ॥ ತನ್ಕಳಲಿಲ್ಪತ್ತಿ ತಾಳಾತತು ಮದಿರ್ಕಾರಣ ಮಾಮ್, ಇರ್ಕಣ್ಚಿಂದೈಯು ವಿಹಾತರಿಯಾರ್ಕ್ಕುವ್ವಡಿ ಮೈಕಳುಮ್, ತರ್ಕರುಮಂಗ ಳರಿಯಾದವರ್ಕ್ಕುಲಕುನಿ ಲೈಯುಮ್, ತನ್ಕಳಲನ್ಬರ್ಕ್ಕ ನಲ್ಲವರ್ ಶಾತ್ತಿನರ್ ಪಾ ರ್ತನುಕ್ಕೆ ॥ ... ... ॥೧೩॥

ಟೀ॥ "ಭಕ್ತೇಶ್ಶ್ರೈಷ್ಠ್ಯಂ,, ಇತ್ಯಾದಿಸಂಗ್ರಹ ಶ್ಲೋಕ ದಂತೆ ಈ ಹನ್ನೆರಡನೇ ಅಧ್ಯಾಯದ ಅರ್ಥವನ್ನು ಒಂದುಗಾಥೆಯಿಂದ ಸಂಗ್ರಹಿಸುತ್ತಾರೆಂದರಿಯಬೇಕು. ತನ್ಕಳಲ್-ತನ್ನ ಚರಣಾರವಿಂದಗ ಳಲ್ಲಿ, ಅನ್ಬರ್ಕ್ಕ-ಪ್ರೇಮೆಯುಳ್ಳವರಿಗೆ,, ನಲ್ಲವರ್-ಸಾಧುತಮನು, (ಸ್ವ ಚರಣಾರವಿಂದ ಭಕ್ತರ ವಿಷಯದಲ್ಲಿ "ಜ್ಞಾನೀತ್ವಾತ್ಮೈವಮೇಮತಂ,, (೭—೧೮) ಎಂಬ ರೀತಿಯಿಂದ ಸ್ವಾಂತರಾತ್ಮತ್ವ ಬುದ್ಧಿಯನ್ನು ಮಾಡುವ ಪರಮ ಪುರುಷನೆಂದರ್ಥವು. ಇದರಿಂದ " ಯೇತುಧರ್ಮ್ಯಾ ಮೃತಮಿದಂಯಥೋಕ್ತಂಪರ್ಯುಪಾಸತೆ । ಶ್ರದ್ದಧಾನಾಮತ್ಪರಮಾಭ ಕ್ತಾಸ್ತೇ ತೀವಮೇಪ್ರಿಯಾಃ,, (೧೨॥ ೨೦) ಎಂಬೀಶ್ಲೋಕದಲ್ಲಿ ಪ್ರತಿಪಾದಿಸಲ್ಪಟ್ಟ ತನ್ನ ಭಕ್ತರ ವಿಷಯದಲ್ಲಿರುವ ನಿರತಿಶಯ ಪ್ರೀತಿ ಯು ಹೇಳಲ್ಪಟ್ಟಿತೆಂದರಿಯಬೇಕು.) ತನ್ಕಳಲಿಲ್-ತನ್ನ ಚರಣಾರ ವಿಂದ ವಿಷಯವಾದ, ಪತ್ತಿ-ಭಕ್ತಿಯೋಗವು,ತಾಳಾತತುಮ್-ವಿಲಂಬಿ ಸದೇ ಫಲಪ್ರದವಾಗುವ ಪ್ರಕಾರವನ್ನೂ, (ಪ್ರತ್ಯಗಾತ್ಮಪ್ರಾಪ್ತಿಸಾ ಧನೀಭೂತವಾದ ತನ್ನ ಉಪಾಸನಕ್ಕೆ ಫಲೋಪಾದಾನ ಶೀಘ್ರತೆ ಯನ್ನು ಎಂದರ್ಥವು.) ಅದಿರ್ - ಆ ಭಕ್ತಿಯೋಗಕ್ಕೆ, ಕಾರಣಮಾ ಮ್-ಸಾಧನನಾಗಿರುವ, ಇರ್-ಭೋಗ್ಯಭೂತವಾದ, (ಇದು ಚಿಂತೆಗೆ ವಿಶೇಷಣವು) ಕಣಮ್-ನಿರತಿಶಯ ಪ್ರೀತಿರೂಪಾಪನ್ನವಾಗಿರುವ ದ

ರ್ಶನ ಸಮಾನಾಕಾರವಾದ ಧ್ರುವಾನುಸ್ಮೃತಿರೂಪ ಭಕ್ತಿಯೋಗೆ ಸಕ್ತನಿಗೆ ತತ್ಸಾಧನೀಭೂತ ಭಗದ್ಗುಣಾಭ್ಯಾಸವನ್ನು ಎಂದರ್ಥವು. ಇರ್ಕುಣರೆಂಬದಾಗಿ ಗುಣಿಪರ್ಯಾಯತ್ವೋಪಾದಾನವು ಗುಣಿವಿನಾಕೃತವಾದ ಗುಣಚಿಂತನವು ಸಂಭವಿಸಲಾರದೆಂಬುವುದಂ ಸೂಚಿಸುವುದಕ್ಕಾಗಿ ಎಂದರಿಯಬೇಕು. ಗುಣಗಳಿಗೆ ಭೋಗ್ಯತ್ವೋಕ್ತಿಯಿಂದ ಚಿಂತಾಸೌಕರ್ಯವು ವ್ಯಂಜಿತ ವಾಗುವುದು. ಅದು-ಈ ಗುಣಚಿಂತನವನ್ನು, ಅರಿಯಾರ್ಕ್ಕು-ತಿಳಿಯದವರಿಗೆ,ಅವ್ವಡಿ ಪ್ಪೈಕಳುಮ್-ಆಕ್ಕೈಂಕರ್ಯಗಳನ್ನೂ, ಭಗದ್ಗುಣ ಚಿಂತನಾಸಕ್ತನಾದವನಿಗೆ ‘‘ಅಭ್ಯಾಸೇಪ್ಯ ಸಮರ್ಥೋಸಿ,, (೧೨॥) ಎಂಬೀ ಶ್ಲೋಕಭಾಷ್ಯದಲ್ಲಿ ಹೇಳಿರುವಂತೆ ಆಲಯ ನಿರ್ಮಾಣೋದ್ಯಾನ ನಿರ್ಮಾಣವೆ ಮೊದಲಾದ ಕೈಂಕರ್ಯಗಳನ್ನೂ ಎಂದರ್ಥವು. ಇವೈ-ಇವುಗಳನ್ನು, (ಪೂರ್ವೋಕ್ತ ಭಗವತ್ಕರ್ಮಗಳನ್ನೂ ಎಂದರ್ಥವು) ಅರಿಯಾದವರ್ಕ್ಕು-ತಿಳಿಯದವರಿಗೆ, ಲಕುನಿಲೈ-ಲಘುವಾದ ನಿಷ್ಠೆಯನ್ನೂ, (ಪೂರ್ವೋಕ್ತವಾದ ಭಗವತ್ಕರ್ಮಗಳಂ ಮಾಡಲಶಕ್ತನಾದವನಿಗೆ) ಆತ್ಮಸ್ವಭಾವಾನು ಸಂಧಾನ ರೂಪವಾದ ಆತ್ಮನಿಷ್ಠೆಯನ್ನೂ ಎಂದರ್ಥವು) ಅದು ‘‘ಅದ್ವೇಷ್ಟಾಸರ್ವಭೂತಾನಾಂ,, (೧೨॥ ೧೩॥) ಇತ್ಯಾದಿಗಳಿಂದ ಹೇಳಲ್ಪಟ್ಟಿರುವ ತದಪೇಕ್ಷಿತ ಪ್ರಕಾರಗಳಿಗೆ ಉಪಲಕ್ಷಣವಾಗಿರುವುದು. ಪಾರ್ತ್ತನುಕ್ಕು-ಅರ್ಜುನನಿಗೆ, ಶಾತ್ತಿನರ್-ವಿಶದವಾಗಿ ಉಪದೇಶಿಸಿದನು. ॥೧೩॥

ಇತಿ ಶ್ರೀಮದ್ಗೀತಾರ್ಥಸಾರೇ ದ್ವಾದಶಾಧ್ಯಾಯಃ.

ಶ್ರೀಮದ್ಗೀತಾರ್ಥಸಾರದಲ್ಲಿ ಮಧ್ಯಮಷಟ್ಕವು
ಸಂಪೂರ್ಣವಾಯಿತು.

---

ಶ್ರೀ ಕೃಷ್ಣಾಯ ಪರಬ್ರಹ್ಮಣೇನಮಃ.



ಶ್ರೀಯೈ ನಮಃ.

ಶ್ರೀಹಯಗ್ರೀವಾಯನಮಃ.



## ಶ್ರೀಪಾರ್ಥಸೂತಾಯ ಪರಬ್ರಹ್ಮಣೇನಮಃ.



## ಶ್ರೀಭಗವದ್ಗೀತಾ ಪೂರ್ವಪೀಠಿಕಾ ಪ್ರಾರಮ್ಭಃ.



ಲಕ್ಷ್ಮೀನಾಥಸಮಾರಮ್ಭಾಂ ನಾಥಯಾಮುನಮಧ್ಯಮಾಂ ।ಅಸ್ಮ
ದಾಚಾರ್ಯಪರ್ಯಂತಾಂವಂದೇಗುರುಪರಂಪರಾಂ ॥ ೧ ॥ಅಸ್ಮದ್ಗುರು ಸ
ಮಾರಂಭಾಂ ಯತಿಶೇಖರಮಧ್ಯಮಾಮ್ । ಲಕ್ಷ್ಮೀವಲ್ಲಭಪರ್ಯನ್ತಾಂ
ವಂದೇಗುರುಪರಂಪರಾಮ್ ॥ ೨ ॥ ಇತಾದಿ ತತ್ತತ್ಸಮ್ಪ್ರದಾಯಾನು
ಗುಣಂಗುರುಪರಮ್ಪರಾನುಸಂಧಾನಾನಂತರ ಮನುಸಂಧೇಯಶ್ಲೋ
ಕಾಃ ॥*॥ ಶುಕ್ಲಾಂಬರಧರಂವಿಷ್ಣುಂಶಶಿವರ್ಣಂಚತುರ್ಭುಜಂ ।ಪ್ರ
ಸನ್ನವದನಂಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ೩ ॥ ಯಸ್ಯದ್ವಿರ
ದವಕ್ತ್ರಾದ್ಯಾಃಪಾರಿಷದ್ಯಾಃಪರಶ್ಶತಂ । ವಿಘ್ನಂನಿಘ್ನಂತಿಸತತಂವಿ
ಷ್ವಕ್ಸೇನಂತಮಾಶ್ರಯೇ ॥೪॥ ಸಮ್ಯಙ್ನ್ಯಾಯಕಲಾಪೇನಮಹ
ತಾಭಾರತೇನಚ । ಉಪಬ್ರಂಹಿತವೇದಾಯನಮೋವ್ಯಾಸಾಯವಿಷ್ಣ
ವೇ॥೫॥ ವ್ಯಾಸಂವಸಿಷ್ಠನಪ್ತಾರಂಶಕ್ತೇಃಪೌತ್ರಮಕಲ್ಮಷಂ । ಪರಾ
ಶರಾತ್ಮಜಂವಂದೇಶುಕತಾತಂತಪೋನಿಧಿಂ ॥೬॥ ವ್ಯಾಸಾಯವಿಷ್ಣು
ರೂಪಾಯವ್ಯಾಸರೂಪಾಯವಿಷ್ಣವೇ । ನಮೋವೈಬ್ರಹ್ಮನಿಧಯೇ
ವಾಸಿಷ್ಠಾಯನಮೋನಮಃ ॥೭॥ ಮುನಿಂಸ್ನಿಗ್ಧಾಂಬುದಾಭಾಸಂವೇ
ದಾವಾಸಮಕಲ್ಮಷಂ । ವೇದವ್ಯಾಸಂಸರಸ್ವತ್ಯಾವಾಸಂವ್ಯಾಸಂನಮಾ
ಮ್ಯಹಂ ॥೮॥ ಅಚತುರ್ವದನೋಬ್ರಹ್ಮಾದ್ವಿಬಾಹುರಪರೋಹರಿಃ । ಅ
ಫಾಲಲೋಚನಶ್ಶಂಭುರ್ಭಗವಾನ್ಬಾದರಾಯಣಃ ॥೯॥ ಕೃಷ್ಣಂಕಮ
ಲಪತ್ರಾಕ್ಷಂ ಪುಣ್ಯಶ್ರವಣಕೀರ್ತನಂ । ವಾಸುದೇವಂಜಗದ್ಯೋನಿಂ
ನೌಮಿನಾರಾಯಣಂಹರಿಂ ॥೧೦॥ ಕೃಷ್ಣಾಯಯಾದವೇಂದ್ರಾಯಜ್ಞಾ
ನಮುದ್ರಾಯಯೋಗಿನೇ । ನಾಥಾಯರುಕ್ಮಿಣೀಶಾಯನಮೋವೇದಾ
ನ್ತವೇದಿನೇ ॥೧೧॥ ಪ್ರಪನ್ನಪಾರಿಜಾತಾಯತೋತ್ರವೇತ್ರೈಕಪಾಣ
ಯೇ । ಜ್ಞಾನಮುದ್ರಾಯಕೃಷ್ಣಾಯ ಗೀತಾಮೃತದುಹೇನಮಃ ॥೧೨॥

ಸಾರಥ್ಯಮರ್ಜುನಸ್ಯಾಜೌ ಕುರ್ವನ್ಗೀತಾಮೃತಂದದೌ । ಲೋಕತ್ರ
ಯೋಪಕಾರಾಯತಸ್ಮೈಕೃಷ್ಣಾತ್ಮನೇನಮಃ ॥೧೩॥ ಸರ್ವೋಪನಿಷ
ದೋಗಾವೋದೋಗ್ಧಾ ಗೋಪಾಲನಂದನಃ। ಪಾರ್ಥೋವತ್ಸಸ್ಸುಧೀ
ರ್ಭೋಕ್ತಾದುಗ್ಧಂಗೀತಾಮೃತಂಮಹತ್ ॥ ॥೧೪॥

ಕರಕಮಲನಿದರ್ಶಿತಾತ್ಮಮುದ್ರಃ ಕರಿಕಲಿತೋನ್ನತ ಬರ್ಹಿಬರ್ಹ
ಚೂಡಃ । ಇತರಕರಗೃಹೀತವೇತ್ರತೋತ್ರೋಮಮಹೃದಿಸನ್ನಿಧಿಮಾ
ತನೋತುಶೌರಿಃ ॥ ೧ ॥ ಇತಾಮ್ರಪಾಣಿಕಮಲ ಪ್ರಣಯಪ್ರತೋದ
ಮಾಲೋಲಹಾರಮಣಿಕುಣ್ಡಲಹೇಮಸೂತ್ರಂ । ಆವಿಶ್ಯ ಮಾಂಬುಕ
ಣಮಂಬುದನೀಲಮವ್ಯಾದಾದ್ಯಂಧನಂಜಯ ರಥಾಭರಣಂಮಹೋ
ನಃ ॥ ೨ ॥ ಅಗ್ರೇಕೃತ್ವಾಕಮಪಿಚರಣಂಜಾನುನೈಕೇನತಿಷ್ಠನ್ಪಶ್ಚಾ
ತ್ಪಾರ್ಥಂ ಪ್ರಣಯರಸಜುಷಾಚಕ್ಷುಷಾವೀಕ್ಷಮಾಣಃ । ಸವ್ಯೇತೋ
ತ್ರಂಕರಸರಸಿಜೇದಕ್ಷಿಣೇಜ್ಞಾನ ಮುದ್ರಾಮಾಬಿಭ್ರಾಣೋರಥಮಧಿವ
ಸನ್ಪಾತುನಸ್ಸೂತವೇಷಃ ॥೩॥ ವಂದೇಕೃಷ್ಣಾರ್ಜುನೌವೀರೌನರನಾ
ಯಣಾವುಭೌ। ಧೃತರಾಷ್ಟ್ರಸುತೋನ್ಮತ್ತಗಜಾರೋಹಣವಲ್ಲಭೌ॥

## ✱ ಶ್ರೀಭಗವದ್ಗೀತಾ ಮಾಹಾತ್ಮ್ಯಂ. ✱

ಗೀತಾಶಾಸ್ತ್ರಮಿದಂಪುಣ್ಯಂ ಯಃಪಠೇತ್ಪ್ರಯತಃಪುಮಾನ್ । ವಿ
ಷ್ಣೋಃಪದಮವಾಪ್ನೋತಿಭಯಶೋಕಾದಿವರ್ಜಿತಃ ॥೧೫॥ ಭಾರತಾ
ಮೃತಸರ್ವಸ್ವಂ ವಿಷ್ಣೋರ್ವಕ್ತ್ರಾದ್ವಿನಿಸ್ಸೃತಂ। ಗೀತಾಗಂಗೋದಕಂ
ಪೀತ್ವಾಪುನರ್ಜನ್ಮನವಿದ್ಯತೇ ॥೧೬॥ ಗೀತಾಸುಗೀತಾಃಕರ್ತವ್ಯಾಃ ಕಿ
ಮನ್ಯೈಶ್ಶಾಸ್ತ್ರಸಂಗ್ರಹೈಃ । ಯಾಸ್ಸ್ವಯಂಪದ್ಮನಾಭಸ್ಯಮುಖಪ
ದ್ಮಾದ್ವಿನಿಸ್ಸೃತಾಃ ॥೧೭॥ ಗೀತಾಧ್ಯಯನಶೀಲಸ್ಯಪ್ರಾಣಾಯಾಮಪರ
ಸ್ಯಚ ॥ ನೈವಸಂತಿಹಿಪಾಪಾನಿ ಪೂರ್ವಜನ್ಮಕೃತಾನ್ಯಪಿ ॥೧೮॥ ಅಕೃ
ತ್ಯಮಪಿಕುರ್ವಾಣೋ ಭುಂಜಾನೋವಾಯತಸ್ತತಃ । ಘೋರಂವೈವಸ್ವ
ತಸ್ಥಾನಂ ಗೀತಾಧ್ಯಾಯೀನಪಶ್ಯತಿ ॥ ೧೯ ॥ ಮಲನಿರ್ಮೋಚನಂಪುಂ
ಸಾಂಜಲಸ್ನಾನಂದಿನೇದಿನೇ । ಸಕೃದ್ಗೀತಾಂಭಸಿಸ್ನಾನಂಸಂಸಾರಮಲ
ಮೋಚನಂ ॥ ೨೦ ॥ ಶ್ಲೋಕಮೇಕಂತದರ್ಧಂವಾ ಪಾದಂಪಾದಾರ್ಧ
ಮೇವವಾ । ನಿತ್ಯಂಪಠತಿ ಭಕ್ತ್ಯಾಯಸ್ಸಮೋಕ್ಷಮಧಿಗಚ್ಛತಿ ॥೨೧॥
ಸರ್ವಶಾಸ್ತ್ರಮಯೀಗೀತಾ ಸರ್ವವೇದಮಯೋಹರಿಃ । ಸರ್ವತೀರ್ಥಮ

ಬಿಸಾಗಂಗಾಸರ್ವಧರ್ಮಮಯೋಮನುಃ ॥೨೨॥ ಏಕಂಶಾಸ್ತ್ರಂದೇವಕೀ ಪುತ್ರಗೀತಮೇಕೋದೇವೋದೇವಕೀಪುತ್ರಏವ । ಏಕೋಮಂತ್ರೋ ದೇವಕೀಪುತ್ರನಾಮ ಕರ್ಮಾಪ್ಯೇಕಂದೇವಕಿಪುತ್ರಸೇವಾ ॥೨೩॥

ಅತಃಪರಂಯಥಾರ್ಥಂಸಮ್ಪೂಜ್ಯ ಪಾರಾಯಣಂಕಾರ್ಯಮ್.

ಶ್ರೀಭಗವದ್ಗೀತಾ ಮಹಾತ್ಮ್ಯಾದಿಕಂ ಸಂಪೂರ್ಣಮ್.

---

ಶ್ರೀರಸ್ತು.

## ಶ್ರೀಕೃಷ್ಣಾಯ ಪರಬ್ರಹ್ಮಣೇನಮಃ.

## ಶ್ರೀಮದ್ಭಾಗವತೇ ಭೀಷ್ಮಕೃತ ಶ್ರೀಕೃಷ್ಣಸ್ತುತಿಃ.

ತದೋಪಸಂಹೃತ್ಯಗಿರಸ್ಸಹಸ್ರಣೀರ್ವಿಮುಕ್ತಸಂಗಂಮನಆದಿ ಷೇ । ಕೃಷ್ಣೇಲಸತ್ಪೀತಪಟೇಚತುರ್ಭುಜೇಪುರಸ್ಥಿತೇಮೀ[…]ಕ್ಷ ಗ್ವ್ಯಧಾರಯತ್ ॥ ೧ ॥ ವಿಶುದ್ಧಯಾಧಾರಣಯಾಹತಾಶುಭಸ್ತ[…]ವ ಯೈವಾಶುಗತಾಯುಧವ್ಯಥಃ। ನಿವೃತ್ತಸರ್ವೇಂದ್ರಿಯವೃತ್ತಿವಿಭ್ರಮಸ್ತು ಷ್ಟಾವಜನ್ಯಂವಿಸೃಜಞ್ಜನಾರ್ದನಂ ॥೨ ॥ ಇತಿಮತಿರುಪಕ[…]ಗತ್ರೇ ವಿತೃಷ್ಣಾಭಗವತಿಸಾತ್ವತಪುಂಗವೇವಿಭೂಮ್ನಿ । ಸ್ವಸುಖಮುಪ[…]ತಿ ಕ್ವಚಿದ್ವಿಹರ್ತುಂಪ್ರಕೃತಿಮುಪೇಯುಷಿಯದ್ಭವಪ್ರವಾಹಃ ॥[…]ನೇ । ಭುವನಕಮನಂತಮಾಲವರ್ಣಂರವಿಕರ ಗೌರವರಾಮ್ಬರಂದಧಾ[…]ದ್ಯಾ॥ ವಪುರಲಕಕುಲಾವೃತಾನನಾಬ್ಜಂ ವಿಜಯಸಖೇರತಿರಸ್ತುಮೇನವ[…]ದ್ಯಾ ಯುಧಿತುರಗರಜೋವಿಧೂಮ್ರವಿಷ್ವಕ್ಕಚಲುಲಿತಶ್ರಮವಾರ್ಯಲಂಕೃ ತಾಸ್ಯೇ । ಮಮನಿಶಿತಶರೈರ್ವಿಭಿದ್ಯಮಾನತ್ವಚಿವಿಲಸತ್ಕವಚೇ[…]ಯೋ ಕೃಷ್ಣಆತ್ಮಾ ॥ ೪ ॥ಸಪದಿಸಖಿವಚೋನಿಶಮ್ಯಮಧ್ಯೇನಿಜಪರ[…]ಕೃತ ಬಲಯೋರಥಂಪ್ರವೇಶ್ಯ । ಸ್ಥಿತವತಿಪರಸೈನಿಕಾಯುರಕ್ಷ್ಣಾ[…]ಖಿಂ ವತಿಪಾರ್ಥಸಖೇರತಿರ್ಮಮಾಸ್ತು ॥ ೫ ॥ ವ್ಯವಹಿತಪೃತನಾ[…]ತ್ರಮುಖ ನಿರೀಕ್ಷ್ಯಸ್ವಜನವಧಾದ್ವಿಮುಖಸ್ಯದೋಷಬುದ್ಧ್ಯಾ । ಕುಮ[…]ಸ್ಯನಿ ರದಾತ್ಮವಿದ್ಯಯಾಯಶ್ಚರಣರತಿಃ ಪರಮಸ್ಯತಸ್ಯಮೇಽಸ್ತು ।

ಗಮಮಪಹಾಯಮತ್ಪ್ರತಿಜ್ಞಾಮೃತಮಧಿಕರ್ತುಮವಪ್ಲುತೋರಥ
ಧೃತರಥಚರಣೋಽಭ್ಯಯಾಚ್ಚಲದ್ಗುರ್ಹರಿರಿವಹಂತುಮಿಭಂಗತ
ತ್ತರೀಯಃ॥ ೭ ॥ ಶಿತವಿಶಿಖಹತೋವಿಶೀರ್ಣದಂಶಃ ಕ್ಷತಜಪರಿಪ್ಲು
ಆತತಾಯಿನೋಮೇ । ಪ್ರಸಭಮಭಿಸಸಾರಮದ್ವಧಾರ್ಥಂಸಭ
ಮೇಭಗವಾನ್ಗತಿರ್ಮುಕುಂದಃ ॥೮॥ ವಿಜಯರಥಕುಟುಂಬಆತ್ತ
ತ್ತೇಧೃತಹಯರಶ್ಮಿನಿತಚ್ಛ್ರಿಯೇಕ್ಷಣೀಯೇ । ಭಗವತಿರತಿರಸ್ತು
ಮುಷೋರ್ಯಮಿಹನಿರೀಕ್ಷ್ಯಗತಾಗತಾಸ್ಸರೂಪಂ॥೯॥ಲಲಿತ
ಸವಲ್ಗುಹಾಸಪ್ರಣಯನಿರೀಕ್ಷಣಕಲ್ಪಿತೋರುಮಾನಾಃ ।
ಕೃತವತ್ಯ ಉನ್ಮದಾಂಧಾಃ ಪ್ರಕೃತಿಮಗನ್ಕಿಲಯಸ್ಯಗೋ
॥ ೧೦॥ ಮುನಿಗಣನೃಪವರ್ಯಸಂಕುಲೇಂತಸ್ಸದಸಿಯುಧಿಷ್ಠಿರ
ಯಮುಪಿಷಾಂ । ಅರ್ಹಣಮುಪಪೇದಈಕ್ಷಣೀಯೋಮಮ
ಚರವಿಷಆವಿರಾತ್ಮಾ ॥ ೧೧ ॥ ಕ್ಷಿತಿಭರಮವರೋಪಿತುಂಕ
ಶ್ವಸನಇವಾಸೃಜದಕ್ಷವಂಶವಹ್ನಿಂ । ತಮಿಮಮಹಮಜಂ
ಜ್ಘ್ರಿಂಹೃದಿಪರಿರಭ್ಯಜಹಾಮಿಮರ್ತ್ಯನೀಡಂ॥೧೨॥ತಮಿಮ
ಜಂಶರೀರಭಾಜಾಂ ಹೃದಿಹೃದಿಧಿಷ್ಠಿತಮಾತ್ಮಕಲ್ಪಿತಾನಾಂ।
ಶಮಿವನೈಕಧಾರ್ಕಮೇಕಂ ಸಮಧಿಗತೋಸ್ಮಿವಿಧೂತಭೇದ
॥ ೧೩॥ ಕೃಷ್ಣ ಏವಂಭಗವತಿಮನೋವಾಗ್ದೃಷ್ಟಿವೃತ್ತಿಭಿಃ
ತ್ಮನ್ಯಾತ್ಮಾನಮಾವೇಶ್ಯಸೋಂತಶ್ಶ್ವಾಸಉಪಾರಮತ್। ॥

ಇತಿ ಶ್ರೀಭೀಷ್ಮಕೃತಶ್ರೀಕೃಷ್ಣಸ್ತುತಿಸ್ಸಂಪೂರ್ಣಾ.

